# ವೀರಶೈವದ ಉಗಮ ಮತ್ತು ಪ್ರಗತಿ

ಲೇಖಕರು

**ಟಿ. ಯಸ್. ಮಲ್ಲಪ್ಪ, ಬಿ.ಎ., ಎಲ್‌ಎಲ್.ಬಿ.**

ರಿಟೈರ್ಡ್ ಹೈಕೋರ್ಟ್ ಜಡ್ಜ್

"ಲಲಿತಪ್ರಭಾ," ರೇಸ್‌ಕೋರ್ಸ್ ರೋಡು, ಬೆಂಗಳೂರು—೧



ಪ್ರಕಾಶಕರು

**ರಾವ್ ಬಹಾದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪನವರ
ಧರ್ಮಸಂಸ್ಥೆ, ಬೆಂಗಳೂರು**

ಬೆಲೆ ೫ ರೂಪಾಯಿ

# ಧರ್ಮಕರ್ತರು



ರಾವ್ ಬಹಾದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪನವರು
ಧರ್ಮ ಛತ್ರ ಸಂಸ್ಥಾಪನೆ: ೧೯೦೦
ಉಚಿತ ವಿದ್ಯಾರ್ಥಿನಿಲಯ: ೧೯೧೨

# ವೀರಶೈವದ ಉಗಮ ಮತ್ತು ಪ್ರಗತಿ

ಲೇಖಕರು

**ಟಿ. ಯಸ್. ಮಲ್ಲಪ್ಪ, ಬಿ.ಎ., ಎಲ್ಎಲ್.ಬಿ.**

ರಿಟೈರ್ಡ್ ಹೈಕೋರ್ಟ್ ಜಡ್ಜ್

" ಲಲಿತಪ್ರಭಾ," ರೇಸ್‌ಕೋರ್ಸ್ ರೋಡು, ಬೆಂಗಳೂರು–೧



ಪ್ರಕಾಶಕರು

**ರಾವ್ ಬಹಾದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪನವರ**

**ಧರ್ಮಸಂಸ್ಥೆ, ಬೆಂಗಳೂರು**

ಬೆಲೆ ೫ ರೂಪಾಯಿ

# ಪ್ರಸ್ತಾವನೆ

ಪ್ರಪಂಚದಲ್ಲೆಲ್ಲ ಅತ್ಯಂತ ಪ್ರಾಚೀನ ಧರ್ಮವೆಂದು ನಿರ್ಧರಿಸಲ್ಪಟ್ಟ ಶೈವಧರ್ಮವು ಆದಿಮಾನವನ ಕಾಲದಲ್ಲಿಯೇ ಉಗಮವಾದುದು ಭಾರತದಲ್ಲಿಯೇ ಎಂಬುದು ಹಿರಿಮೆಯ ವಿಷಯ. ಆರು ಸಾವಿರ ವರ್ಷಗಳ ಹಿಂದೆಯೇ ನಾಗರಿಕತೆಗೆ ಹೆಸರಾದ ಸಿಂಧೂತೀರದ ದ್ರಾವಿಡರಲ್ಲಿ, ಆ ಹಿಂದೆಯೇ ಉಗಮವಾಗಿ ಪ್ರಚಲಿತವಾಗಿದ್ದ ಲಿಂಗಾರ್ಚನ ಲಿಂಗಧಾರಣ ಗಳನ್ನೊಳಗೊಂಡ ವೀರಶೈವ ಧರ್ಮದ ಅಧ್ಯಾತ್ಮ ಅಧಿದೈವ ಕಲ್ಪನೆಗಳ ಮೂಲರೂಪಗಳನ್ನೂ, ಅಂದಿನಿಂದ ವೇದಾಗಮೋಪನಿಷತ್ ಪುರಾಣಗಳ ಕಾಲದಲ್ಲಿಯೂ ಇಂದಿನವರೆಗೂ ಆಗಿರುವ ಈ ಸನಾತನ ಧರ್ಮದ ಪ್ರಗತಿಯನ್ನೂ ಈ ಗ್ರಂಥದಲ್ಲಿ ನೋಡಬಹುದು. ಋಗ್ವೇದದ ಕಾಲದಲ್ಲಿ ಕಾಣಬರದಿರುವ, ತ್ರಿನೇತ್ರ, ತ್ರಿಶೂಲಧಾರಿ, ಸರ್ಪಭೂಷಣ, ಅರ್ಧನಾರೀಶ್ವರ, ಚಂದ್ರ ಚೂಡ, ಧವಳಗಿರಿನಿವಾಸ, ಸೃಷ್ಟಿಸ್ಥಿತಿವಿಲಯಕರ್ತ, ಯೋಗೇಶ್ವರ ಮೊದಲಾದ ಶಕ್ತಿವಿಶಿಷ್ಟ ಶಿವನ ಕಲ್ಪನೆಗಳು, ಆರ್ಯರ ಆಗಮನಕ್ಕೆ ಮೊದಲೇ ದ್ರಾವಿಡರಲ್ಲಿ ಇದ್ದವೆಂಬುದನ್ನೂ, ಆಧ್ಯಾತ್ಮಿಕ ವಿಷಯದಲ್ಲಿ ಇಷ್ಟು ಮುಂದುವರಿದ ದ್ರಾವಿಡ ಸಂಸ್ಕೃತಿಯು ಆರ್ಯ ಸಂಸ್ಕೃತಿ ಯೊಡನೆ ಸೇರಿ, ಹಾಲು ಜೇನು ಸೇರಿದಂತೆ, ಸುಸ್ವಾದವಾಯಿತೆಂಬುದನ್ನೂ ಆಧಾರಗಳೊಡನೆ ಈ ಗ್ರಂಥದಲ್ಲಿ ಪ್ರಸ್ತಾಪಿಸಲಾಗಿದೆ. ವೀರಶೈವವು ಸ್ವತಂತ್ರ ಸಿದ್ಧಾಂತವೆ, ಎಂಬ ವಿಷಯ ವನ್ನು ವಿಮರ್ಶಿಸುವಾಗ ವೀರಶೈವ ಸಿದ್ಧಾಂತಕ್ಕೂ ಕಾಶ್ಮೀರ ಶೈವಕ್ಕೂ ಇರುವ ವ್ಯತ್ಯಾಸಗಳನ್ನು ತೋರಿಸಲಾಗಿದೆ. ಶ್ರೀಕಂಠ ಶಿವಾಚಾರ್ಯರು ವೀರಶೈವರೆ ಎಂಬುದರ ವಿಮರ್ಶೆಯಲ್ಲಿ ವೀರಶೈವಕ್ಕೂ ಇತರ ಶೈವಸಿದ್ಧಾಂತಗಳಿಗೂ ಇರುವ ವ್ಯತ್ಯಾಸಗಳು ಸ್ಪಷ್ಟವಾಗಿವೆ.

ಶೈವಧರ್ಮದ ಉಗಮ ಮತ್ತು ಪ್ರಗತಿಯ ಚರಿತ್ರೆಯು ಬಹ್ವಂಶದಿಂದ ಸನಾತನ ಭಾರತೀಯ ಧರ್ಮದ ಉಗಮ ಮತ್ತು ಪ್ರಗತಿಯ ಚರಿತ್ರೆಯೇ ಆಗಿದೆ. ತಲಕಾವೇರಿಯಲ್ಲಿ ಸೂಕ್ಷ್ಮರೂಪದಲ್ಲಿ ಹುಟ್ಟಿ ಬೇರೆ ಬೇರೆ ದೇಶದ ಉಪನದಿಗಳಿಂದ ಪುಷ್ಟಿಗೊಂಡು ಪ್ರಗತಿಹೊಂದಿ, ಕೃಷ್ಣರಾಜ ಮಹಾಸಾಗರದಲ್ಲಿನ ಆಧುನಿಕ ಪ್ರಯೋಗಗಳಿಂದ ವೈಶಾಲ್ಯತೆಯನ್ನು ಪಡೆದ ತಾಯಿ ಕಾವೇರಿಯಂತೆ, ಸನಾತನ ಕಾಲದಲ್ಲಿ ಸೂಕ್ಷ್ಮವಾದರೂ ಸ್ಪಷ್ಟವಾದ ರೂಪದಿಂದ ಹೊರಹೊಮ್ಮಿ, ವೇದಾಗಮೋಪನಿಷತ್ ಪುರಾಣಗಳಿಂದ ಪುಷ್ಟಿ ಪಡೆದು, ಆಧುನಿಕ ಕಾಲದಲ್ಲಿ ಪ್ರಚಲಿತವಾಗಿರುವ ಸುಧಾರಣೆಗಳಿಂದ ಹನ್ನೆರಡನೆಯ ಶತಮಾನದಿಂದಲೂ ಪ್ರಗತಿಹೊಂದಿ, ವಿಶ್ವಧರ್ಮವಾಗಲು ತಕ್ಕ ವೈಶಾಲ್ಯತೆಯನ್ನು ಈ ಧರ್ಮವು ಪಡೆದಿದೆ. ಇದರ ಪರಿಪೂರ್ಣ ರೂಪದಲ್ಲಿ, ದ್ವೈತಮತದ ಭವ್ಯಭಕ್ತಿಭಾವನೆಯೂ, ವಿಶಿಷ್ಟಾದ್ವೈತಮತದ ಶರಣಾಗತಿ ಪ್ರಪತ್ತಿಗಳ ಪಾರವಶ್ಯತೆಯೂ, ಶಾಂಕರಸಿದ್ಧಾಂತದ ಅವಿರಳ ಐಕ್ಯವನ್ನು ಸಾಧಿಸುವ ಜ್ಞಾನ ಮಾರ್ಗವೂ ಸಹಾ ಸಮರಸವಾಗಿ ಕಾಣಬರುವುದರಿಂದಲೂ, ಸಂಕುಚಿತ ಭಾವನೆಗಳನ್ನತಿಗಳೆದ ಅತಿವರ್ಣಾಶ್ರಮ ಧರ್ಮವಾಗಿರುವುದರಿಂದಲೂ, ವಿಚಾರಸ್ವಾತಂತ್ರ್ಯ, ಸ್ತ್ರೀಸ್ವಾತಂತ್ರ್ಯ, ವೃತ್ತಿಸ್ವಾತಂತ್ರ್ಯ ಮೊದಲಾದ ಸುಧಾರಣೆಗಳಿಂದ ಹನ್ನೆರಡನೆಯ ಶತಮಾನದಲ್ಲಿ ಶುದ್ಧಿ ಸಂಘಟನೆಗೊಳಗಾಗಿ ರೂಪುಗೊಂಡಿರುವುದರಿಂದಲೂ ವೀರಶೈವಧರ್ಮವು ಹಿಂದೂಧರ್ಮದಲ್ಲಿನ ಅತ್ಯಂತ ಸುಧಾರಿತ ಧರ್ಮವೆನ್ನಬಹುದು. ಹಿಂದಿನಿಂದ ಇಂದಿನವರೆಗಿನ ಈ ಧರ್ಮದ ಪ್ರಗತಿಯ ಮಾರ್ಗಮಧ್ಯದಲ್ಲಿ, ದ್ರಾವಿಡರ ಪಶುಪತಿಧರ್ಮಕ್ಕೆ ವೈದಿಕ ಧರ್ಮದ ಸಂಸ್ಕೃತಿಯ ಮೆರುಗನ್ನು ಕೊಟ್ಟು ರೂಪುಗೊಳಿಸಿದ ಶ್ವೇತಾಶ್ವತರೋಪನಿಷತ್ತು ವೀರಶೈವದ ತಳಹದಿಯಾಗಿದೆ.

ಅಂದಿನಿಂದ ಹನ್ನೆರಡನೆಯ ಶತಮಾನದವರೆಗಿನ ವೀರಶೈವದ ರೂಪುರೇಖೆಗಳನ್ನು ವ್ಯಾಸ ಮಹರ್ಷಿಪ್ರಣೀತ ಶಿವಮಹಾಪುರಾಣದಲ್ಲಿ ನೋಡಬಹುದು. ಶ್ರೀ ಶಂಕರ ಶ್ರೀಕಂಠ ಶ್ರೀಪತಿ ಪಂಡಿತಾದಿ ಆಚಾರ್ಯರುಗಳ ಭಾಷ್ಯಗಳಿಗೆ ಆಧಾರವನ್ನೊದಗಿಸಿರುವ ಈ ಪುರಾಣದಲ್ಲಿಯೇ **"ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾಧಾರಯೇತ್ ಸದಾ"** ಎಂದು ಹೇಳಿದೆಯಲ್ಲದೆ ನೈಷ್ಠಿಕ, ಅತ್ಯಾಶ್ರಮಿ, ಮಹಾವ್ರತೀ ಮೊದಲಾದ ವೀರಶೈವ ಪದದ ಪರ್ಯಾಯನಾಮಗಳಿಂದ ಪ್ರಸಿದ್ಧವಾದ, ಶ್ರೀಕರಾದಿಭಾಷ್ಯಗಳಲ್ಲಿ ಉಲ್ಲೇಖಿಸಲ್ಪಟ್ಟಿರುವ ಮಹಾಪಾಶುಪತ ವ್ರತವು ಹೇಳಲ್ಪಟ್ಟಿದೆ. ಶ್ರೀ ಶಂಕರಾಚಾರ್ಯರು ಶಿವಮಹಾಪುರಾಣದಿಂದ ಆಧಾರಗಳನ್ನು ಸೂತ್ರ ಭಾಷ್ಯದಲ್ಲಿ ತೆಗೆದುಕೊಂಡಿರುವರಾಗಿ, ಇದು ಅವರ ಕಾಲದಲ್ಲಿಯೇ ಗೌರವಿಸಲ್ಪಟ್ಟ ಪ್ರಾಚೀನ ಗ್ರಂಥ. ಇದರ ಆಧಾರದ ಮೇಲೆಯೇ ಶ್ರೀಕಂಠ ಶಿವಾಚಾರ್ಯರು ಅವರ ಭಾಷ್ಯವನ್ನು ಬರೆದಿರುವುದು. ಇವರು ಲಿಂಗಧಾರಿಗಳೆಂಬುದನ್ನೂ, ಈ ಪುರಾಣದಲ್ಲಿಯೇ ಹಿಂದಿನ ವೀರಶೈವದ ಹಿನ್ನೆಲೆಯನ್ನು ಕಾಣಬಹುದೆಂಬುದನ್ನೂ, ವೀರಶೈವರ ಆಧಾರಗ್ರಂಥವಾದ ಕ್ರಿಯಾಸಾರವು ಶ್ರೀಕಂಠಭಾಷ್ಯದ ಕಾರಿಕೆಯೆಂಬುದನ್ನೂ, ಶಿವಮಹಾಪುರಾಣದ ನೂರಾರು ಶ್ಲೋಕಗಳು ಕ್ರಿಯಾಸಾರದಲ್ಲಿ ಉದ್ಧೃತವಾಗಿವೆಯೆಂಬುದನ್ನೂ, ಶ್ರೀಕರಭಾಷ್ಯವೂ ಶ್ರೀಕಂಠಭಾಷ್ಯವೂ ಒಂದೇ ಸಿದ್ಧಾಂತವನ್ನು ಹೇಳುವುವೆಂಬುದನ್ನೂ ತುಲನಾತ್ಮಕವಾಗಿ ಎರಡು ಭಾಷ್ಯಗಳ ಆಧಾರಗಳನ್ನೂ ಕ್ರಿಯಾಸಾರದ ಆಧಾರಗಳನ್ನೂ ಕೊಟ್ಟು ಈ ಗ್ರಂಥದಲ್ಲಿ ತಿಳಿಸಲಾಗಿದೆ. ಹನ್ನೆರಡನೆಯ ಶತಮಾನದ ಹಿಂದಿನ ವೀರಶೈವದ ರೂಪುರೇಖೆಗಳನ್ನು ಇನ್ನೂ ಹೆಚ್ಚು ಅನ್ವೇಷಣೆಗೆ ಒಳಗುಮಾಡುವುದೂ, ಶಿವಮಹಾಪುರಾಣ, ಶ್ರೀಕಂಠಭಾಷ್ಯ, ಶ್ರೀಪತಿಭಾಷ್ಯ ಮತ್ತು ಕ್ರಿಯಾಸಾರ ಈ ಗ್ರಂಥಗಳನ್ನು ವಿದ್ವಾಂಸರು ತುಲನಾತ್ಮಕ ದೃಷ್ಟಿಯಿಂದ ವಿವರವಾಗಿ ವಿಮರ್ಶೆಗೊಳಗುಮಾಡುವುದೂ ಅತ್ಯಂತ ಅವಶ್ಯವಾಗಿದೆ. ಈ ಗ್ರಂಥವು ಇಂತಹ ಅನ್ವೇಷಣಕ್ಕೆ ಪಂಡಿತರನ್ನು ಪ್ರಚೋದನಗೊಳಿಸುವುದಾದರೆ ಬರೆದವರ ಮತ್ತು ಪ್ರಕಟಿಸಿದವರ ಶ್ರಮವು ಸಾರ್ಥಕವಾಗುವುದು.

ವೀರಶೈವದ ಉಗಮ ಪ್ರಗತಿಗಳ ವಿಷಯವಾಗಿ ''ವೀರಶೈವ'' ತ್ರೈಮಾಸಿಕದಲ್ಲಿ ಪ್ರಕಟನೆಗಾಗಿ ಬರೆದ ಲೇಖನವನ್ನು ಓದಿದ ರಾಜಧರ್ಮಪ್ರವೀಣ ದಿವಾನ್ ಬಹದ್ದೂರ್ ರಿಟೈರ್ಡ್ ಚೀಫ್ ಜಸ್ಟಿಸ್ ಮಾನ್ಯ ಶ್ರೀ ಪಿ. ಮಹದೇವಯ್ಯನವರು ಈ ಗ್ರಂಥವನ್ನು ಬರೆಯ ಬೇಕೆಂದು ಪ್ರೇರೇಪಿಸಿದರು. ಅವರು ಅಧ್ಯಕ್ಷರಾಗಿರುವ ರಾವ್‌ಬಹದ್ದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪ ಚಾರಿಟೀಸ್‌ನ ಟ್ರಸ್ಟಿಗಳು ಈ ಗ್ರಂಥವನ್ನು ಬರೆದುಕೊಡಬೇಕೆಂದೂ ಅವರು ಅದನ್ನು ಪ್ರಕಟಿಸುವರೆಂದೂ ತಾ॥ ೭-೩-೧೯೬೨ರಲ್ಲಿ ನನಗೆ ಪತ್ರ ಬರೆದರು. ಈ ಪ್ರೇರಣೆ ಗಳಿಲ್ಲದೆ ಈ ಗ್ರಂಥವು ಇಷ್ಟು ಬೇಗ ಪ್ರಕಟವಾಗುತ್ತಿರಲಿಲ್ಲ. ಈ ಟ್ರಸ್ಟಿಗಳಿಗೂ, ಅಧ್ಯಕ್ಷರಾಗಿ ರುವ ರಾಜಧರ್ಮಪ್ರವೀಣ ದಿವಾನ್ ಬಹದ್ದೂರ್ ಮಾನ್ಯ ಶ್ರೀ ಪಿ. ಮಹದೇವಯ್ಯನವರಿಗೂ, ಈ ಗ್ರಂಥವನ್ನು ಅಂದವಾಗಿ ಮುದ್ರಿಸಿದ ಬೆಂಗಳೂರು ಪ್ರೆಸ್ಸಿನವರಿಗೂ ವಂದನೆಗಳು.

ಗ್ರಂಥಕರ್ತಾ,
**ಟಿ. ಯನ್. ಮಲ್ಲಪ್ಪ.**

## ಈ ಗ್ರಂಥದಲ್ಲಿ ಉಪಯೋಗಿಸಲ್ಪಟ್ಟ ಮುಖ್ಯ ಆಧಾರಗಳು

**ವೈದಿಕವಾಙ್ಮಯ.**—ಋಗ್ವೇದದ ಮಂತ್ರಗಳು, ನಿರುಕ್ತ, ಸಾಯಣಭಾಷ್ಯ, ಯಜುರ್ವೇದ ಮತ್ತು ಅಥರ್ವವೇದ; ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ, ತೈತ್ತರೀಯ, ಛಾಂದೋಗ್ಯ, ಬೃಹದಾರಣ್ಯಕ, ಶ್ವೇತಾಶ್ವತರ, ಮೈತ್ರಿ, ಜಾಬಾಲಾದಿ ಉಪನಿಷತ್ತುಗಳ ಮಂತ್ರಗಳು; ಪೂರ್ವಮೀಮಾಂಸಾ ಶಾಸ್ತ್ರ, ಬ್ರಹ್ಮಸೂತ್ರ, ಭಗವದ್ಗೀತೆ, ತೈತ್ತರೀಯ ಆರಣ್ಯಕ ಮೊದಲಾದುವು.

**ಭಾಷ್ಯಗಳು.**—ಶ್ರೀ ಶಂಕರಾಚಾರ್ಯರ ಬ್ರಹ್ಮಸೂತ್ರಭಾಷ್ಯ, ಈಶ, ಮುಂಡಕ, ಶ್ವೇತಾಶ್ವತರ, ಬೃಹದಾರಣ್ಯಕ ಉಪನಿಷತ್ತುಗಳ ಮತ್ತು ಗೀತೆಯ ಶಾಂಕರಭಾಷ್ಯ, ಶ್ರೀಕಂಠ ಶಿವಾಚಾರ್ಯರ ಬ್ರಹ್ಮಮೀಮಾಂಸಾಭಾಷ್ಯ, ಇದರ ಕಾರಿಕೆ ಕ್ರಿಯಾಸಾರ, ಶ್ರೀ ರಾಮಾನುಜರ ಶ್ರೀಭಾಷ್ಯ, ಶ್ರೀಪತಿ ಪಂಡಿತರ ಶ್ರೀಕರಭಾಷ್ಯ ಮತ್ತು ಶ್ರೀ ಆನಂದತೀರ್ಥರ ಈಶಾವಾಸ್ಯಭಾಷ್ಯ, ಶ್ರೀ ರಂಗರಾಮಾನುಜರ ಮುಂಡಕಭಾಷ್ಯ ಮತ್ತು ಭಾಸ್ಕರಭಾಷ್ಯ.

**ಆಗಮಗಳು.**—ಸೂಕ್ಷ್ಮ, ವಾತುಲ, ಕಾಮಿಕ, ಪಾರಮೇಶ್ವರ, ಚಂದ್ರಜ್ಞಾನಾದಿ ಆಗಮಗಳು.

**ಇತರ ಸಂಸ್ಕೃತ ಆಧಾರಗಳು.**—ರಾಮಾಯಣ, ಮಹಾಭಾರತ, ಸ್ಕಾಂದಪುರಾಣ, ಶಿವಮಹಾಪುರಾಣ, ಗರುಡಪುರಾಣ, ಪದ್ಮಪುರಾಣ, ಪಾಶುಪತಸೂತ್ರ, ಕೌಂಡಿನ್ಯಭಾಷ್ಯ, ಸಿದ್ಧಾಂತ ಶಿಖಾಮಣಿ, ಸೂತಸಂಹಿತೆ, ಚತುಶ್ಶತಿ, ಆನಂದಲಹರಿ, ಲಲಿತಾ ಸಹಸ್ರನಾಮ, ಪ್ರತ್ಯಭಿಜ್ಞಾಹೃದಯ, ಶಂಕರವಿಜಯ, ಶಿವಾದ್ವೈತಮಂಜರಿ, ಶಿವಾದ್ವೈತದರ್ಪಣ, ಅನುಭವ ಸೂತ್ರ, ವೀರಶೈವಧರ್ಮ ಶಿರೋಮಣಿ.

**ಕನ್ನಡದ ಆಧಾರಗಳು.**—ಶರಣರ ವಚನವಾಙ್ಮಯ, ಕರಣಹಸಿಗೆ, ನಿಜಗುಣರ ಮತ್ತು ಸರ್ಪಭೂಷಣರ ಗ್ರಂಥಗಳು, ಪಂಪನ ಆದಿಪುರಾಣ, ಜಿನಸೇನನ ಮಹಾಪುರಾಣ, ವಡ್ಡಾರಾಧನೆ, ತಿಲಕರ ಗೀತಾರಹಸ್ಯ, ರಾನಡೆಯವರ ಉಪನಿಷತ್ ರಹಸ್ಯ, ವಚನಶಾಸ್ತ್ರ ರಹಸ್ಯ, ವಚನಧರ್ಮಸಾರ, ಕವಿಚರಿತ್ರೆ ಮತ್ತು ಶಾಸನಗಳು.

**Authorities in English.**—*Indian Philosophy*, by Dr. S. Radhakrishnan; *History of Indian Philosophy*, by S. Dasagupta; *History of Indian Philosophy*, by Belvalkar and Ranade; *Abhinavagupta*, by Dr. K. C. Pandey; *Sivadvaita of Srikantha*, by S. S. Suryanarayana Sastry; *Kashmir Shaivism*, by J. C. Chatterji; *Religions of India*, by A. P. Karmarkar; *Shakti or Divine Power*, by S. K. Das; *Prehistoric India*; *Writings of Sir John Marshall and Father Herras*; Hayavadana Rao's *Introduction to Srikara Bhashya*; *Stone Age in India*, by P. T. Srinivasa Iyengar; *Rig Vedic Culture of the Prehistoric Indus*, by Swami Sankarananda; *Cultural Heritage of India*; *Science and Reality*, by John M. Lowson; Dr. Bhandarkar's works; *The Serpent Power*.

## ವಿಷಯಾನುಕ್ರಮಣಿಕೆ

### ಪ್ರಥಮಾಧ್ಯಾಯ

#### ವೀರಶೈವದ ಪ್ರಾಚೀನತೆ



### ದ್ವಿತೀಯಾಧ್ಯಾಯ

#### ಆದಿಮಾನವನ ಕಾಲದಲ್ಲಿ ವೀರಶೈವದ ಉಗಮ

ಪುಟ



## ತೃತೀಯಾಧ್ಯಾಯ

### ವೇದಾಗಮೋಪನಿಷತ್ ಪುರಾಣಗಳ ಕಾಲದಲ್ಲಿ "ವೀರಶೈವದ ಪ್ರಗತಿ"

## ಚತುರ್ಥಾಧ್ಯಾಯ

### ಶುದ್ಧಿಸಂಘಟನೆಯಿಂದ ವೀರಶೈವದ ಪರಿಪೂರ್ಣತೆ

# ಉಪೋದ್ಘಾತ

ಪರಮ ಪೂಜ್ಯರಾದ ಶ್ರೀಶೈಲ, ಕಾಶಿ, ಉಜ್ಜಯಿನಿ ಜಗದ್ಗುರುಗಳಿಂದಲೂ, ಡಾಕ್ಟರೇಟ್ ಮೊದಲಾದ ಪದವೀಧರರಾದ ವಿವಿಧ ಮತಗಳ ಘನ ವಿದ್ವಾಂಸರುಗಳಿಂದಲೂ ಪ್ರಶಂಸಿಸಲ್ಪಟ್ಟಿರುವ ಈ ಗ್ರಂಥವನ್ನು ಬರೆಯಲು ಗ್ರಂಥಕರ್ತರಾದ ನಿವೃತ್ತ ಹೈಕೋರ್ಟ್ ಜಡ್ಜ್ ಶ್ರೀಮಾನ್ ಟಿ. ಯನ್. ಮಲ್ಲಪ್ಪನವರನ್ನು ಪ್ರೇರೇಪಿಸಿದ ಯಶಸ್ಸು, ಈ ಗ್ರಂಥವನ್ನು ಪ್ರಕಟಿಸುವ ರಾವ್ ಬಹಾದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪನವರ ಧರ್ಮಸಂಸ್ಥೆಯ ಅಧ್ಯಕ್ಷರಾಗಿದ್ದ ದಿವಾನ್ ಬಹಾದೂರ್, ರಾಜಧರ್ಮ ಪ್ರವೀಣ ದಿವಂಗತ ಪಿ. ಮಹಾದೇವಯ್ಯನವರಿಗೆ ಸಲ್ಲತಕ್ಕದ್ದು. ೨೫–೧೨–೧೯೬೨ರ ಟ್ರಸ್ಟಿಗಳ ಮೀಟಿಂಗಿನಲ್ಲಿ ಶ್ರೀಯುತ ಮಲ್ಲಪ್ಪನವರನ್ನು ಸಿಂಧೂನದಿಯ ತೀರದ ನಾಗರಿಕತೆಯ ದೃಷ್ಟಿಯಿಂದ ವೀರಶೈವವು ಅತ್ಯಂತ ಪ್ರಾಚೀನವಾದುದು ಎಂಬ ವಿಷಯದಲ್ಲಿ ಒಂದು ಗ್ರಂಥವನ್ನು ಬರೆದುಕೊಡಲು ಕೋರಬೇಕೆಂದೂ ಮತ್ತು ಆ ಗ್ರಂಥದ ೪೦೦೦ ಪ್ರತಿಗಳನ್ನು ಟ್ರಸ್ಟಿಗಳು ಮುದ್ರಣ ಮಾಡಿಸಬೇಕೆಂದೂ ತೀರ್ಮಾನಿಸಲಾಯಿತು. ಅದರಂತೆ ಅಧ್ಯಕ್ಷರಾಗಿದ್ದ ಮಾನ್ಯ ದಿ॥ ಮಹಾದೇವಯ್ಯನವರಿಂದ ತಾ॥ ೧೭–೩–೧೯೬೨ ರಲ್ಲಿ ಗ್ರಂಥಕರ್ತರಿಗೆ ಪತ್ರ ಬರೆಯಲಾಯಿತು. ತಾ॥ ೨೩–೧೨–೧೯೬೨ ರ ಟ್ರಸ್ಟಿಗಳ ಮೀಟಿಂಗಿನಲ್ಲಿ ಗ್ರಂಥವು ಅತ್ಯಂತ ಶ್ರೇಷ್ಠವಾಗಿದೆಯೆಂದೂ, ಅದಕ್ಕಾಗಿ ಗ್ರಂಥಕರ್ತರಿಗೆ ಧನ್ಯವಾದಗಳನ್ನು ಅರ್ಪಿಸಬೇಕೆಂದೂ, ಗ್ರಂಥದ ೫೦೦೦ ಪ್ರತಿಗಳನ್ನು ಮುದ್ರಿಸಬೇಕೆಂದೂ ತೀರ್ಮಾನಿಸಲಾಯಿತು. ಅಧ್ಯಕ್ಷರಾಗಿದ್ದ ಮಾನ್ಯ ಮಹಾದೇವಯ್ಯನವರು ತಾ॥ ೯–೧–೧೯೬೩ ರ ಪತ್ರದಲ್ಲಿ ಗ್ರಂಥಕರ್ತರಿಗೆ ಟ್ರಸ್ಟಿಗಳ ಪರವಾಗಿ ಧನ್ಯವಾದಗಳನ್ನು ಅರ್ಪಿಸಿದರು. ಗ್ರಂಥದ ೫೦೦೦ ಪ್ರತಿಗಳನ್ನು ಬೆಂಗಳೂರು ಪ್ರೆಸ್ಸಿನಲ್ಲಿ ಮುದ್ರಣ ಮಾಡಿಸಲಾಯಿತು. ಕೆಲವು ಕಾರಣಗಳಿಂದ ಗ್ರಂಥ ಪ್ರಕಟಣೆಯ ಕಾರ್ಯವು ಬಹಳ ನಿಧಾನವಾದರೂ, ಸಹಕರಿಸಿ ಗ್ರಂಥವನ್ನು ಅಂದವಾಗಿ ಮುದ್ರಿಸಿ ಪ್ರಕಟಣೆಗೆ ಅನುಕೂಲ ಮಾಡಿದುದಕ್ಕಾಗಿ ಬೆಂಗಳೂರು ಪ್ರೆಸ್ಸಿನವರಿಗೆ ಧನ್ಯವಾದಗಳು. ಗ್ರಂಥದ ಶ್ರೇಷ್ಠತೆಯ ವಿಷಯದಲ್ಲಿ ಟ್ರಸ್ಟಿಗಳ ಅಭಿಪ್ರಾಯವನ್ನು ಗ್ರಂಥಕರ್ತರಿಗೆ ಹಿಂದೆಯೇ ತಿಳಿಸಲಾಗಿದೆ. ಗ್ರಂಥದಲ್ಲಿ ಉಲ್ಲೇಖವಾಗಿರುವ ಅಭಿಪ್ರಾಯಗಳು ಗ್ರಂಥಕರ್ತರವೇ ಹೊರತು ಟ್ರಸ್ಟಿಗಳಿಗೆ ಸಂಬಂಧಿಸಿದುವಲ್ಲ. ಗ್ರಂಥದ ವಿಷಯದಲ್ಲಿ ಬಂದಿರುವ ಅಭಿಪ್ರಾಯಗಳನ್ನು ಓದುಗರ ಅವಗಾಹನೆಗಾಗಿ ಮುದ್ರಿಸಿದೆ. ಉಪೋದ್ಘಾತವನ್ನು ಟ್ರಸ್ಟ್ ಅಧ್ಯಕ್ಷರಾಗಿದ್ದ ಮಾನ್ಯ ಮಹಾದೇವಯ್ಯನವರು ಬರೆಯಬೇಕಾಗಿದ್ದಿತು. ಅವರು ಆ ಕಾರ್ಯವನ್ನು ಮಾಡುವ ಮೊದಲೇ ಶಿವೈಕ್ಯರಾದುದರಿಂದ ಅದನ್ನು ಮಾಡುವ ಹೊಣೆ ಈಗ ಅಧ್ಯಕ್ಷನಾಗಿರುವ ನನ್ನದಾದುದರಿಂದ ನಾಲ್ಕು ಮಾತುಗಳನ್ನು ಬರೆಯಲಾಗಿದೆ.

ಈ ಗ್ರಂಥದಲ್ಲಿ ಮೊದಲು ಎದ್ದುಕಾಣುವ ವಿಷಯ ಆರ್ಯ–ದ್ರಾವಿಡ ಸಂಸ್ಕೃತಿಗಳು ಹಾಲು ಜೇನು ಸೇರಿದಂತೆ ಸುಸ್ವಾದವಾಗಿ ಸೇರಿಹೋಗಿವೆ ಎಂಬುದೇ ಆಗಿದೆ. ಇಂದಂತೂ ಆರ್ಯ ದ್ರಾವಿಡರು ಸೇರಿಹೋಗಿ ಒಂದೇ ಜನಾಂಗವಾಗಿಹೋಗಿರುವುದರಿಂದ 'ನಾವು ಆರ್ಯರು ನಾವು ದ್ರಾವಿಡರು' ಎಂಬ ಪ್ರತ್ಯೇಕ ಭಾವನೆಗೆ ಪ್ರಚೋದನೆ ಇರಬಾರದು. ಉತ್ತರದವರು ಆರ್ಯರು, ದಕ್ಷಿಣದವರು ದ್ರಾವಿಡರು ಎಂಬ ಭಾವನೆಯಿಂದ ದ್ರಾವಿಡ ರಾಜ್ಯವು ಪ್ರತ್ಯೇಕವಾಗಿ ಆಗಬೇಕೆಂಬ ಆಕಾಂಕ್ಷೆ ಅಳಿಯುತ್ತಿರುವುದು ಶುಭ ಸೂಚನೆ. ಭಾರತದ ಎಲ್ಲ ಪ್ರಾಂತಗಳಲ್ಲಿಯೂ ಕೃಷ್ಣವರ್ಣದವರನ್ನೂ ಶ್ವೇತವರ್ಣದವರನ್ನೂ ನೋಡಬಹುದು. ಆದುದರಿಂದ ಭಿನ್ನಭಾವನೆಗೆ ಕಾರಣವಿಲ್ಲ. ಇನ್ನು ಬಸವೇಶ್ವರರು ಯಾವ ಸುಧಾರಣೆಗಾಗಿ ಪ್ರಾಣಾರ್ಪಣೆ ಮಾಡಿದರೋ

ಅಂತಹ ಅಸ್ಪೃಶ್ಯನಿವಾರಣೆ, ಲಿಂಗವರ್ಣಾಶ್ರಮಗಳಲ್ಲಿ ಸಮಾನತೆ ಇವುಗಳು ಭಾರತ ರಾಜ್ಯದ ಸಂವಿಧಾನದ ಅಡಿಗಲ್ಲಾಗಿರುವುದು ಹೆಮ್ಮೆಯ ವಿಷಯ. ಮೊಹಂಜೋದಾರೋ-ಹರಪ್ಪ ನಾಗರಿಕತೆಯ ಅವಶೇಷಗಳಲ್ಲಿ ಪಶುಪತಿಯ ಮುದ್ರಿಕೆಯು ದೊರೆತಂದಿನಿಂದ ಶೈವಧರ್ಮವು ವೇದಗಳ ಕಾಲಕ್ಕಿಂತಲೂ ಹಿಂದಿನದೆಂಬುದು ವಿದ್ವಾಂಸರುಗಳು ಪ್ರತಿಪಾದಿಸಿದ ವಿಷಯವಾಗಿದೆ. ಶಿವನ ಪೂಜೆಯು ವೇದದ ಸಂಬಂಧದಿಂದ ರೂಢಿಗೆ ಬರದೆ ಆರ್ಯರಿಗೆ ದ್ರಾವಿಡರ ಸಮ್ಮಿಲನದಿಂದ ಬಂದು ಇಂದ್ರಾದಿ ದೇವತೆಗಳಲ್ಲಿನ ವಿಶ್ವಾಸವನ್ನು ಹಿಮ್ಮೆಟ್ಟಿಸಿತೆಂಬುದು ಕೆಲವರು ಭಾವಿಸುವಂತೆ ಇಂಗ್ಲಿಷ್ ಕಲಿತವರ ಊಹಾಪೋಹೆಯಲ್ಲವೆಂಬುದೂ, ಮೃಗೇಂದ್ರಾಗಮದಲ್ಲಿ ಇದಕ್ಕೆ ಆಧಾರ ವಿದೆಯೆಂಬುದೂ ದಾಸಗುಪ್ತರ "ಇಂಡಿಯನ್ ಫಿಲಾಸಫಿ", ವಾಲ್ಯೂಂ V, ಪುಟ ೨೧ ರಲ್ಲಿನ ಉಲ್ಲೇಖನದಿಂದ ತಿಳಿದುಬರುತ್ತದೆ:

"Mrugendragama opens the discussion of how the old Vedic forms of worship became superseded by the Siva cult. It was pointed out that the Vedic deities were not concrete substantial objects, but their reality consisted of the mantras with which they were welcomed and worshipped, and consequently Vedic worship cannot be regarded as a definite and concrete form of worship existing in time and space. But devotion to Siva may be regarded as a definite and concrete form of worship which could therefore supersede the Vedic practice."

ಲಿಂಗಧಾರೀ ಧರ್ಮವು ಬಸವೇಶ್ವರನಿಗಿಂತಲೂ ಹಿಂದಿನಿಂದಲೂ ಇದ್ದಿತೆಂಬುದು ಶಾಸನ ಶಾಸ್ತ್ರ ವಿಶಾರದರಾದ ಬಿ. ಕೃಷ್ಣಶಾಸ್ತ್ರಿಗಳು ವಯಲೂರು ಶಾಸನ ವಿಷಯದಲ್ಲಿ ಬರೆದಿರುವ ಲೇಖನ ಭಾಗದಿಂದ ತಿಳಿದುಬರುತ್ತದೆ:

"The adjunct ಮಹೇಶ್ವರ ಶಿಖಾಮಣಿ ದೀಪ್ತಿಮೌಲಿಃ . . . . which literally means one whose diadem shines with the head-jewel, *viz.*, Maheswara (Siva) is rather perplexing. Comparing this with titles like ಶಿವಚೂಡಾಮಣಿ, etc., . . . . all with reference to King Rajasimha it looks as if the king did actually wear a figure of Siva or rather his symble Linga on his head. . . . . All these references clearly point to the existence of a Linga cult, long before the revival of the Veerasaiva faith under the auspices of the famous Kalachuri Minister Basava. . . . in which the wearing of Lingam plays a prominent part (*Ep. Ind.*, Vol. 28)."

ಇನ್ನು ಮಹಾಭಾರತದ ಕಾಲದಲ್ಲಿ ಲಿಂಗಧಾರಿಗಳಿದ್ದರೆಂದು ಈ ಗ್ರಂಥದಲ್ಲಿ ಹೇಳಿದೆ ಯಷ್ಟೆ. ವೀರಶೈವೇತರರಿಗೆ ಸಾಮಾನ್ಯವಾಗಿ ಮಾನ್ಯವಾಗಿರುವುದು ಸಾಂಖ್ಯ ಸಿದ್ಧಾಂತದಲ್ಲಿ ಹೇಳಿದಂತೆ ೨೫ ತತ್ತ್ವಗಳ ಆವಿರ್ಭಾವ. ಆದರೆ ವೀರಶೈವರೊಬ್ಬರಲ್ಲಿಯೇ ಕಂಡುಬರುವ ಅವರ ಕರಣ ಹಸಿಗೆಯಲ್ಲಿ ಹೇಳಿರುವ ತಾತ್ತ್ವಿಕ ವಿಚಾರವು ಮಹಾಭಾರತ ಕಾಲದಲ್ಲಿ ಕಂಡುಬಂದಿದೆ ಯೆಂಬುದನ್ನು ಕನ್ನಡನಾಡಿನ ಚರಿತ್ರೆಯ ಎರಡನೆಯ ಭಾಗದ ೨೦೦-೨೦೫ ನೆಯ ಪುಟಗಳಲ್ಲಿ ಹೇಳಿರುವುದರಿಂದ ಸಿದ್ಧಾಂತವಾಗುವುದು. ಆ ಭಾಗವಿದು:

"ಸಾಂಖ್ಯದಲ್ಲಿ ಮಹಾಭೂತಗಳೇ ಕಡೆಯ ತತ್ತ್ವಗಳು. ಅವು ತನ್ಮಾತ್ರೆಗಳಿಂದ ಬಂದುವು. 'ಕರಣ ಹಸಿಗೆ' ಯ ಪ್ರಕಾರ ಮಹಾಭೂತಗಳೇ ಮೊದಲನೆಯವು. ಅವುಗಳಿಂದಲೇ

ಉಳಿದ ತತ್ತ್ವಗಳ ಉತ್ಪತ್ತಿ. ಮೇಲಾಗಿ ಸಾಂಖ್ಯದಲ್ಲಿ ಪ್ರಾಣವಾಯುಗಳು ತತ್ತ್ವಗಳೊಳಗೆ ಗಣಿಸಲ್ಪಡುವುದಿಲ್ಲ. ಕರಣ ಹಸಿಗೆಯಲ್ಲಿ ಅವು ತತ್ತ್ವಗಳಾಗಿವೆ. ಆದುದರಿಂದ ಸಾಂಖ್ಯರಿಗೂ ಕರಣ ಹಸಿಗೆಗೂ ಅಂತರವಿದೆ.... ಮಹಾಭಾರತದ ಪರ್ವ ೧೨, ಅಧ್ಯಾಯ ೩೧೪, ಶ್ಲೋಕ ೪ ಮತ್ತು ೧೪ ಇವುಗಳಲ್ಲಿ ತತ್ತ್ವಗಳ ಉತ್ಪತ್ತಿಯ ಬಗ್ಗೆ ವಿವೇಚನೆ ಇದೆ. ಅವುಗಳಲ್ಲಿ ಅಂತಃಕರಣ, ಬುದ್ಧೀಂದ್ರಿಯ, ಕರ್ಮೇಂದ್ರಿಯ ಮತ್ತು ತನ್ಮಾತ್ರೆಗಳು ಮಹಾಭೂತ ಗಳಿಂದಲೇ ಉದ್ಭವಿಸಿವೆಯೆಂದು ಉಲ್ಲೇಖವಿದೆ. ಮಹಾಭಾರತದ ಈ ವಿವೇಚನೆಗೂ ಕರಣ ಹಸಿಗೆಯ ವಿವೇಚನೆಗೂ ಮುಖ್ಯ ಮಾತಿನಲ್ಲಿ ಎಂದರೆ ಮಹಾಭೂತಗಳಿಂದ ಉಳಿದ ತತ್ತ್ವಗಳ ಉತ್ಪತ್ತಿ ಎಂಬುದರಲ್ಲಿ ಸರಿಬೀಳುವುದು. ಮಹಾಭಾರತದಲ್ಲಿಯೇ ಮತ್ತೊಂದು ಕಡೆಗೆ ಪ್ರಾಣ ವಾಯುಗಳನ್ನು ತತ್ತ್ವಗಳಲ್ಲಿ ಗಣಿಸಿರುವರೆಂದು ಡಾ|| ಆರ್ಥರ್ ಬೆಂಡೇಲ್‌ಕೀಲ್ ಅವರು ತಮ್ಮ 'ಸಾಂಖ್ಯದರ್ಶನ' ಎಂಬ ಪುಸ್ತಕದಲ್ಲಿ ಹೇಳಿರುವರು. ಇದರಮೇಲಿಂದ ಕರಣ ಹಸಿಗೆಯಲ್ಲಿನ ಅನೇಕ ಮಾತು ಮಹಾಭಾರತದಲ್ಲಿಯವುಗಳಿಗೆ ಸರಿಬೀಳುವುದರಿಂದ ವೀರಶೈವರು ತಮ್ಮ ತತ್ತ್ವಜ್ಞಾನವೆಂದು ತಿಳಿಯುವ ಕರಣ ಹಸಿಗೆಯ ತತ್ತ್ವವಿವೇಚನೆ ಮಹಾಭಾರತ ಕಾಲದಷ್ಟು ಹಳೆಯದೆಂಬುದನ್ನು ಒಪ್ಪಿಕೊಳ್ಳಬೇಕಾಗುವುದು."

ಶ್ರೀಕಂಠ ಶಿವಾಚಾರ್ಯರು ಶ್ರೀ ಶಂಕರಾಚಾರ್ಯರ ಕಾಲದ ವೀರಶೈವ ಆರಾಧ್ಯ ಬ್ರಾಹ್ಮಣರೆಂಬುದನ್ನೂ, ಅವರ ಕಾಲದಿಂದೀಚೆಗೆ ವೀರಶೈವರ ಆಚರಣೆಗಳಲ್ಲಿ ಅನೇಕ ಬದಲಾ ವಣೆಗಳಾಗಿ, ವೀರಶೈವವು ಪರಿಪೂರ್ಣತೆ ಹೊಂದಿತೆಂಬುದನ್ನೂ, ಅವರ ಕಾಲದ ಲಿಂಗಧಾರೀ ಧರ್ಮದ ತಳಹದಿಯನ್ನು ಶಿವಮಹಾಪುರಾಣದಲ್ಲಿ ನೋಡಬಹುದೆಂಬುದನ್ನೂ ಈ ಗ್ರಂಥದಲ್ಲಿ ಸ್ಪಷ್ಟಮಾಡಲಾಗಿದೆ. ಶಿವ ಶಕ್ತಿಯರನ್ನು ಚಂದ್ರ ಚಂದ್ರಿಕೆಗಳಿಗೆ ಹೋಲಿಸಿ ಅದ್ವೈತವನ್ನು ಪ್ರತಿಪಾದಿಸುತ್ತ ಶರೀರ-ಶರೀರಿ ಭಾವವನ್ನೊಳಗೊಂಡ ಶ್ರೀಕಂಠರ ವಿಶಿಷ್ಟಾದ್ವೈತ ಕಲ್ಪನೆಗೂ, ದ್ವೈತವೇ ಆದ ಶ್ರೀ ರಾಮಾನುಜರ ವಿಶಿಷ್ಟಾದ್ವೈತಕ್ಕೂ ವ್ಯತ್ಯಾಸವಿದೆ. ಶ್ರೀ ರಾಮಾನುಜರ ವಿಶಿಷ್ಟಾದ್ವೈತದ ದೃಷ್ಟಿಯಿಂದ ಶ್ರೀಕಂಠ ಭಾಷ್ಯವನ್ನು ನೋಡುವುದು ಸಾಮಾನ್ಯವಾದಾಗ ಇದನ್ನು ಖಂಡಿಸಲು ಶ್ರೀಕರ ಭಾಷ್ಯವು ಮುಂದೆ ಬಂದಿತು. ಅಲ್ಲದೆ ಜಾಡರ ದಾಸಿಮಯ್ಯ ಮತ್ತು ಅವನ ಹಿಂದಿನ ಶರಣರು ಬಸವ ಭಾನುವಿನ ಉದಯಕ್ಕೆ ಮೊದಲಿನ ಅರುಣೋದಯ ದಂತೆ ಲಿಂಗಧಾರಣೆಯನ್ನು ಎಲ್ಲ ವರ್ಣದವರಲ್ಲಿ ಹರಡಲು, ಲಿಂಗಧಾರಣೆಯು ವೈದಿಕವಲ್ಲವೆಂಬ ಕೂಗೆದ್ದಿತು. ಲಿಂಗಧಾರಣೆಯು ವೈದಿಕವೆಂದು ತೋರಿಸಲೂ ಸಹ ಶ್ರೀಕರ ಭಾಷ್ಯದ ಅವಶ್ಯಕತೆಯಾಯಿತು. ವೀರಶೈವದ ಮುಂದಿನ ಹೆಜ್ಜೆ ಶೂದ್ರರೂ ಸಹ ಮೋಕ್ಷಕ್ಕೆ ಅಧಿಕಾರ ಕೊಡುವ ಲಿಂಗಧಾರಣೆಗೆ ಅರ್ಹರೆಂದು ತೋರಿಸುವುದೂ, ಮತ್ತು ಶ್ರೀಕಂಠ ಭಾಷ್ಯದಲ್ಲಿಯೂ ಶ್ರೀಕರ ಭಾಷ್ಯದಲ್ಲಿಯೂ ಹೇಳಿರುವಂತೆ ಮೋಕ್ಷದಲ್ಲಿ ಸ್ವರೂಪೈಕ್ಯವೆಂದು ಹೇಳುವುದನ್ನು ಒಪ್ಪದೆ ಶಿಖಿಕರ್ಪೂರ ನ್ಯಾಯದಂತಹ ಸಂಪೂರ್ಣ ಐಕ್ಯವನ್ನು ಪ್ರತಿಪಾದಿಸುವುದೂ ಆಗಿದೆ. ಇದು ಹನ್ನೆರಡನೆಯ ಶತಮಾನದ ಕ್ರಾಂತಿಯಲ್ಲಿ ಸಿದ್ಧಾಂತವಾಯಿತು.

ಇನ್ನು ವೀರಶೈವರೂ ಜೈನರೂ ಒಂದೇ ಮೂಲದಿಂದ ಹೊರಹೊಮ್ಮಿದ ಪಂಗಡಗಳೆಂಬ ವಿಷಯದಲ್ಲಿ "ಜೈನ ಸಾಹಿತ್ಯ ವಿಶಾರದ" ಬಿರುದಾಂಕಿತರೂ ಜೈನಬಾಂಧವರ ಮುಂದಾಳು ಗಳೂ ಆದ ಶ್ರೀಯುತ ಕೆ. ಎಸ್. ಧರಣೇಂದ್ರಯ್ಯನವರು ಸದಭಿಪ್ರಾಯ ಕೊಟ್ಟಿದ್ದಾರೆ. ಈ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿರುವ ಅನೇಕ ಹೊಸ ವಿಷಯಗಳು ಅನ್ವೇಷಣಾನುರಾಗಿಗಳಿಗೆ ಪ್ರಚೋದನಕಾರಿಯಾಗಿವೆ.

ಹೆಚ್. ಪುಟ್ಟಸ್ವಾಮಿ
ಪ್ರಕಾಶಕ ಸಂಸ್ಥೆಯ ಅಧ್ಯಕ್ಷ

# ಮುನ್ನುಡಿ

ರಾವ್ ಬಹಾದೂರ್ ಧರ್ಮಪ್ರವರ್ತ ಕೈ॥ ಗುಬ್ಬಿ ತೋಟದಪ್ಪನವರ ಧರ್ಮಸಂಸ್ಥೆಯ ಪರವಾಗಿ "ವೀರಶೈವ ಪ್ರಾಚೀನತೆ"ಯ ವಿಚಾರವಾದ ಒಂದು ಪ್ರಬಂಧವನ್ನು ರಚಿಸಿಕೊಡ ಬೇಕೆಂದು ಸಂಸ್ಥೆಯ ಟ್ರಸ್ಟಿಗಳು ನಿರ್ಣಯಮಾಡಿ ನಿವೃತ್ತ ಹೈಕೋರ್ಟ್ ನ್ಯಾಯಾಧೀಶ ರಾದ ಶ್ರೀಮಾನ್ ಟಿ. ಎನ್. ಮಲ್ಲಪ್ಪನವರನ್ನು ಕೋರಿದ್ದರ ಮೇರೆಗೆ ಶ್ರೀಯುತರು ತಮ್ಮ ಅಮೋಘವಾದ ಧಾರ್ಮಿಕ ಅನುಭವವನ್ನು ಈ ಪ್ರಬಂಧದಲ್ಲಿ ಕ್ರೋಢೀಕರಿಸಿರುವರು. ವೀರ ಶೈವವು ಹಿಂದೂ ಧರ್ಮದ ಅನುಸಾರವಾಗಿರುವುದಾದರೂ, ಜೈನ, ಬೌದ್ಧ ಮತಗಳಂತೆಯೇ ವೈಶಿಷ್ಟ್ಯವುಳ್ಳದ್ದಾಗಿದೆ. ಹಿಂದೂ ಧರ್ಮದಲ್ಲಿ ಶೈವ, ಮಾಧ್ವ, ಶ್ರೀವೈಷ್ಣವ, ವೀರಶೈವ ಎಂಬ ಪ್ರಭೇದಗಳಿರುವುವು. ಇವುಗಳು ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾ ದ್ವೈತ ಎಂಬ ಪಂಥಗಳಾಗಿ ಪ್ರಚಾರದಲ್ಲಿರುವುವು. ಇವುಗಳಲ್ಲಿ ರೇಣುಕಾದಿ ಪಂಚಾಚಾರ್ಯರು ಶಕ್ತಿವಿಶಿಷ್ಟಾದ್ವೈತ ಅಥವಾ ಶಿವಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿರುವರು.

ಶ್ರೀಮತ್ಪಂಚಾಚಾರ್ಯರು ಜಗದಾದಿಯಲ್ಲಿ ಪರಶಿವನ ಪಂಚ ಮುಖಗಳಿಂದುದ್ಭವಿಸಿ ಕೃತ, ತ್ರೇತಾ, ದ್ವಾಪರ, ಕಲಿಯುಗಗಳ ಆದಿಯಲ್ಲಿ ಭೂಮಂಡಲದಲ್ಲಿ ಪ್ರಸಿದ್ಧಿ ಗಳಿಸಿದ ಸೋಮೇಶ್ವರ, ಸಿದ್ಧೇಶ್ವರ, ರಾಮನಾಥ, ಮಲ್ಲಿಕಾರ್ಜುನ, ವಿಶ್ವನಾಥ ಲಿಂಗಗಳಿಂದ ಅವತರಿಸಿ, ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿ ಜಗನ್ಮಾನ್ಯರಾಗಿರುವ ವಿಷಯವು ಶಿವಾಗಮಾದಿ ಗಳಲ್ಲಿ ಉಕ್ತವಾಗಿದೆ. ಶ್ರೀಮತ್ಪಂಚಾಚಾರ್ಯರ ಉತ್ಪತ್ತಿಯ ಬಗ್ಗೆ ಪರಶಿವನು ಪಾರ್ವತಿಗೆ—

> ಪ್ರವಕ್ಷ್ಯಾಮಿ ಭವತ್ವಂ ಚ ಶೃಣು ತಜ್ಜನನಕ್ರಮಂ ।
> ಶ್ರೀಮದ್ರೇವಣಸಿದ್ಧಸ್ಯ ಕೊಲ್ಲಿಪಾಕಿಪುರೋತ್ತಮೇ ।
> ಸೋಮೇಶಲಿಂಗಾಜ್ಜನನಮಾವಾಸಃ ಕದಳೀಪುರೇ ।
> ತದ್ವನ್ ಮರುಳಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ ।
> ಸಿದ್ಧೇಶಲಿಂಗಾಜ್ಜನನಂ ಸ್ಥಾನಮುಜ್ಜಯಿನೀಪುರೇ ॥
> ಸುಧಾಕುಂಡಾಖ್ಯ ಸುಕ್ಷೇತ್ರೇ ಮಲ್ಲಿಕಾರ್ಜುನಲಿಂಗತಃ ।
> ಜನನಂ ಪಂಡಿತಾರ್ಯಸ್ಯ ನಿವಾಸ ಶ್ರೀಗಿರೇ ಶಿವೇ ।
> ದ್ರಾಕ್ಷಾರಾಮಾಖ್ಯ ಸುಕ್ಷೇತ್ರೇ ರಾಮನಾಥಾಖ್ಯಲಿಂಗತಃ ।
> ಏಕೋರಾಮಸ್ಯ ಜನನಮಾವಾಸಸ್ತು ಹಿಮಾಲಯೇ ॥
> ಕಾಶ್ಯಾಂ ವಿಶ್ವೇಶಲಿಂಗಾಚ್ಚ ವಿಶ್ವಾರಾಧ್ಯಸ್ಯ ಸಂಭವಃ ।
> ಸ್ಥಾನಂ ಶ್ರೀಕಾಶಿಕಾಕ್ಷೇತ್ರೇ ಶೃಣು ಪಾರ್ವತಿ ಸಾದರಂ ॥
> ಏತೇ ಯುಗಚತುಷ್ಕೇ ತು ಪಂಚಾಚಾರ್ಯಾ ಯಥಾವಿಧಿ ।
> ಮಮಲಿಂಗ ಮುಖೋದ್ಭೂತಲೋಕ ವಿಶ್ರುತ ಕೀರ್ತಿವತ್ ॥

—ಈ ರೀತಿಯಾಗಿ ನಾಲ್ಕು ಯುಗಗಳಲ್ಲಿಯೂ ಈ ಆಚಾರ್ಯರು ಅವತರಿಸಿದ ವಿಷಯವನ್ನು ಸ್ಪಷ್ಟವಾಗಿ ಉಪದೇಶಿಸಿರುತ್ತಾನೆ. ಇನ್ನೂ ಅನೇಕ ಶಿವಾಗಮಗಳ ವಾಕ್ಯಗಳನ್ನು ವಿಮರ್ಶಿಸಿದರೆ ಇವರು ಕಾಲಾತೀತರೆಂದೂ, ನಿತ್ಯರೆಂದೂ ಸಿದ್ಧವಾಗುವುದು. ಈ ಆಚಾರ್ಯರು ರಂಭಾಪುರಿ, ಉಜ್ಜಯಿನಿ, ಹಿಮವತ್ಕೇದಾರ, ಶ್ರೀಶೈಲ, ಕಾಶಿ ಈ ಪಂಚ ಪುಣ್ಯಕ್ಷೇತ್ರಗಳಲ್ಲಿ ಪಂಚ ಧರ್ಮಪೀಠಗಳನ್ನು ಜಗದಾದಿಯಲ್ಲಿಯೇ ಸ್ಥಾಪಿಸಿದ್ದು, ಈ ಪೀಠಗಳು ಅನಾದಿಕಾಲ ದಿಂದ ರಾಜಾಧಿರಾಜವಂದ್ಯಗಳಾಗಿ ಇಂದಿನವರೆಗೂ ಅತ್ಯಂತ ವೈಭವದಿಂದ ಮೆರೆಯುತ್ತಿರುವ

ವಿಷಯವು ಜಗತ್ತಿಗೆಲ್ಲ ವೇದ್ಯವಾಗಿಯೇ ಇದೆ. ಈ ಪಂಚ ಪೀಠಗಳಿಗೆ ಪ್ರಾಚೀನ ರಾಜರು ಭಕ್ತಿಪೂರ್ವಕವಾಗಿ ಅನೇಕ ದಾನಶಾಸನಗಳನ್ನು ಬರೆದುಕೊಟ್ಟಿರುವರು. ಆ ಶಾಸನಗಳು ಈಗಲೂ ಮೇಲೆ ಕಂಡ ಪೀಠಗಳಲ್ಲಿ ವಿರಾಜಿಸುತ್ತಿರುವುವು.

ವೀರಶೈವ ಸಿದ್ಧಾಂತವನ್ನು ಪ್ರಸ್ತಾಪಿಸುವಾಗ ವೀರಶೈವರಿಗೆ ಪ್ರಾಮುಖ್ಯವಾದ ಆಚರಣೆಯು ಲಿಂಗಾರ್ಚನೆಯಾದುದರಿಂದ ಪರಮಪೂಜ್ಯವಾದ ಈ ಲಿಂಗವು ಏನೆಂಬುದನ್ನು ಪರಿಶೀಲಿಸುವುದು ಅಗತ್ಯವೆನಿಸುತ್ತದೆ. ಈ "ಲಿಂಗ" ಎಂಬುದು ಅನುಷ್ಠಾನದಲ್ಲಿ ಎರಡು ಪ್ರಭೇದವುಳ್ಳದ್ದಾಗಿರುವುದು—"ಸ್ಥಾವರಲಿಂಗ" ಮತ್ತು "ಇಷ್ಟಲಿಂಗ". ಸ್ಥಾವರ ಲಿಂಗವನ್ನು ಬಹು ಪ್ರಾಚೀನಕಾಲದಿಂದಲೂ ವಿಶ್ವದ ನಾನಾ ದೇಶಗಳಲ್ಲಿ ಆಯಾ ಜನರು ಪೂಜಿಸುತ್ತಿದ್ದರೆಂಬುದಕ್ಕೆ ಭೂಗರ್ಭ ಶೋಧನೆಯಿಂದ ಐತಿಹಾಸಿಕ ಆಧಾರಗಳು ದೊರೆ ತಿರುವುವು.

ಮೊಹೆಂಜೋದಾರೋ ಭೂಶೋಧನೆಯಿಂದ ತಿಳಿದುಬರುವಂತೆ ಆರ್ಯರು ನಮ್ಮ ದೇಶಕ್ಕೆ ಪ್ರವೇಶಿಸುವುದಕ್ಕೆ ಹಿಂದೆಯೇ ದ್ರಾವಿಡ ಸಂಸ್ಕೃತಿ ಮತ್ತು ನಾಗರಿಕತೆಯು ಸಿಂಧೂ ದೇಶದವರೆಗೆ ಮಾತ್ರವಲ್ಲದೆ ಪರ್ಷಿಯ (ಇರಾನ್), ಮೆಸೊಪೊಟೇಮಿಯಾ (ಇರಾಕ್), ಸುಮೇರಿಯ, ಈಜಿಪ್ಟ್ ಮೊದಲಾದ ಭೂಮಧ್ಯ ಸಮುದ್ರದ ಪ್ರದೇಶಗಳಲ್ಲಿಯೂ ಹರಡಿ, ಲಿಂಗ ಮತ್ತು ನಂದಿ ವಿಗ್ರಹಗಳನ್ನು ಅಲ್ಲಿನ ಜನರು ಪೂಜಿಸುತ್ತಿದ್ದರೆಂಬುದಕ್ಕೆ ಭೂಗರ್ಭಶೋಧಕರು ಸಾಕಾದಷ್ಟು ಸಂಶೋಧನೆಗಳನ್ನು ನಡೆಸಿರುವರು. ಇಟಲಿಯ ರಾಜಧಾನಿಯಾದ ರೋಮ್ ನಗರದ ಸಮೀಪದಲ್ಲಿ ಪಾಳುಬಿದ್ದಿರುವ ಪಟ್ಟಣವಾದ ಪಾಂಪೆ (Pompeii) ಯ ಅವಶೇಷಗಳಲ್ಲಿ ಲಿಂಗದ ಶಿಲಾವಿಗ್ರಹವು ದೊರೆತಿರುವುದಾಗಿ ಇತ್ತೀಚಿನ ಭೂಗರ್ಭ ಶೋಧನೆಯಿಂದ ಹೊರಪಟ್ಟಿರುವುದು. ದ್ರಾವಿಡರ ಸಂಸ್ಕೃತಿ ಮತ್ತು ಅವರ ಶೈವ ಧರ್ಮವು ಕ್ರಿಸ್ತಪೂರ್ವ ನಾಲ್ಕು ಸಾವಿರ ವರ್ಷಗಳ ಹಿಂದೆಯೇ ಮೊಹೆಂಜೋದಾರೋ (Mound of the dead) ಮತ್ತು ಸುಮೇರಿಯಾ (Iran and Iraq) ಗಳವರೆಗೂ ಪ್ರಸರಿಸಿತ್ತೆಂಬುದಕ್ಕೆ ಆಧಾರಗಳಿವೆ. ಭೂಗರ್ಭ ಸಂಶೋಧನೆಯಲ್ಲಿ ನಿಪುಣರಾದ ಡಾ॥ ಆರ್. ಡಿ. ಬ್ಯಾನರ್ಜಿ, ಜಾನ್ ಮಾರ್ಷಲ್, ಡಾ॥ ಪ್ರಾಣನಾಥ್, ರೆವರೆಂಡ್ ಎಚ್. ಹೆರಾಸ್ ಮೊದಲಾದವರು ದ್ರಾವಿಡ ಸಂಸ್ಕೃತಿಯು ಆರ್ಯರ ಸಂಸ್ಕೃತಿಗಿಂತಲೂ ಅತಿ ಪ್ರಾಚೀನವಾದುದೆಂದೂ, ಹಿರಿಮೆಯುಳ್ಳದ್ದೆಂದೂ ಅಭಿಪ್ರಾಯ ಪಟ್ಟಿರುವರು. ಮೊಹೆಂಜೋದಾರೋದಲ್ಲಿ ಸಿಕ್ಕಿರುವ ಲಿಂಗಪ್ರತಿಮೆಯು ನಾಲ್ಕು ಅಡಿ ಎತ್ತರವಿರುವ, ಬಹುಸುಂದರವಾಗಿ ಕೆತ್ತಿರುವ ಆಕೃತಿಯಾಗಿರುತ್ತದೆ. ಇದೇ ಸ್ಥಳದಲ್ಲಿ ಸಿಕ್ಕಿರುವ ಪಶುಪತಿ ಪ್ರತಿಮೆಯು ಶಿವನನ್ನು ಹೋಲುವುದು ಮತ್ತು ವನ್ಯಮೃಗಗಳಿಂದ ಆವರಿಸ ಲ್ಪಟ್ಟಿರುವುದು. ಆಸನಾರೂಢನಾದ ಯೋಗಿಯ ಸ್ಫುಟಮೂರ್ತಿಯ ವಿಗ್ರಹವೂ ದೊರೆತಿರುವುದು.

ದಕ್ಷಿಣ ಭಾರತದ ದೇವಸ್ಥಾನಗಳ ಬಳಿಯಲ್ಲಿ ಸಾಮಾನ್ಯವಾಗಿರುವ ಸ್ನಾನದ ಕೊಳದಂತೆ ಕಾಣಬರುವ ಕೊಳವು ಮೊಹೆಂಜೋದಾರೋದಲ್ಲಿಯೂ ಸಹ ಇರುತ್ತೆಂದೂ, ಇದರಿಂದ ಆ ಕಾಲದಲ್ಲಿ ಅಲ್ಲಿನ ಜನರು ದೇವಾಲಯಗಳನ್ನು ಕಟ್ಟಿ ಅದರಲ್ಲಿ ಲಿಂಗ ಮತ್ತು ನಂದಿ ವಿಗ್ರಹಗಳನ್ನು ಪ್ರತಿಷ್ಠಿಸಿ ಪೂಜಿಸುತ್ತಿದ್ದರೆಂದೂ ವ್ಯಕ್ತವಾಗುವುದು. ನಮ್ಮ ದ್ರಾವಿಡ ಭಾಷೆಯು ಸುಮೇರಿಯಾವರೆಗೂ ಪ್ರಚಾರಗೊಂಡಿದ್ದಕ್ಕೆ ಅಲ್ಲಿನ ಶಿಲಾಶಾಸನಗಳಲ್ಲಿ ಕಂಡುಬರುವ "ಊರು" (Town), "ಹೂವಣ್ಣ" (Elder brother of the flower) ಎಂಬ ಪದಗಳು ನಿದರ್ಶನಗಳಾಗಿರುತ್ತವೆ. ವಿಗ್ರಹರೂಪವಾದ ಲಿಂಗಪೂಜೆಯು ಶೈವ ಪಂಥದವರಲ್ಲಿ ಈಗಲೂ

ಸಹ ಆಚರಣೆಯಲ್ಲಿರುವುದು. ಶ್ರೀ ಆದಿಶಂಕರಾಚಾರ್ಯರಿಗೆ ಶ್ರೀ ರೇಣುಕಾಚಾರ್ಯರು ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟರು; ಸದರಿ ಪ್ರತಿಮೆಗೆ ಶೃಂಗೇರಿಯಲ್ಲಿರುವ ಶ್ರೀ ಶಂಕರ ಮಠದಲ್ಲಿ ಈಗಲೂ ನಿತ್ಯಪೂಜೆ ಸಲ್ಲುತ್ತಿರುವುದು. ನೇಪಾಳ, ಅಸ್ಸಾಂ, ಸಿಂಹಳದಲ್ಲಿರುವ ಜಾಫ್ನ, ಸುಮಾತ್ರ, ಜಾವಾ, ಕ್ಯಾಂಬೋಡಿಯಾ, ಚೀಣಾ, ಜಪಾನ್ ಗಳಲ್ಲಿಯೂ ಸ್ಥಾವರಲಿಂಗ ಪೂಜೆಯು ಅನುಷ್ಠಾನದಲ್ಲಿರುವುದಕ್ಕೆ ಸಾಕಾದಷ್ಟು ಆಧಾರಗಳು ದೊರೆತಿರುವುವು.

"ಲಿಂಗ" ಎಂಬ ಪದದ ಸರಿಸಮವೇನೆಂಬುದನ್ನು ಪರಿಶೀಲಿಸುವುದು ಫಲಕಾರಿಯಾಗಬಹುದು. "ಲಿಂಗ" ಎಂದರೆ ಪೂಜಿಸಲ್ಪಡುತ್ತಿರುವ "ಶಿವ" ಎಂದು ರೆವರೆಂಡ್ ಡಾ॥ ಕಿಟ್ಟೆಲ್‌ರವರು ತಮ್ಮ ಕನ್ನಡ-ಇಂಗ್ಲಿಷ್ ನಿಘಂಟಿನಲ್ಲಿ ಹೇಳಿರುತ್ತಾರೆ. ಇವರು "ವೀರಶೈವ" ಪದಕ್ಕೆ "ಲಿಂಗವಂತ" ಎಂಬ ಸರಿಸಮ ಪದವನ್ನು ಸದರಿ ಗ್ರಂಥದಲ್ಲಿ ಕೊಟ್ಟಿರುವರು. "ಶಿವ" ಎಂಬ ಶಬ್ದಕ್ಕೆ "ಪರಮಸುಖ" ಮತ್ತು "ದಿವ್ಯಾನಂದ" ಎಂಬುದಾಗಿಯೂ, "ಜಗದೀಶ" ಎಂದರೆ "Lord of the Universe" ಎಂದೂ, "ಆತ್ಮ" ಎಂದರೆ "Soul of the Universe" ಎಂದೂ ಡಾ॥ ಕಿಟ್ಟೆಲ್‌ರವರು ಅರ್ಥಮಾಡಿರುತ್ತಾರೆ. "ಆತ್ಮ"ವೇ "ಈಶ್ವರ" ಎಂಬುದಾಗಿಯೂ ಹೇಳಿರುತ್ತಾರೆ.

"ಲಿಂಗವೆಂಬುದು ಸರ್ವಕಾರಣ, ನಿರ್ಮಲ; ಲಿಂಗವೆಂಬುದು ಸಚ್ಚಿದಾನಂದ, ನಿತ್ಯಪರಿಪೂರ್ಣ; ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆ ಕಾರಣ; ಲಿಂಗವೆಂಬುದು ಸರ್ವ ತತ್ತ್ವಪೂರ್ಣಚೈತನ್ಯ; ಲಿಂಗವೆಂಬುದು ಜನ್ಮವಾರಿಧಿಯ ದಾಂಟಿಸುವ ಭೈತ್ರವು; ಲಿಂಗವೆಂಬುದು ಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಮಯಲಿಂಗ, ಇಂತೀ ಲಿಂಗದ ಮರ್ಮವನರಿದವನೇ ಅರಿದವನು."

ವೀರಶೈವನಿಗೆ ಇಹದಲ್ಲಿಯೇ ಸುಖ-ಶಾಂತಿ-ಸಂತೋಷ ಪ್ರಾಪ್ತಿಯಾಗಿ, ಇಹದಲ್ಲಿಯೇ ಸ್ವರ್ಗ ಸುಖ ಉಂಟಾಗುವುದು. ಅವನ ದಿನಚರಿಯ ನಡೆ, ನುಡಿ, ಕಾರ್ಯಕಲಾಪಗಳ ದೆಸೆಯಿಂದ ಪರಿಶುದ್ಧವಾದ ಮುಕ್ತಿ ಜೀವನವು ಸುಗಮವಾಗಿ ಇಹವೇ ಸ್ವರ್ಗವಾಗುವುದು.

ವೀರಶೈವ ಜನಾಂಗದಲ್ಲಿ ಉದಾರವಾದ ದಾನ ಧರ್ಮ ಕಾರ್ಯಗಳಲ್ಲಿ ಪ್ರವರ್ತರಾದ ಮಹಾನುಭಾವರು ತಾವು ಸ್ವಂತವಾಗಿ ತಮ್ಮ ಜೀವಮಾನದಲ್ಲಿ ಆರ್ಜಿಸಿದ ಅಪಾರವಾದ ಧನ ಸಂಪತ್ತು ಮತ್ತು ಆಸ್ತಿಪಾಸ್ತಿಗಳನ್ನು ಸಮಾಜದ ಪುರೋಭಿವೃದ್ಧಿಗಾಗಿ ಚಿರಸ್ಥಾಯೀ ನಿಧಿಗಳನ್ನಾಗಿ ಕಲ್ಪಿಸಿ ದೇಶಾಭ್ಯುದಯಕ್ಕೆ ಸಾಧಕವಾಗುವ ಯುವಕರ ವಿದ್ಯಾರ್ಜನೆಗೆ ಅಪಾರವಾದ ಸಹಾಯವನ್ನು ನೀಡಿರುವ ಅನೇಕ ನಿದರ್ಶನಗಳಿರುವುವು.

ಪ್ರಕೃತ, ರಾವ್ ಬಹಾದೂರ್ ಧರ್ಮಪ್ರವರ್ತ ಕೈ॥ ಗುಬ್ಬಿ ತೋಟದಪ್ಪನವರು ಈ ಶತಮಾನದ ಆದಿಯಲ್ಲಿ ಧರ್ಮಕಾರ್ಯಗಳಿಗಾಗಿ ತಮ್ಮ ವಿಶಿಷ್ಟ ಆಸ್ತಿಪಾಸ್ತಿಗಳನ್ನು ನಿಧಿ ರೂಪವಾಗಿ ಕಲ್ಪಿಸಿ ಅಮೋಘವಾದ ಸಹಾಯವನ್ನು ನೀಡಿರುವರು. ಶ್ರೀಯುತರು ಕರ್ಣಾಟಕದ ರಾಜಧಾನಿಯಾದ ಬೆಂಗಳೂರು ಪಟ್ಟಣದಲ್ಲಿ ಧರ್ಮಛತ್ರವನ್ನು ಕಟ್ಟಿಸಿ ಸಾವಿರಾರು ಪ್ರಯಾಣಿಕರಿಗೆ ನಿತ್ಯವೂ ಸಕಲ ಸೌಲಭ್ಯಗಳನ್ನು ಒದಗಿಸಿಕೊಟ್ಟಿರುವುದಲ್ಲದೆ, ನಮ್ಮ ನವ ತರುಣರಿಗೆ ವಿದ್ಯಾರ್ಜನೆಗಾಗಿ ಉಚಿತ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿ ಸಮಾಜದಲ್ಲಿ ಅನೇಕಾನೇಕ ಗಣ್ಯ ವ್ಯಕ್ತಿಗಳ ಪುರೋಭಿವೃದ್ಧಿಗೆ ಕಾರಣರಾಗಿ ಕೀರ್ತಿ ಗಳಿಸಿದರು. ಈ ರೀತಿ ಇವರ ಧರ್ಮಸಹಾಯವನ್ನು ಪಡೆದು ಸಾರ್ಥಕಗೊಳಿಸಿಕೊಂಡು, ಭಾರತ ಸ್ವಾತಂತ್ರ್ಯ

ನಂತರ ಪ್ರಾಂತ್ಯಗಳಲ್ಲಿ ಪ್ರಜಾಸರ್ಕಾರಗಳ ಆಡಳಿತಧುರೀಣರಾಗಿ ಸೇವೆ ಸಲ್ಲಿಸಿದವರಲ್ಲಿ ಶ್ರೀಯುತರುಗಳಾದ ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರೂ, ಡಿ. ಎಚ್. ಚಂದ್ರಶೇಖರಯ್ಯನವರೂ, ಕೈ॥ ಎಚ್. ಸಿದ್ದಯ್ಯನವರೂ, ಶ್ರೀ ಎಚ್. ಸಿದ್ದವೀರಪ್ಪನವರೂ, ಶ್ರೀ ಎಲ್. ಸಿದ್ದಪ್ಪನವರೂ, ಮೈಸೂರು ದೇಶದ ಮಂತ್ರಿಗಳಾಗಿ ಸೇವೆ ಸಲ್ಲಿಸಿರುವುದು ಗಣನೀಯವಾದುದು. ಶ್ರೀಯುತ ನಿಜಲಿಂಗಪ್ಪನವರು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿಯೂ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿಯೂ ದೇಶಾದ್ಯಂತ ಮೆಚ್ಚಿಗೆ ಪಡೆದು ಸರ್ವರ ಮಾನ್ಯತೆಗೂ ಪಾತ್ರರಾಗಿರುವ ನಿದರ್ಶನವು ದೇಶದ ಪುರೋಭಿವೃದ್ಧಿಗಾಗಿ ಶ್ರಮಿಸಲು ಆಶಿಸುವ ನಮ್ಮ ನವ ತರುಣರಿಗೆ ಆದರ್ಶವಾಗಿರುವುದು. ಹೀಗೆ ಈ ಧರ್ಮಸಂಸ್ಥೆಯ ಸಹಾಯವು ಸಾರ್ಥಕವಾಗಿ ದಿವಂಗತರ ಸದಾಶಯವು ಈಡೇರಿದಂತಾಗಿದೆ.

ಈ ಧರ್ಮನಿಧಿಯ ಸಹಾಯದಿಂದ ವೀರಶೈವದ ಪ್ರಾಚೀನತೆಯ ಈ ಪ್ರಬಂಧವನ್ನು ಬರೆಸಿ ಪ್ರಚುರಗೊಳಿಸಿರುವುದು ನಿಧಿಯ ಸದುದ್ದೇಶಗಳ ಸಾಧನೆಯಲ್ಲಿ ಒಂದು ಮಹತ್ಕಾರ್ಯವಾಗಿರುವುದು.

ಶ್ರೀಯುತ ಟಿ. ಯನ್. ಮಲ್ಲಪ್ಪನವರು ಅಪಾರವಾದ ಗ್ರಂಥ ಪಠಣದಿಂದಲೂ, ಧರ್ಮ ಗ್ರಂಥಗಳ ಪರಿಶೀಲನೆಯಿಂದಲೂ, ದಾರ್ಶನಿಕ ಪರಿಶೋಧನೆಯಿಂದಲೂ "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಪ್ರಬಂಧವನ್ನು ರಚಿಸಿ ಪ್ರಕಟಣೆಗಾಗಿ ಈ ಧರ್ಮಸಂಸ್ಥೆಗೆ ಒಪ್ಪಿಸಿರುವುದಕ್ಕಾಗಿ ಅವರಿಗೆ ಟ್ರಸ್ಟಿಗಳು ತಮ್ಮ ಮೆಚ್ಚುಗೆಯನ್ನು ಈ ಮೂಲಕ ವ್ಯಕ್ತಪಡಿಸುತ್ತಾರೆ. ಏಕೆಂದರೆ ಈ ಹಿಂದೆ ಅವರಿಗೆ ತಿಳಿಸಿರುವಂತೆ ಈ ಪ್ರಬಂಧವು ಅಮೋಘವಾದುದು.

"ವೀರಶೈವದ ಉಗಮ ಮತ್ತು ಪ್ರಗತಿ"ಯ ರಚನೆಗೆ ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರಾಗಿದ್ದ ರಾಜಧರ್ಮ ಪ್ರವೀಣ, ದಿವಾನ್ ಬಹಾದೂರ್ ಕೈ॥ ಪಿ. ಮಹಾದೇವಯ್ಯನವರು ಸಲ್ಲಿಸಿರುವ ಸೇವೆಯು ಚಿರಸ್ಮರಣೀಯವಾದುದು.

ವಿಶ್ವಧರ್ಮಗಳ, ವಿಶೇಷವಾಗಿ ವೀರಶೈವ ಮತದ, ಪ್ರಾಚೀನತೆಯ ಪರಿಚಯ ಪಡೆಯಬೇಕೆಂದು ಆಸಕ್ತಿಯುಳ್ಳ ಮಹಾಜನರು ಈ ಪ್ರಬಂಧದ ಪಠಣದಿಂದ ಪೂರ್ಣ ಪ್ರಯೋಜನವನ್ನು ಪಡೆಯುವರೆಂದು ಈ ಸಂಸ್ಥೆಯ ಟ್ರಸ್ಟಿಗಳು ಆಶಿಸುವರು.

ಓಂ ಶಿವಂ ಸುಂದರಂ

ಚಾಮರಾಜಪೇಟೆ
ಬೆಂಗಳೂರು
೨೮–೩–೧೯೬೬

ಮಹೇಶಚಂದ್ರಗುರು
ಸುಪ್ರೀಂ ಕೋರ್ಟ್ ಸೀನಿಯರ್ ಅಡ್ವೊಕೇಟ್
ಪ್ರಕಾಶಕ ಸಂಸ್ಥೆಯ ಟ್ರಸ್ಟಿ

# ಈ ಗ್ರಂಥಕರ್ತರ ಇತರ ಗ್ರಂಥಗಳು

## ಸಾಯಣ ಭಾಷ್ಯೋಪೇತ ನಾಸದೀಯ ಸೂಕ್ತ

ಉಪಕುಲಪತಿ ಪದ್ಮಶ್ರೀ ಡಾ॥ ಗೋಕಾಕ್‌ರವರು—ಅವರಲ್ಲಿ ನೆಲೆಗೊಂಡಿದ್ದ ಜಿಜ್ಞಾಸೆ ಹಾಗೂ ವಿದ್ವತ್ತು, ವೇದ ಉಪನಿಷತ್ತು ವಿವಿಧ ಭಾಷ್ಯ ಹಾಗೂ ವಚನ ಸಾಹಿತ್ಯದ ಆಳದಲ್ಲಿ ಮುಳುಗೆದ್ದು ಚಿಂತನೆಯ ಆಣಿಮುತ್ತುಗಳನ್ನು ಮೇಲಕ್ಕೆ ತಂದಿವೆ. ಇದರ ನಿದರ್ಶನವೇ ನಾಸದೀಯ ಸೂಕ್ತವನ್ನು ಕುರಿತು ಅವರು ಬರೆದಿರುವ ಈ ಸುಂದರಕೃತಿ.

ಪ್ರಾಚ್ಯ ಮಹಾವಿದ್ಯಾಲಯಾಧ್ಯಕ್ಷ ವಿದ್ಯಾಲಂಕಾರ ಎಸ್ ಕೆ. ರಾಮಚಂದ್ರರಾಯರು—ಸಾವಿರಾರು ವರ್ಷಗಳಿಂದಲೂ ಸಮಸ್ಯೆಯೇ ಆಗಿ ಉಳಿದಿರುವ 'ನಾಸದೀಯ ಸೂಕ್ತ'ದ ತೊಡಕನ್ನು ಬಿಡಿಸಲು ಯತ್ನಿಸಿದುದೇ ಸಾಹಸ. ಸಾಹಸದೊಂದಿಗೆ ವಿಪುಲವಾದ ವೈದುಷ್ಯವೂ, ಪ್ರೌಢವಾದ ವಿಚಾರ ಶಕ್ತಿಯೂ ಸೇರಿದುದು ಯಶಸ್ಸಿಗೆ ಕಾರಣವಾಗಿದೆ.

DR. M. V. KRISHNA RAO, M.A., B.T., Litt., F.R.A.S. (Lond.)—Many of the terms of the great song would have remained recondite and unintelligible without your comparative study.

SRI. K. GURU DUTT, I.A.S. (Rtd.)—A little masterpiece; masterly introduction; much original thinking.

## ಸಾಯಣ ಭಾಷ್ಯೋಪೇತ ಪುರುಷ ಸೂಕ್ತ

ಪ್ರಾಚ್ಯ ಮಹಾವಿದ್ಯಾಲಯಾಧ್ಯಕ್ಷ ವಿದ್ಯಾಲಂಕಾರ ಎಸ್. ಕೆ. ರಾಮಚಂದ್ರರಾಯರು—ಪುರುಷ ಸೂಕ್ತವನ್ನು ತಾವೇ ಕೂಲಂಕಷವಾಗಿ ಅಭ್ಯಾಸಮಾಡಿ ಇದರ ಇಂಗಿತವನ್ನು ಅರಿಯಬೇಕೆನ್ನುವವರಿಗೆ ಈ ಗ್ರಂಥ ಉಪಯೋಗವಾಗುವಂತೆ ಬೇರೆ ಯಾವ ಗ್ರಂಥವನ್ನೂ ನಾನು ನೋಡಿಲ್ಲ.

DR. M. V. KRISHNA RAO, M.A., B.T., Litt., F.R.A.S. (Lond.)—A great attempt, with a rare penetrative insight to enter into the deeper meanings and implications of vedic terminology.

SRI. K. GURU DUTT, I.A.S. (Rtd.)—A fine verse rendering in Kannada which brings out the range and spirit of the original; the commentary is lucid.

## ವಚನೋಪನಿಷತ್

ಚಿತ್ರದುರ್ಗದ ಜಗದ್ಗುರು ಸನ್ನಿಧಿಯಿಂದ—ವೇದವಾಙ್ಮಯದಿಂದ ವಚನವಾಙ್ಮಯದವರೆಗೆ ಆಧ್ಯಾತ್ಮಿಕ ಪ್ರಗತಿಯನ್ನು ಸಪ್ರಮಾಣವಾಗಿ ಸುಂದರವಾಗಿ ನಿರೂಪಿಸಿದೆ.

## ಕೇನೋಪನಿಷತ್ ತಾತ್ಪರ್ಯ ನಿರ್ಣಯ

DR. R. R. DIWAKAR—A profound study from many points of view.

ಡಾ॥ ಡಿ. ವಿ. ಗುಂಡಪ್ಪನವರು—ತತ್ತ್ವ ಜಿಜ್ಞಾಸುಗಳಿಗೆ ಗ್ರಂಥ ಪರಮೋಪಕಾರ.

ಸಾಹಿತ್ಯ ಪರಿಷತ್ತಿನ ಕನ್ನಡ ನುಡಿ—ಈ ಕೃತಿಯನ್ನು ಓದಿದ ಮೇಲೆ ಶ್ರೀ ಮಲ್ಲಪ್ಪನವರು ಉಳಿದ ಎಂಟು ಉಪನಿಷತ್ತುಗಳಿಗೂ, ಗೀತೆ ಮತ್ತು ಬ್ರಹ್ಮಸೂತ್ರಗಳಿಗೂ ಇದೇ ರೀತಿ ವ್ಯಾಖ್ಯಾನ ಮಾಲೆಯನ್ನು ಬರೆದು 'ಆಧುನಿಕ ಆಚಾರ್ಯ ಪುರುಷ'ರಾಗಬಾರದೇಕೆ?—ಎನಿಸೀತು.

## ಈಶಾವಾಸ್ಯೋಪನಿಷತ್ ಪ್ರಕಾಶ

ಚಿತ್ರದುರ್ಗ ಜಗದ್ಗುರು ಸನ್ನಿಧಿಯಿಂದ—ಇಂತಹ ವಿಮರ್ಶಾತ್ಮಕ ಗ್ರಂಥಗಳು ಬಹಳ ವಿರಳ.

ಶ್ರೀ ಮಹಾರಾಜ ಗುರು ಪರಕಾಲಸ್ವಾಮಿ ಸನ್ನಿಧಿಯ ಪ್ರಶಸ್ತಿ ಪತ್ರ—ಇಂತಹ ವಿಚಾರಪೂರಿತ ವೇದಾಂತ ಗ್ರಂಥವು ಪ್ರಾಪ್ತವಾದುದು ಸುಯೋಗ,

# VEERASAIVADA UGAMA MATTU PRAGATI

## OPINIONS

His Excellency the Governor of Panjab
***Padmabhushana* Dr. D. C. PAVATE**
(*Former Vice-Chancellor, Karnataka University, Dharwar*)

I am happy that you have given so much thought and labour to this piece of research which is a valuable addition to our available knowledge on Veerasaiva history and culture.

**SRI. M. YAMUNACHARYA, M.A.**
(*Retired Professor of Philosophy, University of Mysore*)

Sri. T. N. Mallappa's work in Kannada on *The Origin and Development of Veerasaivism* appears to me to be an epoch-making work in so far as it throws considerable light on all aspects of Indian religion and development. The author has amassed amazingly rich material and the study of the book leaves on one's mind the impression that India has revealed down the ages an extraordinary richness of religious insight in many of her sectarian creeds while at the same time it unmistakably points to a core of eternal religion or *Sanatana Dharma* which transcends boundaries of space and time. Sri. Mallappa has most successfully brought out the import of a 'Perennial Philosophy' which constitutes a great unity in variety. A valuable lesson of this treatise is borne in on us in that it has convincingly pointed out that the civilization and culture of India cannot be described either as exclusively Aryan or exclusively Dravidian but Arya-Dravidian as it really is and as is aptly put by the author, it is the 'mingling of milk and honey'. We are all indebted to the author for this illuminating work which successfully threads through trivial controversy and moves on a high level of calm and tranquil consideration befitting a truth-loving scholar who leaves no stone unturned to arrive at a sweet synthesis or *Samanvaya* of divergent trends which expresses itself in the elements of universal religion in Veerasaivism.

***Rajasevasakta*, *Padmasri* SRI. C. K. VENKATARAMIAH**

I was delighted and happy to go through your scholarly and learned work *Veerasaivada Ugama Mattu Pragati* which is indeed very interesting. You have laid the entire Kannada country under a deep debt of gratitude by writing this book.

# ಪರಮಗುರುವರ್ಯರ ಅಭಿಪ್ರಾಯಗಳ ಸಂಗ್ರಹ

## ಶ್ರೀ ೧೦೦೮ ಶ್ರೀಶೈಲ ಜಗದ್ಗುರು
## ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಿಯಿಂದ

"ವೀರಶೈವದ ಉಗಮ ಮತ್ತು ಪ್ರಗತಿ" ಗ್ರಂಥವು ಸನ್ನಿಧಿಯ ಕೈಸೇರಿತು.... ಆರಂಭದಿಂದ ಕೊನೆಯವರೆಗೆ ಸ್ವಲ್ಪವೂ ಬಿಡದೆ ಓದಲಾಯಿತು.... ಆ ಕಾರ್ಯವನ್ನು ಮಾಡಿ ಮತಾನ್ವೇಷಕರಾದ ಜಾಣ ಜನರಿಗೆಲ್ಲಾ ಮಹೋಪಕಾರ ಮಾಡಿದ್ದೀರಿ. ಗ್ರಂಥವು, ಮಹಾನುಭಾವಿ ಬಸವೇಶ್ವರರು ಹೇಳುವಂತೆ ಅಂತರಂಗ ಬಹಿರಂಗಗಳೆರಡರಲ್ಲಿಯೂ ಶುದ್ಧವಾಗಿದೆ. ಇದಕ್ಕೆಲ್ಲ ನಿಮ್ಮ ಶುದ್ಧಾಂತಃಕರಣವೇ ಕಾರಣವೆಂದು ನಾವು ಭಾವಿಸುತ್ತೇವೆ. ತಾವು ಮಾಡಿದ ಮತಧರ್ಮ ಸೇವೆಯು ಅವರ್ಣನೀಯವಾಗಿದೆ. ಒಟ್ಟಾರೆ ಅಪ್ಪಣೆಕೊಡಿಸುವುದಾದರೆ, ಈ ಗ್ರಂಥವು ವೀರಶೈವ ಕನ್ನಡ ಭಾಷ್ಯ ಅಥವಾ ಮಲ್ಲಣ ಭಾಷ್ಯವೆಂದು ಕರೆಯಲು ಯೋಗ್ಯವಾಗಿದೆ.

## ಶ್ರೀಮದುಜ್ಜಯಿನೀ ಸಿಂಹಾಸನಾಧೀಶ್ವರ
## ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಿಯಿಂದ

"ವೀರಶೈವದ ಉಗಮ ಮತ್ತು ಪ್ರಗತಿ" ಎನ್ನುವ ಗ್ರಂಥವು ನಿಮ್ಮ ಬಿನ್ನಹಪತ್ರದೊಡನೆ ಮಹಾಸನ್ನಿಧಿಗೆ ತಲುಪಿ, ಪರಾಂಬರಿಸಿ ಆನಂದಿಸಿದೆವು. ಶ್ರೀಶೈಲ ಸೂರ್ಯಸಿಂಹಾಸನಾಧಿಪತಿಗಳಾದ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳಿಂದ ನಿಮ್ಮ ಗ್ರಂಥದ ಬಗ್ಗೆ ಹೊರಹೊರಟ ಉದ್ಗಾರವು ಬಹು ಸಮಂಜಸವಾಗಿರುವುದರಿಂದ, ಬೇರೆ ಹೆಸರನ್ನಿಟ್ಟು ಕರೆಯುವ ಹವ್ಯಾಸಕ್ಕೆ ಹೋಗದೆ, ದೊಡ್ಡವರಿಟ್ಟ ಹೆಸರಾದ "ವೀರಶೈವ ಕನ್ನಡ ಭಾಷ್ಯ ಅಥವಾ ಮಲ್ಲಣ ಭಾಷ್ಯ" ವೆಂಬ ಹೆಸರಿನಿಂದಲೇ ಕರೆದು ಅದರ ಪುರೋಭಿವೃದ್ಧಿಯಿಂದ ಸಮಾಜಕ್ಕೆ ಅತ್ಯಂತ ಹಿತವಾಗಲೆಂದು ಹಾರೈಸಲಾಗಿದೆ.

## ವಾರಣಾಸೀ ಮಹಾಕ್ಷೇತ್ರ ಜಂಗಮವಾಟಿಕಾ ಮಹಾಮಠಾಧಿಷ್ಠಿತ
## ಶ್ರೀ ೧೦೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಿಯಿಂದ

"ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಗ್ರಂಥವು ಪ್ರಾಪ್ತವಾಯಿತು. ಅನೇಕ ಗ್ರಂಥಗಳ ಪ್ರಮಾಣವನ್ನು ಆಧಾರವಾಗಿಟ್ಟುಕೊಂಡು ಬಹಳ ಶ್ರಮವಹಿಸಿದ್ದು ಸ್ತುತ್ಯವಾಗಿದೆ.

## ನಿಡುಮಾಮಿಡಿ ಸೂರ್ಯಸಿಂಹಾಸನಾಧೀಶ್ವರ
## ಜಗದ್ಗುರು ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳ ಸನ್ನಿಧಿಯಿಂದ

ನಿವೃತ್ತ ಹೈಕೋರ್ಟ್ ಜಡ್ಜರಾದ ಶ್ರೀಮಾನ್ ಟಿ. ಎನ್. ಮಲ್ಲಪ್ಪನವರು ಬಹು ಪರಿಶೋಧನೆಯಿಂದ, ಬಹು ಪರಿಶ್ರಮದಿಂದ ಬರೆದ "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಅಮೂಲ್ಯವೂ ಅತ್ಯಾವಶ್ಯಕವೂ ಆದ ಗ್ರಂಥವನ್ನು ಓದಿನೋಡಿ ಆನಂದಿಸಿದೆವು. ಒಂದು ಸಂಸ್ಥೆಯು ನಿರ್ವಹಿಸುವ ಈ ಮಹತ್ಕಾರ್ಯವನ್ನು ಒಬ್ಬ ವ್ಯಕ್ತಿಯು ಬಿತ್ತರಿಸಿರುವುದೇ ಒಂದು ಹೆಚ್ಚಿನ ಸಾಹಸ. ಇದರ ಕಾರ್ಯ ಅಭಿನಂದನೀಯ. ವೀರಶೈವೇತಿಹಾಸಕ್ಕೆ ಇದೊಂದು ವಿಶಿಷ್ಟ ಕೊಡುಗೆ. ಇದಕ್ಕಾಗಿ ಸಮಾಜವು ಇವರಿಗೆ ಉಪಕೃತವಾಗಿದೆ; ಚಿರಋಣಿಯಾಗಿದೆ. ವೀರಶೈವದ ವಿಶಾಲ ಮನೋಭಾವವನ್ನು, ವಿಶಿಷ್ಟ ದೃಷ್ಟಿಯನ್ನು, ವಿಶ್ವವ್ಯಾಪಕ ಶಕ್ತಿಯನ್ನು ಕುರಿತು ಈ ಇಪ್ಪತ್ತನೆಯ ಶತಮಾನದ ವಿಜ್ಞಾನಯುಗದ ಹಿರಿಯ ವ್ಯಕ್ತಿಗಳ

ಉತ್ತಮ ಉಕ್ತಿಗಳನ್ನು ಉದ್ಧರಿಸಿದ್ದಾರೆ. ವೀರಶೈವದ ಉಗಮವನ್ನು ಕುರಿತು, ಉತ್ಪಾದಕರನ್ನು ಕುರಿತು ಉದ್ರಿಕ್ತರೂ ಸಾಂಪ್ರದಾಯಕರೂ ಏಕೈಕದೃಷ್ಟಿಯುಳ್ಳವರೂ ಆಗದೆ ವಿಚಾರಾತ್ಮಕ ವಿಮರ್ಶೆಯಿಂದ, ನ್ಯಾಯವಾದ ಕಾಲಸೋಪಾನಗಳ ನಿರ್ಣಯದಿಂದ, ತಮ್ಮದೇ ಆದ ನಿಷ್ಪಕ್ಷ ವಿವೇಚನೆಯಿಂದ, ಸೂಕ್ತ ಸಾಕ್ಷಿ ವಚನಗಳಿಂದ, ತೂಕ ತಪ್ಪದಂತೆ ಬಣ್ಣ ಬದಲಿಸದಂತೆ ಪ್ರಸ್ತಾಪಮಾಡಿದ್ದಾರೆ. ಭಿನ್ನಾಭಿಪ್ರಾಯ ಗಳಲ್ಲಿರುವ ಲೋಪದೋಷಗಳನ್ನು ಚೆನ್ನಾಗಿ ಸಯುಕ್ತಿಕವಾಗಿ ಪರಾಮರ್ಶಿಸಿದ್ದಾರೆ; ಶಾಸನಾಧಾರಗಳನ್ನು ತೋರಿಸಿದ್ದಾರೆ······ಬ್ರಹ್ಮ ಸೂತ್ರಗಳಿಗೆ ಭಾಷ್ಯವನ್ನು ಬರೆದ ಶ್ರೀಕಂಠ ಶಿವಾಚಾರ್ಯರು ಮತ್ತು ಶ್ರೀಪತಿ ಪಂಡಿತರು ಮತ್ತು 'ಕ್ರಿಯಾಸಾರ' ಕೃತಿಕರ್ತರಾದ ನೀಲಕಂಠರೂ ಒಂದೇ ಮತದವರೆಂಬುದನ್ನು ಸಯುಕ್ತಿಕವಾಗಿ ಚೆನ್ನಾಗಿ ಸಮರ್ಥಿಸಿದ್ದಾರೆ······ಒಟ್ಟಿನಲ್ಲಿ ಈ ಗ್ರಂಥವು ವೀರಶೈವದ ಉಗಮ ವನ್ನೂ ಪ್ರಗತಿಯನ್ನೂ ತನ್ನದೇ ಆದ ವಿವೇಚನೆಯಿಂದ, ಆ ವಿವೇಚನೆಗೆ ತಕ್ಕ ಪ್ರಮಾಣಗಳಿಂದ ಚೆನ್ನಾಗಿ ಚಿತ್ರಿಸಿದೆ; ವೀರಶೈವದ ಪೂರ್ವೇತಿಹಾಸವನ್ನೂ ಪ್ರಗತಿಯ ಶ್ರೀಮಂತಿಕೆಯನ್ನೂ ಸರ್ವಾದರಣೀಯವಾಗಿ ಪ್ರತಿಪಾದಿಸಿದೆ. ಗ್ರಂಥಕರ್ತರ ಈ ಸಾಹಸ, ಈ ಶ್ರಮ ಸಾರ್ಥಕ; ಸ್ತುತ್ಯ. ಇವರ ಕಾರ್ಯವು ಇತರರಿಗೆ ಆದರ್ಶವಾಗಿದೆ, ಆದರಣೀಯವಾಗಿದೆ. ಇವರಿಂದ ಇನ್ನೂ ಇಂತಹ ಉತ್ತಮ ಕೃತಿಗಳು ಹೊರ ಬರಲೆಂದು ಹೃದಯಾರೆ ಹಾರೈಸಿ ಹರಸೋಣವಾಗಿದೆ.

## ಶ್ರೀಮನ್ನಿರಂಜನ ಜಗದ್ಗುರು ಶ್ರೀ ಶಿವಲಿಂಗೇಶ್ವರ ಮಹಾಸ್ವಾಮಿಗಳು ನಿಡಸೋಸಿಯವರ ಸನ್ನಿಧಿಯಿಂದ

ತಾವು ಶ್ರಮವಹಿಸಿ ಬರೆದ "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಗ್ರಂಥಾವಲೋಕನ ದಿಂದ ಯಾರಿಗಾದರೂ ತಮ್ಮ ಆಳವಾದ ವೈದುಷ್ಯದರಿವಾಗದಿರದು. ಆಧುನಿಕ ಕಾಲದಲ್ಲಿ ನಿಗೂಢಾರ್ಥ ದಿಂದೊಡಗೂಡಿದ ವೇದೋಪನಿಷದಾದಿಗಳನ್ನು, ಯುಕ್ತಿಪ್ರಯುಕ್ತಿಗಳಿಂದೊಡಗೂಡಿದ ಪ್ರಸ್ಥಾನತ್ರಯ ಭಾಷ್ಯಗಳನ್ನು ಮತ್ತು ತಾತ್ತ್ವಿಕಗಳಾದ ವಿವಿಧ ದರ್ಶನಗಳನ್ನು ಹಾಗೂ ಗಣನೆಗೆ ನಿಲುಕದ ಆಗಮ ಪುರಾಣೇತಿಹಾಸಾದಿಗಳನ್ನು ಓದುವವರೇ ವಿರಳ! ಆದರೆ ತಾವು ಇವುಗಳನ್ನೆಲ್ಲ ಒಳ್ಳೇ ವಿಮರ್ಶಾತ್ಮಕ ದೃಷ್ಟಿಯಿಂದ ಅಧ್ಯಯನಮಾಡಿ ಆಯಾ ಗ್ರಂಥಗಳಲ್ಲಿರುವ ಕುಂದುಕೊರತೆಗಳನ್ನು ಕಂಡುಹಿಡಿದು ಅವನ್ನು ಎತ್ತಿ ತೋರಿಸಿರುವಿರಲ್ಲದೆ, ಅವುಗಳಿಗೆಲ್ಲ ತಮ್ಮ ಅನುಭವವೇದ್ಯವಾದ ಸಂಗತಾರ್ಥವನ್ನು ನಿರೂಪಿಸಿರುವ ನಿಮ್ಮ ಶೈಲಿಯು ಪ್ರಶಂಸನೀಯವಾಗಿದೆ. ಬಹುದಿನಗಳಿಂದ ವಿದ್ವಜ್ಜನರಿಗೆ ಬಿಡಿಸ ಲಸಾಧ್ಯವಾದ ಕೆಲವು ತೊಡಕಿನ ಪ್ರಶ್ನೆಗಳನ್ನು ನಿಷ್ಪಕ್ಷಪಾತಿಗಳು ಅನಾಯಾಸವಾಗಿ ಒಪ್ಪಿಕೊಳ್ಳುವ ರೀತಿಯಲ್ಲಿ ಸುಲಭವಾಗಿ ಬಿಡಿಸಿ, ಸಮಾಜದ ಮುಂದೆ ಇಟ್ಟಿರುವುದು ತಮ್ಮ ಜಾಣತನದ ದ್ಯೋತಕ ವಾಗಿದೆ····ತಾವು ಶ್ರೀಕಂಠಭಾಷ್ಯವನ್ನೂ ಶ್ರೀಕರಭಾಷ್ಯವನ್ನೂ ಹಾಗೂ ಕ್ರಿಯಾಸಾರವನ್ನೂ ಕೂಲಂಕಷವಾಗಿ ವಿಮರ್ಶಿಸಿ, ಅವುಗಳಲ್ಲಿರುವ ಬಹ್ವಂಶ ವೀರಶೈವ ಸಾದೃಶ್ಯವನ್ನು ಕಂಡುಹಿಡಿದು ಅದನ್ನು ವಿದ್ವಾಂಸರ ಮುಂದೆ ಇಟ್ಟಿರುವಿರಲ್ಲದೆ, ಶ್ರೀಕಂಠಭಾಷ್ಯವು ವೀರಶೈವಭಾಷ್ಯವೆಂದೂ, ಶ್ರೀಕಂಠ ಶಿವಾಚಾರ್ಯರು ವೀರಶೈವರೆಂದೂ ನಿರ್ಣಯವನ್ನಿತ್ತಿರುವುದು ಪ್ರಶಂಸನೀಯವಾಗಿದೆ····ಒಟ್ಟಿನಲ್ಲಿ ತಮ್ಮ ಗ್ರಂಥವು ಪಠನೀಯವಾಗಿದೆ, ಮನನೀಯವಾಗಿದೆ. ತಮ್ಮಿ ಗ್ರಂಥಗಳಲ್ಲಿ ಇತಿಹಾಸಸಂಶೋಧಕರಿಗೆ ವಿಪುಲವಾದ ಸಂಪತ್ತಿದೆ! ತತ್ತ್ವವೇತ್ತರಿಗೆ ಸತ್ಯದ ದರ್ಶನವಿದೆ! ಧರ್ಮಾಭಿಮಾನಿಗಳಿಗೆ ತಮ್ಮದೆನ್ನುವ ಹೆಮ್ಮೆ ಇದೆ, ಪುಣ್ಯದ ಪಣ್ಯವಿದೆ! ವಿಮರ್ಶಕರಿಗೆ ವಿಚಕ್ಷಣ ಜಲವನ್ನೀಯುವ ಅಮೃತದ ಗುಟುಕುಗಳಿವೆ! ಕಿಂ ಬಹುನಾ ವೀರಶೈವ—ಅಷ್ಟೇ ಏಕೆ, ವಿಶ್ವಸಾಹಿತ್ಯದ ಪ್ರಪಂಚದಲ್ಲಿ ತಮ್ಮ ಗ್ರಂಥವು ಅಜರಾಮರವಾಗಿ ಬಾಳಬಲ್ಲ ಯಶಃಪೂರ್ಣ ಕೃತಿಯಾಗಿದೆ!

## ಶ್ರೀ ಶಿವಯೋಗಮಂದಿರದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಹಾನಗಲ್ ಮಹಾಸ್ವಾಮಿಗಳ ಸನ್ನಿಧಿಯಿಂದ

ಗ್ರಂಥವನ್ನು ನೋಡಿದೆವು. ಅತ್ಯುತ್ತಮವಿದೆ. ಒಳ್ಳೆ ಪರಿಶೋಧಿಸಿ, ಅತ್ಯಂತ ಶ್ರಮವಹಿಸಿ, ಪ್ರಯತ್ನದಿಂದ ಈ ಗ್ರಂಥವನ್ನು ಬರೆದದ್ದಾಗಿರುವುದು. ಅದರ ವಿಷಯವನ್ನು ನೋಡಿ ಆನಂದವಾಯಿತು. ಇದುವರೆಗೂ ಈ ರೀತಿ ಮತದ ವಿಷಯದಲ್ಲಿ ಐತಿಹಾಸಿಕ ದೃಷ್ಟಿಯಿಂದಲೂ, ಸಂಶೋಧನ ದೃಷ್ಟಿ ಯಿಂದಲೂ ಯಾರೂ ಗ್ರಂಥವನ್ನು ಬರೆದದ್ದಿಲ್ಲ. ಇದೊಂದು ಅಪೂರ್ವ ಕೃತಿ.

## ನವಿಲುಗುಂದ ಗವಿಮಠಾಧ್ಯಕ್ಷರೂ, ಬಾಗಲಕೋಟೆ ಬಸವೇಶ್ವರ ಕಾಲೇಜು ಸಂಸ್ಥಾಪಕರೂ, ಸರ್ವಧರ್ಮ ಸಮ್ಮೇಲನದ ಸಂಚಾಲಕರೂ ಆದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಬಸವಲಿಂಗ ಮಹಾಸ್ವಾಮಿಗಳ ಸನ್ನಿಧಿಯಿಂದ

ನೀವು "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಗ್ರಂಥವನ್ನು ಬರೆದು ಪ್ರಕಟಿಸಿ ಕೇವಲ ವೀರಶೈವ ಸಮಾಜಕ್ಕಷ್ಟೇ ಅಲ್ಲ, ಎಲ್ಲ ಸಹೃದಯ ಸಮಾಜಗಳಿಗೂ ಮಹೋಪಕಾರ ಮಾಡಿರುವಿರಿ.... ವೀರಶೈವ ಧರ್ಮದಲ್ಲಿ ವಿಶ್ವಧರ್ಮವಡಗಿದೆ; ಅದರಲ್ಲಿ ಅಷ್ಟು ಸತ್ವ ತುಂಬಿದೆ. ವನ್ಯ ಸುಮಗಳ ಸಾರಸವಿಗಳನ್ನು ಶೇಖರಿಸಿದ ಜೇಂಗೊಡದಂತೆ ವೀರಶೈವವು ಸಕಲ ಧರ್ಮಗಳಲ್ಲಿರುವ ಉತ್ತಮಾಂಶಗಳೆಲ್ಲವನ್ನು ಸಂಗ್ರಹಿಸಿಕೊಂಡಿದೆ ಎಂಬುದನ್ನೂ ಮತ್ತು ಐತಿಹಾಸಿಕ ದೃಷ್ಟಿಯಲ್ಲಿ ಅನೇಕ ಸಹಸ್ರ ವರ್ಷಗಳ ಹಿಂದೆಯೂ ವೀರಶೈವ ಸಂಸ್ಕೃತಿ ಇದ್ದುದಾಗಿ ಹೇಳುವ ಹರಪ್ಪಾ ಮಹೆಂಜೊದಾರೋ ಸಂಶೋಧನೆಯಿಂದ ತಿಳಿದುಬರುವುದನ್ನೂ ಸಹ ಈ ಗ್ರಂಥದಿಂದ ಕಂಡುಕೊಳ್ಳಬಹುದಾಗಿದೆ.... ಸ್ವಮತ ಪರಮತ ಭಾಷ್ಯಾದಿ ಉದ್ಗ್ರಂಥಗಳ ಅಧ್ಯಯನದ ಫಲವಾಗಿ ಪರಿಣಾಮವಾಗಿ ಪ್ರಸಿದ್ಧಿಪಡೆದಿದೆ ನಿಮ್ಮ ಗ್ರಂಥವು. ಇಂತಹ ಅಸಾಧಾರಣವಾದ ನಿಮ್ಮ ಮೇಧಾಶಕ್ತಿ, ಸಹಜವಾದ ಅರಿವನ್ನರುಹುವ ರೀತಿ, ಸಶಾಸ್ತ್ರೀಯ ಹಾಗೂ ತರ್ಕಶುದ್ಧವಾದ ಸರಣಿ ಇವೆಲ್ಲವೂ ನಿಮಗೆ ದೈವದತ್ತವಾಗಿವೆಯೆಂದು ಅತ್ಯಂತ ಹರುಷದಿಂದ ಹೇಳಬಹುದು.

## ಬಿಜಾಪುರ ಬೃಹನ್ಮಠ ಪಟ್ಟಾಧೀಶ್ವರ ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಾನದಿಂದ ಬಂದ ಆ॥ ಪತ್ರದ ಅನುವಾದ

ದೃಕ್‌ಕ್ರಿಯಾನಿಷ್ಠಾಗರಿಷ್ಠರೇ— ಈ ಗ್ರಂಥದಲ್ಲಿ ವೀರಶೈವ ಪುರಾತನತ್ವ ಮೊದಲಾದ ಸಮುಚಿತ ವಿಷಯಗಳನ್ನು ಕುರಿತು ಪ್ರಮಾಣ ಯುಕ್ತಿಗಳಿಂದ ಮನೋಹರವಾಗಿ ನಿರೂಪಿಸಿರುವ ರೀತಿಯು, ಆ ಮತದ ಪ್ರತಿಕ್ರಿಯೆಯನ್ನು ಅಪೇಕ್ಷಿಸುವವರಿಗೆ ಸಂಗ್ರಾಹ್ಯವಾಗಿರುತ್ತದೆಂಬುದರಲ್ಲಿ ಲೇಶಮಾತ್ರವೂ ಸಂಶಯವಿರುವುದಿಲ್ಲ. ನಿಮ್ಮ ಅಸದೃಶವಾದ ಕಾರ್ಯ ವಿಶೇಷವು ಪ್ರಶಂಸಾರ್ಹವಾಗಿದೆ.

## ಶ್ರೀಮದುಜ್ಜಯಿನಿ ಸದ್ಧರ್ಮಸಿಂಹಾಸನ ಜ್ಞಾನಗುರು ವಿದ್ಯಾಪೀಠಾಧ್ಯಕ್ಷರೂ ಶಕ್ತಿವಿಶಿಷ್ಟಾದ್ವೈತ ವೇದಾಂತ ವಿದ್ವಾಂಸರೂ ಆದ ಶ್ರೀ ಶಿವಪ್ರಕಾಶ ಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಿಯಿಂದ

ಗ್ರಂಥವನ್ನು ಆಸಕ್ತಿಯಿಂದ ಅಭ್ಯಾಸಮಾಡಲು, ಸಮಗ್ರ ವೀರಶೈವ ಧರ್ಮದ ಪ್ರಾಚೀನತೆ—ತತ್ತ್ವ—ಸಂಸ್ಕೃತಿಗಳನ್ನು ಪ್ರತಿಬಿಂಬಿಸುವ ಈ ಅಮೂಲ್ಯ ಗ್ರಂಥದ ರಚನೆಗೆ ನಿಮ್ಮ ತಪಸ್ಸು ಸಿದ್ಧಿಸಿದೆ..., ಪ್ರಾಮಾಣ್ಯವಾಗಿದೆ, ಇತಿಹಾಸವಾಗಿ ಉಳಿಯುತ್ತದೆ. ಇದು ಇಂಗ್ಲೀಷಿನಲ್ಲಿ ಪರಿವರ್ತಿತವಾದರೆ ಎಲ್ಲಾ ದೇಶವಿದೇಶಗಳಲ್ಲೂ ಪ್ರಚಾರವಾಗಲು ಕಾರಣವಾಗುತ್ತದೆ.

## ಕೈವಲ್ಯೋಪನಿಷದ್ಭಾಷ್ಯಕಾರರಾದ, ಗಿರಿಯಾಪುರದ ಶ್ರೀ ಗುರುಕುಮಾರಾಶ್ರಮದ ಷ॥ ಬ್ರ॥ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಿಯಿಂದ

ನೀವು ಬಹುಮುಖವಾಗಿ ಬಹುಶ್ರಮಿಸಿ 'ಶ್ರುತಿ–ಗುರು–ಸಖ'ರ ಅನುಮತಿವಿಡಿದು, ಸಿದ್ಧಾಂತ ಶಿಖಾಮಣಿ–ಕ್ರಿಯಾಸಾರ–ಶ್ರೀಕರಭಾಷ್ಯ–ನಿಜಗುಣರ ಕೃತಿ ಮೊದಲಾದ ಪ್ರಾಮುಖ್ಯ ಪ್ರಬಲ ಗ್ರಂಥ–ಶಾಸ್ತ್ರ–ಪುರಾಣೈತಿಹ್ಯಾಧಾರ ಮತ್ತು ಗಣ್ಯ ಲೇಖಕರ ಲೇಖನ–ಶಾಸನಾಭಿಮತಾನುಸಾರ ಯುಕ್ತಿಯುಕ್ತ ಸೂಕ್ತತರಹದಲ್ಲಿ 'ಶಿವಚಿತ್ಕಲಾಸ್ವರೂಪೋಪಾಸನ' ವೀರಶೈವ ಸನ್ಮಾರ್ಗಾನುವರ್ತಿ, ಸಮ್ಯಕ್-ಜ್ಞಾನ ಸತ್‌ಕ್ರಿಯಾಚರಣನಿರತರು, ಶ್ರೀಕಂಠ ನೀಲಕಂಠೋಭಯ ನಾಮಾಂಕಿತಾಚಾರ್ಯರೆಂಬುದನ್ನು ನಿರ್ವಿವಾದಪರ ಅನುಭಾವಿ ಪಂಡಿತರೆಲ್ಲರೂ ಒಪ್ಪುವ ಬಗೆಯಲ್ಲಿ ಪ್ರತಿಪಾದಿಸಿ ಸಾಧಿಸಿರುವ ನಿಮ್ಮ ಅಮೋಘವಾದ ವಿಷಯ ವಿವರಣೆಯನ್ನು ಮನದಣಿದೋದಿ ಅಚ್ಚರಿಗೊಂಡೆ, ಸಂತುಷ್ಟಿಪಡೆದೆ.

# ಘನ ವಿದ್ವಾಂಸರ ಅಭಿಪ್ರಾಯಗಳ ಸಂಗ್ರಹ

ರಾಜಸೇವಾಸಕ್ತ ಪದ್ಮಶ್ರೀ ಮಾನ್ಯ ಸಿ ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್ಎಲ್.ಬಿ.– ಶ್ರೀಮಾನ್ ಟಿ. ಎನ್. ಮಲ್ಲಪ್ಪನವರು (ರಿಟೈರ್ಡ್ ಹೈಕೋರ್ಟ್ ಜಡ್ಜ್) ರಚಿಸಿರುವ "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಗ್ರಂಥವನ್ನು ಓದಿ ನನಗೆ ಅತ್ಯಂತ ಸಂತೋಷವಾಯಿತು. ಶ್ರೀಯುತರು ವೈದಿಕವಾಙ್ಮಯ–ಭಾಷ್ಯಗಳು–ಆಗಮಗಳು····ಸುಪ್ರಸಿದ್ಧವಾದ ಇಂಗ್ಲಿಷ್ ಗ್ರಂಥಗಳನ್ನೆಲ್ಲ ಓದಿ ಗ್ರಂಥರಚನೆ ಮಾಡಿದ್ದಾರೆ. ಪ್ರಸಕ್ತ ಗ್ರಂಥವು ವಿದ್ವತ್ಪೂರ್ಣವಾಗಿರುವುದಲ್ಲದೆ ಅತ್ಯಂತ ಸ್ವಾರಸ್ಯ ವಾಗಿಯೂ ಇದೆ. ಅನೇಕ ಜಟಿಲ ಸಂಗತಿಗಳನ್ನು ಕೂಡ ಹೃದಯಂಗಮವಾದ ಸರಳ ರೀತಿಯಲ್ಲಿ ವಿವರಿಸಿರುವುದು ಈ ಗ್ರಂಥದ ವೈಶಿಷ್ಟ್ಯ. ವೀರಶೈವದ ಉಗಮವನ್ನೂ ಪ್ರಗತಿಯನ್ನೂ ಐದಾರು ಸಹಸ್ರ ವರ್ಷಗಳ ಹಿಂದಿನ ಮಹೆಂಜೊದಾರೋ ಹರಪ್ಪ ಜನರ ಕಾಲದಿಂದ ಆಧುನಿಕ ಕಾಲದವರೆಗೂ ಚಿತ್ರಿಸುವ ಪ್ರಯತ್ನವು ಈ ಗ್ರಂಥದಲ್ಲಿ ನಡೆದಿದೆ. ಈ ಗ್ರಂಥವನ್ನು ವೀರಶೈವ ಭಂಡಾರವೆನ್ನಬಹುದು. ····ಪ್ರಸಕ್ತ ಗ್ರಂಥವನ್ನು ವೀರಶೈವರು ಮಾತ್ರವೇ ಅಲ್ಲದೆ, ಇತರ ಧರ್ಮದ ಅನುಯಾಯಿಗಳೂ ಸ್ವಾಗತಿಸಿ ತೀವ್ರಾಸಕ್ತಿಯಿಂದ ವ್ಯಾಸಂಗ ಮಾಡುವುದು ಅಗತ್ಯವೆಂಬುದು ನನ್ನ ಅಭಿಪ್ರಾಯ. ಶ್ರೀಮಾನ್ ಮಲ್ಲಪ್ಪನವರು ಶ್ರೀಕರಭಾಷ್ಯಕ್ಕೂ ಶ್ರೀಕಂಠಭಾಷ್ಯಕ್ಕೂ ಸಮನ್ವಯಮಾಡುವುದರಲ್ಲಿ ತೋರಿರುವ ಪಾಂಡಿತ್ಯಪೂರ್ಣವಾದ ಕೌಶಲ್ಯವು ಶ್ಲಾಘ್ಯವಾಗಿದೆ····ಶ್ರೀಮಾನ್ ಮಲ್ಲಪ್ಪನವರು ಸುಸಂಸ್ಕೃತರ ಮಾರ್ಗವನ್ನೇ ಅವಲಂಬಿಸಿರುವುದು ಅಭಿನಂದನಾರ್ಹ; ಅವರು ಸುಸಂಸ್ಕೃತರಾಗಿರುವುದೇ ಅದಕ್ಕೆ ಕಾರಣ. ವೇದಗಳು, ಉಪನಿಷತ್ತುಗಳು, ಬ್ರಹ್ಮಸೂತ್ರ, ಭಗವದ್ಗೀತೆ, ಆಗಮಗಳೇ ಮುಂತಾದುವುಗಳಲ್ಲಿ ಅವರಂತೆ ಗುಣಗ್ರಹಣ ಮಾಡಿರುವವರ ಸಂಖ್ಯೆಯು ತೀರ ಕಡಮೆ ಶ್ರೀಮಾನ್ ಟಿ. ಎನ್. ಮಲ್ಲಪ್ಪನವರು ವಿದ್ವತ್ ಪೂರ್ಣವಾದ ಮತ್ತು ಅತ್ಯಂತ ಸ್ವಾರಸ್ಯವಾದ "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಉದ್ಗ್ರಂಥವನ್ನು ರಚಿಸಿ ವೀರಶೈವರಿಗೆ ಮಾತ್ರವೇ ಅಲ್ಲದೆ ಇತರ ಧರ್ಮಗಳ ಅನುಯಾಯಿಗಳೂ ಸೇರಿ ಸಮಸ್ತ ಕನ್ನಡಿಗರಿಗೂ ಮಹೋಪಕಾರ ಮಾಡಿದ್ದಾರೆ; ಕನ್ನಡಿಗರೆಲ್ಲರ ಕೃತಜ್ಞತೆಗೂ ಪಾತ್ರರಾಗಿದ್ದಾರೆ.

ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಮುಖಾಧಿಕಾರಿಗಳೂ, ಪ್ರಾಧ್ಯಾಪಕರೂ ಆದ ಡಾ॥ ಆರ್. ಸಿ. ಹಿರೇಮಠ, ಎಂ.ಎ, ಪಿಹೆಚ್.ಡಿ ರವರ ಅಭಿಪ್ರಾಯ– "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಗ್ರಂಥವನ್ನು ಆಮೂಲಾಗ್ರವಾಗಿ ಓದಿ ಅತ್ಯಂತ ಆನಂದಪಟ್ಟಿರುವೆನು. ನ್ಯಾಯಮೂರ್ತಿ ಮಲ್ಲಪ್ಪನವರ ಅಗಾಧವಾದ ಪಾಂಡಿತ್ಯಕ್ಕೆ ಮನಸೋತಿದ್ದೇನೆ. ಒಂದು ಕಡೆ ವೇದೋಪನಿಷತ್ತುಗಳು, ಇನ್ನೊಂದು ಕಡೆ ಶಿವಾಗಮಗಳು, ವಚನವಾಙ್ಮಯ–ಇಂತಹ ನೂರಾರು ಕಡೆಗಳಿಂದ ಸಾಧನಸಾಮಗ್ರಿಯನ್ನು ಸಂಗ್ರಹಿಸಿ ಶ್ರೀ ಮಲ್ಲಪ್ಪನವರು ವೀರಶೈವದ ಉಗಮ ಮತ್ತು ಪ್ರಗತಿಯನ್ನು ಕುರಿತು ವಿವೇಚಿಸಿರುವರು····ಶ್ರೀಮಾನ್ ಮಲ್ಲಪ್ಪನವರಲ್ಲಿ ವಿಷಯಸಂಗ್ರಹ ಚೆನ್ನಾಗಿದೆ; ವಿಷಯದ ವಿಭಜನೆ ನಿರ್ಣಯಗಳು ಸಮರ್ಪಕವಾಗಿವೆ. ಇಂತಹ ಗ್ರಂಥಗಳಲ್ಲಿ ಶಾಸ್ತ್ರೀಯ ದೃಷ್ಟಿ ಅವಶ್ಯವಿರಬೇಕಾಗುತ್ತದೆ. ಶ್ರೀಮಾನ್ ಟಿ. ಎನ್. ಮಲ್ಲಪ್ಪನವರ ಶಾಸ್ತ್ರೀಯ ದೃಷ್ಟಿಯೂ ವರ್ಣನಾತೀತವಾಗಿದೆ. ಇಂತಹ ಉತ್ತಮ ಗ್ರಂಥವನ್ನು ಬರೆದ ನ್ಯಾಯಮೂರ್ತಿಗಳನ್ನು ಹೃತ್ಪೂರ್ವಕ ವಾಗಿ ಅಭಿನಂದಿಸುತ್ತೇನೆ.

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಡಾ॥ ರಂ. ಶ್ರೀ ಮುಗಳಿ, ಎಂ.ಎ., ಬಿ.ಟಿ, ಡಿ.ಲಿಟ್., ಪ್ರಿನ್ಸಿಪಾಲ್, ವಿಲ್ಲಿಂಗ್ಡನ್ ಕಾಲೇಜ್, ಸಾಂಗಲಿ–ಬಹು ಪರಿಶ್ರಮದಿಂದ ಬರೆದಿರುವ ಈ ಗ್ರಂಥವು ಕನ್ನಡದಲ್ಲಿರುವ ಧಾರ್ಮಿಕ ಮತ್ತು ತಾತ್ತ್ವಿಕ ವಾಙ್ಮಯಕ್ಕೆ ಬೆಲೆಯುಳ್ಳ ಕಾಣಿಕೆ ಯಾಗಿದೆ. ಉಪಲಬ್ಧವಾದ ಎಲ್ಲ ಆಧಾರಗಳನ್ನು ಪರಿಶೀಲಿಸಿ, ಸಂಶೋಧಕರ ಎಲ್ಲ ಅಭಿಪ್ರಾಯಗಳನ್ನು ಗಮನದಲ್ಲಿರಿಸಿಕೊಂಡು ಗ್ರಂಥಕರ್ತರು ವೀರಶೈವ ತತ್ತ್ವದ ಮತ್ತು ಮತದ ಉಗಮವನ್ನೂ ಕಾಲ ಕ್ರಮೇಣ ಆಗಿರುವ ಪ್ರಗತಿಯನ್ನೂ ವಿವರಿಸಿದ್ದಾರೆ. ಸ್ವಂತ ಅಭಿಪ್ರಾಯಗಳನ್ನು ಸಾಧಾರವಾಗಿ ಮತ್ತು ಸ್ಪಷ್ಟವಾಗಿ ಮಂಡಿಸಿದ್ದಾರೆ. ತತ್ತ್ವ ಜಿಜ್ಞಾಸುಗಳು ಮತ್ತು ಕನ್ನಡ ಸಾಹಿತ್ಯದ ಅಭ್ಯಾಸಿಗಳು ತಮ್ಮ ಗ್ರಂಥಗಳಲ್ಲಿ ಈ ಗ್ರಂಥಕ್ಕೆ ಮನ್ನಣೆಯ ಸ್ಥಾನವನ್ನು ಕೊಡುವರೆಂದು ಹಾರೈಸುತ್ತೇನೆ. ವೀರಶೈವ ಮತದ ಪ್ರಾಚೀನತೆಯನ್ನು ತಿಳಿಯಬಯಸುವವರಿಗೆ ಈ ಗ್ರಂಥವು ಆಧಾರಭೂತವಾಗಿದೆ.

ವೀರಶೈವದ ವೈಶಿಷ್ಟ್ಯ, ವೀರಶೈವದ ಹಿಂದುತ್ವ, ವೀರಶೈವದ ವಿಶ್ವಧರ್ಮಸ್ವರೂಪ ಈ ಅಂಶಗಳನ್ನು ಕುರಿತು ಗ್ರಂಥಕರ್ತರು ವ್ಯಕ್ತಪಡಿಸಿದ ಅಭಿಪ್ರಾಯಗಳು ಮನನೀಯವಾಗಿವೆ. ಇಂಥ ಉಪಯುಕ್ತ ಗ್ರಂಥರಚನೆಯನ್ನು ಮಾಡಿರುವುದಕ್ಕಾಗಿ ಶ್ರೀ ಮಲ್ಲಪ್ಪನವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಸರ್ವದರ್ಶನ ತೀರ್ಥ ಆಸ್ಥಾನ ವಿದ್ವಾನ್ ವೈ. ನಾಗೇಶಶಾಸ್ತ್ರಿಗಳು—ಶ್ರೀಯುತ ಟಿ. ಎನ್. ಮಲ್ಲಪ್ಪ, ಬಿ.ಎ., ಎಲ್ಎಲ್.ಬಿ. ಇವರು ಹೈಕೋರ್ಟಿನ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿ····ನಿವೃತ್ತ ರಾಗಿದ್ದರೂ, ಧಾರ್ಮಿಕ ವಿಷಯದ ನ್ಯಾಯನಿರ್ಣಯದ ಮಹತ್ಕಾರ್ಯವನ್ನು ಕೈಗೊಂಡಿರುವುದು ಸ್ತುತ್ಯವಾಗಿರುವುದು. ಇವರು ಯಾವಾಗಲೂ ವಿಮರ್ಶಕ ದೃಷ್ಟಿಯಿಂದ ಉದ್ಗ್ರಂಥಗಳ ಅವಲೋಕನ ಅನ್ವೇಷಣಾದಿ ಮಾರ್ಗದಲ್ಲಿಯೇ ತಮ್ಮ ಆಯುಷ್ಯವನ್ನು ಸವೆಸುತ್ತಿದ್ದು, ಅಮೂಲ್ಯವಾದ ಲೇಖನ ಗಳನ್ನು ಬರೆಯುತ್ತಿರುವರು. ಇವರ ಲೇಖನಗಳಲ್ಲಿ ಈಶಾವಾಸ್ಯೋಪನಿಷತ್ತಿನ ವಿಮರ್ಶಾತ್ಮಕ ಲೇಖನವು (ಈಶಾವಾಸ್ಯೋಪನಿಷತ್ ಪ್ರಕಾಶವೆಂಬ ಗ್ರಂಥ) ಸರ್ವಮಾನ್ಯವಾಗಿರುವುದು. ಈಗ "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಉದ್ಗ್ರಂಥವನ್ನು ತಮ್ಮ ದೀರ್ಘ ಪರಿಶ್ರಮದ ಫಲವಾಗಿ ರಚಿಸಿ ಪ್ರಕಟಪಡಿಸುತ್ತಾ ವೀರಶೈವ ಸಮಾಜಕ್ಕೆ ಅಭಿನಂದನೀಯರಾಗಿರುವರು. ಈ ಗ್ರಂಥದಲ್ಲಿ ಅನೇಕ ವಿಷಯಗಳ ವಿಚಾರವಿದ್ದರೂ, ಮುಖ್ಯವಾಗಿ ಕೆಳಗಿನ ವಿಷಯಗಳು ತರ್ಕಬದ್ಧವಾದ ಸರಣಿಯಲ್ಲಿ ಪ್ರಮಾಣಪೂರ್ವಕವಾಗಿ ನಿರ್ಣಯಿಸಲ್ಪಟ್ಟವುಗಳಾಗಿ ಗಮನಾರ್ಹಗಳಾಗಿರುವುವು: ೧. ವೀರಶೈವ ಧರ್ಮದ ಪ್ರಾಚೀನತೆ.—ಆದಿಮಾನವನ ಕಾಲದಲ್ಲಿಯೇ ವೀರಶೈವಧರ್ಮದ ಉಗಮವಾಗಿ, ವೇದಾಗಮೋಪನಿಷತ್ ಪುರಾಣಗಳಲ್ಲಿ ಪ್ರಗತಿಯನ್ನು ಹೊಂದಿ, ಹನ್ನೊಂದು ಹನ್ನೆರಡನೆಯ ಶತಮಾನದಿಂದೀಚೆಗೆ ಪರಿಪೂರ್ಣತೆಯನ್ನು ಹೊಂದಿರುವ ಬಗೆಯನ್ನು ವಿಸ್ತಾರವಾಗಿ ಪ್ರಮಾಣಪೂರ್ವಕ ವಾಗಿ ನಿರೂಪಿಸಲಾಗಿದೆ. ೨. ವೀರಶೈವ ಧರ್ಮವು ಹಿಂದೂ ಧರ್ಮವೇ.—ವರ್ಣಾಶ್ರಮಾತೀತವಾದ ವೀರಶೈವ ಧರ್ಮವು, ಹಿಂದೂ ಧರ್ಮದ ಪ್ರಗತಿಪರವಾದ ಮತ್ತು ಸರ್ವಮಾನ್ಯವಾದ ಧರ್ಮವಾಗಿರುವು ದೆಂಬುದನ್ನು ವೇದಾಗಮಾದಿ ಪ್ರಮಾಣಗಳಿಂದಲೇ ನಿರ್ಧರಿಸಿರುವುದು ಗಮನಾರ್ಹವಾಗಿರುವುದು. ೩. ವೀರಶೈವ ಸಿದ್ಧಾಂತವು ಸ್ವತಂತ್ರವಾದುದು.—ಯಾವ ಸಿದ್ಧಾಂತಗಳಲ್ಲಿಯೂ ಇಲ್ಲದ ವೈಶಿಷ್ಟ್ಯ ಪೂರ್ಣವಾದ ಷಟ್‌ಸ್ಥಲ ಸಿದ್ಧಾಂತವು ವೀರಶೈವದ ಸ್ವತಂತ್ರ ಸಿದ್ಧಾಂತವಾಗಿರುವುದು ಮತ್ತು ಆ ಸಿದ್ಧಾಂತದಲ್ಲಿರುವ ಶಕ್ತಿವಿಶಿಷ್ಟ ಶಿವಾದ್ವೈತವು ಆಧುನಿಕ ವಿಜ್ಞಾನದೃಷ್ಟಿಗೂ ಸಮರ್ಪಕವಾಗಿರುವು ದೆಂಬುದನ್ನು ಹೃದಯಂಗಮವಾಗಿ ಪ್ರತಿಪಾದಿಸಲಾಗಿದೆ. ೪. ಶ್ರೀಕಂಠ ಶಿವಾಚಾರ್ಯರೇ ಗೋಕರ್ಣದ ನೀಲಕಂಠ ಶಿವಾಚಾರ್ಯರು.—ಶ್ರೀ ಮಲ್ಲಪ್ಪನವರು ಈ ಗ್ರಂಥದಲ್ಲಿ ಶ್ರೀಕಂಠಭಾಷ್ಯದ ಮತ್ತು ಶ್ರೀಕರ ಭಾಷ್ಯದ ಹಾಗೂ ಕ್ರಿಯಾಸಾರದ ವಿಚಾರಸರಣಿಯನ್ನೂ, ಆ ಗ್ರಂಥಗಳ ವಾಕ್ಯಪಂಕ್ತಿಗಳನ್ನೂ ಉದ್ಧರಿಸಿ ವಿಮರ್ಶಿಸಿರುವುದನ್ನು ನೋಡಿದರೆ, ಈ ಗ್ರಂಥಕರ್ತರ ಅಭಿಪ್ರಾಯವು ಸಮರ್ಪಕವಾಗಿರುವುದು ಮತ್ತು ಈ ವಿಷಯದ ವಿಮರ್ಶೆಯಲ್ಲಿ ಮಾರ್ಗದರ್ಶಕವೂ ಆಗಿರುವುದೆಂಬುದು ವ್ಯಕ್ತವಾಗುತ್ತಿರುವುದು. ೫. ವೀರಶೈವಧರ್ಮವು ವಿಶ್ವಧರ್ಮವಾಗಲು ಅರ್ಹತೆಯುಳ್ಳುದು.—ಹಿಂದೂಧರ್ಮದ ಸಾರಭೂತ ವಾಗಿದ್ದು, ಪ್ರಗತಿಪಥದಲ್ಲಿ ಮುಂದುವರೆದ ವೀರಶೈವ ಧರ್ಮದ ಏಕದೇವೋಪಾಸನೆಯೇ ಮೊದಲಾದ ದಶವಿಧಿಗಳನ್ನು ಬಸವಣ್ಣನವರ ವಚನ ಪ್ರಮಾಣದಿಂದ ವಿವರಿಸಿ, ಈ ದಶವಿಧಿಗಳು ವಿಶ್ವಧರ್ಮ ನಿರ್ಮಾಣಕ್ಕೆ ತಳಹದಿಯಾದವುಗಳಾಗಿವೆ—ಎಂದು ಶ್ರೀ ಮಲ್ಲಪ್ಪನವರು ತಮ್ಮ ಗ್ರಂಥದ ಸಮಾಪ್ತಿಯಲ್ಲಿ ಹೇಳಿರುವ ವಾಕ್ಯಗಳು ಸರ್ವಧರ್ಮದವರಿಗೂ ಆದರ್ಶವಾಗಿವೆಯೆಂಬುದರಲ್ಲಿ ಸಂಶಯವಿಲ್ಲ.

ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿಭಾಗದ ಸಂಸ್ಕೃತ ಪ್ರೊಫೆಸರ್ ಶ್ರೀ ಎಸ್. ರಾಮಚಂದ್ರರಾಯರು—ಶ್ರೀಯುತ ಟಿ. ಎನ್. ಮಲ್ಲಪ್ಪನವರಿಂದ ರಚಿತವಾದ "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಗ್ರಂಥವು ವಿದ್ವತ್ತು ಮತ್ತು ವಿಚಾರಶಕ್ತಿಗಳಿಂದ ತುಂಬಿದೆ. ಜೊತೆಗೆ ಬರವಣಿಗೆಯ ಸೌಲಭ್ಯತೆಯೂ ಸೇರಿ ಓದುಗರಿಗೆ ವಿಷಯದ ಕಾಠಿಣ್ಯವನ್ನು ಮರೆಸಿ ಮನಸ್ಸಿಗೆ ಆಹ್ಲಾದಕತೆಯನ್ನುಂಟುಮಾಡುವುದಾಗಿದೆ. ಗ್ರಂಥದ ನಾಲ್ಕು ಅಧ್ಯಾಯಗಳಲ್ಲಿ ಶ್ರೀಯುತರು ಭಾರತದ ಮುಖ್ಯವಾದ ಮತಗಳಲ್ಲಿ ಒಂದಾದ "ವೀರಶೈವ" ಧರ್ಮದ ಚಿತ್ರವನ್ನು ಪೂರ್ಣವಾಗಿಯೂ ಸಪ್ರಮಾಣವಾಗಿಯೂ ಕೊಟ್ಟಿರುತ್ತಾರೆ. ಪ್ರಥಮಾಧ್ಯಾಯದಲ್ಲಿ ಈ ಧರ್ಮದ ಉಗಮ ಮತ್ತು ಪ್ರಗತಿಗಳ ಚರಿತ್ರೆಯು ಸಾಂಗವಾಗಿ ನಿರೂಪಿತವಾಗಿದೆ. ಎರಡನೆಯ ಅಧ್ಯಾಯದಲ್ಲಿ ಶ್ರೀಯುತರು

ಶೈವಮತವು ಆದಿಮಾನವನ ಕಾಲದಲ್ಲಿಯೇ ಹುಟ್ಟಿ ವಿಕಸವಾಗುತ್ತ ಬಂದ ಸ್ವಾರಸ್ಯವಾದ ವಿಷಯವನ್ನು ಕುಶಲತೆಯಿಂದಲೂ ದಕ್ಷತೆಯಿಂದಲೂ ವಿವರಿಸಿರುತ್ತಾರೆ. ಆಗಲೇ ಲಿಂಗಧಾರಿ ಧರ್ಮದ 'ಚಿಗುರು' ಕಾಣಿಸಿಕೊಂಡಿದ್ದಿತಲ್ಲದೆ, ಸಿಂಧೂನದಿಯ ತೀರದ ನಾಗರಿಕತೆಯ ಕಾಲಕ್ಕೇ ಅದು ಸುವ್ಯವಸ್ಥಿತವಾಗಿ ನಿಂತು ತನ್ನ ಅಭಿಪ್ರಾಯಗಳನ್ನು ಮೆಡಿಟರೇನಿಯನ್ ತೀರದವರೆಗೂ ಹಬ್ಬಿಸಿದ ವಿಷಯ ಓದುಗರ ಕುತೂಹಲವನ್ನು ಕೆರಳಿಸುತ್ತದೆ. ಮೂರನೆಯ ಅಧ್ಯಾಯದಲ್ಲಿ ವೀರಶೈವ ಮತದ ಪ್ರಗತಿಯು ವೇದಗಳ, ಉಪನಿಷತ್ತುಗಳ ಮತ್ತು ಪುರಾಣಗಳ ಕಾಲದಲ್ಲಿ ಹೇಗೆ ಮುಂದುವರಿಯಿತೆಂಬುದನ್ನು ಸಕಾರಣವಾಗಿಯೂ ಸವಿಮರ್ಶಕವಾಗಿಯೂ ಚಿತ್ರಿಸಿದ್ದಾರೆ.... "ಆರ್ಯ-ದ್ರಾವಿಡರ ಸಂಸ್ಕೃತಿಗಳು ಬೆರಸಿಹೋಗಿ ಹಿಂದೆ ಹೇಳಿದಂತೆ ಹಾಲು ಜೇನು ಸೇರಿದಂತಾಗಿ ಸುಸ್ವಾದವುಂಟಾಯಿತು"—ಎಂಬ ಮಾತು ಅವರ ಪಕ್ವಮತಿಯನ್ನೂ ಸಾಮರಸ್ಯ ದೃಷ್ಟಿಯನ್ನೂ ತೋರಿಸುತ್ತದೆ. ಕೊನೆಯ ಅಧ್ಯಾಯದಲ್ಲಿ ವೀರಶೈವ ಮತದ ಪರಿಪೂರ್ಣತೆಯು ವಿವರಿಸಲ್ಪಟ್ಟಿದೆ ..ಗ್ರಂಥದ ವಿಚಾರಸರಣಿಯ ಉತ್ತಮತೆಗೆ ಲೇಖಕರು ಮಾಡಿರುವ "ವೀರಶೈವವು ಸ್ವತಂತ್ರ ಸಿದ್ಧಾಂತವಲ್ಲ"ವೆಂಬ ಆಕ್ಷೇಪದ ನಿರಾಕರಣೆ, ಶ್ರೀಕಂಠ ಶಿವಾಚಾರ್ಯರು 'ವೀರಶೈವರೇ' ಎಂಬ ಪ್ರಸ್ತಾಪ, ಕ್ರಿಯಾಸಾರವು ನೀಲಕಂಠಭಾಷ್ಯದ 'ಕಾರಿಕೆ'ಯೇ ಎಂಬ ವಿಚಾರಗಳು ಉದಾಹರಣೆಗಳು....ವೀರಶೈವ ಮತ ಮತ್ತು ಅದರ ವೈಶಿಷ್ಟ್ಯತೆಯನ್ನು ಪರಿಚಯ ಮಾಡಿಕೊಡುವ ಗ್ರಂಥಗಳು ವಿರಳ. ಇದನ್ನರಿತು ಈ ಕುಂದನ್ನು ಸಮರ್ಪಕವಾದ ರೀತಿಯಲ್ಲಿ ಪರಿಹರಿಸಿದುದಕ್ಕೆ ನಾವೆಲ್ಲರೂ ಶ್ರೀಯುತ ಟಿ. ಎನ್. ಮಲ್ಲಪ್ಪನವರಿಗೆ ಋಣಿಗಳೇ.

ಡಾ॥ ಮರುಳಸಿದ್ಧಯ್ಯನವರು, ಸಂಸ್ಕೃತ ರೀಡರ್, ಮೈಸೂರು—ನ್ಯಾಯಮೂರ್ತಿ ಮಾನ್ಯ ಶ್ರೀ ಟಿ. ಎನ್. ಮಲ್ಲಪ್ಪನವರು "ವೀರಶೈವದ ಉಗಮ ಮತ್ತು ಪ್ರಗತಿ" ಎಂಬೀ ಗ್ರಂಥವನ್ನು ಸಂಪಾದಿಸಿ ಪ್ರಕಟಿಸಿ, ಎಲ್ಲ ಭಾರತೀಯ ದಾರ್ಶನಿಕರಿಗೂ ಹಾಗೂ ವೀರಶೈವರಿಗೂ ಮಹೋಪಕಾರ ಮಾಡಿದ್ದಾರೆ. ಆಮೂಲಾಗ್ರವಾಗಿ ನಾಲ್ಕು ಅಧ್ಯಾಯಗಳಲ್ಲೂ ಸಾಂಪ್ರದಾಯಿಕ ಹಾಗೂ ಪ್ರಕರಣ ಪ್ರಮಾಣಗಳ ಆಧಾರಗಳನ್ನು ಸಮಯವರಿತು ಹೆಣೆದು ಹೊತ್ತಿಗೆಯ ಹಿರಿಮೆಯನ್ನು ಹೆಚ್ಚಿಸಿದ್ದಾರೆ. ಅಂಗಲಿಂಗ, ಲಿಂಗಾಂಗ ಸಂಬಂಧ, ಅಷ್ಟಾವರಣ, ಷಟ್‌ತ್ರಿಂಶತ್ ತತ್ತ್ವಗಳು ಇತ್ಯಾದಿ ವೀರಶೈವದ ಅಧ್ಯಾತ್ಮಿಕ (Spiritual and Metaphysical) ಅಂಶಗಳಿಗೆ ಚಾರಿತ್ರಿಕ ಹಾಗೂ ವೈದಿಕ ಹಿನ್ನೆಲೆಯನ್ನು ತುಂಬ ಶ್ರಮವಹಿಸಿ ಚಿತ್ರಿಸಿದ್ದಾರೆ. ವೀರಶೈವ ತತ್ತ್ವಗಳಿಗೆ (Philosophy, ಶಕ್ತಿವಿಶಿಷ್ಟಾದ್ವೈತ), ಇತರ ದಾರ್ಶನಿಕ ತತ್ತ್ವಗಳು ಹೇಗೆ ತಾರಕ ಪೂರಕ ಮಾರಕವಾದುವೆಂಬುದೇ ಈ ಗ್ರಂಥದ ಪರಿಶೋಧನಾಂಗ. ತೈಲಕೂಪಾನ್ವೇಷಿಗಳು ಜಲಾನ್ವೇಷಿಗಳು (Water diviners) ಕಲ್ಲು ಕಾಡು ಮಣ್ಣು ನೀರು ಬಿಸಿಲು ಮಳೆ ಗಾಳಿಗಳೆಂಬ ಉಪಟಳಕ್ಕೆ ಸಿಕ್ಕಿ ದಕ್ಕಿಸಿಕೊಂಡರೆ, ಈ ನ್ಯಾಯಮೂರ್ತಿಗಳು ನಿರಂತರ ನ್ಯಾಯವಿಮರ್ಶೆಯ ಅನುಭವದಿಂದ ಅನಂತ ಕೋಟಲೆಗೆ ಸಿಕ್ಕಿ ಸಹಿಸಿ ಶ್ರಮವಹಿಸಿ ಸಂಯಮದಿಂದ ಸಾರಸ್ವತ ಸಾಹಸದಲ್ಲಿ ಕೃತಕೃತ್ಯರಾಗಿದ್ದಾರೆ. ಅದೆಷ್ಟು ವೇದೋಪನಿಷತ್, ಅದೆಷ್ಟು ಪುರಾಣೇತಿಹಾಸಾಗಮಗಳು, ಅದೆಷ್ಟು ಗ್ರಂಥ ಪತ್ರ ಪುಸ್ತಕಗಳು—ಎಲ್ಲವನ್ನು ಸಂಶೋಧನೆ ಶ್ರಮಗಳಿಂದ ಸಂಗ್ರಹಿಸಿ ಸಿದ್ಧಾಂತಿಸಿದ್ದಾರೆ. ಋಷಿಗಳು, ಆಚಾರ್ಯರು, ಪ್ರತಿಷ್ಠಿತರು, ಪುರಾಣ ಪುಣ್ಯಪುರುಷರು, ಶರಣ ಶರಣೆಯರು, ಪ್ರಾಕ್ತನ ವಿಮರ್ಶಕರು, ಭಾವುಕರು—ಇವರೆಲ್ಲರ ಸೂಕ್ತಿ ಸೂಕ್ತತೆಯನ್ನು ವಿಚಾರವೇದಿಕೆಯ ಒರೆಗಲ್ಲಿಗೆ ಹಚ್ಚಿ ಮೆಚ್ಚಿದ್ದಾರೆ. ಇಂತಹ ಆಮೂಲಾಗ್ರ ಸಮನ್ವೇಷಣೆಯಿಂದ ಸಾಂಪ್ರದಾಯಿಕ ವೀರಶೈವಕ್ಕೆ ಶಾಸ್ತ್ರೋಕ್ತ ತ್ರಿಕಾಲಾಬಾಧಿತ ಪ್ರಭಾವವನ್ನು ಕೊಟ್ಟ ಗ್ರಂಥಕರ್ತೃ ಶ್ರೀ ನ್ಯಾಯಮೂರ್ತಿಗಳಿಗೆ ದಾರ್ಶನಿಕರು ಹಾಗೂ ವೀರಶೈವರು ಚಿರಋಣಿಗಳು.

ಪ್ರಸಿದ್ಧ ವಿಮರ್ಶಕರಾದ ಮಾನ್ಯ ಶ್ರೀ ಕೆ. ಜಿ. ಕುಂದಣಗಾರರು, ಬೆಳಗಾಂ—"ವೀರಶೈವದ ಉಗಮ ಮತ್ತು ಪ್ರಗತಿ" ಬಂದು ತಲುಪಿದೆ. ಇಂತಹ ಪುಸ್ತಕ ಅವಶ್ಯವಾಗಿ ಬೇಕಿತ್ತು. ಈ ಕೊರತೆಯನ್ನು ತಮ್ಮ ಪ್ರಬಲ ಹಸ್ತ ತುಂಬಿಕೊಟ್ಟಿದೆ.

ಶ್ರೀಕರಭಾಷ್ಯಾನುವಾದಕರಾದ ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ, ಎಂ.ಎ., ಪಿಹೆಚ್.ಡಿ., ಮೈಸೂರು ವಿಶ್ವವಿದ್ಯಾನಿಲಯದ ಸಂಸ್ಕೃತಾಧ್ಯಾಪಕರು—ಸನ್ಮಾನ್ಯ ಶ್ರೀ ಮಲ್ಲಪ್ಪನವರು "ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಈ ಗ್ರಂಥದಲ್ಲಿ ಐತಿಹಾಸಿಕವಾಗಿಯೂ, ಸಪ್ರಮಾಣವಾಗಿಯೂ ಸೂಕ್ತವಾದ ಆಧಾರಗಳೊಡನೆ ನಿರೂಪಿಸಿ, ಈಗಿನ ಜನತೆಗೆ ವೀರಶೈವ ದರ್ಶನ ಮತ್ತು ಧರ್ಮಗಳ ತಾತ್ತ್ವಿಕ

ವಿವೇಚನೆಯನ್ನು ಮಾಡಿಕೊಟ್ಟು ಮಹೋಪಕಾರವನ್ನೆಸಗಿದ್ದಾರೆ. ಶ್ರೀಯುತರ ವಿವೇಚನೆಯು ವೀರ್ಯವತ್ತರವೂ ಆಕರ್ಷಣೀಯವೂ ಶ್ಲಾಘನೀಯವೂ ಆಗಿದೆ. ಇದರಿಂದ ಜನರ ಮೂಢನಂಬಿಕೆಗಳು ತೊಲಗಿ ಅವರಿಗೆ ಸತ್ಕರ್ಮಾಚರಣದ ಮೂಲಕ ಹೃದಯದಲ್ಲಿ ವಿಶ್ವಾಸ ಹುಟ್ಟಿ, ಅಲ್ಲಿ ಶೋಭಿಸುತ್ತಿರುವ ಶಿವನ ಕಡೆಗೆ ಅವರ ದೃಷ್ಟಿ ಹರಿಯಲಿಕ್ಕೆ ಅನುಕೂಲವಾಗುವುದೆಂದು ಭಾವಿಸುತ್ತೇನೆ. ಇವರ ಗ್ರಂಥವು ವೀರಶೈವ ದರ್ಶನದ ಪ್ರಾಚೀನತೆಗೆ ಕೈದೀವಿಗೆಯಂತಿದೆ.

ಆಸ್ಥಾನ ವಿದ್ವಾನ್, ವಿದ್ವನ್ಮಣಿ, ವಿದ್ಯಾಭೂಷಣ ಶ್ರೀಮಾನ್ ಕೆ. ವಿ. ಶಂಕರಶಾಸ್ತ್ರಿಗಳು, ಅದ್ವೈತ ವೇದಾಂತ ಪ್ರಾಧ್ಯಾಪಕರು, ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜ್, ಬೆಂಗಳೂರು— ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು, ಶ್ರೀಪತಿ ಪಂಡಿತರು ಇವರೇ ಮುಂತಾದವರ ಗ್ರಂಥಗಳನ್ನು ಸಂಪೂರ್ಣ ಪರಿಶೀಲಿಸಿ, ಅವರುಗಳ ಸಿದ್ಧಾಂತಕ್ಕೂ ವೀರಶೈವ ಸಿದ್ಧಾಂತಕ್ಕೂ ಇರತಕ್ಕ ಸಾಮ್ಯ–ವೈಷಮ್ಯಗಳನ್ನು ನಿರೂಪಣಮಾಡಿರುವುದು ಅತಿ ಪ್ರಶಂಸನೀಯವಾಗಿದೆ. ಅಶ್ಮರಥ್ಯಾದಿ ಪೂರ್ವಾಚಾರ್ಯರಿಗೆ "ದ್ವೈತಾದ್ವೈತ" ವೆಂದರೆ ಭೇದಾಭೇದ ವಾದವು ಸಮ್ಮತವಾಗಿತ್ತೆಂಬುದನ್ನೂ, ದ್ವೈತ ಅದ್ವೈತ ವಿಶಿಷ್ಟಾದ್ವೈತ ಸಿದ್ಧಾಂತಗಳ ಸಾಮರಸ್ಯವು ವೀರಶೈವ ಸಂಪ್ರದಾಯದಲ್ಲಿ ಇದೆಯೆಂಬುದನ್ನೂ ವಿಶದಪಡಿಸಿರುತ್ತಾರೆ. ಶೈವಮತದಲ್ಲಿ ಅನೇಕ ಪ್ರಭೇದಗಳು ಇರುವುವಾದರೂ ಈ ಗ್ರಂಥದಲ್ಲಿ ವೀರಶೈವ ಸಂಪ್ರದಾಯದ ವೈಶಿಷ್ಟ್ಯವನ್ನು ವಿಶದಪಡಿಸಿರುವುದು ಗಮನಾರ್ಹವಾದ ವಿಷಯ. ಶ್ರೇಷ್ಠನ್ಯಾಯಾಧೀಶ ಸ್ಥಾನದಲ್ಲಿ ಅಧಿಕೃತರಾಗಿದ್ದ ಲೇಖಕರಿಗೆ, ಈ ರೀತಿ ಗ್ರಂಥಗಳನ್ನು ವಿಮರ್ಶೆಮಾಡಿ ಒಂದು ವಿಷಯ ನಿರ್ಧಾರಮಾಡತಕ್ಕದ್ದು ಸುಲಭವೆಂದು ತೋರಿದರೂ, ವೇದಪುರಾಣ ಆಗಮಾದಿ ಗ್ರಂಥಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಅಷ್ಟೇ ಅಲ್ಲದೆ, ಶ್ರೀಯುತ ಡಾ॥ ಎಸ್. ರಾಧಾಕೃಷ್ಣನ್, ಶ್ರೀಯುತ ಕೆ. ಸಿ. ಪಾಂಡೆ, ಶ್ರೀಯುತ ಎಸ್. ಕೆ. ದಾಸ್ ಮುಂತಾದ ಅನೇಕ ಪ್ರಾಚ್ಯ ಪಾಶ್ಚಾತ್ಯ ಮಹನೀಯರ ಮತ್ತು ಇತರ ಮತವಿಮರ್ಶಕಾರರ ಅಭಿಪ್ರಾಯಗಳನ್ನು ತುಲನೆಮಾಡಿ ವಿಷಯ ನಿರ್ಧಾರಮಾಡತಕ್ಕದ್ದು ಎಂತಹವರಿಗೂ ಶ್ರಮಸಾಧ್ಯವಾದ ಸಾಹಸಕಾರ್ಯ. ಇಂತಹ ಮಹಾ ಪ್ರಯೋಜನದ ಮಹಾಕಾರ್ಯವನ್ನು ಶ್ರೀಯುತರು ಉನ್ನತ ದೃಷ್ಟಿಯಿಂದ ಶ್ರಮವಹಿಸಿ ಸಾಧಿಸಿರುವುದು ಸರ್ವಾತ್ಮನಾ ಪ್ರಶಂಸನೀಯವಾಗಿದೆ.

ಧಾರವಾಡದ ಕರ್ನಾಟಕ ಯೂನಿವರ್ಸಿಟಿಯ ಪ್ರೊಫೆಸರ್, 'ಸಾಹಿತ್ಯವಿದ್ವಾನ್' ಶ್ರೀ ಹೆಚ್. ಪಿ. ಮಲ್ಲೇದೇವರು, M.A., Dip. in Indology—ಸಿಂಧೂ ನಾಗರಿಕತೆಯ ಅವಶೇಷಗಳನ್ನು ಪರಿಶೀಲಿಸಿ ಅಭ್ಯಸಿಸಿ ಪ್ರಕಟಿಸಲ್ಪಟ್ಟ ಸರ್ ಜಾನ್ ಮಾರ್ಷಲ್, ಡಾ॥ ಮ್ಯಾಕೇ, ಫಾದರ್ ಹೆರಾಸ್ ಮೊದಲಾದ ಪ್ರಗಲ್ಭ ಪಂಡಿತರ ಕೃತಿಗಳನ್ನೂ ಷಡ್ದರ್ಶನಗಳನ್ನೂ, ಮುಖ್ಯವಾಗಿ ಶಿವಾದ್ವೈತ ಸಿದ್ಧಾಂತವನ್ನೂ ಆಳವಾಗಿ ಅಭ್ಯಸಿಸಿ, ಪ್ರತಿಭಾನ್ವಿತರೂ, ಖ್ಯಾತಿವೇತ್ತ ಸಂಶೋಧಕರೂ, ಶ್ರೇಷ್ಠ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳೂ ಆದ ಶ್ರೀಯುತ ಟಿ. ಎನ್. ಮಲ್ಲಪ್ಪನವರು ಐದಾರು ಸಹಸ್ರ ವರ್ಷಗಳ ಹಿಂದೆ ಇದ್ದ ಹರಪ್ಪ ಮೊಹೆಂಜೋದಾರೋ ನಗರಗಳಲ್ಲೇ ವೀರಶೈವದ ಮುಖ್ಯ ಲಕ್ಷಣವಾದ ಲಿಂಗಪೂಜೆ ಮತ್ತು ಲಿಂಗಧಾರಣೆಗಳು ಅಸ್ತಿತ್ವದಲ್ಲಿದ್ದುವೆಂಬುದನ್ನು ಆಧಾರಪೂರ್ವಕ ವಿವರಿಸಿ, ವೀರಶೈವ ಧರ್ಮದ ಇತಿಹಾಸದ ಬಗೆಗೆ ಹೊಸ ಬೆಳಕನ್ನು ಚೆಲ್ಲಿದ್ದಾರೆ. 'ಲಿಂಗ' ಮತ್ತು 'ಲಿಂಗಧಾರಿ' ಶಬ್ದಗಳು ಮುಂಡಕೋಪನಿಷತ್, ಆಗಮಗಳು, ಮಹಾಭಾರತ, ಸ್ಕಾಂದಾದಿ ಪುರಾಣಗಳು, ಶಂಕರವಿಜಯ ಮೊದಲಾದವುಗಳಲ್ಲಿ ಉಕ್ತವಾಗಿರುವುದನ್ನು ತೋರಿಸಿದ್ದಾರೆ. ಋಗ್ವೇದ ಕಾಲಕ್ಕೆ ಪೂರ್ವದಲ್ಲೇ ಅಸ್ತಿತ್ವದಲ್ಲಿದ್ದ ಲಿಂಗವಂತ ಧರ್ಮವು ಕಾಲಕಾಲಕ್ಕೆ ಹೇಗೆ ಮಾರ್ಪಾಡಾಗುತ್ತ ಬಂದಿದೆಯೆಂಬುದನ್ನೂ, ಮಹಾನುಭವಿಗಳಾದ ಅಲ್ಲಮಪ್ರಭು ಮತ್ತು ಬಸವಾದಿ ಪ್ರಮಥರ ಅನುಭವ ಮತ್ತು ಸ್ಫುರಣಾತ್ಮಕ ಜ್ಞಾನಧಾರೆಯಿಂದ ಪೋಷಿತಗೊಂಡು ಅತ್ಯಂತ ಪ್ರಗತಿಪರ ಧರ್ಮವಾಗಿ ವಿಶ್ವಧರ್ಮವಾಗಲು ಯೋಗ್ಯವಾದ ವೀರಶೈವ ಧರ್ಮವಾಗಿ ರೂಪುಗೊಂಡಿದೆಯೆಂಬುದನ್ನೂ ಶ್ರೀಯುತರು ಬಹು ಸುಂದರವಾಗಿ ಅತ್ಯಂತ ಸಮರ್ಥರೀತಿಯಲ್ಲಿ ಪಾಂಡಿತ್ಯಪೂರ್ಣವಾಗಿ ಪ್ರತಿಪಾದಿಸಿರುವರು.

ಮೈಸೂರು ರಾಜ್ಯದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖಾ ವಿಶೇಷಾಧಿಕಾರಿಗಳೂ, 'ಜೈನಸಾಹಿತ್ಯ ವಿಶಾರದ', 'ಕರ್ನಾಟಕ ಸಾಹಿತ್ಯ ವಿದ್ಯಾವಿಭೂಷಣ' ಬಿರುದಾಂಕಿತರೂ ಆದ ಶ್ರೀ ಕೆ. ಎಸ್. ಧರಣೇಂದ್ರಯ್ಯನವರು, ಬೆಂಗಳೂರು—ನ್ಯಾಯಮೂರ್ತಿ ಶ್ರೀ ಟಿ. ಎನ್. ಮಲ್ಲಪ್ಪನವರು

ಬರೆದಿರುವ 'ವೀರಶೈವದ ಉಗಮ ಮತ್ತು ಪ್ರಗತಿ' ಎಂಬ ಗ್ರಂಥವು ಭಾರತದ ದಾರ್ಶನಿಕ ಪ್ರಪಂಚಕ್ಕೆ ಒಂದು ಹೊಸ ಬೆಳಕನ್ನು ಬೀರಿದೆ. ಶ್ರೀಯುತರ ಅಧ್ಯಯನ ಮತ್ತು ಸಂಶೋಧನೆಗಳು ಈ ಪುಸ್ತಕವನ್ನು ಆದ್ಯಂತವಾಗಿ ಓದಿದವರನ್ನು ದಿಗ್ಭ್ರಮೆಗೊಳಿಸುತ್ತವೆ. ಇವರು ಯಾವ ಸಮಸ್ಯೆಯನ್ನು ತೆಗೆದುಕೊಂಡರೂ ಪೂರ್ವಾಪರ ವಿವೇಚನೆಯಿಂದ ಒಂದು ಖಚಿತವಾದ ತೀರ್ಮಾನಕ್ಕೆ ಬಂದಿರುವುದು ಅತ್ಯಂತ ಪ್ರಶಂಸನೀಯವಾಗಿದೆ; ಇವರು ನ್ಯಾಯಮೂರ್ತಿಗಳಾದುದಕ್ಕೆ ಸಾರ್ಥಕವಾಗಿದೆ. ಶ್ರೀಮಾನ್ ಮಲ್ಲಪ್ಪನವರು ವೃಷಭ ಎಂದರೆ ಶಿವನೆಂದೂ, ವೃಷಭನು ತಪಸ್ಸುಮಾಡಿ ಮೋಕ್ಷ ಪಡೆದ ಸ್ಥಾನವು ಕೈಲಾಸ ಪರ್ವತವಾಗಿರುವುದರಿಂದ ಈ ಕೈಲಾಸವೇ ಶಿವನ ವಾಸಸ್ಥಾನವೆಂದೂ, ವೃಷಭನ ಲಾಂಛನವು ಬಸವನಾಗಿರುವುದರಿಂದ ಇದೇ ಶಿವನ ವಾಹನವಾದ ನಂದಿಯೆಂದೂ, ಮಾಘ ಬಹುಳ ಚತುರ್ದಶಿ ಅಂದರೆ ಶಿವರಾತ್ರಿಯ ದಿವಸ ವೃಷಭಸ್ವಾಮಿಯು ಮೋಕ್ಷಕ್ಕೆ ಹೋದುದರಿಂದ ಜೈನರು ಈ ಶಿವರಾತ್ರಿಯನ್ನು ಪರ್ವದಿನವನ್ನಾಗಿ ಆಚರಿಸುವರೆಂದೂ ಹೇಳಿ, ವೇದಗಳಲ್ಲಿ ಪ್ರತಿಪಾದಿತವಾಗಿರುವ ಯಾಗ ಯಜ್ಞಾದಿಗಳಿಗೆ ಸಂಪೂರ್ಣ ವಿರೋಧವಾಗಿ ನಿಂತು ಜೈನರು ವೇದಗಳಿಂದ ಬೇರೆಯಾದರೆಂದೂ, ವೇದಗಳಲ್ಲಿ ಕಂಡುಬರುವ ಯಾಗ ಯಜ್ಞಾದಿಗಳನ್ನು ಮಾತ್ರ ವಿರೋಧಿಸಿ ವೀರಶೈವರು ವೇದಗಳಲ್ಲಿರುವ ಇತರ ವಿಷಯಗಳಿಗೆ ಮನ್ನಣೆಕೊಟ್ಟು ವೇದಗಳನ್ನು ಬಳಸಿಕೊಂಡರೆಂದೂ ಶ್ರೀಮಾನ್ ಮಲ್ಲಪ್ಪನವರು ಹೇಳಿರುತ್ತಾರೆ. ಇವರ ವಿಚಾರಸರಣಿಯು ನಿಷ್ಪಕ್ಷಪಾತವಾಗಿದೆ. ಕೊನೆಗೆ, ಬಿಜ್ಜಳನು ಜೈನನಲ್ಲ, ಶೈವನಾಗಿದ್ದನೆಂದು ಹೇಳಿರುತ್ತಾರೆ. ಈ ವಿಷಯವು ವಾದಗ್ರಸ್ತವಾಗಿದ್ದರೂ ಅವರ ತೀರ್ಪಿಗೆ ಆಧಾರಗಳನ್ನು ಕೊಟ್ಟಿರುತ್ತಾರೆ. ಒಟ್ಟಿನಲ್ಲಿ ಇವರ ಈ ವಿಮರ್ಶಾತ್ಮಕ ಹಾಗೂ ಸಂಶೋಧನಾತ್ಮಕ ಗ್ರಂಥವು ಮುಮುಕ್ಷುಗಳಾದ ದಾರ್ಶನಿಕರಿಗೆ ಹೊಂಬೆಳಗನ್ನು ಬೀರಿ ಮಾರ್ಗ ತೋರಿಸುವ ಕೈದೀವಿಗೆಯಾಗಿದೆ.

ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದ ವಚನವಾಙ್ಮಯ ಸಂಶೋಧನ ಶಾಖೆಯ ವಿದ್ವಾಂಸರ ಅಭಿಪ್ರಾಯ—"ವೀರಶೈವದ ಉಗಮ ಮತ್ತು ಪ್ರಗತಿ" ಎಂಬ ಗ್ರಂಥವು ಸಂಶೋಧನಾತ್ಮಕವಾಗಿಯೇ ಇರುವುದು. ಲೇಖಕರು ವೇದಾಗಮ ಉಪನಿಷತ್ತು ಸ್ಮೃತಿ ಇತಿಹಾಸ ಪುರಾಣ ಸೂತ್ರ ಭಾಷ್ಯಗ್ರಂಥಗಳನ್ನು ಚೆನ್ನಾಗಿ ಪರಿಶೀಲಿಸಿದ್ದಾರೆಂಬುದನ್ನು ಗ್ರಂಥದಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. ಇಂದಿನ ಯುಗದಲ್ಲಿ ವೀರಶೈವದ ಆದಿಯನ್ನೂ, ಅದು ಹೇಗೆ ಕಾಲಕಾಲಕ್ಕೂ ಬೆಳೆದು ಬಂದಿದೆಯೆಂಬುದನ್ನೂ ಮತ್ತು ಅದು ಇಂದಿನ ಮಾನವ ಜನಾಂಗಕ್ಕೆಲ್ಲ ಎಷ್ಟು ಉಪಯುಕ್ತವಾಗಿರುವುದೆಂಬುದನ್ನೂ ಸುಸ್ಪಷ್ಟವಾಗಿ ನಿಷ್ಪಕ್ಷವಾಗಿ ನಿರ್ಣಯಿಸಲಿಕ್ಕೆ ಪಂಡಿತರು ಮುಂದಾಗಲು ಶ್ರೀಯುತ ಲೇಖಕರು ಮಾರ್ಗದರ್ಶಕರಾಗಿದ್ದಾರೆ.

—ಪಂಡಿತ ನಾಗಭೂಷಣ ಶಾಸ್ತ್ರಿಗಳು.

ವಿಷಯ ಸಂಗ್ರಹದಲ್ಲಿ ವಿದ್ವತ್ತಿನಲ್ಲಿ ವೈಶಿಷ್ಟ್ಯಪೂರ್ಣ ವೈವಿಧ್ಯಪೂರ್ಣವಾಗಿರುವ ಗ್ರಂಥವಲ್ಲದೆ, ಶ್ರೀಯುತರ ಹೆಸರು ಅಜರಾಮರವಾಗಿ ಉಳಿಯುವಂತೆ ಮಾಡುವ ಮಹಾಮೇರುಕೃತಿ "ವೀರಶೈವದ ಉಗಮ ಮತ್ತು ಪ್ರಗತಿ"....ಎಂಥ ಪಂಡಿತರೂ ಚಕಿತಗೊಳ್ಳುತ್ತಾರೆ, ಆಶ್ಚರ್ಯಪಡುತ್ತಾರೆ, ಅವರ ಘನ ವಿದ್ವತ್ತಿಗೆ, ಪಾಂಡಿತ್ಯಕ್ಕೆ. "ವೀರಶೈವದ ಉಗಮ ಮತ್ತು ಪ್ರಗತಿ" ಇದೊಂದು ಕೇವಲ ಗ್ರಂಥವಲ್ಲ! ವಿಶ್ವಕೋಶವಿದು! ಈ ಕೃತಿಯನ್ನು ರಚಿಸಿದವರು ವೀರಶೈವರು. ವೀರಶೈವ ಧರ್ಮವೊಂದೇ ವಿಶ್ವಧರ್ಮವಾಗಲು ತಕ್ಕುದು ಎಂಬ ಮಹಾಸತ್ಯದ ಪ್ರತಿಪಾದನೆಗಾಗಿ ರಚಿತವಾದ ಗ್ರಂಥವಿದು. ಇಲ್ಲಿಯೇ ಈ ಕೃತಿಯ ವಿಶೇಷತೆ. ಅದನ್ನು ಬರೆದವರು ವೀರಶೈವರಾದರೂ ಅವರ ಈ ಬೃಹದ್ ಗ್ರಂಥದಲ್ಲಿ ಯಾವುದೇ ಭಾಗದಲ್ಲೂ, ಸ್ವಧರ್ಮ ಪ್ರತಿಷ್ಠೆ ಹೆಚ್ಚಳಿಕೆಗೆ ಬರಹಗಾರ ಬಲಿಯಾದುದನ್ನು ಕಾಣುವುದಿಲ್ಲ. ಏನೇ ಹೇಳಿದರೂ, ಏನನ್ನೇ ಪ್ರತಿಪಾದಿಸಿದರೂ ಆಧಾರವಿದ್ದೇ ಇದೆ. ಆಧಾರವಿಲ್ಲದ ಒಂದು ಮಾತು, ಒಂದು ನಿರ್ಣಯ, ಅಷ್ಟೇಕೆ ಒಂದು ಸಾಲೂ ಈ ಮಹಾ ಗ್ರಂಥದಲ್ಲಿ ಎಂಥ ವಿಮರ್ಶಕನಿಗೂ ಸಿಕ್ಕಲು ಸಾಧ್ಯವಿಲ್ಲ. ಈ ಕಠಿಣವಾದ ಸಿದ್ಧಿಯನ್ನು ಸಾಧ್ಯಮಾಡಿಕೊಳ್ಳಲು ಮಲ್ಲಪ್ಪನವರು ಹೈಕೋರ್ಟಿನ ನ್ಯಾಯಮೂರ್ತಿಗಳಾಗಿದ್ದುದೇ ಕಾರಣವಾಗಿರಬೇಕು. ಈ ನಿಷ್ಪಕ್ಷಪಾತ ದೃಷ್ಟಿ, ಪರಿಶುದ್ಧ ತಿಳಿವಳಿಕೆ ಮಲ್ಲಪ್ಪನವರ ಘನತೆ ಗೌರವಗಳನ್ನು ಹೆಚ್ಚಿಸಿದೆ.

—ಪಂಚಾಕ್ಷರಿ ಹಿರೇಮಠ.

ಶ್ರೀಮನ್ಮಹಾರಾಜ ಕಾಲೇಜಿನ ನಿವೃತ್ತ ಸಂಸ್ಕೃತ ಪ್ರೊಫೆಸರ್ ಶ್ರೀ ವಿ. ಟಿ. ತಿರುನಾರಾಯಣ ಐಯ್ಯಂಗಾರ್ಯರ ವಿಮರ್ಶೆ—ಶರಣ ಮಲ್ಲಪ್ಪನವರು ರಚಿಸಿರುವ 'ವೀರಶೈವದ ಉಗಮ ಮತ್ತು ಪ್ರಗತಿ' ಎಂಬ ಕನ್ನಡ ಗ್ರಂಥವು ಅಪೂರ್ವವೂ ಆದರಣೀಯವೂ ಆಗಿದೆ. ದೀರ್ಘಕಾಲ ನ್ಯಾಯಾಧೀಶ ವೃತ್ತಿಪಾಲನೆಯಿಂದ ನ್ಯಾಯ ತತ್ತ್ವದ ಧ್ಯೇಯ ರಹಸ್ಯಗಳನ್ನು ಚೆನ್ನಾಗಿ ಬಲ್ಲವರಾದ ಶರಣರು ತಮ್ಮ ವಿರಾಮದಲ್ಲಿ ಈ ಗ್ರಂಥವನ್ನು ರಚಿಸಿ ತಮ್ಮ ಜನಾಂಗದ ಕೃತಜ್ಞತೆಗೂ ತತ್ತ್ವಬುಭುಕ್ಷುಗಳ ಮನ್ನಣೆಗೂ ಪಾತ್ರವಾಗಿದ್ದಾರೆ.....ಶರಣರು ಉಲ್ಲೇಖಿಸಿರುವ ಗ್ರಂಥಗಳನ್ನು ನೋಡಿದರೆ ಅವರ ವಿಸ್ತೃತ ವ್ಯಾಸಂಗ, ಸದ್ಗುಣ ಸಂಗ್ರಹಣೆ, ವಿಷಯಗಳ ಪರಿಶೀಲನೆ, ಮತ್ತು ತುಲನೆ, ಅತಿ ಗಂಭೀರವಾದ ವಿಮರ್ಶೆಯಿಂದ ತೋರಿಬಂದ ಸತ್ಯದ ಪ್ರಕಟನೆ, ಮತ್ತು ಜನತೆಗೆ ಇದರಿಂದಾಗುವ ಅಮೋಘವಾದ ಉಪಕಾರ, ಆದರಿಂದ ತಮಗೂ ಮನಶ್ಶಾಂತಿ, ತೃಪ್ತಿ, ಸಂತೋಷ, ಈಶನಲ್ಲಿ ಕೃತಜ್ಞತೆ, ಮತ್ತು ಸ್ವಕರ್ತವ್ಯ ನಿರ್ವಹಣೆಯಿಂದ ಕೃತಜ್ಞತಾಭಾವ, ಇವುಗಳು ಎಂತಹ ವಾಚಕನಿಗೂ ಮನದಟ್ಟಾಗದೆ ಇರದು.

ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ಶಕ್ತಿವಿಶಿಷ್ಟಾದ್ವೈತದ ಪ್ರೊಫೆಸರ್ ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರ ವಿಮರ್ಶೆ—ವೇದಪೂರ್ವ ಯುಗದಿಂದ ಆರಂಭಿಸಿ, ಇಂದಿನವರೆಗೂ ಪ್ರಗತಿ ಹೊಂದುತ್ತಿರುವ ವೀರಶೈವ ಧರ್ಮದ ರೂಪುರೇಖೆಗಳನ್ನು ಮತ್ತು ಈ ಧರ್ಮದ ಬಗ್ಗೆ ವಿದ್ವಾಂಸರಲ್ಲಿ ನಡೆದಿರುವ ವಾದವಿವಾದಗಳನ್ನು, ಯುಕ್ತಿ ಪ್ರಮಾಣ ಮತ್ತು ಅನುಭವಗಳೊಂದಿಗೆ ವಿಮರ್ಶಾತ್ಮಕವಾಗಿ ರಚಿಸಿರುವುದು ಈ ಗ್ರಂಥದ ವೈಶಿಷ್ಟ್ಯ... ತಮ್ಮ ವಾದ ಸಮರ್ಥನೆಗಾಗಿ ಶ್ರೀಯುತರು ಸಮಗ್ರ ವೈದಿಕ ಸಾಹಿತ್ಯ, ಎಲ್ಲ ಬ್ರಹ್ಮಸೂತ್ರ ಭಾಷ್ಯಗಳು, ಆಗಮಗಳು, ಇತರ ಸಂಸ್ಕೃತ ಆಧಾರಗಳು, ಕನ್ನಡ ಗ್ರಂಥಗಳು ಮತ್ತು ಇಂಗ್ಲೀಷಿನಲ್ಲಿನ ಆಧಾರಗಳು—ಇವುಗಳಿಂದ ವಿಪುಲವಾದ ಉಲ್ಲೇಖಗಳನ್ನು ನೀಡಿದ್ದಾರೆ. ಇವರು ಲೋಕಧರ್ಮದ ಜೊತೆಗೆ ಅಧ್ಯಾತ್ಮ ಧಾರ್ಮಿಕ ಸಾಹಿತ್ಯದಲ್ಲಿಯೂ ಆಳವಾದ ಅಭ್ಯಾಸಮಾಡಿ ಈ ಗ್ರಂಥದ ಕಾಣಿಕೆಯನ್ನು ನಾಡಿಗೆ ನೀಡಿದ್ದಾರೆ. ವೀರಶೈವದ ಉಗಮ ಮತ್ತು ಪ್ರಗತಿಯ ವಿಷಯದಲ್ಲಿ ಅನೇಕ ವಿದ್ವಾಂಸರು ಬರೆಯುತ್ತಿರುವರಾದರೂ, ಶ್ರೀಯುತರ ಗ್ರಂಥದಲ್ಲಿ ಪ್ರತಿಪಾದಿಸುತ್ತಿರುವ ವಿಶಿಷ್ಟ ರೀತಿಯು ಇಂಥ ಗ್ರಂಥದ ಅವಶ್ಯಕತೆಯನ್ನು ಈಗ ಪೂರ್ಣಮಾಡಿದೆ. ಶ್ರೀಯುತರು ಅಲ್ಲಲ್ಲಿ ಕೊಟ್ಟಿರುವ ಶಿರೋನಾಮೆಗಳು ಹಾಗೂ ಅವುಗಳ ಸಮರ್ಥನೆಗಳು ಅವರ ಉದಾತ್ತ ವಿಮರ್ಶಕ ಹೃದಯವನ್ನು ಪ್ರತಿಬಿಂಬಿಸುತ್ತವೆ. ಉದಾಹರಣೆಗಾಗಿ 'ಆರ್ಯ-ದ್ರಾವಿಡ ಸಂಸ್ಕೃತಿಗಳ ಮಿಲನವು ಹಾಲು ಜೇನು ಸೇರಿದಂತೆ ಸುಸ್ವಾದ. ಕರ್ನಾಟವು ಆದಿಮಾನವನ ತೊಟ್ಟಿಲು, ವೇದಗಳ ಮೇಲೆ, ಬ್ರಹ್ಮಸೂತ್ರಗಳ ಮೇಲೆ, ಭಗವದ್ಗೀತೆಯ ಮೇಲೆ ವೀರಶೈವ ವೃಷಭ ಮತದ ಪ್ರಭಾವ ಮತ್ತು ಲಿಂಗರೂಪ ಕಲ್ಪನೆಯಲ್ಲಿ ಉದಿಸಿರುವ ಅನೇಕ ಶಂಕೆಗಳಿಗೆ ನೀಡಿರುವ ಸಮಾಧಾನಗಳು ವಿಚಾರಪರಿಪ್ಲುತ ವಾಗಿವೆ. ನಾಲ್ಕನೆಯ ಅಧ್ಯಾಯದಲ್ಲಿ ಎತ್ತಿರುವ ಶ್ರೀಕಂಠ ಶಿವಾಚಾರ್ಯರು ವೀರಶೈವರೆ? ಕ್ರಿಯಾ ಸಾರವು ನೀಲಕಂಠಭಾಷ್ಯದ ಕಾರಿಕೆಯೆ? ಶ್ರೀಕಂಠ ಶಿವಾಚಾರ್ಯರ ದೇಶಕಾಲಾದಿಗಳು ಎಂಬ ಶೀರ್ಷಿಕೆಗಳಲ್ಲಿ ಪ್ರತಿಪಾದಿತವಾಗಿರುವ ವಿಚಾರವು ಪಂಡಿತಮಾನ್ಯ ಮಾತ್ರವಲ್ಲದೆ, ಎಷ್ಟೋ ವರ್ಷಗಳಿಂದ ಶ್ರೀಕಂಠ ಮತ್ತು ನೀಲಕಂಠ ಎಂಬ ಆಚಾರ್ಯರ ವಿಷಯದಲ್ಲಿದ್ದ ಸಂದೇಹಗಳನ್ನು ದೂರಮಾಡುವುದರಲ್ಲಿ ಸಾಕಷ್ಟು ಸಫಲವಾಗಿರುತ್ತದೆ.

---

## ವಂದನಾರ್ಪಣೆ

ಈ ಗ್ರಂಥವನ್ನು ಕೂಲಂಕಷವಾಗಿ ಪರಾಮರ್ಶಿಸಿ, ಉತ್ತೇಜನಕರವಾದ ಅಭಿಪ್ರಾಯಗಳಿಂದ ಪ್ರೋತ್ಸಾಹಿಸಿರುವ ಪರಮ ಗುರುವರ್ಯರಿಗೂ ಘನ ವಿದ್ವಾಂಸರಿಗೂ ವಿನಯಪೂರ್ವಕವಾದ ವಂದನೆಗಳು. ಐದು ಸಾವಿರದಷ್ಟು ಗ್ರಂಥದ ಪ್ರತಿಗಳನ್ನು ಮುದ್ರಿಸಿ ಪ್ರಕಟಿಸಿದ ಪ್ರಕಾಶಕರಿಗೂ ವಂದನೆಗಳು. ಈ ಕನ್ನಡ ಗ್ರಂಥದ ಹಕ್ಕು ಪ್ರಕಾಶಕರದು. ಇದನ್ನು ಭಾಷಾಂತರಿಸುವವರು ಗ್ರಂಥಕರ್ತನ ಅನುಮತಿಯನ್ನು ಪಡೆಯಬೇಕಾಗುವುದು.

## ಗ್ರಂಥಕರ್ತರು



ಶ್ರೀಮಾನ್ ಟಿ. ಎಸ್. ಮಲ್ಲಪ್ಪನವರು, ಬಿ.ಎ., ಎಲ್ಎಲ್.ಬಿ.,
ನಿವೃತ್ತ ಮೈಸೂರು ಹೈಕೋರ್ಟಿನ ನ್ಯಾಯಾಧೀಶರು, ಬೆಂಗಳೂರು

## ಪ್ರಕಾಶಕ ಸಂಸ್ಥೆಯ ಕಟ್ಟಡ (i)



ರಾವ್‌ಬಹದೂರ್ ಧರ್ಮಪ್ರವರ್ತ ಶ್ರೀ ಗುಬ್ಬಿ ತೋಟದಪ್ಪನವರ ವೀರಶೈವ ವಿದ್ಯಾರ್ಥಿ ನಿಲಯ

## ಪ್ರಕಾಶಕ ಸಂಸ್ಥೆಯ ಹಿಂದಿನ ಅಧ್ಯಕ್ಷರು
## (1938–1966)



ರಾಜಧರ್ಮಪ್ರವೀಣ ದಿವಾನ್ ಬಹದೂರ್
ದಿವಂಗತ ಶ್ರೀಮಾನ್ ಪಿ. ಮಹಾದೇವಯ್ಯನವರು, ಬಿ ಎ., ಬಿ.ಎಲ್.
ನಿವೃತ್ತ ಮೈಸೂರು ಹೈಕೋರ್ಟ್ ಚೀಫ್ ಜಡ್ಜ್, ಬೆಂಗಳೂರು

## ಪ್ರಕಾಶಕ ಸಂಸ್ಥೆಯ ಕಟ್ಟಡ (iii)



ರಾವ್‌ಬಹದ್ದೂರ್ ಧರ್ಮಪ್ರವರ್ತ ಶ್ರೀ ಗುಬ್ಬಿ ತೋಟದಪ್ಪನವರ ಧರ್ಮ ಸಂಸ್ಥೆಯ ಕಟ್ಟಡ
ಬೆಂಗಳೂರು

## ಪ್ರಕಾಶಕ ಸಂಸ್ಥೆಯ ಅಧ್ಯಕ್ಷರು



ಶ್ರೀಮಾನ್ ಎಚ್. ಪುಟ್ಟಸ್ವಾಮಿಯವರು, ಬಿ.ಇ., ಎ.ಎಂ.ಐ.ಇ.
ಅಧ್ಯಕ್ಷರು, ರಾವ್ ಬಹದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪ
ಚಾರಿಟೀಸ್, ಬೆಂಗಳೂರು

## ಪ್ರಕಾಶಕ ಸಂಸ್ಥೆಯ ಕಟ್ಟಡ (ii)



ಪ್ರವಾಸೀ ನಿವಾಸ ವಿಭಾಗ

## ಪ್ರಕಾಶಕ ಸಂಸ್ಥೆಯ ಹಿಂದಿನ ಅಧ್ಯಕ್ಷರು
## (1910-1938)



ದಿವಾನ್ ಬಹದೂರ್ ರಾಜಸಭಾಭೂಷಣ
ದಿವಂಗತ ಶ್ರೀಮಾನ್ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು, ಸಿ.ಐ.ಇ.

## ಪ್ರಕಾಶಕ ಸಂಸ್ಥೆಯ ಟ್ರಸ್ಟಿಗಳು



ಎಡದಿಂದ ಬಲಕ್ಕೆ: ಶ್ರೀಮಾನ್ ಬಿ. ಎಸ್.ಸಿ. ಬಸಪ್ಪನವರು, ಶ್ರೀಮಾನ್ ಸಿ. ಯಂ. ಬಸಪ್ಪನವರು, ಶ್ರೀಮಾನ್ ಮಹೇಶಚಂದ್ರಗುರು ಅವರು, ಬಿ.ಎ., ಎಲ್‌ಎಲ್.ಬಿ., ಶ್ರೀಮಾನ್ ಎಚ್. ಪುಟ್ಟಸ್ವಾಮಿಯವರು, ಬಿ.ಇ., ಎ.ಎಂ.ಐ.ಇ. (ಅಧ್ಯಕ್ಷರು), ಶ್ರೀಮಾನ್ ಜಿ. ಬಿ. ಶಿವನಂಜಪ್ಪನವರು (ಗೌರವ ಕಾರ್ಯದರ್ಶಿಯವರು), ಶ್ರೀಮಾನ್ ಜಿ. ಚನ್ನಸೋಮಣ್ಣನವರು, ಸಾರ್ವಜನಿಕ ಸೇವಾ ಪ್ರಸಕ್ತರು, ಶ್ರೀಮಾನ್ ಯಜಮಾನ್ ಕೆಂಚಪ್ಪನವರು.

## ಪ್ರಥಮಾಧ್ಯಾಯ

# ವೀರಶೈವದ ಪ್ರಾಚೀನತೆ

**ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ (ಪಾರಮೇಶ್ವರಾಗಮ)**

ಶೈವಧರ್ಮವು ಪ್ರಪಂಚದ ಧರ್ಮಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದ ಧರ್ಮವೆಂಬುದು ಸಿಂಧೂ ನದಿಯ ತೀರದ ಅವಶೇಷಗಳಿಂದ ವ್ಯಕ್ತವಾಗುವ ಮಹತ್ವದ ವಿಷಯವೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಈ ಧರ್ಮವು ವೇದೋಪನಿಷತ್ತುಗಳ ಕಾಲಕ್ಕೂ ಮೊದಲೇ ಪ್ರಚಾರದಲ್ಲಿ ಇದ್ದುದಲ್ಲದೆ, ಭಾರತದೇಶದಲ್ಲೆಲ್ಲ ವ್ಯಾಪಿಸಿ, ಮೆಡಿಟರೇನಿಯನ್ ತೀರಕ್ಕೂ ಹಬ್ಬಿ, ಪ್ರಪಂಚದ ಅನೇಕ ಭಾಗಗಳಲ್ಲಿ ಪ್ರಚಲಿತವಾಗಿದ್ದಿತೆಂಬುದು ಸಂಶೋಧಕರ ಮತವಾಗಿದೆ. ಈ ಶೈವಧರ್ಮವು ವೀರಶೈವದಲ್ಲಿ ಪರಿಪೂರ್ಣತೆಯನ್ನು ಹೊಂದಿ, ವಿಶ್ವಧರ್ಮವಾಗಲು ತಕ್ಕ ಗುಣಗಳಿಂದ ಕೂಡಿದೆ. ವೀರಶೈವ ಮಹಾವೃಕ್ಷವು ಪಲ್ಲವಿಸಿ, ಹೂತು, ಫಲ ಪುಷ್ಪಗಳಿಂದ ರಾರಾಜಿಸುತ್ತಲಿದ್ದುದು ಹತ್ತು ಹನ್ನೆರಡನೆಯ ಶತಮಾನಗಳ ಅನಂತರವೆಂಬುದು ನಿಶ್ಚಯವಾದರೂ, ಆದಿಮಾನವನ ಕಾಲದಲ್ಲಿಯೇ ಮೊಳಕೆಯೊಡೆದಿದ್ದ ಈ ಸಸಿಯಲ್ಲಿ ಮುಂದಿನ ಮಹಾವೃಕ್ಷದ ಲಕ್ಷಣಗಳನ್ನು ಕಾಣಬಹುದಾಗಿದ್ದಿತೆಂಬುದು ಗಮನಾರ್ಹವಾದ ಸಂಗತಿಯಾಗಿದೆ. ವೀರಶೈವವನ್ನೊಳಗೊಂಡ ಶೈವಧರ್ಮವು ಭಾರತದಲ್ಲಿನ ಮುಖ್ಯ ಧರ್ಮಗಳಲ್ಲೊಂದಾಗಿರುವುದರಿಂದಲೂ, ಶೈವಧರ್ಮವು ವೀರಶೈವ ಧರ್ಮದಲ್ಲಿ ಪರಿಪೂರ್ಣತೆಯನ್ನು ಹೊಂದಿ ವಿಶ್ವಧರ್ಮವಾಗಲು ತಕ್ಕ ಗುಣಗಳಿಂದ ಕೂಡಿರುವುದರಿಂದಲೂ, ವೀರಶೈವದ ಉಗಮ ಪ್ರಗತಿ ಮಹೋನ್ನತಿಗಳ ಚರಿತ್ರೆಯು ಪರಿಶೋಧನಾರ್ಹವಾಗಿದೆ.

ವೀರಶೈವ ಧರ್ಮವು ವಿಶ್ವಧರ್ಮವಾಗಲು ತಕ್ಕ ಗುಣಗಳಿಂದ ಕೂಡಿದೆಯೆಂಬುದು ವೀರಶೈವ ಪಂಡಿತರ ಸ್ವಮತೋತ್ಕರ್ಷವಾದವಲ್ಲ; ನಿಷ್ಪಕ್ಷಪಾತಿಗಳಾದ ವಿದ್ವಾಂಸರ ವಿಚಾರಪೂರ್ಣವಾದ ಅಭಿಪ್ರಾಯವಿದು. ರಾಜರ್ಷಿಗಳಾದ ಮೈಸೂರಿನ **ಶ್ರೀಮನ್ಮಹಾರಾಜರವರು** "ಲಿಂಗತತ್ವದರ್ಪಣ"ದ ಮುನ್ನುಡಿಯಲ್ಲಿ ಅಪ್ಪಣೆ ಕೊಡಿಸಿರುವಂತೆ "ನಮ್ಮ ಭಾರತೀಯ ಇತಿಹಾಸದಲ್ಲಿ ಲಿಂಗೋಪಾಸನೆಯು ಅತ್ಯಂತ ಪ್ರಾಚೀನ ಧರ್ಮಗಳಲ್ಲೊಂದೆಂದು ನಾವು ಧಾರಾಳವಾಗಿ ಹೇಳಬಹುದು. ಮಾನವನ ಅನುಭವವು ವಿಚಾರಧಾರೆಯಿಂದ ಕ್ರಮೇಣ ವಿಕಾಸವಾಗುತ್ತ ಬಂದಂತೆ, ಲಿಂಗತತ್ವದ ಕಲ್ಪನೆ ಮತ್ತು ಪ್ರತಿಪಾದನೆಯು ವೀರಶೈವ ಧರ್ಮದಲ್ಲಿ ಪರಿಪೂರ್ಣತೆಯನ್ನು ಪಡೆದಿರುವುದು ಗೋಚರವಾಗಬಹುದು." ಅದೇ ಗ್ರಂಥದ ೭೮ನೆಯ ಪುಟದಲ್ಲಿ ಉದಾಹರಿಸಿರುವ ಅಭಿಪ್ರಾಯಗಳಿವು ಗಮನಾರ್ಹವಾಗಿವೆ:

"ಸುಪ್ರಸಿದ್ಧ ಪಂಡಿತರಾದ **ಸರೋಜಿನಿ ದೇವಿಯವರು** ಈ ವೀರಶೈವ ಧರ್ಮವು ಸರ್ವ ಸೌಹಾರ್ದಭಾವಾದಿ ಉದಾತ್ತ ತತ್ವಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಇದು **ವಿಶ್ವಧರ್ಮ** ವಾಗಿರಲು ತಕ್ಕುದೆಂದು ಘೋಷಿಸಿದ್ದಾರೆ. ೧೯೨೪ರ ಬೆಳಗಾವಿ ಕಾಂಗ್ರೆಸ್ಸಿನ ೩೯ನೆಯ ಅಧಿವೇಶನದಲ್ಲಿ **ಮಹಾತ್ಮ ಗಾಂಧೀಜಿಯವರು** ಹೀಗೆ ಉದ್ಗಾರ ತೆಗೆದಿದ್ದಾರೆ: 'ಹಿಂದಿನ ಕಾಲದಲ್ಲಿ, ಎಂಟುನೂರು ವರ್ಷಗಳ ಆಚೆ ಬಸವೇಶ್ವರರು ಯಾವ ತತ್ವ ಆಚರಿಸಿ ಉಪದೇಶ ಮಾಡಿದರೋ, ಅಷ್ಟೆಲ್ಲಾ ತತ್ವ ನನಗೆ ಆಚರಿಸಲಿಕ್ಕೆ ಆಗುವುದಿಲ್ಲ. ಅದರಲ್ಲಿ ಕೆಲವು ತತ್ವಗಳನ್ನು

ನಾನು ಆಚರಿಸುತ್ತಲಿದ್ದೇನೆ. ಸಾಧಕ ಸ್ಥಿತಿಯಲ್ಲಿದ್ದೇನೆ; ಸಿದ್ಧನಲ್ಲ. ಆದರೆ ಬಸವಣ್ಣನವರು ಹೇಳಿದ ತತ್ವಗಳನ್ನೆಲ್ಲ ಆಚರಣೆಯಲ್ಲಿ ತಂದಿದ್ದರು. ಆದರಲ್ಲಿ ಅಸ್ಪೃಶ್ಯತಾ ನಿವಾರಣೆ, ಕಾಯಕ ತತ್ವ ಬಹು ಮುಖ್ಯವಾದುವು. ಯಾವುದೇ ಪ್ರಕಾರ ಜಾತಿಭೇದ ಅವರಲ್ಲಿ ಕಂಡುಬರುವುದಿಲ್ಲ. ಈ ಕಾಲದಲ್ಲಿ ಅವರು ಇರುತ್ತಿದ್ದರೆ ಜಗತ್ತಿಗೇ ಪೂಜ್ಯವ್ಯಕ್ತಿಯಾಗಿ ಪರಿಣಮಿಸುತ್ತಿದ್ದರು. ಆ ಧರ್ಮಾನುಯಾಯಿಗಳಾದ ನೀವು ಅವರು ಉಪದೇಶಿಸಿದ ತತ್ವಗಳನ್ನು ಆಚರಣೆಯಲ್ಲಿ ತಂದರೆ ಭಾರತಭೂಮಿಯನ್ನಷ್ಟೇ ಏಕೆ—ಜಗತ್ತನ್ನೇ ಉದ್ಧಾರಮಾಡಬಲ್ಲಿರಿ.' "

ಮಹಾತ್ಮರು ಹೀಗೆ ಹೇಳಿದುದರಲ್ಲಿ ಆಶ್ಚರ್ಯವೇನೂ ಇಲ್ಲ; ಏಕೆಂದರೆ "ಸಿದ್ಧಾಂತ ಶಿಖಾಮಣಿ"ಯಲ್ಲಿ ಹೇಳಿರುವಂತೆ **ಆಚಾರ್ಯ ರೇಣುಕರ** ಉಪದೇಶವಿದು :

ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯೋ ವಾ ಶೂದ್ರ ಏವ ವಾ
ಅಂತ್ಯಜೋ ವಾ ಶಿವೇಭಕ್ತಃ ಶಿವವನ್ಮಾನ್ಯ ಏವ ಸಃ ।
ಶಿವಭಕ್ತಿ ಸಮಾವೇಶೇ ಕ್ವಜಾತಿ ಪರಿಕಲ್ಪನಾ
ಇಂಧನೇಷ್ವಗ್ನಿದಗ್ಧೇಷು ಕೋ ವಾ ಭೇದಃ ಪ್ರಕೀರ್ತ್ಯತೇ ॥

**ಜಗಜ್ಜ್ಯೋತಿ ಬಸವಣ್ಣನವರ** ಅಭಿಪ್ರಾಯವಾದರೂ ಇದರಂತೆಯೇ ಇದೆ:

ಆವ ಕುಲದವನಾದರೇನು? ಶಿವಲಿಂಗವಿದ್ದವನೆ ಕುಲಜನು;
ಕುಲವನರಸುವರೆ ಶರಣರಲ್ಲಿ ಜಾತಿಸಂಕರವಾದ ಬಳಿಕ?
"ಶಿವಜಾತ ಕುಲೇ ಧರ್ಮಃ ಪೂರ್ವಜನ್ಮ ವಿವರ್ಜಿತಃ
ಉಮಾ ಮಾತಾ ಪಿತಾ ರುದ್ರೋ ಈಶ್ವರಃ ಕುಲಮೇವಚ"
ಎಂದುದಾಗಿ ಒಕ್ಕುದ ಕೊಂಬೆನವರಲ್ಲಿ, ಕೂಸ ಕೊಡುವೆ
ಕೂಡಲಸಂಗಮದೇವಾ, ನಂಬುವೆ ನಿಮ್ಮ ಶರಣರನ್ನು.

ಹಿಂದೂ ಧರ್ಮದಲ್ಲಿ ಇಂದೂ ಉಳಿದಿರುವ ಜಾತಿಮತ ತಾರತಮ್ಯವೇ ಅದರ ಅವನತಿಗೆ ಕಾರಣವೆಂದು ರಾಷ್ಟ್ರದ ಅಧ್ಯಕ್ಷರೂ, ಪ್ರಧಾನ ಮಂತ್ರಿಗಳೂ, ಮುಖಂಡರೂ ಉದ್ಘೋಷಿಸುತ್ತಿರುವರು. ಆದರೆ ಈಗಿನ ಸಮತಾವಾದದ ಯೋಜನೆಯಲ್ಲಿ, ಮಡಿಬಟ್ಟೆಯೊಂದಿಗೆ ಮೈಲಿಗೆಯನ್ನು ಮಡಿಮಾಡದೆ ಸೇರಿಸುವಂತೆ, ಅಸ್ಪೃಶ್ಯರಲ್ಲಿರುವ ಅಸ್ಪೃಶ್ಯತಾಚಾರಗಳನ್ನು ಬಿಡಿಸದೆ, ಎಲ್ಲರನ್ನೂ ಒಟ್ಟುಗೂಡಿಸುವ ಪ್ರಯತ್ನವು ಈಗಿನವರದು. ಆದರೆ ಈ ವಿಷಯದಲ್ಲಿ ಶರಣರ ಮಾರ್ಗದ ರೀತಿಯೇ ಬೇರೆ. ಅಸ್ಪೃಶ್ಯ ಜನಜೀವನದ ರೀತಿನೀತಿಗಳನ್ನೂ ಅಧ್ಯಾತ್ಮಮಟ್ಟವನ್ನೂ ಉತ್ತಮಗೊಳಿಸಿ, ಅಸಮಾನತೆಯೇ ಕಾಣದಂತೆ ಮಾಡುವ ಯೋಜನೆ ಅವರದು.

'ಕರ್ನಾಟಕ ವೃತ್ತ ಮತ್ತು ಧನಂಜಯ', ಧಾರವಾಡ, ವರ್ಷ ೩೪, ಸಂಚಿಕೆ ೧೪ (ದಿನಾಂಕ ೨೮-೪-೧೯೨೭) ರಲ್ಲಿ ಶ್ರೀಯುತ **ಮುದವೀಡು ಕೃಷ್ಣರಾಯರು** ಬರೆದಂತೆ—"ಶ್ರೀ ಬಸವೇಶ್ವರ ಮಹಾರಾಜರು ಆರ್ಯ ತತ್ವಜ್ಞಾನದ ಕಿರಣದಂತಿರುವರು. ಅವರು ಬೋಧಿಸಿದ ನಡೆಯೂ ನುಡಿಯೂ ಕನ್ನಡ ಜನಾಂಗದ ಸ್ವತ್ತಾಗಿದೆ. ಜಾತಿಗೋತ್ರಗಳ ಬಿಗಿಯಾದ ಕಟ್ಟನ್ನು ಹರಿದೊಗೆದು, ಸಣ್ಣವರು ದೊಡ್ಡವರು, ಮೇಲುಕೀಳರೆಂಬ ಭಾವನೆಯ ಬಿರುಸಾದ ಹಗ್ಗವನ್ನು ಬಿಚ್ಚಿ ಬಿಸುಟು, ಎಲ್ಲರಿಗೂ ತತ್ವಜ್ಞಾನದ ತಿಳಿನೀರನ್ನು ಕುಡಿಸಿ ಶಾಶ್ವತ ಶಾಂತಿಯ ದಾರಿಯನ್ನು ತೋರಿದ ಶ್ರೀ ಬಸವೇಶ್ವರ ಮಹಾರಾಜರ ಕಾಲ, ಅವರ ಅಸಂಖ್ಯಾತ ಸಮೂಹ, ಅವರ ಸಾದಾ ಹಾಗೂ ತಾಯ್ನುಡಿಯಲ್ಲಿ ಪೋಣಿಸಿದ ತತ್ವಜ್ಞಾನಾಮೃತವನ್ನು ಕೇಳಿದರೆ ಮಂಗನಂತಹ ಮನಸ್ಸು ಸಹಾ ಕ್ಷಣಹೊತ್ತು ಮಂಕಾಗುತ್ತದೆ. ಕನ್ನಡ ನಾಡಿನ

ಇತಿಹಾಸದೊಳಗೆ ಶ್ರೀ ಬಸವೇಶ್ವರರ ಕಾಲದ ತತ್ವಜ್ಞಾನದ ಹೊಯ್ಲು ಬಹು ವಿಲಕ್ಷಣ ತೇಜದಿಂದ ಬೆಳಗುವಂತಹದೂ, **ಉಪನಿಷತ್ ಕಾಲದ ನೋಟವನ್ನು** ತಿರುಗೊಮ್ಮೆ ತೋರಿಸುವಂತಹದೂ ಆಗಿದೆ.''

'ವೀರಶೈವ ತತ್ವಪ್ರಕಾಶ'ದ ೨೫೬ ನೆಯ ಪುಟದಲ್ಲಿ ಶ್ರೀಯುತ **ಅ. ನ. ಕೃಷ್ಣರಾಯರು** ಬರೆದಿರುವಂತೆ—''ವೀರಶೈವ ಅನುಭಾವಿಗಳು ತಮ್ಮ ಜೀವನದ ಜೇನುಗೊಡವನ್ನು ಅನುಭವ ಮಂಟಪದಲ್ಲಿಯೇ ಶೇಖರಿಸಿ, ಜೇನುಹೊಂಡವನ್ನೇ ನಿರ್ಮಾಣಮಾಡಿಬಿಟ್ಟರು. ಇದರಲ್ಲಿ ಎಲ್ಲ ಪುಷ್ಪಗಳ ಸಾರ-ಸೌರಭ-ಪರಿಮಳ-ಸವಿಗಳು ಬೆರೆತುಕೊಂಡಿವೆ. ಎಲ್ಲ ಧರ್ಮಗಳೂ ಒಂದೊಂದು ಜಾಡನ್ನು ಹಿಡಿಯಹೋಗಿ ಕಂಡ ಸತ್ಯದ ಕೇಂದ್ರವನ್ನೇ ವೀರಶೈವ ಧರ್ಮವು ಆರಿಸಿತು. ಇದು ಎಲ್ಲ ಧರ್ಮಗಳ ಸಾರವಾಯಿತು. ಅಂತೇ **ವಿಶ್ವಧರ್ಮವೆನಿಸಿಕೊಳ್ಳಲು ಪೂರ್ಣ ಅರ್ಹತೆಯನ್ನು ಪಡೆಯಿತು**....ವೀರಶೈವ ಧರ್ಮವು ಜೀವಂತ ಧರ್ಮವಾಗಿ ಉಳಿದಿದೆ. ಅನುಭವಮಂಟಪದ ಮಹಾನುಭಾವರ ಕೃತಿಗಳು ನಾಡವರ ಕೊರಳಲ್ಲಿ ಮುಕ್ತಮಣಿಗಳಾಗಿ ರಾರಾಜಿಸುತ್ತಿವೆ.''

ಶರಣರು ವಿಶ್ವಕ್ಕೆ ಕೊಟ್ಟ ಸಂದೇಶವನ್ನು ಮಾನ್ಯ **ದಿವಾಕರರು** ಅವರ 'ವಚನಶಾಸ್ತ್ರ ರಹಸ್ಯ'ದ ಕೊನೆಯಲ್ಲಿ ಹೀಗೆ ವಿವರಿಸಿರುವರು :

''ಬನ್ನಿರಿ, ಎಲ್ಲರೂ ಬನ್ನಿರಿ; ನಿಮ್ಮೆಲ್ಲರಿಗೂ ಪರಮಸುಖವು ಬೇಕಾಗಿದ್ದರೆ ಇತ್ತ ಬನ್ನಿರಿ. ನಿಮ್ಮ ನಿಮ್ಮ ಕ್ಷುದ್ರ ಅಹಂಭಾವಗಳನ್ನು ಮರೆಯಿರಿ. ನಾವು ಆ ಕುಲದವರು, ಈ ಕುಲದವರು, ಇಂಥ ಉಚ್ಚ ಉದ್ಯೋಗಮಾಡುವವರು, ಅಂಥ ಹೆಚ್ಚಿನ ಕಾಯಕದವರು ಎಂಬ ವೃಥಾಭಿಮಾನವನ್ನು ತೊರೆಯಿರಿ. ನಿಮ್ಮಲ್ಲಿರುವ ಶಕ್ತಿಗಳನ್ನೆಲ್ಲ ವಿಶ್ವಸಂಗೀತದೊಡನೆ ಮೇಳಗೂಡಿಸಲು ಕೊಟ್ಟ ವಿವಿಧ ವಾದ್ಯಗಳಿರುವುವು. ಅವುಗಳನ್ನು ತಿದ್ದಿ ತೀಡಿ ನೆಟ್ಟಗೆಮಾಡಿ ಸಂಸ್ಕಾರ ಕೊಟ್ಟು ಸರಿಪಡಿಸಿರಿ. ಅವೆಲ್ಲ ಪರಸ್ಪರ ಪೋಷಕವೇ ಇಲ್ಲವೆ ಪೂರಕವೇ ಇರುವವೆಂಬುದನ್ನು ಮರೆಯಬೇಡಿರಿ. ನೀವು ಕಿವಿಗೊಟ್ಟು ಕೇಳಿರಿ. ಅಕೋ! ಇದು ಶಿವಲೋಕದ ಸುಂದರ ಸಂಗೀತವು. ಭವ್ಯವಾದ ಅನಂತ ಸೂರ್ಯಮಂಡಲಗಳೆಲ್ಲ ಆ ಸಂಗೀತದೊಡನೆ ತಾಳ ಹಿಡಿದು ಕುಣಿಯುತ್ತಿರುವುವು....ಈ ದಿವ್ಯಸಂಗೀತದಲ್ಲಿ ಜಗತ್ಕಾರಣ ಜಗನ್ಮಾರಣವಾದ ಈ ವಿಲಕ್ಷಣ ಸಂಗೀತದಲ್ಲಿ ನೀವೆಲ್ಲರೂ ಮೇಳಗಾರರಾಗಿರುವಿರಿ. ನಿಮ್ಮ ನಿಮ್ಮ ಸ್ವರವನ್ನು ಇದರಲ್ಲಿ ಕೂಡಿಸಿ, ಇದನ್ನು ಇನ್ನೂ ಹೆಚ್ಚು ಸುರಮ್ಯ ಮಾಡಿರಿ. ಈ ಸಂಗೀತದೊಡನೆ ಹೆಜ್ಜೆಯಿಕ್ಕಿ ಸುಖದಲ್ಲಿ ನಲಿದಾಡುತ್ತ ಪರಮಸುಖದತ್ತ ಸಾಗಿರಿ....ವಚನಕಾರರ ಈ ಬಗೆಯ ಸಂದೇಶವನ್ನು ಕೇಳಿ ಲಾಲಿಸಿ, ಅದರೊಡನೆ ಏಕರಸರಾದವರು ಧನ್ಯರು. ಅದನ್ನು ಹೃದಯಮಂದಿರದಲ್ಲಿರಿಸಿಕೊಂಡು ಆಜೀವನ ತದನುಸಾರ ಅತಂದ್ರಿತವರ್ತನಮಾಡುವವರು ಪರಮನ ಲೀಲಾಕಾರ್ಯದಲ್ಲಿ ವಿಹರಿಸುವ ಅಮೃತಫಲವನ್ನುಂಡ ಆನಂದಮೂರ್ತಿಗಳು.''

ಹೀಗೆ ವಿಶ್ವಗತಿಯ ಸಂಗೀತದೊಡನೆ ವಿಶ್ವಜನರ ಚಲನವಲನದ ಪ್ರಗತಿಯನ್ನು ಲಯಗೊಳಿಸುವ ಮಹತ್ಕಾರ್ಯವನ್ನು ಕೈಗೊಂಡವರು ಆಧಿಭೌತಿಕ ಹಾಗೂ ಆಧಿದೈವಿಕ ವಾತಾವರಣವನ್ನು ಮೀರಿ ಏರಿ ಆಧ್ಯಾತ್ಮಿಕ ಉನ್ನತಮಟ್ಟದ ಆನಂದಸಾಗರದಲ್ಲಿ ವಿಹರಿಸುವ ಯೋಗಿಹಂಸಗಳಾಗಿರಬೇಕು. ಹಾಗೆಂಬುದೇ ವಚನಶಾಸ್ತ್ರಪ್ರವೀಣರಾದ ದಿವಂಗತ

ಶ್ರೀಯುತ ಶ್ರೀನಿವಾಸಮೂರ್ತಿಗಳು, ಅವರ 'ವಚನಧರ್ಮಸಾರ'ವನ್ನು ಪ್ರಾರಂಭಿಸುವ ರೀತಿಯಿಂದ ಕಂಡುಬರುವುದು :

"ಕನ್ನಡ ಸಾಹಿತ್ಯಪ್ರಪಂಚದಲ್ಲಿ ವಿಹರಿಸುತ್ತ ಬರುವಾಗ ಒಂದು ಕಡೆ ತಪೋವನವನ್ನು ಪ್ರವೇಶಿಸಿದಂತೆಯೂ, ಸಿದ್ಧ ಸಾಧಕ ಋಷಿಗಳ ಸಂದರ್ಶನ ಪಡೆದು ಅವರ ಉದಾತ್ತ ಧರ್ಮಬೋಧೆಗಳಿಂದ ನಮ್ಮ ಅಂತರಂಗ ಪರಿಶುದ್ಧವಾದಂತೆಯೂ, ಆತ್ಮನ ಬಂಧನಗಳು ಕಳಚಿಬಿದ್ದು ನಾವು ಮುಕ್ತರಾದಂತೆಯೂ ಒಂದು ದಿವ್ಯವಾದ ಆನಂದಾನುಭವವುಂಟಾಗುತ್ತದೆ. ಇಲ್ಲಿ ಪಟ್ಟಣವಾಸದ ಗೊಂದಲವಿಲ್ಲ; ರಾಜಾಸ್ಥಾನದ ವೈಭವದೃಶ್ಯಗಳಿಲ್ಲ. ತಪೋವನದ ಸಹಜ ಶಾಂತಿ, ಪರಸ್ಪರ ಪ್ರೇಮ, ಸಮತಾವಾದ, ಸ್ವಾತಂತ್ರ್ಯ ಇವು ಮೂರ್ತಿವತ್ತಾಗಿ ಕಾಣುತ್ತವೆ. **ವಚನ ಸಾಹಿತ್ಯವೇ ತಪೋವನದ ಉಪನಿಷತ್ ಸಾಹಿತ್ಯ; ವಚನಕಾರರೇ ಉಪನಿಷತ್ ಕಾಲದ ಮಹರ್ಷಿಗಳು.**"

ಹೀಗೆ ಮಹಾತ್ಮರು, ಮಹಾರಾಜರು, ಮಹಿಳಾಮಣಿಯರು, ಮಾನ ಸಾಹಿತ್ಯ ತಪೋಧನರು ಮನಸಾರೆ ಹೊಗಳಿರುವ ಮಾತಿನಲ್ಲಿ ಸತ್ಯಾಂಶವಿರುವುದಾದರೆ, ವೀರಶೈವ ಧರ್ಮವು ವಿಶ್ವಧರ್ಮವಾಗಲು ಅರ್ಹತೆಯನ್ನು ಪಡೆದಿದೆಯೆಂದೇ ಒಪ್ಪಬೇಕಾಗುವುದು. ಇದು ಇಂದಿನ ಜಗತ್ತಿನ ಹಾಗೂ ಜೀವನಸಮಸ್ಯೆಗಳಿಗೆ ನಿವಾರಣೋಪಾಯವನ್ನು ಧರಿಸಿದೆ ಯೆನ್ನಬಹುದು. ಈ ಮತದ ಮುಖ್ಯ ಧರ್ಮಗಳನ್ನು ಅವಲೋಕಿಸಿದರೆ ಇದರಲ್ಲಿ ಸಂದೇಹವೇ ಉಳಿಯುವುದಿಲ್ಲ. "ದೇವನೊಬ್ಬ ನಾಮ ಹಲವು" ಎಂಬಲ್ಲಿನ **ಏಕದೇವೋಪಾಸನೆ,** "ನಂಬಿ ಕರೆದರೆ ಓ ಎನ್ನನೆ ಶಿವನು" ಎಂಬಲ್ಲಿನ **ಭಕ್ತಿ ಪಾರವಶ್ಯತೆ,** "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೆಯೆಂಬೆ" ಎಂಬಲ್ಲಿನ ಸ್ತ್ರೀ ಶೂದ್ರಾದಿಗಳನ್ನೊಳಗೊಂಡ ಎಲ್ಲರಲ್ಲಿಯೂ **ಸಮತಾಭಾವ,** "ಕಾಯಕವೇ ಕೈಲಾಸ" ಎಂಬುದರಲ್ಲಿನ **ಕರ್ಮಸುಕೌಶಲಂ,** "ದಯವಿಲ್ಲದ ಧರ್ಮವಾವುದಯ್ಯಾ" ಎಂಬುದರಲ್ಲಿನ **ಅಹಿಂಸಾ ಪರಮೋಧರ್ಮಃ** ಎಂಬ ನಿಲುವು, "ಎಲವೋ ಪಾಪಕರ್ಮವ ಮಾಡಿದವನೆ ಒಮ್ಮೆ ಶರಣೆನ್ನೆಲವೋ; ಎಲವೋ ಬ್ರಹ್ಮಹತ್ಯವ ಮಾಡಿದವನೆ ಒಮ್ಮೆ ಶರಣೆನ್ನೆಲವೋ; ಒಮ್ಮೆ ಶರಣೆಂದೊಡೆ ಓಡುವುವು ಪಾಪಕರ್ಮಗಳು" ಎಂಬ **ದೀನದಲಿತೋದ್ಧಾರದ ಆದೇಶ,** "ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ" ಎಂಬಲ್ಲಿನ **ನಿರಹಂಭಾವ,** "ಪರನಾರಿಯ ತೊರೆಯಿಂ ಭೋ" ಎಂಬಲ್ಲಿನ **ಏಕಪತ್ನೀವ್ರತ,** "ಪರಧನದಾಮಿಷವ ತೊರೆಯಿಂ ಭೋ" ಎಂಬಲ್ಲಿನ **ನಿಸ್ಪೃಹತೆ,** "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ" ಎಂಬೀ **ಸದ್ವರ್ತನೆಯ ನಿಯಮ**—ಈ ಎಲ್ಲ ವೀರಶೈವ ಧರ್ಮದ **ದಶವಿಧಿಗಳು** ವಿಶ್ವಧರ್ಮನಿರ್ಮಾಣಕ್ಕೆ ತಕ್ಕ ತಳಹದಿಯಾಗಿವೆ.

## ಇಂತಹ ಉತ್ಕೃಷ್ಟಮಟ್ಟದ ಮತದ ಉಗಮ–ಪ್ರಗತಿಗಳು ವಿಚಾರಾರ್ಹವಾಗಿವೆ

ಅತ್ಯುನ್ನತ ಆಧ್ಯಾತ್ಮಮಟ್ಟಕ್ಕೇರಿದ ವೀರಶೈವ ಮತದ ಉಗಮವು ಯಾವಾಗ ಆಯಿತು? ಇದರ ಪ್ರಗತಿಯ ಚರಿತ್ರೆಯೇನು? ಇದರ ಮಹೋನ್ನತಿಯು ಹೇಗೆ ಮತ್ತು

ಯಾವಾಗ ಆಯಿತು?—ಈ ಮೊದಲಾದ ಪ್ರಶ್ನೆಗಳಿಗೆ ಖಚಿತವಾದ ಉತ್ತರವು ಸಿಕ್ಕದಿರುವುದು ಶೋಚನೀಯವಾಗಿದೆ. ಈ ವಿಷಯಗಳನ್ನು ಬಗೆಹರಿಸಿಕೊಳ್ಳುವುದರ ಆಗತ್ಯವು ಸಮಾಜದ ಗಮನಕ್ಕೆ ಬಂದಿಲ್ಲವೆಂದಲ್ಲ. ಅಖಿಲ ಭಾರತ ವೀರಶೈವ ಮಹಾಸಭೆಯ ತ್ರೈಮಾಸಿಕ ಪತ್ರಿಕೆಯಾದ 'ವೀರಶೈವ'ದ ೧೯೬೧ ನೆಯ ಇಸವಿಯ ಜೂನ್ ತಿಂಗಳ ಸಂಚಿಕೆಯ ಸಂಪಾದಕೀಯ ಲೇಖನದಲ್ಲಿ ಹೀಗೆ ಉಲ್ಲೇಖಿಸಿದ್ದಾರೆ:—"'ವೀರಶೈವ'ದ ಉಗಮ ಎಂದು ಮತ್ತು ಹೇಗೆ ಆಗಿದೆ? ವೀರಶೈವ ಅಥವಾ ಲಿಂಗಾಯತ ಎಂಬ ಹೆಸರು ಎಂದಿನಿಂದ ಪ್ರಚಾರದಲ್ಲಿ ಬಂದಿತು? ಅದಕ್ಕೂ ಮೊದಲು ಇದಕ್ಕೆ ಬೇರೆ ಯಾವುದಾದರೂ ಹೆಸರಿದ್ದಿತೆ? ಇದ್ದರೆ ಅದು ಯಾವುದು? ವೀರಶೈವ ಪದದ ಉತ್ಪತ್ತಿ ಮತ್ತು ಪ್ರಾಚೀನತೆ, ಬಸವಾದಿ ಪ್ರಮಥರ ಪೂರ್ವದಲ್ಲಿ ಇದರ ಸ್ವರೂಪ ಹೇಗಿದ್ದಿತು? ಶೈವಧರ್ಮದಲ್ಲಿರುವ ಅನೇಕ ಪಂಥಗಳಲ್ಲಿ ಇದೊಂದು ಸ್ವತಂತ್ರವಾದ ಪಂಥವೋ ಅಥವಾ ಯಾವುದಾದರೂ ಪಂಥಕ್ಕೆ ಸಂಬಂಧಿಸಿದುದೋ? ವೇದೋಪನಿಷತ್ತುಗಳಲ್ಲಿ ವೀರಶೈವಧರ್ಮದ ಅಂಶಗಳೇನಾದರೂ ದೊರೆಯುವುವೆ? ಆಗಮಾದಿಗಳಲ್ಲಿ ವರ್ಣಿತವಾದ ವೀರಶೈವಧರ್ಮವಾವುದು? ಶಿವಶರಣರ ವಚನಗಳಲ್ಲಿ ಶರಣರು ಆಧಾರವಾಗಿಟ್ಟುಕೊಂಡ ಸಂಸ್ಕೃತ ಶ್ಲೋಕಗಳಲ್ಲಿ ದೊರೆಯುವ ವೀರಶೈವಧರ್ಮದ ಸ್ವರೂಪ, ೧೨ ನೆಯ ಶತಮಾನಕ್ಕೂ ಪೂರ್ವದಲ್ಲಿ ವೀರಶೈವಧರ್ಮವಿದ್ದರೆ ಅದರ ಇತಿಹಾಸ...... ವೀರಶೈವರ ಇತಿಹಾಸ, ಆಚಾರವಿಚಾರಗಳಿಗೆ ಸಂಬಂಧಪಟ್ಟ ಇಂತಹ ಅನೇಕ ವಿಷಯಗಳನ್ನು ಚರ್ಚಿಸುವುದು ಅಗತ್ಯವಾಗಿದೆ." ಇವೇ ಮೊದಲಾದ ವಿಷಯಗಳು ವಿಚಾರಾರ್ಹವಾದುವು ಎಂಬುದು ನಿರ್ವಿವಾದವಾದುದಾಗಿದೆ. ಆದರೆ ಇವುಗಳನ್ನು ಸಂಶೋಧಿಸುವ ಸಲುವಾಗಿ ವಿದ್ವಜ್ಜನರ ಸಂಶೋಧಕ ಮಂಡಲಿಯು ಅಗತ್ಯವಾಗಿದೆ. ಅಂತಹ ಮಂಡಲಿಯು ಏರ್ಪಟ್ಟಿಲ್ಲವಾಗಿ, ಈ ವಿಷಯಗಳನ್ನು ವಿಚಾರಕ್ಕೊಳಗುಮಾಡುವ ಪ್ರಯತ್ನವನ್ನು ಇಲ್ಲಿ ಯಥಾಮತಿ ಮಾಡಲಾಗಿದೆ.

ಇವೆಲ್ಲಕ್ಕೂ ಮೂಲವಾದುದು ವೀರಶೈವದ ಉಗಮ. ಅದನ್ನು ನಿರ್ಧರಿಸಲು ಮೇಲೆ ಹೇಳಿದ ಅನೇಕ ವಿಷಯಗಳು ವಿಚಾರಕ್ಕೊಳಗಾಗುತ್ತವೆ. ಆದರೆ ಮೊದಲು ಗಮನಿಸಬೇಕಾದುದು ಈ ಮತವು ಯಾರಿಂದಲಾದರೂ ಚಾರಿತ್ರಿಕ ಕಾಲದಲ್ಲಿ ಪ್ರಾರಂಭಿಸಲ್ಪಟ್ಟಿತೆ, ಅಥವಾ ಇದು ಅನಾದಿಕಾಲದಿಂದಲೂ ಬಳೆದುಬಂದ ಮತವೆ, ಎಂಬುದು.

## ಕೆಲವು ಮತಗಳು ಬಳೆದುಬಂದುವು; ಕೆಲವು ಪ್ರವಾದಿಗಳಿಂದ ಪ್ರಾರಂಭವಾದುವು

ಯಾವುದಾದರೊಂದು ನಿರ್ದಿಷ್ಟ ಕಾಲದಲ್ಲಿ ಪ್ರವಾದಿಯೊಬ್ಬನಿಂದ ಪ್ರಾರಂಭಿಸಲ್ಪಟ್ಟುವೆನ್ನಬಹುದಾದ ಕೆಲವು ಮತಗಳಿವೆ—ಉದಾಹರಣೆಗಾಗಿ ಕ್ರೈಸ್ತ, ಮಹಮದೀಯ ಮತಗಳೂ, ಸಿಕ್ ಮತವೂ, ಹೀಗೆ ಒಂದೊಂದು ಕಾಲದಲ್ಲಿ ಪ್ರಾರಂಭವಾದ ಮತಗಳು ಎನ್ನಬಹುದು. ಕ್ರೈಸ್ತಧರ್ಮವನ್ನು ಏಸುಕ್ರಿಸ್ತನೂ, ಮಹಮದೀಯರ ಮತವನ್ನು ಮಹಮ್ಮದನೂ ಪ್ರಾರಂಭಿಸಿದರು. ಆದರೆ ಹಿಂದೂ ಮತವಾಗಲೀ, ಅದರ ಮುಖ್ಯ ಪ್ರಭೇದಗಳಾಗಲೀ ಇಂತಹ ಕಾಲದಲ್ಲಿಯೇ ಇಂತಹವರಿಂದಲೇ ಉಗಮವಾದುವೆನ್ನಲಾಗುವುದಿಲ್ಲ. ಉದಾಹರಣೆಗಾಗಿ ದ್ವೈತಮತವಾಗಲೀ, ಅದ್ವೈತಮತವಾಗಲೀ, ವಿಶಿಷ್ಟಾದ್ವೈತಮತವಾಗಲೀ, ವೀರಶೈವರ ಶಿವಾದ್ವೈತಮತವಾಗಲೀ ಇಂತಹವರಿಂದ ಇಂತಹ ಕಾಲದಲ್ಲಿಯೇ

ಪ್ರಾರಂಭಿಸಲ್ಪಟ್ಟಿವೆನ್ನಲಾಗುವುದಿಲ್ಲ. ಇದು ಸೋಜಿಗವೆನಿಸಬಹುದು; ಆದರೆ ಇದು ನಿಜ. ಅದ್ವೈತಮತಪ್ರವರ್ತಕರಾದ ಶ್ರೀ ಶಂಕರಾಚಾರ್ಯರಾಗಲೀ, ದ್ವೈತಮತಪ್ರವರ್ತಕರಾದ ಶ್ರೀ ಮಧ್ವಾಚಾರ್ಯರಾಗಲೀ, ವಿಶಿಷ್ಟಾದ್ವೈತಮತಪ್ರವರ್ತಕರಾದ ಶ್ರೀ ರಾಮಾನುಜಾಚಾರ್ಯರಾಗಲೀ ತಮ್ಮಿಂದಲೇ ತಮ್ಮ ಮತವು ಪ್ರಾರಂಭವಾಯಿತೆನ್ನುವುದಿಲ್ಲ. ವೇದಾಗಮೋಪನಿಷತ್ತುಗಳಲ್ಲಿಯೂ, ಬ್ರಹ್ಮಸೂತ್ರ ಭಗವದ್ಗೀತೆಗಳಲ್ಲಿಯೂ ಹೇಳುವುದರ ಅನುಸಾರವಾಗಿ ತಮ್ಮತಮ್ಮ ಮತವಿರುವುದಾಗಿ ಹೇಳಿ, ತಮಗಿಂತಲೂ ಹಿಂದಿನ ಹಿರಿಯರ ಮಾರ್ಗವನ್ನು ಅವಲಂಬಿಸಿರುವುದಾಗಿ ಹೇಳುವರೇ ಹೊರತು, ತಾವೇ ಒಂದು ಹೊಸ ಮತವನ್ನು ಸ್ಥಾಪಿಸುತ್ತಿರುವುದಾಗಿ ಯಾವ ಆಚಾರ್ಯರೂ ಹೇಳಿರುವುದಿಲ್ಲ. ಇದೆಲ್ಲವನ್ನು ಎಲ್ಲ ಭಾಷ್ಯಗಳಿಂದ ಉದಾಹರಿಸುವುದಕ್ಕಿಂತ ಸ್ಥಾಲೀಪುಲಾಕ ನ್ಯಾಯದಂತೆ ಯಾವುದಾದರೊಂದು ಭಾಷ್ಯವನ್ನು ತೆಗೆದುಕೊಳ್ಳಬಹುದು. ಶ್ರೀಭಾಷ್ಯದ ಪ್ರಾರಂಭವನ್ನು ನೋಡುವ. ಶ್ರೀ ರಾಮಾನುಜಾಚಾರ್ಯರು ಅದನ್ನು ಹೀಗೆ ಪ್ರಾರಂಭಿಸಿರುವರು: "ಭಗವದ್ ಬೋಧಾಯನ ಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರವೃತ್ತಿಂ ಪೂರ್ವಾಚಾರ್ಯಾಸ್ಸಂಚಿಕ್ಷಿಪುಃ; ತನ್ಮತಾನುಸಾರೇಣ ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯಂತೇ" ಎಂದರೆ ಭಗವದ್ ಬೋಧಾಯನರು ಬ್ರಹ್ಮಸೂತ್ರಕ್ಕೆ ವಿಸ್ತಾರವಾದ ವೃತ್ತಿಯನ್ನು ಬರೆದರೆಂತಲೂ, (ದ್ರಮಿಡಾಚಾರ್ಯರೇ ಮೊದಲಾದ) ಪೂರ್ವದ ಮಹನೀಯರು ಅದನ್ನು ಸಂಕ್ಷೇಪವಾಗಿ ಬರೆದರೆಂತಲೂ, ಅದನ್ನನುಸರಿಸಿ ತಾವು ಭಾಷ್ಯವನ್ನು ಬರೆಯುತ್ತಿರುವರೆಂತಲೂ ಶ್ರೀಭಾಷ್ಯದ ಪ್ರಾರಂಭದಲ್ಲಿಯೇ ಶ್ರೀ ರಾಮಾನುಜಾಚಾರ್ಯರು ಹೇಳಿದ್ದಾರೆ. ಆದುದರಿಂದ ಶ್ರೀ ರಾಮಾನುಜರಿಂದಲೇ ವಿಶಿಷ್ಟಾದ್ವೈತಮತವು ಪ್ರಾರಂಭಿಸಲ್ಪಟ್ಟಿತೆನ್ನಲಾಗುವುದಿಲ್ಲ.

ಶ್ರೀಕರಭಾಷ್ಯದ ಪ್ರಾರಂಭವಾದರೂ ಹೀಗೆಯೇ ಆಗಿದೆ:

ಅಗಸ್ತ್ಯ ಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಂ ।
ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂಕರಂ ॥

ಅಗಸ್ತ್ಯವೃತ್ತಿಯ ಆಧಾರದ ಮೇಲೆ ಶ್ರೀಕರಭಾಷ್ಯವು ಬರೆಯಲ್ಪಟ್ಟಿರುವುದಾಗಿ ಅದರಲ್ಲಿ ಹೇಳಿದೆ. ಸಿದ್ಧಾಂತಶಿಖಾಮಣಿಯು ಶ್ರೀಕರಭಾಷ್ಯಕ್ಕೆ ಆಧಾರಗ್ರಂಥವಾಗಿದೆ. ಸಿದ್ಧಾಂತಶಿಖಾಮಣಿಯು ಮತದ ಮೂಲವನ್ನು ಅಗಸ್ತ್ಯರಿಗಿಂತಲೂ ಹಿಂದೆ ಒಯ್ಯುತ್ತದೆ. ಸಿದ್ಧಾಂತಶಿಖಾಮಣಿಯ ಭಾಷಾಂತರವಾದ 'ಮಣಿಮುಕುರ'ದಲ್ಲಿ ಹೇಳಿದಂತೆ "ಪರಶಿವಂ ಪಾರ್ವತಿಗೆ ಪುತ್ರ ಷಣ್ಮುಖಂಗೆ ಪೇಳಿದಂ ಪಳೆಯ ಷಟ್ಸ್ಥಲದ ಸಿದ್ಧಾಂತಮಂ". ಅಗಸ್ತ್ಯರಿಗೆ ಉಪದೇಶವಾದುದು ಇದೇ ಸಿದ್ಧಾಂತ; ಇದನ್ನು ಅನುಸರಿಸಿಯೇ ಶ್ರೀಕರಭಾಷ್ಯವು ಬರೆಯಲ್ಪಟ್ಟಿತೆಂದಾಯಿತು. ವಚನಶಾಸ್ತ್ರದಲ್ಲಿಯಾಗಲೀ ಸಿದ್ಧಾಂತಶಿಖಾಮಣಿಯಲ್ಲಿಯಾಗಲೀ ಹೊಸ ಮತವನ್ನು ಸ್ಥಾಪಿಸುವ ಮಾತೇ ಇಲ್ಲ. ಹೀಗೆಂದಮಾತ್ರಕ್ಕೆ ವೀರಶೈವಧರ್ಮವು ಅನಾದಿಕಾಲದಿಂದಲೂ ಈಗಿರುವ ರೀತಿಯಲ್ಲೇ ಇದ್ದಿತೆಂದಲ್ಲ. ಈ ಹಿಂದೆಯೇ ಹೇಳಿದಂತೆ ಈ ಮಹಾವೃಕ್ಷವು ಪಲ್ಲವಿಸಿ ಪೂತು ಫಲಪುಷ್ಪಭರಿತವಾಗಿ ರಾರಾಜಿಸಿದುದು ಹನ್ನೆರಡನೆಯ ಶತಮಾನದ ಹಿಂದುಮುಂದಿನಲ್ಲಿಯೇ. ಆದರೆ ಯಾವ ವೃಕ್ಷವಾಗಲೀ ಫಲಪುಷ್ಪಗಳು ಬಿಡುವ ಮೊದಲೇ ಬೇವು ಮಾವೆಂಬ ತೆರದ ಭೇದವನ್ನು ಕಾಣಿಸುವುದಷ್ಟೆ. ಹಾಗೆಯೇ ವೀರಶೈವದ ಮುಖ್ಯ ಧರ್ಮಗಳಾವುವೋ, ಅವುಗಳಿಂದ ಅದನ್ನು ಹನ್ನೆರಡನೆಯ ಶತಮಾನದ ಮೊದಲೂ ಗುರುತಿಸ

ಬಹುದಾಗಿದೆ. ಆದುದರಿಂದ ಈ ಮತದ ಮುಖ್ಯ ಧರ್ಮಗಳಾವುವೆಂಬುದನ್ನು ವಿಂಗಡಿಸಿ ಕೊಳ್ಳಬೇಕು.

## ವೀರಶೈವದ ಮುಖ್ಯ ಧರ್ಮಗಳಾವುವು?

ಸರ್ವೇಶ್ವರನೂ, ಸರ್ವಜ್ಞನೂ, ಸರ್ವಕರ್ತನೂ, ಸ್ವತಂತ್ರನೂ, ಆದ್ಯಂತರಹಿತನೂ ಆದ ಪರಮೇಶ್ವರನೊಬ್ಬನಿರುವನು. ಅವನು ಮಂಗಳವಾಚಕವಾದ 'ಶಿವ'ನಾಮದಿಂದ ಸ್ತುತ್ಯ ನಾಗಿರುವನು. ಆಧ್ಯಾತ್ಮಿಕ ದೃಷ್ಟಿಯಿಂದ ಜಗತ್‌ಸೃಷ್ಟ್ಯಾದಿ ಲೀಲೆಗಾಗಿ ಶಕ್ತಿವಿಶಿಷ್ಟನಾಗುವ ನಾದರೂ ಅವನು ಏಕನು, ಅದ್ವಯನು. ಆಧಿದೈವಿಕ ದೃಷ್ಟಿಯಿಂದ ಅವನು ಉಮಾಪತಿ, ತ್ರಿನೇತ್ರ, ತ್ರಿಶೂಲಧಾರಿ, ಪಶುಪತಿ, ದಕ್ಷಿಣಾಮೂರ್ತಿ, ಅರ್ಧನಾರೀಶ್ವರ, ಚಂದ್ರಚೂಡ ಮೊದಲಾದ ಹೆಸರುಗಳಿಂದ ಪ್ರಸಿದ್ಧನಾಗಿ ಈ ಹೆಸರುಗಳಿಂದ ವ್ಯಕ್ತವಾಗುವ ಲಕ್ಷಣ ಗಳುಳ್ಳವನು. ಅವನಲ್ಲಿ ಅವ್ಯಭಿಚರಿತ ಭಕ್ತಿಯನಿಟ್ಟು ಆರಾಧಿಸುವುದರಿಂದ ಭವಪಾಶವರಿದು ಪಶುವೆನಿಸಿದ ಜೀವನು ಪತಿಯೆನಿಸಿದ ಶಿವನನ್ನು ಸೇರಿ ಮೋಕ್ಷವನ್ನು ಪಡೆಯುವನು. ಶಿವ ಪರಮಾತ್ಮನನ್ನು ಲಿಂಗರೂಪದಲ್ಲಿಯೇ ಧರಿಸಿ ಪೂಜಿಸಿ ಲಿಂಗಾನುಸಂಧಾನವೆಂಬ ಶಿವಯೋಗ ದಿಂದ ಮೋಕ್ಷವನ್ನು ಪಡೆಯಬಹುದು. ಇವೆಲ್ಲವೂ ವೀರಶೈವದ ಮುಖ್ಯ ಲಕ್ಷಣಗಳಾದರೂ ವೀರಶೈವನನ್ನು ಇತರ ಶೈವರಿಂದ ಮುಖ್ಯವಾಗಿ ಗುರುತಿಸುವುದು ಅವನು ಲಿಂಗಧಾರಿಯೆಂಬ ಲಕ್ಷಣದಿಂದಲೇ ಎಂಬುದನ್ನು ಮರೆಯಲಾಗದು. ಈ ಎಲ್ಲ ಲಕ್ಷಣಗಳಿಂದಲೂ ವೀರಶೈವದ ಶಿಶುವನ್ನು ಸಿಂಧೂನದಿಯ ತೀರದ ನಾಗರಿಕತೆಯ ಕಾಲದಲ್ಲಿ ಗುರುತಿಸಬಹುದೆಂಬ ಅಂಶವು ಮುಂದೆ ತೋರಿಸಲ್ಪಡುವುದು. ವೇದಗಳ ಪ್ರಾರಂಭಕಾಲದಲ್ಲಿ ಈ ಶೈವಶಿಶುವಿಗೆ ಬಾಲಾರಿಷ್ಟ ವಿದ್ದಂತೆ ತೋರಿದರೂ, ಅದು ಚೇತರಿಸಿಕೊಂಡು ಪ್ರಗತಿಹೊಂದಿ ಹೇಗೆ ವೇದವಾಙ್ಮಯದ ಮೇಲೆ ಪರಿಣಾಮ ಮಾಡಿತೆಂದು ತೋರಿಸುವುದು ಮುಂದಿನ ವಿಷಯ. ಶ್ವೇತಾಶ್ವತರೋಪ ನಿಷತ್ತಿನ ಹೊತ್ತಿಗೆ ಈ ಶಿಶುವಿಗೆ ಅರಿಷ್ಟಗಳು ನಿವೃತ್ತಿಯಾಗಿದ್ದುವಲ್ಲದೆ, ಸ್ವತಂತ್ರವಾಗಿ ತಲೆಯೆತ್ತಿ ನಿಲ್ಲುವ ಶಕ್ತಿಯೇ ಬಂದಿದ್ದಿತು. ಹತ್ತು-ಹನ್ನೆರಡನೆಯ ಶತಮಾನದವರೆಗೂ ಅದು ಬಳೆದು ಪ್ರಬುದ್ಧಮಾನಕ್ಕೆ ಬಂದಿತು. ಕೆಲವು ಸದಾಚಾರಗಳೊಡನೆ ಕೆಲವು ಅನಾಚಾರಗಳು ಸೇರಿಕೊಂಡು, ಅದು ವೈವಿಧ್ಯತೆಯಿಂದ ವ್ಯಕ್ತಿತ್ವವನ್ನು ಕಳೆದುಕೊಂಡರೂ, ಸ್ವಭಾವಜನ್ಯ ವಾದ ಶಕ್ತಿಯಿಂದ ರಾಜಪೂಜ್ಯತೆಯನ್ನು ಪಡೆಯಿತು ತದನಂತರ ದುರಾಚಾರಗಳೆಲ್ಲ ತೊಲಗಿ, ಸದಾಚಾರವು ಸುವ್ಯವಸ್ಥೆಗೊಳಗಾಗಿ, ಒಮ್ಮುಖವಾದ ಸನ್ಮಾರ್ಗವೇರ್ಪಟ್ಟು, ಪ್ರೌಢವಾದ ವ್ಯಕ್ತಿತ್ವದಿಂದ ಅದು ರಾರಾಜಿಸಿತು. ಈ ಸದ್ಗುಣಗಳ ಸಂಘಟನೆಗೆ ಹದಿಮೂರನೆಯ ಶತಮಾನದಲ್ಲಿ ಅಡಚಣೆಗಳೊದಗಿದರೂ ಹದಿನಾಲ್ಕ-ಹದಿನೈದನೆಯ ಶತಮಾನಗಳಲ್ಲಿ ಅವು ಪರಿಹಾರವಾಗಿ, ಆ ಕಾಲವು ಅದರ ಶುಕ್ರಮಹರ್ದಶೆಯ ಕಾಲವಾಯಿತೆನ್ನಬಹುದು.

ವೀರಶೈವದ ಮುಖ್ಯ ಧರ್ಮಗಳಿಂದ ಅದರ ಉಗಮ ಮತ್ತು ಪ್ರಗತಿಯ ಮೆಟ್ಟಲು ಗಳನ್ನು ಅದರ ಮಹೋನ್ನತಿಯವರೆಗೂ ಗುರುತಿಸಬಹುದಾದರೂ, ಕೆಲವರು ಹನ್ನೆರಡನೆಯ ಶತಮಾನಕ್ಕೆ ಹಿಂದೆ ಅದರ ವ್ಯಕ್ತಿತ್ವವೇ ಕಂಡುಬರುವುದಿಲ್ಲವೆನ್ನುವರು. ಈ ಅಭಿಪ್ರಾಯ ದವರು ಈಚೆಗೆ ಕಡಿಮೆಯಾಗುತ್ತಿದ್ದರೂ, ಪ್ರೊಫೆಸರ್ ಸಾಖರೆಯವರಂತಹವರ ಅಭಿಪ್ರಾಯ ಗಳಿಂದ ಹಲವರು ತಪ್ಪುದಾರಿಯನ್ನು ಹಿಡಿದು, ಶ್ರೀ ಬಸವೇಶ್ವರರಿಂದಲೇ ಈ ಮತವು ಸ್ಥಾಪಿಸಲ್ಪಟ್ಟಿತೆನ್ನುವುದುಂಟು. ಈ ಅಭಿಪ್ರಾಯಗಳನ್ನರಿತೇ 'ವೀರಶೈವ' ತ್ರೈಮಾಸಿಕದ

ಸಂಪಾದಕರು ಬಸವಾದಿ ಪ್ರಮಥರ ಕಾಲಕ್ಕೆ ಮೊದಲು ಇದರ ಸ್ವರೂಪವು ಹೇಗಿದ್ದಿತು ಎಂಬ ಪ್ರಶ್ನೆಯನು ಎತ್ತಿರುವರು. ಬಸವಾದಿ ಪ್ರಮಥರ ಕಾಲಕ್ಕೆ ಮೊದಲು ವೀರಶೈವ ಧರ್ಮ ವಿದ್ದಿತೆಂಬ ವಿಚಾರವನ್ನು ವೀರಶೈವ ಮತತತ್ವಗಳ ದೃಷ್ಟಿಯಿಂದ ವಿವೇಚಿಸುವ ಮೊದಲು, ವೀರಶೈವ ಪದದ ವ್ಯುತ್ಪತ್ತಿ ಮತ್ತು ಅದು ಯಾವ ಕಾಲದಿಂದ ಪ್ರಚಾರದಲ್ಲಿದೆ ಈ ಮೊದಲಾದ ಪ್ರಶ್ನೆಗಳನ್ನು ವಿವೇಚಿಸಲಾಗುವುದು. ಏಕೆಂದರೆ ಇದರಿಂದಲೂ ವೀರಶೈವದ ಉಗಮ-ಪ್ರಗತಿ ಗಳ ಚರಿತ್ರೆಯ ಮೇಲೆ ಬೆಳಕು ಬೀಳುವುದು.

## ಮತದ ಹೆಸರುಗಳಿಂದ ಅದರ ಪ್ರಾಚೀನತೆಯಮೇಲೆ ಬೆಳಕು

ವೀರಶೈವ, ವೀರಮಾಹೇಶ್ವರ, ಜಂಗಮ, ಲಿಂಗಿ, ಲಿಂಗಾಯತ ಮೊದಲಾದ ಹೆಸರು ಗಳಿಂದ ಈ ಮತದವರನ್ನು ಕರೆಯುತ್ತಾರೆ. ಮೊದಲ ಮೂರು ಹೆಸರುಗಳು ಬಹುಮಟ್ಟಿಗೆ ಶಾಸ್ತ್ರಗ್ರಂಥಗಳಲ್ಲಿ ಉಪಯೋಗಿಸಲ್ಪಡುತ್ತವೆ; ಜಂಗಮ, ಲಿಂಗಿ, ಲಿಂಗಾಯತವೆಂಬ ಪದಗಳು ಜನಸಾಮಾನ್ಯರಿಂದ ಉಪಯೋಗಿಸಲ್ಪಡುವ ಪದಗಳು. ವೀರಶೈವವು ಹನ್ನೆರಡನೆಯ ಶತಮಾನದ ಸುಮಾರಿನಲ್ಲಿ ಸುಧಾರಿಸಲ್ಪಟ್ಟು ರೂಪುಗೊಂಡಾಗ ರೂಪಿಸಲ್ಪಟ್ಟ ಪದಗಳಲ್ಲಿ ಲಿಂಗಾಯತ ಪದವು ಒಂದು. ಆ ಮೊದಲು ಲಿಂಗವುಳ್ಳವನು ಎಂಬ ಅರ್ಥವುಳ್ಳ ಲಿಂಗಿ ಪದವು ಸಾಕಾಗಿದ್ದಿತು. 'ಲಿಂಗಾಯತ' ಪದಕ್ಕೆ ನಾನಾ ರೀತಿಯಲ್ಲಿ ಅರ್ಥಮಾಡುವರು. ಬಾಗಾಯತ, ಪಂಚಾಯತ ಮೊದಲಾದ ಪದಗಳಂತೆ ಇದೂ ಒಂದು ಪದವೆನ್ನುವುದೂ ಉಂಟು. ಆದರೆ ಆಯತ, ಸ್ವಾಯತ, ಸನ್ನಿಹಿತವೆಂಬ ಪದಗಳು ವಚನಕಾರರಲ್ಲಿ ವಿಶೇಷಾರ್ಥ ದಲ್ಲಿ ಉಪಯೋಗಿಸಲ್ಪಟ್ಟವೆ. ಶಿಷ್ಯನ ಚಿತ್ಕಲೆಯನ್ನು ಲಿಂಗದಲ್ಲಿ ವಿಧ್ಯುಕ್ತಕ್ರಮದಿಂದ ಆಹ್ವಾನಿಸಿ ಗುರುವು ಶಿಷ್ಯನಿಗೆ ಆ ಲಿಂಗದ ಸಂಬಂಧವನ್ನುಂಟುಮಾಡಿದಾಗ ಆತನು ಲಿಂಗಾಯತನಾಗುವನು; ಇದು ಆಯತ. ಅವನು ಪ್ರಾಣಲಿಂಗಾನುಸಂಧಾನವನ್ನು ಮಾಡ ಬಲ್ಲವನಾಗಲು ಲಿಂಗವು ಸ್ವಾಯತವಾಗುವುದು; ಅವನು ಭಾವಲಿಂಗಾನುಸಂಧಾನವನ್ನು ಮಾಡಲು ಬಲ್ಲವನಾಗಲು ಲಿಂಗವು ಸನ್ನಿಹಿತವಾಗುವುದು. ಲಿಂಗಾಯತ ಪದವು ವಚನ ಕಾರರಿಗಿಂತ ಹಿಂದೆ ಉಪಯೋಗವಾಗಿರುವುದು ಕಂಡುಬಂದಿಲ್ಲ. ಲಿಂಗವೇ ಚರಿಸುವುದೋ ಎಂಬಂತೆ "ಸರ್ವಭೂತಾತ್ಮ ಭೂತಾತ್ಮ"ರಾಗಿ ಚರಿಸುವ ಲಿಂಗಿಶ್ರೇಷ್ಠರೇ ಜಂಗಮರು. ವೀರಶೈವಶ್ರೇಷ್ಠರನ್ನು ವೀರಮಾಹೇಶ್ವರರೆಂದು ಕರೆಯುವುದು ರೂಢಿಯಲ್ಲಿದ್ದರೂ, ವೀರ ಶೈವರಿಗೂ ವೀರಮಾಹೇಶ್ವರರಿಗೂ ಇರುವ ಭೇದವು ಆಗಮಗಳ ಕಾಲದಿಂದಲೂ ಉಲ್ಲೇಖಿ ಸಲ್ಪಟ್ಟದೆ. ವಾಯವೀ ಸಂಹಿತೆಯ ಉತ್ತರಭಾಗದ ೩೩ನೆಯ ಅಧ್ಯಾಯದಲ್ಲಿ:

> ಶಿವಾಶ್ರಿತೇಷು ತೇ ಶೈವಾ ಜ್ಞಾನಯಜ್ಞ ರತಾ ನರಾಃ ।
> ಮಾಹೇಶ್ವರಾಃ ಸಮಾಖ್ಯಾತಾಃ ಕರ್ಮಯಜ್ಞ ರತಾ ಭುವಿ ॥

ಎಂದರೆ ವೀರಶೈವರು ಜ್ಞಾನಯಜ್ಞದಲ್ಲಿ ರತರಾಗಿರುವರೆಂತಲೂ, ಮಾಹೇಶ್ವರರು ಕರ್ಮ ಯಜ್ಞದಲ್ಲಿ ರತರಾಗಿರುವರೆಂತಲೂ ಹೇಳಿ, ಅವರಿಬ್ಬರಿಗೂ ವ್ಯತ್ಯಾಸವೇನೂ ಇಲ್ಲವೆಂದು ಮತ್ತೊಂದು ಶ್ಲೋಕದಲ್ಲಿ ಹೇಳಿದೆ. ಇವೇ ಶ್ಲೋಕಗಳೇ ಸಿದ್ಧಾಂತಶಿಖಾಮಣಿಯಲ್ಲಿಯೂ ಕಂಡುಬರುವುವು. ಈ ವ್ಯತ್ಯಾಸಗಳು ಈಗೇನೂ ಕಂಡುಬರುವುದಿಲ್ಲ. ಮೇಲೆ ಕಂಡ ಹೆಸರು ಗಳಲ್ಲಿ ಒಂದಾದ ವೀರಶೈವ ಪದದ ವಿವೇಚನೆಯನ್ನು ಮೊದಲು ಮಾಡಬಹುದು.

## 'ಶೈವ' ಪದದೊಡನೆ ಸೇರಿರುವ 'ವೀರ' ಪದದ ಸಂಕೇತ ಮತ್ತು ಪ್ರಾಚೀನತೆ

'ವಿ' ಎಂದರೆ ವಿದ್ಯಾ, 'ರ' ಎಂದರೆ ರಮಿಸುವುದು; 'ವೀರಶೈವ' ಎಂದರೆ ಶೈವವಿದ್ಯೆಯಲ್ಲಿ ರತನಾದವನು ಎಂದು ಪದದಲ್ಲಿರುವ ಅಕ್ಷರಗಳ ಸಹಾಯದಿಂದ ಅರ್ಥಮಾಡುವುದು ಹಿಂದಿನಿಂದ ಬಂದ ಪದ್ಧತಿಯಾಗಿದ್ದು, ಶಬಗಳ ವ್ಯುತ್ಪತ್ತಿಯನ್ನು ಅನುಸರಿಸಿ ಮಾಡಿದ ಅರ್ಥವಲ್ಲ. ಆದುದರಿಂದ 'ವೀರ' ಶಬ್ದಕ್ಕೆ ಇದಕ್ಕಿಂತಲೂ ಬೇರೆಯಾದ ಅರ್ಥವೇ ಸೂಕ್ತವೆಂದು ಕಾಣುತ್ತದೆ. ವೀರಶೈವದಲ್ಲಿನ ವೀರ ಪದವು ಶಿವನಲ್ಲಿ ಅವ್ಯಭಿಚರಿತವಾದ ನಿಷ್ಠೆಯ ದಾರ್ಢ್ಯವನ್ನು ಸೂಚಿಸುತ್ತದೆ. ಇದಕ್ಕೆ ಆಗಮಗಳಲ್ಲಿ ಆಧಾರವುಂಟು.

ಯಥಾ ವೀರೋ ರಣೇ ಶೂರೋ ವೀರಶೈವ ಮತೇ ತಥಾ ।
ಭಕ್ತ್ಯಾ ವೀರೋ ನವೈರೇಣ ನ ಬಲೇನ ಚ ಕಾರ್ಯತಃ ॥

ಪಾರಮೇಶ್ವರಾಗಮದಲ್ಲಿ ಹೀಗೆ ಹೇಳಿರುವುದಕ್ಕೆ ಅನುಸಾರವಾಗಿ, ವೀರಶೈವಧರ್ಮ ಶಿರೋಮಣಿಯಲ್ಲಿ:

ವೀರತ್ವಮಸ್ಯ ನ ಧನೇನ ನ ವಾ ಬಲೇನ ।
ನೋ ಕಾರ್ಯತಶ್ಚ ವಿಹಿತಂ ದೃಢ ಶಂಭು ಭಕ್ತ್ಯಾ ॥
ವೀರಸ್ತುರೀಯ ಇತಿ ಶಂಕರ ಭಾಷಣೇನ ।
ಶ್ರೀ ವೀರಶೈವ ಮತಗಾನ್ನಪರೋಸ್ತಿ ಕಶ್ಚಿತ್ ॥

ಎಂದು ಹೇಳಿದೆ. ಚಂದ್ರಜ್ಞಾನಾಗಮದ ಶ್ಲೋಕವಿದರಲ್ಲಿ ನಿಷ್ಠೆಯ ಅತಿರೇಕವನ್ನು ನೋಡಬಹುದು:

ಇಷ್ಟಲಿಂಗವಿಯೋಗೇ ವಾ ವ್ರತಾನಾಂ ವಾ ಪರಿಚ್ಯುತೌ ।
ತೃಣವತ್ ಪ್ರಾಣ ಸಂತ್ಯಾಗ ಇತಿ ವೀರವ್ರತಂ ಮತಂ ॥
ಭಕ್ತ್ಯುತ್ಸಾಹ ವಿಶೇಷೋಪಿ ವೀರತ್ವಮಿತಿ ಕಥ್ಯತೇ ।
ವೀರವ್ರತ ಸಮಾಯೋಗಾದ್ ವೀರಶೈವ ಪ್ರಕೀರ್ತಿತಂ ॥

ಇಷ್ಟಲಿಂಗವು ಕಳೆದುಹೋದರೆ ಪ್ರಾಣವನ್ನು ನಿರ್ಲಕ್ಷ್ಯವಾಗಿ ತ್ಯಾಗಮಾಡಬೇಕೆಂಬುದೇ ವೀರವ್ರತ. ಈ ಭಕ್ತ್ಯುತ್ಸಾಹ ವಿಶೇಷವೇ ವೀರತ್ವವೆಂದು ವಿಧಿಸಲಾಗಿದೆ. ಆತ್ಮಹತ್ಯವು ಪಾಪವು; ಅಲ್ಲದೆ ಈ ತೆರದ ವಿಧಿಯನ್ನು ನಡವಳಿಕೆಯಲ್ಲಿ ತರಲು ಕಷ್ಟವಾಗುವುದು—ಎಂಬ ಮಾತು ಬೇರೆ.

ಇಲ್ಲಿ ಗಮನಾರ್ಹವಾದ ಒಂದು ವಿಷಯವನ್ನು ಹೇಳಿ ಮುಂದುವರಿಯಬೇಕಾಗುವುದು. ವಚನಕಾರರು, ವೇದಗಳಲ್ಲಿ ವಿಧಿಸಿದ್ದರೂ ಹಿಂಸಾತ್ಮಕವಾದ ಯಜ್ಞಗಳನ್ನು ಹೇಗೆ ಖಂಡಿಸಿದರೋ, ಹಾಗೆಯೇ ಆಗಮಗಳಲ್ಲಿ ಒಪ್ಪಿತವಲ್ಲದ ವಿಷಯಗಳಿದ್ದರೆ, ಅವುಗಳನ್ನು ಖಂಡಿಸಲು, ಆಗಮಗಳಲ್ಲಿ ಅವರಿಗಿದ್ದ ಪ್ರೇಮವು ಅಡ್ಡಬರಲಿಲ್ಲ. ವಚನಶಾಸ್ತ್ರ ರಹಸ್ಯದಲ್ಲಿ ಮಾನ್ಯ ದಿವಾಕರರು ಹೇಳುವಂತೆ "ಆಗಮೋಕ್ತ ಆಚಾರಗಳ ಅಪಯೋಗದ ಅಥವಾ ಅತಿರೇಕದ ಮೂಲಕ ಸಮಾಜದಲ್ಲಿ ಬಳೆದ ಅನೇಕ ದೋಷಗಳನ್ನು ವಚನಕಾರರು ಒಳ್ಳೇ ನೇರವಾಗಿ ಬಲವುಳ್ಳ ಭಾಷೆಯಿಂದ ಖಂಡಿಸಿ ಕುಗ್ಗಿಸಿ ಆಗಮಗಳಿಗಿಂತ ಒಂದೆರಡು ಹೆಜ್ಜೆ ಮುಂದೆಯೇ ಹೋಗಿರುವರೆಂದು ಅನ್ನಬಹುದು." ಲಿಂಗವು ಕಳೆದುಹೋದರೂ ಪರಾತ್ಪರವಿದೆ;

ಅದರ ಕಳೆಯನ್ನು ಕೂಡಿಸಲು ಮಂತ್ರವಿದೆ; ಹಾಗೆ ಕೂಡಿಸಲು ಗುರುವಿದ್ದಾನೆ. ಆದುದರಿಂದ ಪ್ರಾಣಘಾತವನ್ನು ಮಾಡಿಕೊಳ್ಳುವುದರಿಂದ ಫಲವೇನು? ಈ ಅಭಿಪ್ರಾಯವನ್ನು ಈ ಕೆಳಗಿನ ವಚನದಲ್ಲಿ ಕಾಣಬಹುದು.

ಪ್ರತಿಯಿಲ್ಲದ ಲಿಂಗವು ಭಿನ್ನವಾಯಿತ್ತೆಂದು ತನುವಿನ ಮೇಲೆ ಶಸ್ತ್ರವನ್ನಿಕ್ಕಿಕೊಂಡು ಆತ್ಮಘಾತವ ಮಾಡಿಕೊಂಬ ದ್ರೋಹಿಯ ಮುಖವ ನೋಡಲಾಗದು. ಅದೆಂತೆಂದೊಡೆ ಮಂತ್ರಭಿನ್ನವಿಲ್ಲವಾಗಿ ಪೂಜೆ ಭಿನ್ನವಿಲ್ಲ; ಮಹಾ ಬಯಲೊಳಗಣ ಪ್ರಸಾದದ ಸಂಚವನರಿಯದೆ ಆತ್ಮಘಾತಕವ ಮಾಡುವ ನರಕಿಗಳನೇನೆಂಬೆನಯ್ಯಾ ಕೂಡಲಚೆನ್ನಸಂಗಮದೇವಾ.

ಈ ಹಿಂದೆ ಹೇಳಿದ ಚಂದ್ರಜ್ಞಾನಾಗಮವಾಕ್ಯವು, ವಚನಕಾರರಿಂದ ಖಂಡಿಸಲ್ಪಡುವುದಕ್ಕಿಂತ ಬಹಳ ಹಿಂದೆಯೇ ರಚಿತವಾಗಿದ್ದಿತೆಂಬುದೂ, ಖಂಡಿಸಲ್ಪಟ್ಟ ಆಚರಣೆಯು ನಡೆವಳಿಕೆಯಲ್ಲಿ ಬಂದಿದ್ದಿತೆಂಬುದೂ ವಚನದಲ್ಲಿನ ಖಂಡನೆಯ ಬಿಸಿಯಿಂದ ಸ್ಪಷ್ಟವಾಗುವುದು. ಇದರಿಂದಲೇ ವಚನಕಾರರಿಗಿಂತ ಹಿಂದೆಯೇ ವ್ಯವಸ್ಥಿತವಾದ ವೀರಶೈವ ಧರ್ಮವು ಪ್ರಚಾರದಲ್ಲಿ ಇದ್ದಿತೆಂಬುದು ಗೊತ್ತಾಗುತ್ತದೆ. ವೀರಶೈವ ಪದಕ್ಕೆ ಆಗಮದಲ್ಲಿ ಕೊಟ್ಟಿರುವ ಅರ್ಥದಿಂದಲೂ ಇದು ವ್ಯಕ್ತವಾಗುವುದು.

## ವೀರಭದ್ರನಿಂದ 'ವೀರ' ಪದವು 'ವೀರಶೈವ' ಪದಕ್ಕೆ ಸೇರಿಕೊಂಡಿತೆ?

ವೀರಶೈವರು ಜೈನರಂತೆ ಯಜ್ಞಯಾಗಗಳನ್ನು ಹಿಂಸಾತ್ಮಕವಾದುವೆಂದು ಖಂಡಿಸುವುದು ಬಹು ಹಿಂದಿನ ಸಂಪ್ರದಾಯ. ಶೈವರಾದ ಅಸುರರಲ್ಲಿ ಯಜ್ಞಧ್ವಂಸಕಾರ್ಯವು ಒಂದು ವ್ರತವಾಗಿತ್ತೆಂದು ಹೇಳಬಹುದು. ಶಿವನ ವಿರುದ್ಧವಾಗಿ ನಡೆದ ಒಂದು ಯಾಗವನ್ನು ಧ್ವಂಸ ಮಾಡಿದ ವೀರಭದ್ರನೇ ಪ್ರಥಮ ವೀರಶೈವನಾಗಿ, ಅವನಿಂದಲೇ ಈ ಮತಕ್ಕೆ ಈ ಹೆಸರು ಬಂದಿತೇನೊ! ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಯವರು "ವೀರಶೈವ" ತ್ರೈಮಾಸಿಕದ ೧೯೬೧ ನೆಯ ಜೂನ್ ಸಂಚಿಕೆಯಲ್ಲಿ ಪ್ರಕಟಿಸಿರುವ ಲೇಖನದ ಭಾಗವಿದು:

"ಪ್ರಮಥಗಣರಿಗೆ ನಂದಿ ಹೇಗೆ ಪ್ರಮುಖನೋ, ರುದ್ರಗಣರಿಗೆ ವೀರಭದ್ರನು ಹಾಗೆ ಪ್ರಮುಖ. ವೀರಭದ್ರನು ವೀರಶೈವ ಮೂಲಸಂಸ್ಥಾಪಕ, ಶೈವಸಂಸ್ಕೃತಿಯ ಉದ್ಧಾರಕ, ಪ್ರಸಾರಕ. ಈ ದಿಸೆಯಲ್ಲಿ ಅವನಿಗೆ ಸಹಾಯಕವಾಗಿದ್ದ ರುದ್ರಗಣ ಅಪರಿಮಿತವಾಗಿತ್ತು; ಅತಿಬಲವುಳ್ಳದ್ದಾಗಿತ್ತು.... ಅವರೆಲ್ಲರ ನೆರವಿನಿಂದ, ತನ್ನ ವಿಶೇಷವಾದ ವೀರಶ್ರೀಯಿಂದ ಶೈವಸಂಸ್ಕೃತಿಯನ್ನು ಭೂಲೋಕದಲ್ಲಿ ನೆಲೆನಿಲ್ಲಿಸಿದವನು ವೀರಭದ್ರನು. ಇದರ ಕುರುಹಾಗಿಯೇ ವೀರಶೈವವೆಂದು ಹೆಸರು ಬಂದಿರಲು ಸಾಕು. ಹೆಚ್ಚಳಿಕೆ ಬಂದಿರಬೇಕು.

"ದಕ್ಷಬ್ರಹ್ಮಾದಿಗಳೆಲ್ಲರೂ ಒಂದು ಕಾಲದಲ್ಲಿ ಈ ಲೋಕದ ಪುರುಷರು; ಐತಿಹಾಸಿಕ ವ್ಯಕ್ತಿಗಳು. ದಕ್ಷಬ್ರಹ್ಮನ ವಾಸಸ್ಥಳಗಳಲ್ಲಿ ಒಂದು, ಬೆಳಗಾಂವಿ ಜಿಲ್ಲೆಯಲ್ಲಿರುವ ಎಡೂರು ಎಂಬ ಹೆಸರಿನ ಊರು ಎಂದು, ಬಹುಕಾಲದಿಂದ ಬಂದ ಲೋಕರೂಢಿ. ಇಲ್ಲಿ ಇವನು ಶೈವ ವಿರುದ್ಧವಾಗಿ ವೈದಿಕ ಸಂಪ್ರದಾಯವನ್ನು ಬೆಳಸಲು ಹೆಣಗಿದನು. ಒಂದು ಮಹಾ ಯಾಗಕ್ಕೆ ಆತನು ಜಗತ್ತಿನ ಅರಸು ಮಕ್ಕಳನ್ನೆಲ್ಲ ಕರೆಸಿದನಂತೆ! ಮನು ಮುನಿಗಳೆಲ್ಲ

ಬಂದಿದ್ದರಂತೆ! ವೀರಭದ್ರನು ಆ ಯಾಗವನ್ನು ಧ್ವಂಸಮಾಡಿದನು. ವಿಜಯಶಾಲಿಯಾದ ವೀರಭದ್ರನ ವಿಗ್ರಹವು ಚಿರಸ್ಮಾರಕವಾಗಿ ಆ ಯಾಗಕುಂಡದಲ್ಲಿಯೇ ಪ್ರತಿಷ್ಠಿತವಾಗಿದೆ.... ವೀರಶಿವನಿಂದ ಬಂದ ಮತಕ್ಕೆ 'ವೀರಶೈವ'ವೆಂದು ಹೆಸರು ಬರುವುದರಲ್ಲಿ ಹೆಚ್ಚು ಔಚಿತ್ಯವಿದೆ; ಒಪ್ಪಿತವೂ ಆಗುತ್ತದೆ. ಇದರಿಂದಾಗಿ ವೀರಭದ್ರ ಎಂದರೆ ವೀರಶಿವನು. ವೀರಶೈವದ ಮೂಲಪುರುಷನಾಗಲು ಎಲ್ಲ ಬಗೆಯಲ್ಲಿಯೂ ಎಲ್ಲರಿಗಿಂತಲೂ ಹೆಚ್ಚು ಯುಕ್ತನಾಗಿದ್ದಾನೆ."

ಆಂಧ್ರ ದೇಶದ ೧೩ನೆಯ ಶತಮಾನದ ಶಾಸನವೊಂದರಲ್ಲಿ ಚೋಳ ದೇಶದಿಂದ ಬಂದ, ಜಟಾಧಾರಿಗಳಾದ, ಹತ್ತು ಜನ 'ವೀರಭದ್ರ'ರೆಂಬ ಗ್ರಾಮರಕ್ಷಕರು ಗ್ರಾಮ ರಕ್ಷಣೆಗಾಗಿ ಪ್ರಾಣವನ್ನು ಕೊಡಲು ಸಿದ್ಧರಾಗಿದ್ದರೆಂದೂ, ಅದಕ್ಕಾಗಿ ತಲೆಯನ್ನು ಕಡಿದುಕೊಳ್ಳುವುದಕ್ಕೂ, ಹೊಟ್ಟೆಯನ್ನು ಬಗೆದುಕೊಳ್ಳುವುದಕ್ಕೂ ಹಿಂಜರಿಯುತ್ತಿರಲಿಲ್ಲವೆಂದೂ ಹೇಳಿದೆ. ಇದು ಒಂದು ತರದ ಸತ್ಯಾಗ್ರಹವೆನ್ನಬಹುದು. ಧರ್ಮಪರಿಪಾಲನೆಗಾಗಿ ಪ್ರಾಣಬಿಡಲು ಸಿದ್ಧರಾದವರನ್ನು "ವೀರಭದ್ರ"ರೆಂದು ಕರೆಯುವ ಸಂಪ್ರದಾಯವು ವೀರಭದ್ರನ ವರ್ಚಸ್ಸನ್ನು ತೋರಿಸುತ್ತದೆ.

ವೀರಶೈವಕ್ಕೆ ವೀರಭದ್ರನೇ ಮೂಲವೆಂಬ ಪೂಜ್ಯ ಶ್ರೀಯವರ ಅಭಿಪ್ರಾಯವು ಸ್ಕಾಂದಪುರಾಣಾಂತರ್ಗತ ಕೇದಾರಖಂಡದಲ್ಲಿ ಕೆಳಗೆ ಕಂಡಂತೆ ಹೇಳಿರುವುದರಿಂದ ಪುಷ್ಟಿ ಹೊಂದುತ್ತದೆ:

ಕಥಿತಾಶ್ಶಂಕರೇಣೈವ ಲಿಂಗಸ್ಯಾರ್ಚನ ಸೂಚಕಾಃ
ಸಂತಿ ರುದ್ರೇಣ ಕಥಿತಾಃ ಶಿವಧರ್ಮಾಸ್ಸನಾತನಾಃ
ವೀರಭದ್ರೋ ಯಥಾರುದ್ರಸ್ತ್ವನ್ಯೇ ಚ ಗುರವಃ ಸ್ಮೃತಾಃ
ಗುರೋರ್ಜಾತಾಶ್ಚ ಗುರವೋ ವಿಖ್ಯಾತಾ ಭುವನತ್ರಯೇ
ಲಿಂಗಸ್ಯ ಮಹಿಮಾನಂತು ನಂದೀ ಜಾನಾತಿ ತತ್ವತಃ
ತಥಾ ಸ್ಕಂದೋಹಿ ಭಗವಾನನ್ಯೇ ತೇ ನಾಮಧಾರಕಾಃ
ಯಥೋಕ್ತಾಃ ಶಿವಧರ್ಮಾಹಿ ನಂದಿನಾ ಪರಿಕೀರ್ತಿತಾಃ
ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ
ಶವಸ್ಯೋಪರಿ ಲಿಂಗಂ ಚ ಧ್ರಿಯತೇ ಚ ಪುರಾತನೈಃ
ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವಿತಂ
ಏತೇ ಧರ್ಮಾಃ ಸುಪ್ರತಿಷ್ಠಾಃ ಶೈಲಾದೇನ ಪ್ರತಿಷ್ಠಿತಾಃ
ಧರ್ಮಃ ಪಾಶುಪತಃ ಶ್ರೇಷ್ಠಃ ಸ್ಕಂದೇನ ಪ್ರತಿಪಾದಿತಃ
ಸ್ಕಂದಾತ್ ತತ್‌ಸಮುಸುಪ್ರಾಪ್ತಮಗಸ್ತ್ಯೇನ ಮಹಾತ್ಮನಾ
ವೀರಮಾಹೇಶ್ವರಾ ಜ್ಞೇಯಾ ಪಾಪಕ್ಷಯಕರಾ ನೃಣಾಂ

ವೀರಶೈವ ಧರ್ಮವು ಸನಾತನವಾದುದೆಂದೂ, ಬದುಕಿರುವಾಗಲೂ ಮೃತರಾದಮೇಲೂ ಲಿಂಗವನ್ನು ಧರಿಸುವ ಈ ಲಿಂಗಧಾರಿಗಳನ್ನು ಪುರಾತನರೆಂದೂ ಈ ಆಧಾರದಲ್ಲಿ ಹೇಳಿರುವುದು ಗಮನಾರ್ಹವಾಗಿದೆ. ಸತ್ತಮೇಲೂ ಲಿಂಗಧರಿಸುವ ಲಿಂಗಧಾರಿಗಳನ್ನು ವಿಚಿತ್ರರಾದವರೆಂದು ಹೇಳಿರುವುದರಿಂದ ಇದನ್ನು ರಚಿಸಿದವರು ವೀರಶೈವೇತರರಾಗಿರಬೇಕು. ಶಿವನಿಂದಲೇ ಈ ಧರ್ಮವು ಉಪದೇಶಿಸಲ್ಪಟ್ಟಿದೆಂದು ಹೇಳಿರುವುದರಿಂದ ಶಿವನೇ ಇದಕ್ಕೆ ಪ್ರಥಮ ಗುರು. ಗುರುಪುತ್ರನು ಗುರುವೇ ಆದುದರಿಂದ ಶಿವಪುತ್ರನಾದ ವೀರಭದ್ರನೂ ಗುರುವೇ. ಹೀಗೆ ಹೇಳಿರುವುದರಿಂದ ವೀರಭದ್ರನಿಗೆ ವೀರಶೈವ ಧರ್ಮೋಪದೇಶದಲ್ಲಿ ಶಿವನನ್ನು ಬಿಟ್ಟರೆ

ಮೊದಲನೆಯ ಸ್ಥಾನವೇ ದೊರೆತಂತಾಯಿತು. ಆದುದರಿಂದಲೇ ಆತನು ಶ್ರೀ ಜಗದ್ಗುರು ರೇಣುಕ ಪೀಠದವರ ಪೂಜ್ಯಮೂರ್ತಿಯಾಗಿದ್ದಾನೆ. ಇದಲ್ಲದೆ ವೀರಭದ್ರನು ಗೋತ್ರಪುರುಷನೂ ಅಹುದು. ಮೇಲೆ ಕಾಣಿಸಿರುವ ಆಧಾರದಲ್ಲಿ ಪಾಶುಪತವೆನಿಸಿದ ಮತವಿದು ಸ್ಕಂದ ಪ್ರತಿಪಾದಿತವೆಂದೂ, ಅಗಸ್ತ್ಯರಿಗೆ ಇದು ಉಪದೇಶವಾಗಿದೆಯೆಂದೂ ಹೇಳಿದೆ. ಹಾಗೆಯೇ ಶಿಲಾದ ಪುತ್ರನಾದ ನಂದಿಗೂ ಈ ಮತ ತತ್ವವು ಚೆನ್ನಾಗಿ ತಿಳಿದಿದೆಯೆಂದೂ, ಈ ಮತವನ್ನು ಈತನು ಪ್ರತಿಪಾದಿಸಿದನೆಂದೂ ಹೇಳಿದೆ. ಆಚಾರ್ಯ ರೇಣುಕರಿಗೂ ವೀರಭದ್ರನಿಗೂ ಇರುವ ಸಂಬಂಧವೂ, ನಂದೀಶ್ವರನಿಗೂ ಬಸವೇಶ್ವರನಿಗೂ ಇರುವ ಸಂಬಂಧವೂ ಎಲ್ಲರಿಗೂ ತಿಳಿದ ವಿಷಯ. ವೀರಶೈವರಿಗೆ ವೀರಭದ್ರನ ಹಲಗೆಯ ನರ್ತನವೂ, ಅಗ್ನಿಕೊಂಡವೂ ರೋಮಾಂಚ ಕಾರಿಯಾದುವಾಗಿವೆ; ನಂದಿಯ ಧ್ವಜದ ಸಹಕಾರವು ಇವಕ್ಕೆ ಅಗತ್ಯ; ವೀರಶೈವವನ್ನು ಉದ್ಘಾಟಿಸಿದ ಇವರ ಸಂಬಂಧವು ಗಮನಾರ್ಹವಾಗಿದೆ.

ಶ್ರೀಕರಭಾಷ್ಯವು ಅಗಸ್ತ್ಯವೃತ್ತಿಯ ಆಧಾರದಮೇಲೆ ಬರೆಯಲ್ಪಟ್ಟಿರುವುದಾಗಿ ಆ ಭಾಷ್ಯದಲ್ಲಿ ಹೇಳಿದೆ. ರೇಣುಕಾದ್ಯಾಚಾರ್ಯರೂ ಬಸವಾದಿಪ್ರಮುಥರೂ ಖಿಲವಾಗಿದ್ದ ಈ ಶಿವಧರ್ಮವನ್ನು ಉದ್ಧರಿಸಲು ಈ ಲೋಕದಲ್ಲಿ ಅವತರಿಸಿದರೆಂಬ ಪುರಾಣದ ಮಾತು, ಬಹು ಹಿಂದೆಯೇ ವೀರಭದ್ರ–ಸ್ಕಂದ–ನಂದಿಗಳಿಂದ ಪ್ರಾರಂಭವಾದ ಮತವನ್ನು ಇವರು ಉದ್ಧಾರ ಮಾಡಿದರೆಂಬ ವೀರಶೈವರ ನಿಲುವನ್ನು ಸಮರ್ಥಿಸುತ್ತದೆ. ಸ್ಕಾಂದ ಪುರಾಣಾಂತರ್ಗತ ವಾದ ಕೇದಾರಖಂಡವು ರಚಿತವಾದಾಗಲೇ ಈ ಮತವು 'ಸನಾತನ'ವಾದುದೆಂದೂ, 'ಪುರಾತನ'ವಾದುದೆಂದೂ ನಂಬಲ್ಪಟ್ಟದ್ದುದು ಈ ಶ್ಲೋಕಗಳಿಂದ ವ್ಯಕ್ತವಾಗಿದೆ. ಆ ಕಾಲ ದಲ್ಲಿಯೇ ಲಿಂಗಧಾರಿಗಳನ್ನು 'ವೀರಮಾಹೇಶ್ವರರು' ಎಂದು ಕರೆದಿರುವುದು 'ವೀರ' ಪದವು ಈ ಧರ್ಮಕ್ಕೆ ಹಿಂದಿನಿಂದಲೂ ಉಪಯೋಗಿಸಲ್ಪಟ್ಟ ಪದವೆಂಬುದನ್ನು ತೋರಿಸುತ್ತದೆ.

## ವೀರಶೈವ ಪದದ ಮೂಲವು ಋಗ್ವೇದದಲ್ಲಿ

'ವೀರಶೈವ' ಪದದ ಪ್ರಾಚೀನತೆಯನ್ನು ಶ್ರೀ ಶಂ. ಬಾ. ಜೋಷಿಯವರು ವೇದಗಳ ಕಾಲಕ್ಕೆ ಒಯ್ಯುವರು. "ವೀರಶೈವರೆಂದು ಹೆಸರು ಬಂದ ಕಾರಣವು ಆವುದು?" ಎಂದು ಪ್ರಶ್ನೆಯನ್ನು ಹಾಕಿಕೊಂಡು 'ಶಿವರಹಸ್ಯ'ವೆಂಬ ಅವರ ಪುಟ್ಟ ಹೊತ್ತಗೆಯಲ್ಲಿ ಹೀಗೆ ಉತ್ತರ ಕೊಡುತ್ತಾರೆ: "ನನಗೆ ತಿಳಿದಮಟ್ಟಿಗೆ ಈ ಶಬ್ದದ ಮೂಲವು ಋಗ್ವೇದದಲ್ಲಿದೆ. ರುದ್ರನು ವೃಷಭನು, ಎಂದರೆ ವೀರನು. ಆದುದರಿಂದ ಆತನ ಉಪಾಸಕರೂ ವೀರರು; ಅದರಿಂದ ಈ ಹೆಸರು. ಹೀಗೆ ಬರಿಯ ತರ್ಕದಿಂದ ಇದನ್ನು ಎಣಿಕೆ ಹಾಕಬೇಕಾದುದಿಲ್ಲ.

> ಇಮಾ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರಭರಾಮಹೇ ಮತೀಃ ।
> ಯಥಾ ಶಮಸದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನನಾತುರಂ ॥

ಬಲಿಷ್ಟನೂ, ಜಟಾಧಾರಿಯೂ, ವೀರಪುತ್ರರನ್ನುಳ್ಳವನೂ ಆದ ರುದ್ರನನ್ನು ಕೊಂಡಾಡುವ; ಆದರಿಂದ ಈ ಊರಿನಲ್ಲಿ ಎರಡು ಕಾಲಿನವರ ಹಾಗೂ ನಾಲ್ಕು ಕಾಲಿನವರ ಕಲ್ಯಾಣವಾಗಿ ಎಲ್ಲರೂ ನಿರೋಗಿಗಳೂ ಪುಷ್ಟರೂ ಆಗುವರು.

"ಇದೊಂದೇ ಋಚೆಯಲ್ಲಿ ಅಲ್ಲ; ಇದರ ಮುಂದಿನ ಮಂತ್ರದಲ್ಲಿಯೂ, ಬೇರೆ ಮಂಡಲ ಗಳಲ್ಲಿಯೂ ರುದ್ರಶಿವನು ವೀರರ ತಂದೆ, ವೀರರ ಒಡೆಯ ಎಂಬ ಮಾತುಗಳು ಅಲ್ಲಲ್ಲಿ

ಬಂದಿವೆ. ಶಿವ (ರುದ್ರ) ನ ಪುತ್ರರು (ಶಿವಪುತ್ರರು) ಎಂದು ಗೌರವದಿಂದ ಹೇಳಿಕೊಳ್ಳುವ ಮತ್ತು ಆ ಬಗೆಯಾದ ದೃಢಶ್ರದ್ಧೆಯಿರುವ ಶಿವಭಕ್ತರಿಗೆ ಮಾತ್ರವಲ್ಲದೆ, ಬೇರೆ ಇನ್ನಾರಿಗೂ ವೀರ (ಶೈವ) ರೆಂಬ ಹೆಸರು ಸಮರ್ಪಕವಾಗಲಾರದು. ಕರ್ನಾಟಕದಲ್ಲಿಯೇ ಈ 'ವೀರ'ರು ರುದ್ರನ ಅನುಯಾಯಿಗಳಾದ ರುದ್ರೀಯರು ಇರುತ್ತಿರುವುದರಿಂದ ಈ ನಾಡಿನ ಜನಾಂಗಗಳ ವೇದಕಾಲದ ಐತಿಹ್ಯವನ್ನು ಅರಿತುಕೊಳ್ಳಲು ಈ ಶಬ್ದವು ಬಹಳ ಉಪಯುಕ್ತವಾಗಿದೆ. ವೀರ ಬಣಂಜುಗಳು, ವೀರ ಪಂಚಾಳರು ಎಲ್ಲರೂ ರುದ್ರೀಯರೇ."

## ವೀರಬಣಂಜುಗಳು

ಶ್ರೀ ಶಂ. ಬಾ. ಜೋಶಿಯವರು "ಬಣಂಜುಗಳು ವೇದಕಾಲದ ಫಣಿಗಳ ಪೀಳಿಗೆಯವರಾಗಿರಬೇಕೆಂದು ನನಗೆ ಇತ್ತೀಚಿನ ವಿಚಾರದಲ್ಲಿ ದೃಢವಾಗುತ್ತಲಿದೆ" ಎಂದು ಶಿವರಹಸ್ಯದ ಕೊನೆಯ ಟಿಪ್ಪಣಿಯಲ್ಲಿ ಹೇಳಿದ್ದಾರೆ. ವೇದಗಳ ಕಾಲದಲ್ಲಿ ವೀರಶೈವರ ನೆಲೆಯನ್ನು ಕಾಣಲು 'ಶಿವರಹಸ್ಯ' ಗ್ರಂಥವನ್ನು ಬರೆದ ಇವರ ದೃಷ್ಟಿಯಲ್ಲಿ ಇರುವವರು, ವಾಣಿಜ್ಯವೇ ಮುಖ್ಯ ವೃತ್ತಿಯಾಗುಳ್ಳ ವೀರಶೈವ ಬಣಜಿಗರೇ ಎನ್ನಬಹುದು. ಏನೇ ಆಗಲಿ, ಇವರ ವಿಚಾರಧಾರೆಯು ವೀರ ಮತ್ಸ್ಯರ ಕಡೆಗೆ ಗಮನವನ್ನು ಸೆಳೆಯುತ್ತದೆ.

## ಶೈವರಾದ ವೀರಮತ್ಸ್ಯರು

ಈ ವಿಚಾರವು ವೇದಗಳ ಕಾಲಕ್ಕಿಂತಲೂ ಹಿಂದೆ ಇದ್ದ, ಮಹೆಂಜೊದಾರೋ ಮತ್ತು ಹರಪ್ಪ ಕಾಲದ ನಾಗರಿಕತೆಯ ಕಡೆಗೆ ಒಯ್ಯುತ್ತದೆ. ಆ ಕಾಲದಲ್ಲಿನ ಜನಾಂಗವು ಆರ್ಯರಿಗಿಂತಲೂ ಉತ್ತಮ ತರದ ನಾಗರಿಕರಾಗಿದ್ದರೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಶ್ರೀಯುತ ಎ. ಪಿ. ಕರ್ಮರ್‌ಕರ್ ಅವರ *Religions of India* ಗ್ರಂಥದ ೧೪ ನೆಯ ಪುಟದಲ್ಲಿ ಹೇಳಿದಂತೆ: "The *Panis* were a mighty merchant tribe and their daring deeds are recorded in the history of the phoenicians abroad and *Vanics* of India". ಅದೇ ಗ್ರಂಥದ ೭ ನೆಯ ಪುಟದಲ್ಲಿ ಹೇಳಿದಂತೆ: "It should be noted in this connection that the early tribes of the *Minas* and the *Panis* actively travelled abroad and spread the indigenous culture of India." ಫಣಿ ಮತ್ತು ಮೀನಾ ಅಥವಾ ಮತ್ಸ್ಯರೆಂದು ಕರೆಯಲ್ಪಡುವ ಜನರು ವೇದಕಾಲಕ್ಕೂ ಹಿಂದೆ ಇದ್ದ ಸಿಂಧೂ ನದಿಯ ತೀರದ ನಾಗರಿಕತೆಯ ಕಾಲದ ಜನರು. ಆ ಕಾಲದ ಮುಖ್ಯ ದೇವರೆಂದರೆ ಶಿವನು. ಮೇಲೆ ಹೇಳಿದ ಗ್ರಂಥದ 39 ನೆಯ ಪುಟದಲ್ಲಿ ಹೇಳಿದಂತೆ: "The inscriptions relate that the Supreme Being exists by itself. The name of the Supreme Being is Siva". ಈ ಮತ್ಸ್ಯ ಜನಾಂಗವು ರಾಮಾಯಣ ಮಹಾಭಾರತ ಕಾಲದವರೆಗೂ ಉಳಿದುಬಂದಿತ್ತು. ಶೈವರಾದ ಈ ಮತ್ಸ್ಯ ಜನಾಂಗಕ್ಕೆ ವೀರಮತ್ಸ್ಯರೆಂದು ಕರೆಯಲಾಗುತ್ತಿತ್ತೆಂದು ಕಂಡುಬಂದಿದೆ. ರಾಮಾಯಣದಲ್ಲಿ (II, ೭೧, ೫) ಭರತನು ರಾಜಗೃಹದಿಂದ ತೆರಳಿ, ನದೀ ನದ ಪರ್ವತಾರಣ್ಯಗಳನ್ನು ದಾಟಿ ಮುಂದುವರಿದುದನ್ನು ಹೀಗೆ ಹೇಳಿದೆ:

ಸರಸ್ವತೀಂ ಚ ಗಂಗಾಂ ಚ ಯುಗ್ಮೇನ ಪ್ರತಿಪದ್ಯ ಚ
ಉತ್ತರಾನ್ ವೀರಮತ್ಸ್ಯಾನಾಂ ಭಾರುಂಡಂ ಪ್ರಾವಿಶದ್‌ವನಂ

ಈ ವಿಷಯದಲ್ಲಿ ಕರ್ಮರ್‌ಕರ್ ಅವರ ಅಭಿಪ್ರಾಯವು ಹೀಗಿದೆ:

"The above passage is important from various points of view. Firstly, it helps us to locate the country of the *Matsyas* roundabout the Harappa site. The word *Bharunda* (or even *Bherunda, Bheranda, Bharunda*, etc.,) is also the name of Siva (Wilson's interpretation, *cf.*, Monier William's *Sanscrit–English Dictionary*). We doubt whether it can mean the same forest-styled as *Nyagrodharanya* in the Skanda Purana in which Siva is said to have played the fierce *Tandava* dance along with Kali. Peculiarly enough the Mohenjo Daro inscriptions describe that an image of Siva in his *Tandava* posture was installed in a forest."

ಇದರ ಮಥಿತಾರ್ಥವೇನೆಂದರೆ: 'ವೀರ' ಪದವು 'ಶೈವ'ಕ್ಕೆ ಬಹು ಪುರಾತನ ಕಾಲದಿಂದಲೂ ಸಂಬಂಧಪಟ್ಟಿರುತ್ತದೆ, ಎಂಬುದೇ.

## ವೀರಶೈವವೂ, ಭೇರುಂಡವೂ

ಮೇಲೆ ಹೇಳಿದಂತೆ ಬಹು ಹಿಂದಿನಿಂದಲೂ ಉಲ್ಲೇಖಿಸಲ್ಪಡುತ್ತಿರುವ ಭೇರುಂಡ ಪಕ್ಷಿಗೂ ವೀರಶೈವಕ್ಕೂ ಸಂಬಂಧವಿರುವಂತಿದೆ. ಇದು ಸಂಶೋಧನಾರ್ಹವಾದ ವಿಷಯವು. ಕೆಳದಿಯ ದೇವಸ್ಥಾನದಲ್ಲಿರುವ ಶಿವಲಿಂಗವನ್ನು ಈಗ ಬ್ರಾಹ್ಮಣ ಪೂಜಾರಿಗಳು ಪೂಜಿಸುತ್ತಾರೆ. ಆದರೆ ಆ ದೇವಸ್ಥಾನದಲ್ಲಿಯೇ ಇರುವ ವೀರಭದ್ರ ದೇವರನ್ನು ವೀರಶೈವ ಪೂಜಾರಿಗಳು ಪೂಜಿಸುತ್ತಾರೆ. ಈ ವೀರಭದ್ರ ದೇವರ ಗರ್ಭಗುಡಿಯ ಮುಂದಿನ ಮೇಲ್ಛಾವಣಿಯಲ್ಲಿ ಒಂದು ಸುಂದರವಾದ ಭೇರುಂಡಪಕ್ಷಿಯ ವಿಗ್ರಹವಿದೆ. ಹೀಗೆಯೇ ವೀರಶೈವ ದಂಡನಾಯಕನಾದ ವಿರುಪಣ್ಣನು ಕಟ್ಟಿಸಿದ ಲೇಪಾಕ್ಷಿ ದೇವಾಲಯದ ಪಕ್ಕದಲ್ಲಿರುವ ದೊಡ್ಡ ಬಸವನ ಪ್ರತಿಮೆಯ ಕೊರಳಿನಲ್ಲಿ ಭೇರುಂಡಪಕ್ಷಿಯ ಆಕಾರದ ಪದಕವು ಕೆತ್ತಲ್ಪಟ್ಟಿದೆ. ಬಳ್ಳಿಗಾವಿಯು ಪ್ರಸಿದ್ಧ ವೀರಶೈವ ಕ್ಷೇತ್ರ. ಅಲ್ಲಿ ಒಂದು ಭೇರುಂಡಪಕ್ಷಿಯಿರುವ ಕಂಬವಿದೆ. ಅದೇ ಸ್ಥಲದವರಾದ ಕೈ॥ ಚೆನ್ನಮಲ್ಲಿಕಾರ್ಜುನರು ಆ ಕಂಬದ ಕೆಳಗಿನ ಜಗುಲಿಯಮೇಲೆ ಬಸವೇಶ್ವರ ದೇವರು ನ್ಯಾಯತೀರ್ಮಾನ ಮಾಡುತ್ತಿದ್ದರೆಂದು ಪ್ರತೀತಿ ಇರುವುದಾಗಿ ಬರೆದಿದ್ದಾರೆ. ಮೈಸೂರರಸರಿಗೆ ರಾಜ್ಯ ಲಾಭವಾಗುವಂತೆ ಸಹಾಯಮಾಡಿದ ಜಂಗಮನ ಇಚ್ಛೆಯಂತೆ ಅವರು ಕಾವಿಯ ಪತಾಕೆಯನ್ನು ರಾಜಚಿಹ್ನೆಯಾಗಿ ಉಪಯೋಗಿಸಲಾರಂಭಿಸಿದುದು ಚಾರಿತ್ರಿಕ ವಿಷಯ. ಇದರಲ್ಲಿ ಭೇರುಂಡಪಕ್ಷಿಯ ಚಿತ್ರವಿದೆ. ವೀರಶೈವ ಕವಿಗಳಲ್ಲಿ ಪ್ರಸಿದ್ಧನಾದ ರಾಘವಾಂಕನಿಗೆ 'ಉಭಯಕವಿ ಶರಭ ಭೇರುಂಡ' ಎಂಬ ಬಿರುದಿದೆ. ಕ್ರಿ.ಶ. ೧೨೨೬ ರ ಬೆಣಕಲ್ಲು ನಂ. ೩೪೩ ನೆಯ ಶಾಸನದಲ್ಲಿ "ಸರಸ್ವತೀ ಲಲಾಟ ಪಟ್ಟರುಂ, ಸಮವಾದಿ ಶರಭ ಭೇರುಂಡರುಂ" ಎಂದು ಗುರುವಿನ ವರ್ಣನೆಯಿದೆ. ಹೀಗೆ ವೀರಶೈವಕ್ಕೆ ವೀರಪದವೂ, ಭೇರುಂಡಚಿಹ್ನೆಯೂ ಬಹು ಪುರಾತನ ಕಾಲದಿಂದ ಬಂದ ಸಂಬಂಧವೆಂದು ತೋರುವುದು.

ವೀರಶೈವ, ವೀರಮಾಹೇಶ್ವರ ಪದಗಳ ವ್ಯುತ್ಪತ್ತಿ ಮತ್ತು ಪ್ರಾಚೀನತೆಗಳನ್ನು ಆಮೂಲಾಗ್ರವಾಗಿ ವಿಚಾರಿಸಲಾಯಿತು. ಇದರಿಂದ ವೀರಶೈವ ಮತದ ಪ್ರಾಚೀನತೆಯೂ ವ್ಯಕ್ತವಾಯಿತು. ಈ ಪದಗಳು ಹಿಂದೆ ಹೇಳಿದಂತೆ ಈ ಮತದ ಆಧಾರಗ್ರಂಥಗಳಲ್ಲಿಯೇ ಹನ್ನೆರಡನೆಯ

ಶತಮಾನದ ಹಿಂದೆ ಬಹುಮಟ್ಟಿಗೆ ಉಪಯೋಗಿಸಲ್ಪಡುತ್ತಿದ್ದು, ಆ ಕಾಲದಲ್ಲಿ ವೀರಶೈವ ಸಂಘಟನೆಯಾದ ಹುರುಪಿನಲ್ಲಿ ವ್ಯಾವಹಾರಿಕವಾಗಿಯೂ ಅವು ಉಪಯೋಗಿಸಲ್ಪಡಲು ಪ್ರಾರಂಭವಾಯಿತು. ಉಳಿದ ಹೆಸರುಗಳಲ್ಲಿ ಲಿಂಗಾಯತ ಪದವು ಈಚಿನದು; ಲಿಂಗಿ, ಜಂಗಮ ಪದಗಳು ಹಿಂದೆ ಹೆಚ್ಚಿಗೆ ಬಳಕೆಯಲ್ಲಿದ್ದವು. ಇವನ್ನು ಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ ಕಾಣಬಹುದು ಎಂಬುದು ಮುಂದೆ ವ್ಯಕ್ತವಾಗುವುದು. ಇನ್ನು ವೀರಶೈವದ ಪ್ರಾಚೀನತೆಯನ್ನು ವ್ಯಕ್ತಪಡಿಸುವ ಕೆಲವು ಆಗಮ ಆಧಾರಗಳನ್ನು ಕೊಡಲಾಗುವುದು.

## ಆಗಮಾದಿ ಆಧಾರಗಳು

ಈ ಹಿಂದೆಯೇ ವೀರಶೈವಮತ ವಿಷಯಕವಾದ ಕೆಲವು ಆಗಮಾಧಾರಗಳನ್ನು ಕೊಟ್ಟಿದೆ. ವೀರಶೈವ ಎಂಬ ಪದವಿರುವ ಕೆಲವು ಆಧಾರಗಳನ್ನೂ ಲಿಂಗಧಾರಣೆಯ ವಿಷಯವಾಗಿರುವ ಕೆಲವು ಆಧಾರಗಳನ್ನೂ ಉಲ್ಲೇಖಿಸಿ, ಈ ವಿಷಯವನ್ನು ಮುಗಿಸಬಹುದು.

ಸಾಮಾನ್ಯ ಶೈವಂ ಪ್ರಥಮಂ, ಮಿಶ್ರಶೈವಂ ತತಃ ಪರಂ
ಶುದ್ಧ ಶೈವಂ ತತೋ ಜ್ಞೇಯಂ ವೀರಶೈವಂ ತತಃ ಪರಂ—**ಸೂಕ್ಷ್ಮಾಗಮ**

ಸಾಮಾನ್ಯಂ ಮಿಶ್ರಕಂ ಚೈವ ಶುದ್ಧಂ ವೀರಂ ಯಥಾ ಕ್ರಮಂ—**ವಾತುಲಾಗಮ**

ವೀರಶೈವ ಕ್ರಮಃ ಪ್ರೋಕ್ತಃ ಪ್ರಾಯಶ್ಚಿತ್ತ ವಿವರ್ಜಿತಃ
ಯದ್ದತ್ತಂ ಗುರುಣಾಲಿಂಗಂ ಅವಧಾನೇನ ಧಾರಯೇತ್—**ಕಾಮಿಕಾಗಮ**

ಮೂರ್ಧ್ನಿ ಕಂಠೇ ಭುಜೇ ಹಸ್ತೇ ಹೃದ್ದೇಶೇ ನಾಭಿಮಂಡಲೇ
ವಿಶೇಷಮೇಕ ದೇಶೇತು ಧಾರಯೇಚ್ಚೈವ ಲಿಂಗಕಂ—**ವಾತುಲಾಗಮ**

ಶ್ರೀಯುತ ಎಸ್. ಕೆ. ದಾಸ್‌ರವರ *Sakti or Divine Power* ಗ್ರಂಥದ ೨೮೬ನೆಯ ಪುಟದಲ್ಲಿ ಹೇಳಿದಂತೆ ಪೂನಾದಲ್ಲಿ ಮುದ್ರಿತವಾದ ಸೂತಸಂಹಿತೆಯ ೮ನೆಯ ಅಧ್ಯಾಯದ ೩೧ನೆಯ ಶ್ಲೋಕದಲ್ಲಿ ತ್ರಿಪುಂಡ್ರ ಲಿಂಗಧಾರಣೆಗಳ ವಿಷಯವಿರುವ ಶ್ಲೋಕವಿದು:

ಶಿವಾಗಮೋಕ್ತಾಶ್ರಮ ನಿಷ್ಠ ಮಾನವಃ ।
ತ್ರಿಪುಂಡ್ರ ಲಿಂಗಂತು ಸದೈವ ಧಾರಯೇತ್ ॥

ಸನತ್ಕುಮಾರಸಂಹಿತೆ, ಶಂಕರಸಂಹಿತೆ ಮತ್ತು ವಾಯವೀಯಸಂಹಿತೆಯಲ್ಲಿನ ಆಧಾರಗಳು ವೀರಶೈವರಿಗೆ ಹೆಚ್ಚು ಪ್ರಿಯವಾಗಿವೆ. ೭ನೆಯ ಶತಮಾನದಲ್ಲಿ ಬರೆದ ಸೂತಸಂಹಿತೆಯ ಒಂದು ಪ್ರತಿಯು ನೇಪಾಳದಲ್ಲಿ ಪ್ರೊಫೆಸರ್ ಬೆಂಡಾಲರಿಗೆ ಸಿಕ್ಕಿರುವುದೆಂದು ಶ್ರೀಯುತ ದಾಸರು ಹೇಳಿದ್ದಾರೆ. ಹಿಂದೆ ಹೇಳಿದಂತೆ ಬಸವಾದಿ ಪ್ರಮಥರು ತಾವು ಹೊಸ ಮತವನ್ನು ಸ್ಥಾಪಿಸುವುದಾಗಿ ಹೇಳುವುದಿಲ್ಲ. ಅವರೇ ಆಗಮಾಧಾರಗಳನ್ನು ವಚನಗಳಲ್ಲಿ ಕೊಟ್ಟಿದ್ದಾರೆ.

ವೇದಾದಿ ನಾಮ ನಿರ್ನಾಮಂ, ಮಹತ್ವಂ ಮಹದೀಶ್ವರಂ ।
ಗುರೂಕ್ತಮಂತ್ರಮಾರ್ಗೇಣ ಇಷ್ಟಲಿಂಗಂ ತು ಶಂಕರಿ ॥

ಇವೇ ಮೊದಲಾದ ಆಗಮಾಧಾರಗಳನ್ನು ಬಸವೇಶ್ವರರ ವಚನಗಳ ಮಧ್ಯದಲ್ಲಿ ನೋಡಬಹುದು.

**"ಶಿವಲಿಂಗ ಧರೋ ವಿಪ್ರೋ ವಿಪನ್ನಸ್ತಂ ನ ದಾಹಯೇತ್"** ಎಂದರೆ ಲಿಂಗ ಧಾರಿಯಾದ ವಿಪ್ರನು ಸತ್ತರೆ ಅವನ ದೇಹವನ್ನು ಸುಡಬಾರದೆಂದು ಚಂದ್ರಜ್ಞಾನಾಗಮದಲ್ಲಿ

ಹೇಳಿದೆ. ಈ ಆಧಾರವು ಬ್ರಾಹ್ಮಣ್ಯಕ್ಕೆ ಪ್ರಾಧಾನ್ಯವನ್ನು ಕೊಡದ ವಚನಕಾರರ ಕಾಲದನಂತರ ಹುಟ್ಟಿದ್ದರೆ 'ವಿಪ್ರ' ಪದವು ಉಪಯೋಗಿಸಲ್ಪಡುತ್ತಿರಲಿಲ್ಲ. ಹಾಗೆಯೇ ಲಿಂಗವು ಕಳೆದು ಹೋದರೆ ಪ್ರಾಣವನ್ನು ಕಳೆದುಕೊಳ್ಳಬೇಕೆಂಬ ಆಗಮಾಧಾರವನ್ನು ವಚನಕಾರರು, ಹಿಂದೆ ಹೇಳಿದಂತೆ, ಖಂಡಿಸಿರುವುದನ್ನು ನೋಡಿದರೆ ಅದೂ ಸಹಾ ಹಿಂದಿನದಾಗಿರಬೇಕಷ್ಟೆ. ಆದುದರಿಂದ ವೀರಶೈವವು ಹನ್ನೆರಡನೆಯ ಶತಮಾನಕ್ಕೆ ಹಿಂದಿನಿಂದಲೂ ಅಸ್ತಿತ್ವದಲ್ಲಿತ್ತೆಂಬುದರಲ್ಲಿ ಸಂದೇಹವಿಲ್ಲ.

## ವೀರಶೈವವೂ, ವೈದಿಕ ಪಾಶುಪತವೂ

ಶೈವ, ಪಾಶುಪತ, ಮಾಹೇಶ್ವರ ಮೊದಲಾದ ಕೆಲವು ಪದಗಳು ಶಿವಾರಾಧಕ ಜನಾಂಗಗಳಿಗೆ ರೂಢಿಯಾದ ಹೆಸರುಗಳಾಗಿದ್ದವು. ಇವರಲ್ಲಿ ಅನೇಕ ಪ್ರಭೇದಗಳಿದ್ದವು. ಶ್ರೀ ಶಂಕರಾಚಾರ್ಯರ ಸೂತ್ರಭಾಷ್ಯದಲ್ಲಿ "ಪತ್ಯುರಸಾಮಂಜಸ್ಯಾತ್" ಎಂಬ ಅಧಿಕರಣದಲ್ಲಿ ಪಾಶುಪತ ಮತವನ್ನು ಖಂಡಿಸಿದ್ದಾರೆ. ಅಪ್ಪಯ್ಯ ದೀಕ್ಷಿತರು ಅವರ ಕಲ್ಪತರುವಿನಲ್ಲಿ ಇದು ಅವೈದಿಕ ಪಾಶುಪತರಿಗೆ ಅನ್ವಯಿಸುವುದೇ ಹೊರತು, ವೈದಿಕ ಪಾಶುಪತರಿಗೆ ಇದು ಅನ್ವಯಿಸುವುದಿಲ್ಲ ವೆಂದು ಹೇಳಿದ್ದಾರೆ. ಇದನ್ನನುಸರಿಸಿ ಚೆನ್ನವೃಷಭೇಂದ್ರಸ್ವಾಮಿಗಳು ಅವರ ವೀರಶೈವ ಸರ್ವೋತ್ಕರ್ಷ ದೀಪಿಕೆಯಲ್ಲಿ, ಪಾಶುಪತರಲ್ಲಿ ವೈದಿಕ-ಅವೈದಿಕ ಪಾಶುಪತರಿರುವರೆಂದೂ, ವೈದಿಕ ಪಾಶುಪತರೇ ವೀರಶೈವರೆಂದೂ ಹೇಳಿದ್ದಾರೆ. "ಪಾಶುಪತಸ್ಯ ವೈದಿಕಾವೈದಿಕ ದ್ವೈವಿಧ್ಯಾತ್ ನಿಷೇಧ ವಚನಾನಾಂ ಅವೈದಿಕ ಪಾಶುಪತ ಪರತ್ವೇನ, ವಿಧಿವಚನಾನಾಂ ವೈದಿಕ ಪಾಶುಪತ ವೀರಶೈವ ಪರತ್ವೇನ" ಎಂದು ಮೊದಲಾಗಿ ಅವರು ಹೇಳಿರುವುದರಿಂದ ಪಾಶುಪತರಲ್ಲಿ ಕೆಲವರು ವೀರಶೈವರೆಂಬುದನ್ನು ಒಪ್ಪಿಕೊಂಡಂತಾಗಿದೆ. ಈ ನಿಲುವನ್ನು ಶ್ರೀಕರಭಾಷ್ಯದಲ್ಲಿಯೇ ನೋಡಬಹುದು. ಆ ಭಾಗವಿದು:

ಪರಬ್ರಹ್ಮಾಭಿದಂ ಲಿಂಗಂ ಪಶುಪಾಶವಿಮೋಚಕಂ ।
ಯೋ ಧಾರಯತಿ ಸದ್ಭಕ್ತ್ಯಾ ಸಪಾಶುಪತ ಉಚ್ಯತೇ ॥
ಶರೀರ ತ್ರಿತಯೇ ಭಕ್ತ್ಯಾ ಲಿಂಗಂ ಪರಶಿವಾತ್ಮಕಂ ।
ಯೋ ಧೃತ್ವಾ ವಿಚರೇದ್ ಭೂಮೌ ಸಪಾಶುಪತ ಉಚ್ಯತೇ ॥
ಲಿಂಗಂ ಶಿವೋ ಭವೇತ್ ಕ್ಷೇತ್ರಮಂಗಂ ಸಂಯೋಗ ಆಶ್ರಯಃ ।
ತಸ್ಮಾಲ್ಲಿಂಗಾಂಗ ಸಂಯುಕ್ತೋ ಯೋಽಪಿ ಸೋಽತ್ಯಾಶ್ರಮೀ ಭವೇತ್ ॥
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ ।
ಯಸ್ತು ಲಿಂಗಾಂಗ ಸಂಯುಕ್ತಃ ಸ ಏವಾತ್ಯಾಶ್ರಮೀ ಭವೇತ್ ॥

ಇತ್ಯಾದಿ ಲೈಂಗ್ಯ ಸ್ಕಂದ ಕೂರ್ಮ ಪುರಾಣೇಷು ಪಾಶುಪತಾತ್ಯಾಶ್ರಮಿ ಶಬ್ದಯೋರ್ಲಿಂಗಧಾರಿ ಪರ್ಯಾಯ ತ್ವೇನ ನಿರ್ದೇಶಾತ್ ತತ್ಪರತ್ವಮೇವೇತಿ ಸಿದ್ಧಂ.

ಹೀಗೆ ಲೈಂಗ್ಯ ಸ್ಕಂದ ಕೂರ್ಮ ಪುರಾಣಗಳ ಆಧಾರದಿಂದ ಲಿಂಗಧಾರಿಯೇ ಪಾಶುಪತ, ಅತ್ಯಾಶ್ರಮಿ ಎಂಬ ಶಬ್ದಗಳಿಂದ ನಿರ್ದೇಶಿಸಲ್ಪಟ್ಟಿದ್ದಾನೆಂದು ಶ್ರೀಕರಭಾಷ್ಯದಲ್ಲಿ ಸಿದ್ಧಾಂತ ಮಾಡಿದೆ.

ಸಿದ್ಧಾಂತಶಿಖಾಮಣಿಯ ಮೊದಲನೆಯ ಪರಿಚ್ಛೇದದ ಕೊನೆಯ ಶ್ಲೋಕದಲ್ಲಿ:

ವಿದಧತುಮುತಿಮಸ್ಮಿನ್ ವೀರಶೈವಾ ವಿಶಿಷ್ಟಾಃ ।
ಪಶುಪತಿ ಮತಸಾರೇ ಪಂಡಿತ ಶ್ಲಾಘನೀಯೇ ॥

ಎಂದು ಹೇಳಿರುವುದರಲ್ಲಿ, ವೀರಶೈವ ಮತವನ್ನು ಪಶುಪತಿ ಮತವೆಂದಿರುವುದು ಇಲ್ಲಿ ಗಮನಾರ್ಹವಾಗಿದೆ. ಬಸವೇಶ್ವರ ವಚನದಲ್ಲಿಯಾದರೂ **"ಬಾರದು ಬಾರದು ವಿಷಯಿಗೆ ಪಶುಪತಿಯ ವ್ರತವು"** ಎಂದು ಹೇಳಿರುವುದರಲ್ಲಿಯೂ ಲಿಂಗಧಾರಿಗಳಾದ ಪಾಶುಪತರೂ ವೀರಶೈವರೇ ಎಂಬ ಭಾವನೆಯಿದೆ.

## ಶಂಕರ ವಿಜಯದಲ್ಲಿ ಲಿಂಗಧಾರಿಗಳಾದ ಶೈವ ಜಂಗಮ ಪಾಶುಪತರು

ಹನ್ನೆರಡನೆಯ ಶತಮಾನಕ್ಕೆ ಹಿಂದೆ ಇದ್ದ ಶೈವ, ಪಾಶುಪತ ಮತಗಳಲ್ಲಿ ಲಿಂಗ ಧಾರಣೆಯು ಇದ್ದಿತೆಂಬ ವೀರಶೈವ ಗ್ರಂಥಗಳಲ್ಲಿನ ನಿಲುವನ್ನು ವೀರಶೈವೇತರರ ಗ್ರಂಥ ಗಳಲ್ಲಿಯೂ ಕಾಣಬಹುದು.

ಆನಂದಗಿರಿಯ ಶಂಕರ ವಿಜಯದಲ್ಲಿ ಶ್ರೀ ಶಂಕರಾಚಾರ್ಯರೊಡನೆ ವಾದಮಾಡಿ ಸೋತುಹೋದವರ ವರ್ಣನೆಯು ಹೀಗಿದೆ:

> ಭುಜದ್ವಯ ಲಿಂಗಾಂಕಧರಾಃ ಶೈವಾಃ । ಫಾಲೇ ತ್ರಿಶೂಲಧಾರಿಣಃ ರೌದ್ರಾಃ ।
> ಭುಜದ್ವಯೇ ಡಮರುಧಾರಿಣ ಉಗ್ರಾಃ । ಫಾಲೇ ಲಿಂಗ ಚಿಹ್ನಧಾರಿಣಃ ಭಟ್ಟಾಃ ।
> ಹೃದಿ ತ್ರಿಶೂಲಂ ಶಿರಸಿ ಪಾಷಾಣಲಿಂಗಂ ಚ ಧಾರಿಣಃ ಜಂಗಮಾಃ ।
> ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ ।

ಶೈವರು ಭುಜದಲ್ಲಿ ಲಿಂಗ ಚಿಹ್ನೆಯನ್ನು ಧರಿಸುವರೆಂದೂ, ಜಂಗಮರು ಶಿರಸ್ಸಿನಲ್ಲಿ ಲಿಂಗವನ್ನು ಧರಿಸುವರೆಂದೂ, ಹಣೆ, ಭುಜ, ಎದೆ, ನಾಭಿಸ್ಥಲಗಳಲ್ಲಿ ಲಿಂಗವನ್ನು ಪಾಶುಪತರು ಧರಿಸುವರು ಎಂದೂ ಇದರಿಂದ ತಿಳಿದುಬರುವುದು.

> ಮೂರ್ಧ್ನಿ ವಾ ಕಂಠದೇಶೇ ವಾ ಕಕ್ಷೇ ವಕ್ಷಸ್ಥಲೇಽಪಿ ವಾ ।
> ಕುಕ್ಷೌ ಹಸ್ತಸ್ಥಲೇ ವಾಪಿ ಧಾರಯೇಲ್ಲಿಂಗಮೈಶ್ವರಂ ॥

ಎಂದು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿರುವಂತಹ ಸ್ಥಳಗಳಲ್ಲಿ ಶೈವರು, ಜಂಗಮರು, ಪಾಶುಪತರು ಲಿಂಗವನ್ನು ಧರಿಸುತ್ತಿದ್ದರೇ ಹೊರತು, ಬೇರೆಯ ಸ್ಥಲಗಳಲ್ಲಲ್ಲ. ಹಣೆಯಲ್ಲಿ ತ್ರಿಶೂಲಚಿಹ್ನೆಯನ್ನೂ, ಭುಜದ್ವಯದಲ್ಲಿ ಡಮರುಚಿಹ್ನೆಯನ್ನೂ, ಹಣೆಯಲ್ಲಿ ಲಿಂಗಚಿಹ್ನೆ ಯನ್ನೂ ಧರಿಸಿದ ರೌದ್ರ, ಉಗ್ರ, ಭಟ್ಟರೆಂಬುವರು ಲಿಂಗವನ್ನು ಧರಿಸುತ್ತಿದ್ದ ಜಂಗಮ ಪಾಶುಪತರೊಡನೆ ಸೇರಿಸಿ ಹೇಳಲ್ಪಟ್ಟಿದ್ದಾರೆ. ಇದು ಶಂಕರ ವಿಜಯದ ನಾಲ್ಕನೆಯ ಅಧ್ಯಾಯದ ಮಾತು. ಐದನೆಯ ಅಧ್ಯಾಯದಲ್ಲಿ:

**"ಕಸ್ತ್ವಂ ಸಂನ್ಯಾಸಿನ್, ಮಾಯಾ ವೇಷಧಾರೀವ ಸಮಾಗತ್ಯ ಷಡ್ವಿಧ ಶೈವಾಚಾರಂ ಪರಿತ್ಯಜ"**

ಎಂದು ಮೊದಲಾಗಿ ಹೇಳಿರುವುದರಿಂದ ಮೇಲೆ ಹೇಳಿದ ಆರು ಪಂಗಡದವರೂ ಶೈವರಲ್ಲಿ ಆಚಾರಭೇದದಿಂದ ಆರು ವಿಧವಾಗಿ ವಿಂಗಡಿಸಲ್ಪಟ್ಟವರು ಎಂದಾಯಿತು. ಲಿಂಗಧಾರಿ ಶೈವರು ಶ್ರೀ ಶಂಕರಾಚಾರ್ಯರ ಕಾಲದಲ್ಲಿದ್ದರೆಂಬ ವಿಷಯವು ಗಮನಾರ್ಹವಾಗಿರುವಂತೆಯೇ, ಆ ಕಾಲದಲ್ಲಿ ಶೈವರಲ್ಲಿ ಆಚಾರಭೇದದಿಂದ ಆರು ಪಂಗಡಗಳಿದ್ದವೆಂಬುದೂ, ಇವರೆಲ್ಲ ಶೈವರೆಂದೇ ಕರೆಯಲ್ಪಡುತ್ತಿದ್ದರೂ ಇವರಲ್ಲಿ ಕೆಲವು ಪಂಗಡದವರು ಲಿಂಗಧಾರಿಗಳಾಗಿದ್ದ ರೆಂಬುದೂ ಗಮನಾರ್ಹವಾಗಿರುವುದು.

ಶೈವರನ್ನೆಲ್ಲ ಪಾಶುಪತರು ಎಂದು ಕರೆಯುವ ರೂಢಿಯೂ ಇದ್ದಂತೆ ಕಾಣುತ್ತದೆ. ಹೀಗಾಗಿ ಶೈವರೆಲ್ಲರೂ ಲಿಂಗಧಾರಿಗಳಾಗಿರಲಿಲ್ಲವೆಂದೂ, ಹಾಗೆಯೇ ಪಾಶುಪತರೆಂದು ಕರೆಯಲ್ಪಡುತ್ತಿದ್ದವರೆಲ್ಲರೂ ಲಿಂಗಧಾರಿಗಳಲ್ಲವೆಂದೂ ತಿಳಿದಿರುವುದು ಆವಶ್ಯಕ. ಆದುದರಿಂದ ಕೆಲವು ವೇಳೆ ಪಾಶುಪತರನ್ನೋ ಶೈವರನ್ನೋ ಲಿಂಗಿಗಳೆಂದು ಗ್ರಂಥಗಳಲ್ಲಿಯೂ ಶಿಲಾಲಿಪಿಗಳಲ್ಲಿಯೂ ಕರೆದಿದ್ದರೂ, ಇತರ ಕಡೆಗಳಲ್ಲಿ ಅವರನ್ನು ಹಾಗೆ ಕರೆಯದಿರಬಹುದು. ಏಕೆಂದರೆ ಪಾಶುಪತರಲ್ಲಿ ಅಥವಾ ಶೈವರಲ್ಲಿ ಕೆಲವರು ಮಾತ್ರ ಲಿಂಗಧಾರಿಗಳು. ಒಳಪಂಗಡಕ್ಕೂ ಒಟ್ಟು ಪಂಗಡಕ್ಕೂ ಒಂದೇ ಹೆಸರಿದ್ದುದರಿಂದ ಈ ಅವ್ಯವಸ್ಥೆಯುಂಟಾಯಿತು. ಲಿಂಗಧಾರಿಗಳ ಆಚಾರವಿಚಾರಗಳು ಸಿದ್ಧಾಂತಶಿಖಾಮಣಿಯಂತಹ ಆಧಾರಗ್ರಂಥಗಳಿಂದ ವ್ಯವಸ್ಥೆಗೆ ಒಳಪಟ್ಟು, ಅವರು ಸುಸಂಘಟಿತರಾದಮೇಲೆ ಈ ತೆರದ ಅವ್ಯವಸ್ಥೆಯು ಕಂಡುಬರುವುದಿಲ್ಲ. ಲಿಂಗಧಾರಿಗಳಲ್ಲಿ ಶೈವ, ಜಂಗಮ, ಪಾಶುಪತವೆಂಬ ಮೇಲೆ ಕಂಡ ಮೂರು ಪಂಗಡಗಳಿರುವುದಾಗಲೀ, ಅವರು ಲಿಂಗಚಿಹ್ನಧಾರಿಗಳೊಡನೆ ಒಂದು ಗುಂಪಾಗಿ ಸೇರಿಸಲ್ಪಡುವುದಾಗಲೀ ಈಗ ಕಾಣಬರುವುದಿಲ್ಲ. ಅಷ್ಟೇ ಏಕೆ? ಈ ಲಿಂಗಚಿಹ್ನಧಾರಿಗಳು ವೀರಶೈವರಲ್ಲಿ ಕಲೆತು ಲಿಂಗಧಾರಿಗಳಾಗಿ ಹೋಗಿರಲೂ ಸಾಕು. ಶಂಕರ ವಿಜಯದಲ್ಲಿ, ಈಗ ಇಲ್ಲದಿರುವ ಷಡ್ವಿಧ ಶೈವರನ್ನಾಗಲೀ ಅವರು ಧರಿಸುತ್ತಿದ್ದ ಲಿಂಗ ಅಥವಾ ಚಿಹ್ನೆಗಳ ವಿವರವನ್ನಾಗಲೀ ಊಹಾಪೋಹಗಳಿಂದ ಉಲ್ಲೇಖಿಸಿದೆ ಎನ್ನಲಾಗುವುದಿಲ್ಲ. ಒಟ್ಟಿನಲ್ಲಿ ಶೈವರಲ್ಲಿ ಲಿಂಗಧಾರಿಗಳು ಹನ್ನೆರಡನೆಯ ಶತಮಾನಕ್ಕೆ ಎಷ್ಟೋ ಶತಮಾನಗಳ ಹಿಂದೆಯೇ ಇದ್ದರೆಂಬುದರಲ್ಲಿ ಸಂದೇಹವೇ ಇಲ್ಲ.

## ಲಿಂಗಿಗಳ ನಿಂದನೆಯಿಂದ ಬೀಳುವ ಬೆಳಕು

ಹನ್ನೆರಡನೆಯ ಶತಮಾನದ ಹಿಂದೆ ಲಿಂಗವನ್ನು ಧರಿಸಿದ ಲಿಂಗಿಗಳು ಇದ್ದುದಷ್ಟೇ ಅಲ್ಲ, ಲಿಂಗಿ ಗುರುಗಳು ಬಹಳ ಪ್ರಭಾವಶಾಲಿಗಳಾಗಿ ವಿಶ್ವವಿದ್ಯಾಲಯಗಳನ್ನು ನಡೆಸುತ್ತ ರಾಜಗುರುಗಳಾಗಿದ್ದುದು ಶಿಲಾಲಿಪಿಗಳಿಂದ ತಿಳಿದುಬರುವುದು. ಇದರಿಂದ ಜೈನಮತದ ವರ್ಚಸ್ಸು ಕಡಮೆಯಾಗುತ್ತ ಬಂದರೂ, ಅದು ಇನ್ನೂ ಉಚ್ಛ್ರಾಯ ಸ್ಥಿತಿಯಲ್ಲಿಯೇ ಇದ್ದಿತು. ರತ್ನಾಕರನು ಜೈನಧರ್ಮವನ್ನು ಬಿಟ್ಟು ವೀರಶೈವ ಧರ್ಮವನ್ನು ಸೇರಿ, ಮತ್ತೆ ಅವನು ಜೈನನಾದನೆಂಬರು. ಬ್ರಹ್ಮಶಿವನಾದರೂ ಜೈನನಾಗಿದ್ದವನು ಮಾಹೇಶ್ವರ ಧರ್ಮಕ್ಕೆ ಸೇರಿ, ಮಾಹೇಶ್ವರ ಧರ್ಮದಲ್ಲಿ "ಒಳ್ಪುಗಾಣದೆ" ಮತ್ತೆ ಜೈನನಾದುದಾಗಿ ಹೇಳಿಕೊಂಡಿದ್ದಾನೆ:

ಕಂದ॥ ಪಿರಿದಳ್ತಿಯಿಂದೆ ಮಾಹೇ ।
ಶ್ವರ ಧರ್ಮದೊಳದರೊಳೊಳ್ಪುಗಾಣದೆ ಮಗುಳ್ದೇ ॥
ಪರಮಜಿನ ಧರ್ಮದೊಳಪೊ ।
ಕ್ಕು ರಾಗಿಪೊಡೆ ಸುಕವಿ ಬ್ರಹ್ಮಶಿವನೇ ಬಲ್ಲಂ ॥

ಬ್ರಹ್ಮಶಿವನ ಈ ಪದ್ಯದಲ್ಲಿ ಹೇಳಿರುವ ಮಾಹೇಶ್ವರ ಧರ್ಮವೇಂದರೆ, ಆಗಿನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಲಿಂಗಿ, ಮಾಹೇಶ್ವರ, ಪಾಶುಪತವೇ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿದ್ದ ಲಿಂಗಧಾರಿಗಳ ಧರ್ಮವೇ ಆಗಿರಬೇಕು. ಅಂತೂ ಅವನ ವಾಗ್ಬಾಣವು ವೀರಶೈವರ ಕಡೆಗೇ ಹೂಡಲ್ಪಟ್ಟಿತೆಂಬುದರಲ್ಲಿ ಸಂದೇಹವಿಲ್ಲ. ಕವಿಚರಿತ್ರೆಯ ಪರಿಶೋಧಿತ ಮುದ್ರಣದ ೨೫೧ನೆಯ ಪುಟದಲ್ಲಿ ಹೇಳಿದಂತೆ—"ಮಯೂರನು ಸೂರ್ಯನಿಂದ ಹೋಗದ ಕುಷ್ಠವನ್ನು

ಶಿವನಿಂದ ನೀಗಿ ನಿರ್ಮಲ ತನುವನ್ನು ಪಡೆದಂತೆಯೂ, ಬಾಣನು ತನ್ನ ಕೈಕಾಲುಗಳನ್ನು ಕತ್ತರಿಸಿಕೊಂಡು ಶಿವನನ್ನು ಸ್ತುತಿಸಿ ಮರಳಿ ಪಡೆದಂತೆಯೂ....ವೀರಶೈವ ಗ್ರಂಥಗಳಲ್ಲಿ ಹೇಳಿದೆ. ಬಾಣ, ಮಯೂರರ ವಿಷಯವನ್ನು ಬ್ರಹ್ಮಶಿವನು (ಸು. ೧೧೦೦) ತನ್ನ ಸಮಯ ಪರೀಕ್ಷೆಯಲ್ಲಿ ಹೀಗೆ ಪರಿಹಾಸಮಾಡುತ್ತಾನೆ:

ಕಡಿದೊಡೆ ಬಾಣಂ ಕೆಯ್ಯುಂ।
ಗಡ ಕೂಡೆ ಕೊನರ್ತುದಾ ಮಯೂರನ ತೊನ್ನಾ ॥
ದೊಡಲುಂ ಸುವರ್ಣಮಾದುದು ।
ಗಡ ದೇವರವರದಿನೆಂದು ಮೂಢರ್ ನುಡಿವರ್ ॥"

ಹನ್ನೊಂದು ಹನ್ನೆರಡನೆಯ ಶತಮಾನದ ಹಿಂದೆ ಈ ಕಹಿ ವಾತಾವರಣವಿದ್ದಿತು. ಜೈನಕವಿಗಳು ಲಿಂಗಿಗಳನ್ನು ಕುಲಿಂಗಿಗಳೆಂದು ಹಳಿಮುದಕ್ಕೆ ಲಿಂಗಧಾರಿಗಳಲ್ಲಿ ಆಗ ಅವರಿಗಿದ್ದ ವಿದ್ವೇಷವೇ ಕಾರಣ. ಇದೇ ಕಹಿ ವಾತಾವರಣವು ವೀರಶೈವರ ನಂಬುಗೆಗಳನ್ನು ಹೀಯಾಳಿಸಿದ ಬ್ರಹ್ಮಶಿವನ ಕಾಲದವರೆಗೂ ವ್ಯಾಪಿಸಿತ್ತು. ಆ ಹಿಂದೆ ಜೈನರು ಲಿಂಗಧಾರಿಗಳನ್ನು ಕುಲಿಂಗಿಗಳೆಂದು ಹಳಿದ ಉದಾಹರಣೆಗಳಿವೆ:

ಪುನರೇಕಾಕಿನಃ ಸಿಂಹಪೋತಸ್ಯಾನ್ವಙ್ ಮೃಗೇಕ್ಷಣಾತ್ ।
ಭವೇಯುಃ ಸನ್ಮತೇಸ್ತೀರ್ಥೇಸಾನುಷಂಗಾಃ ಕುಲಿಂಗಿನಃ ॥

—ಜಿನಸೇನನ ಮಹಾಪುರಾಣ (ಕ್ರಿ.ಶ. ೭೮೩).

ಕಾಗೆಗಳಿಂದಂ ಬಳಸಿದ । ಗೂಗೆಗಳಂ ಕಂಡೆಯಪ್ಪ ಕಾರಣದಿಂ ಜೈ- ॥
ನಾಗಮವಿದರಂ ಸಾರದೆ । ಪೋಗಿ ಕುಲಿಂಗಿಗಳನೀ ಜಗಂ ಸೇವಿಸುಗುಂ ॥

—ಪಂಪನ ಆದಿಪುರಾಣ (ಕ್ರಿ.ಶ. ೯೪೧).

ಇವುಗಳಲ್ಲಿ ಜೈನಾಗಮವಿದರನ್ನು ಬಿಟ್ಟು ವಿರುದ್ಧ ಪಕ್ಷದ ಲಿಂಗಧಾರಿ ಮಾಹೇಶ್ವರರನ್ನು ಜನರು ಸೇವಿಸುತ್ತಿದ್ದುದನ್ನು ಖಂಡಿಸಿದೆ. ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯೆಂಬ ಗ್ರಂಥದಲ್ಲಿ "**ಪೊಲ್ಲ ಲಿಂಗಿಗಳ ಪೆರ್ಚಕ್ಕುಂ**" ಎಂದೂ "**ಪೊಲ್ಲ ಲಿಂಗಿಗಳರಸರ್ಕಳಿಂ ಪೂಜಿಸೆ ಪಡೆವರ್**" ಎಂದು ವ್ಯಥೆಪಟ್ಟಿರುವುದು ಆಗ ರಾಜಪೂಜಿತರಾಗಿದ್ದ ಲಿಂಗಧಾರಿ ಮಾಹೇಶ್ವರರನ್ನು ಕುರಿತು ಎಂಬುದು ಸ್ಪಷ್ಟವಾಗಿದೆ. ಕವಿಚರಿತೆಯ ಎರಡನೆಯ ಅನುಬಂಧದ ೩೨ನೆಯ ಪುಟದಲ್ಲಿ 'ವಡ್ಡಾರಾಧನೆ'ಯು ಸುಮಾರು ೯೨೦ರಲ್ಲಿ ರಚಿತವಾಗಿರಬಹುದೆಂದು ಹೇಳಲಾಗಿದೆ. ೫೫ನೆಯ ಪುಟದಲ್ಲಿ "ಇದರ ಕಾಲ ನಿಶ್ಚಯವಾಗಿ ಹೇಳುವಂತಿಲ್ಲ" ಎಂದೂ ಹೇಳಿದೆ. ಶ್ರೀಯುತ ಗೋವಿಂದಪೈಗಳವರ ಅಭಿಪ್ರಾಯದಂತೆ ಈ ಗ್ರಂಥವು ಕ್ರಿ.ಶ. ೫೦೦–೭೦೦ರ ಒಳಗೆ ರಚಿತವಾಗಿರಬೇಕು. ಇದು ಹೇಗೇ ಇರಲಿ, ಮೇಲಿನ ಆಧಾರಗಳಿಂದ ತಿಳಿಯಬರುವುದೇನೆಂದರೆ ಹತ್ತು ಹನ್ನೆರಡನೆಯ ಶತಮಾನಗಳಲ್ಲಿ ಶುದ್ಧಿ ಸಂಘಟನೆಗೊಳಗಾದ ವೀರಶೈವದ ಕಾಲಕ್ಕೆ ಬಹಳ ಹಿಂದಿನಿಂದಲೂ ಲಿಂಗಿಧಾರಿಗಳಾದ ವೀರಮಾಹೇಶ್ವರರು ರಾಜಪೂಜಿತರಾಗಿದ್ದು, ವಿಮತದವರ ಕಣ್ಣು ಕುಕ್ಕುವಷ್ಟು ಜನಾನುರಾಗಿಗಳಾಗಿದ್ದರು ಎಂಬ ಅಂಶವೇ.

## ಮಹಾಭಾರತ ಕಾಲದ ಲಿಂಗಿ ಬ್ರಾಹ್ಮಣರು

ಶ್ರೀಯುತ ಪ್ರತಾಪಚಂದ್ರರಾಯರಿಂದ ಕಲ್ಕತ್ತೆಯಲ್ಲಿ ಮುದ್ರಿತವಾದ ಮಹಾಭಾರತದ ಅನುಶಾಸನಪರ್ವದ ೨೨ನೆಯ ಅಧ್ಯಾಯದಲ್ಲಿನ ಎರಡು ಶ್ಲೋಕಗಳಿವು:

ಯುಧಿಷ್ಠಿರ ಉವಾಚ—

ಕಿಮಾಹುರ್ಭರತಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಾಃ ।
ಬ್ರಾಹ್ಮಣಂ ಲಿಂಗಿನಂಚೈವ ಬ್ರಾಹ್ಮಣಂ ವಾಪ್ಯಲಿಂಗಿನಂ ॥ ೧ ॥

ಭೀಷ್ಮ ಉವಾಚ—

ಸ್ವವೃತ್ತಿಮಭಿಪನ್ನಾಯ ಲಿಂಗಿನೇಚೇತರಾಯ ಚ ।
ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥ ೨ ॥

ಈ ಶ್ಲೋಕಗಳ ವಿಷಯವಾಗಿ ಶ್ರೀ ಡಿ. ಎಲ್. ನರಸಿಂಹಾಚಾರ್ಯರು, 'ಜಯ ಕರ್ನಾಟಕ'ದ ಸಂಪುಟ ೧೩ರ ಸಂಚಿಕೆ ೩ರ ೧೬೪ನೆಯ ಪುಟದಲ್ಲಿ ಪ್ರಕಟವಾದ ತಮ್ಮ ಲೇಖನದಲ್ಲಿ ಹೀಗೆ ಹೇಳಿದ್ದಾರೆ—"ಇವುಗಳಲ್ಲಿ ಎರಡನೆಯ ಶ್ಲೋಕದಲ್ಲಿರುವ 'ಉಭಾವೇತೌ ತಪಸ್ವಿನೌ' ಎಂಬ ಮಾತುಗಳಿಂದಲೇ ಲಿಂಗಿಗಳನ್ನೂ ಇತರರನ್ನೂ ತಪಸ್ವಿಗಳೆಂದು ಹೇಳಿರುವಂತೆ ತೋರುತ್ತದೆ. ಆದುದರಿಂದ ಈ ಶ್ಲೋಕಗಳಲ್ಲಿರುವ ಲಿಂಗಿ ಶಬ್ದವು ಲಿಂಗಧಾರಿಗಳನ್ನು ಉದ್ದೇಶಿಸಿ ಪ್ರಯುಕ್ತವಾಗಿದೆಯೆಂದು ಹೇಳಲಾಗುವುದಿಲ್ಲವೆಂದು ತೋರುತ್ತದೆ." ಶ್ರೀಯುತರು ಹೀಗೆ ಹೇಳಿರುವುದು ಸಮಂಜಸವಾಗಿಲ್ಲ. "ಉಭಾವೇತೌ ತಪಸ್ವಿನೌ" ಎಂಬ ಮಾತುಗಳಿಂದಲೇ ಲಿಂಗಿಗಳನ್ನೂ ಇತರರನ್ನೂ ತಪಸ್ವಿಗಳೆಂದು ಹೇಳಿರುವುದರಲ್ಲಿ ಆತಂಕವೇನೋ ಸ್ಪಷ್ಟಮಾಡಿಲ್ಲ. ಲಿಂಗಿ ಬ್ರಾಹ್ಮಣರಲ್ಲಿಯೂ, ಅಲಿಂಗಿ ಬ್ರಾಹ್ಮಣರಲ್ಲಿಯೂ ತಪಸ್ವಿಗಳಿರಬಹುದಷ್ಟೆ. ಧರ್ಮರಾಯನು ದಾನವನ್ನು ಲಿಂಗಿ ಬ್ರಾಹ್ಮಣನಿಗೆ ಕೊಡಬೇಕೋ, ಅಲಿಂಗಿ ಬ್ರಾಹ್ಮಣನಿಗೆ ಕೊಡಬೇಕೋ ಎಂದು ಪ್ರಶ್ನಿಸಿದನು. ಸ್ವವೃತ್ತಿಯಲ್ಲಿ ಅಭಿಪನ್ನನಾಗಿರುವ ಲಿಂಗಿ (ಬ್ರಾಹ್ಮಣನಿ) ಗಾಗಲೀ, ಅಲಿಂಗಿ (ಬ್ರಾಹ್ಮಣನಿ) ಗಾಗಲೀ ದಾನಮಾಡಬಹುದೆಂದು ಭೀಷ್ಮನ ಉತ್ತರ. ಲಿಂಗಿಗಳನ್ನೂ ಇತರರನ್ನೂ ಈ ಎರಡನೆಯ ಶ್ಲೋಕದಲ್ಲಿ ತಪಸ್ವಿಗಳೆಂದು ಹೇಳಿದೆಯಾದುದರಿಂದ "ಲಿಂಗಿ ಶಬ್ದವು ಲಿಂಗಧಾರಿಗಳನ್ನು ಉದ್ದೇಶಿಸಿ ಪ್ರಯುಕ್ತವಾಗಿದೆಯೆಂದು ಹೇಳುವುದಕ್ಕಾಗುವುದಿಲ್ಲ" ಎಂದು ಶ್ರೀ ನರಸಿಂಹಾಚಾರ್ಯರು ಹೇಳುವ ಮಾತು ಸಮಂಜಸವಾಗಿಲ್ಲ. ಸ್ವವೃತ್ತಿನಿರತರಾದ ಲಿಂಗಿಗಳೂ ಅಲಿಂಗಿಗಳೂ ತಪಸ್ವಿಗಳಾದುದರಿಂದ ದಾನಾರ್ಹರೆಂದು ಭಾವ. 'ಲಿಂಗಿ' ಎಂಬ ಪದಕ್ಕೆ ಶಬ್ದಕಲ್ಪದ್ರುಮದಲ್ಲಿ "ಲಿಂಗಂ ಅಸ್ಯ ಅಸ್ತಿ ಇತಿ" ಎಂದರೆ ಲಿಂಗವುಳ್ಳವನು ಲಿಂಗಿ ಎಂದಾಗುವುದೆಂದು ಹೇಳಿದೆಯೆಂದಮೇಲೆ 'ಲಿಂಗಿ' ಎಂದರೆ ಲಿಂಗಧಾರಿಯೆಂದು ಹೇಳಲು ತೊಡಕೇನೂ ಇರದು.

'ಲಿಂಗಿ' ಎಂದರೆ ಸಂನ್ಯಾಸಿಯೆಂದೂ ಅರ್ಥಮಾಡಿರುವುದುಂಟು. ಶಿವಲಿಂಗಧಾರಿಗಳು ದಾನಾರ್ಹರಲ್ಲವೆಂಬ ಭಾವನೆಯು ಬೇರೂರಿರುವವರು 'ಲಿಂಗಿ' ಪದದ ರೂಢಿಯ ಅರ್ಥವನ್ನು ಬಿಟ್ಟು, ಬೇರೆ ಅರ್ಥವನ್ನು ಮಾಡಲು ಹೊರಟಿರುವ ಪ್ರಯತ್ನವಿದು. ಮೇಲೆ ಕಂಡ ಮಹಾಭಾರತದ ಶ್ಲೋಕಗಳಲ್ಲಂತೂ ಲಿಂಗಿಬ್ರಾಹ್ಮಣನೆಂದರೆ ಬ್ರಾಹ್ಮಣಸಂನ್ಯಾಸಿಯೆಂದು ಅರ್ಥಮಾಡಲಾಗುವುದಿಲ್ಲ. ಬ್ರಾಹ್ಮಣ್ಯವನ್ನು ಕಟ್ಟಿಕೊಂಡಿರುವವನು ಸಂನ್ಯಾಸಿಯೆನ್ನಲಾಗುವುದೆ? ಈಶಾವಾಸ್ಯದ ಶಂಕರಭಾಷ್ಯಾವತರಣಿಕೆಯಲ್ಲಿ ಹೇಳಿದಂತೆ:

"ದ್ವಿಜಾತಿರಹಂ ನ ಕಾಣಕುಬ್ಜತ್ವಾದ್ಯನಧಿಕಾರಪ್ರಯೋಜಕಧರ್ಮವಾನ್"
ಇತ್ಯಾತ್ಮಾನಂ ಮನ್ಯತೇ ಸೋಽಧಿಕ್ರಿಯತೇ ಕರ್ಮಸ್ವಿತಿ ಹ್ಯಧಿಕಾರವಿದೋ ವದಂತಿ

'ನಾನು ದ್ವಿಜನು, ಕಾಣತ್ವ ಕುಬ್ಜತ್ವಾದಿ ದೋಷಗಳಿಲ್ಲದವನು' ಎಂದು ತಿಳಿದಿರುವವನೇ ಕರ್ಮಕ್ಕೆ ಅಧಿಕಾರಿಯು ಎಂಬುದಾಗಿ ಅಧಿಕಾರವಿದರು ಹೇಳುವರು—ಎಂಬುದು ಇದರ ಅರ್ಥ. ಇನ್ನು ಸಂನ್ಯಾಸಿಯಾಗಿ ಕರ್ಮಮಾರ್ಗವನ್ನು ತ್ಯಜಿಸಿದವನು "ನಾನು ಬ್ರಾಹ್ಮಣನು" ಎಂದು ಕರೆದುಕೊಳ್ಳುವುದಿಲ್ಲ; ಅವನನ್ನು ಯಾರೂ ಹಾಗೆ ಕರೆಯುವುದಿಲ್ಲ. "ಬ್ರಾಹ್ಮಣಸಂನ್ಯಾಸಿ" ಎಂದರೆ ಬ್ರಾಹ್ಮಣ್ಯದ ಅಧಿಕಾರವನ್ನು ಬಿಡದ ಸಂನ್ಯಾಸಿಯೆಂದರ್ಥವಾಗಿ ವಿರುದ್ಧಾರ್ಥವುಳ್ಳ ಪದಗಳ ಗುಂಪಾಗುವುದು.

ತೈತ್ತರೀಯಾರಣ್ಯಕದಲ್ಲಿ **ಯಜ್ಞೋಪವೀತ್ಯೇವಾಧೀಯೀತ** (ತೈ. ಆ. ೨-೧-೧) ಎಂದರೆ ಯಜ್ಞೋಪವೀತವನ್ನು ಧರಿಸಿಯೇ ವೇದಾಧ್ಯಯನವನ್ನು ಮಾಡಬೇಕೆಂದು ಹೇಳಿದೆ. ವಶಿಷ್ಠಸ್ಮೃತಿಯಲ್ಲಿ **'ವೇದಸಂನ್ಯಸನಾಚ್ಛೂದ್ರಸ್ತಸ್ಮಾದ್ ವೇದಂ ನಸಂನ್ಯಸೇತ್'**— ವೇದವನ್ನು ಬಿಡುವುದರಿಂದ ಶೂದ್ರನಾಗುತ್ತಾನೆ. ಆದುದರಿಂದ ವೇದವನ್ನು ಬಿಡಬಾರದೆಂದು ಹೇಳಿದೆ. ಈ ವಿಧಿಗಳು ವೈದಿಕ ಕರ್ಮವನ್ನು ಮಾಡುತ್ತ ದಾನಕ್ಕೆ ಅರ್ಹತೆಯನ್ನು ಉಳಿಸಿ ಕೊಂಡಿರುವ ಬ್ರಾಹ್ಮಣ ಗೃಹಸ್ಥರಿಗೆ ಅನ್ವಯಿಸುವ ವಿಧಿಗಳು. ಆದರೆ ಕಠರುದ್ರೋಪನಿಷತ್ತಿನಲ್ಲಿ **"ಯಜ್ಞೋಪವೀತಂ ವೇದಾಂಶ್ಚ ಸರ್ವಂ ತದ್ ವರ್ಜಯೇದ್ಯತಿಃ"** (ಕ.ರು. ೨) ಎಂದರೆ ಯಜ್ಞೋಪವೀತವನ್ನೂ, ವೇದವನ್ನೂ, ಎಲ್ಲವನ್ನೂ ಸಂನ್ಯಾಸಿಯು ಬಿಡಬೇಕು ಎಂದು ಹೇಳಿರುವುದು ಸಂನ್ಯಾಸಿಗೆ ಹೇಳಿದ ವಿಧಿ ಎಂಬುದು ಸ್ಪಷ್ಟ. ಇಂತಹ ಆಧಾರಗಳನ್ನು ಕೊಟ್ಟು ಸಂನ್ಯಾಸಿಯಾಗುವವನು ಬ್ರಾಹ್ಮಣ್ಯಕ್ಕೆ ಅಧಿಕಾರವನ್ನು ಕೊಡುವ ಯಜ್ಞೋಪವೀತ ವನ್ನು ತ್ಯಜಿಸಬೇಕು ಎಂದು ಬೃಹದಾರಣ್ಯಕೋಪನಿಷತ್ತಿನ (೩-೫-೧) ಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರು ಸಿದ್ಧಾಂತವನ್ನು ಮಾಡಿದ್ದಾರೆ. **"ಬ್ರಹ್ಮವಿದೋ ವ್ಯುತ್ಥಾಯ ಕರ್ಮಭ್ಯಃ ಕರ್ಮಸಾಧನೇಭ್ಯಶ್ಚ ಯಜ್ಞೋಪವೀತಾದಿಭ್ಯಃ ಪರಮಹಂಸ ಪಾರಿವ್ರಾಜ್ಯಂ ಪ್ರತಿಪದ್ಯ ಭಿಕ್ಷಾಚರ್ಯಂ ಚರನ್ತಿ"** ಎಂದರೆ ಬ್ರಹ್ಮವಿದರು ಕರ್ಮಗಳನ್ನೂ, ಕರ್ಮ ಸಾಧನೆಗೆ ಅವಶ್ಯವಾದ ಯಜ್ಞೋಪವೀತಾದಿಗಳನ್ನೂ ಬಿಟ್ಟಿದ್ದು ಭಿಕ್ಷೆಗಾಗಿ ಸಂಚರಿಸುವುದನ್ನು ಉಲ್ಲೇಖಿಸಿದ್ದಾರೆ. ದಾನಾದಿಗಳಿಗೆ ಅರ್ಹತೆಯನ್ನು ಕೊಡುವ ಯಜ್ಞೋಪವೀತವನ್ನು ಧರಿಸಿದ ಬ್ರಾಹ್ಮಣನಲ್ಲದ ಸಂನ್ಯಾಸಿಯನ್ನು ಬ್ರಾಹ್ಮಣ ಸಂನ್ಯಾಸಿ ಎನ್ನುವುದು ಸರಿಯಲ್ಲ. ಲಿಂಗಿ ಪದವನ್ನು ಸಂನ್ಯಾಸಿ ಎಂಬ ಅರ್ಥದಲ್ಲಿ ಉಪಯೋಗಿಸಿದ್ದರೆ ಅನಾವಶ್ಯಕವಾಗಿ ಲಿಂಗಿ ಪದದೊಡನೆ ಬ್ರಾಹ್ಮಣ ಎಂಬ ಪದವನ್ನು ಉಪಯೋಗಿಸುತ್ತಿರಲಿಲ್ಲ. ಆದುದರಿಂದ ಲಿಂಗಿ ಬ್ರಾಹ್ಮಣ ಎಂದರೆ ಸಂನ್ಯಾಸಿ ಬ್ರಾಹ್ಮಣ ಎಂದು ಅರ್ಥಮಾಡುವುದು ಸರಿಯಲ್ಲ.

ಏಷಣಾತ್ರಯಗಳನ್ನು ಸಂನ್ಯಾಸ ಮಾಡಿದ ಸಂನ್ಯಾಸಿಯೂ, ಹಾಗೂ ಭಿಕ್ಷೆಯಿಂದಲೇ ಜೀವಿಸಿ ವಿದ್ಯಾಭ್ಯಾಸವನ್ನು ಮುಗಿಸಬೇಕಾದ ಬ್ರಹ್ಮಚಾರಿಯೂ ಭೂದಾನವನ್ನಾಗಲೀ ಗೋದಾನವನ್ನಾಗಲೀ, ಸುವರ್ಣದಾನವನ್ನಾಗಲಿ ತೆಗೆದುಕೊಂಡು ಮಾಡುವುದೇನು? ಅಲ್ಲದೆ ಅಪರಿಗ್ರಹವು ಸಂನ್ಯಾಸಿಗೆ ನಿಯಮ. **"ಅಥಪರಿವ್ರಾಡ್ ವಿವರ್ಣವಾಸಾ ಮುಂಡೋಽ ಪರಿಗ್ರಹಃ"** (ಜಾ ೫) ಎಂಬ ಆಧಾರವನ್ನು ಶ್ರೀ ಶಂಕರಾಚಾರ್ಯರು ಮೇಲಿನ ಭಾಷ್ಯದಲ್ಲಿ ಕೊಟ್ಟಿದ್ದಾರೆ. ದಾನವನ್ನು ಸ್ವೀಕರಿಸಬಾರದೆಂಬುದರಿಂದಲೇ ಸಂನ್ಯಾಸಿಯು ಭಿಕ್ಷದಿಂದಲೇ ಜೀವನಯಾತ್ರೆಯನ್ನು ಸಾಗಿಸಬೇಕು. ಮಹಾಭಾರತದ ಕಾಲದಲ್ಲಿಯೇ ಆದರೂ ಧರ್ಮರಾಯ ನಿಗೆ ದಾನವನ್ನು ಸ್ವೀಕರಿಸುವ ವಿಷಯದಲ್ಲಿ ಗೃಹಸ್ಥ ಬ್ರಹ್ಮಚಾರಿಗಳಲ್ಲಿ ಅರ್ಹನಾದವನು

ಇವನೋ ಅವನೋ ಎಂದು ಸಂದೇಹ ಬರಲು ಕಾರಣವೇನೂ ಇದ್ದುದು ಕಂಡುಬರುವುದಿಲ್ಲ. ಹಾಗೆಯೇ ಗೃಹಸ್ಥ ಸಂನ್ಯಾಸಿಗಳಲ್ಲಿ ದಾನಾರ್ಹತೆಯು, ಇವನಿಗೋ ಅವನಿಗೋ ಎಂಬ ಸಂದೇಹ ಬಂದಿರಲು ಕಾರಣವಿಲ್ಲ. ಉದಾಹರಣೆಗಾಗಿ, ಶಾಸ್ತ್ರಕ್ಕೂ ಶಿಷ್ಟಾಚರಣೆಗೂ ವ್ಯತ್ಯಾಸವಿದ್ದರೆ ಯಾವುದು ಅನುಕರಣೀಯವೆಂಬ ಸಂದೇಹ ಬರುವುದು. ಹಾಗೆ, ಶಾಸ್ತ್ರಕ್ಕೂ ಪದ್ಧತಿಗೂ ವಿರೋಧವಿದ್ದಿದ್ದರೆ ಅದನ್ನು ಪರಿಹರಿಸಿಕೊಳ್ಳುವುದು ಧರ್ಮರಾಯನಂತಹ ಧರ್ಮಜ್ಞನಿಗೂ ಅವಶ್ಯವಾಗುತ್ತಿದ್ದಿತು. ಆದರೆ, ಬ್ರಹ್ಮಚಾರಿ, ಗೃಹಸ್ಥ, ಸಂನ್ಯಾಸಿ ಇವರಲ್ಲಿ ಶಾಸ್ತ್ರಕ್ಕೆ ವಿರೋಧವಾಗಿ ಯಾರಿಗಾದರೂ ದಾನ ಮಾಡುವ ಪದ್ಧತಿಯಿದ್ದಿತೆನ್ನಲಾಗುವುದಿಲ್ಲ. ಆದುದರಿಂದ ಬ್ರಾಹ್ಮಣರಲ್ಲಿ ದಾನಕ್ಕೆ ಪಾತ್ರರಾದವರು ಗೃಹಸ್ಥರೋ ಅಥವಾ ಬ್ರಹ್ಮಚಾರಿಗಳೋ ಎಂಬ ಸಂದೇಹವಾಗಲೀ, ಹಾಗೆಯೇ ಬ್ರಾಹ್ಮಣರಲ್ಲಿ ದಾನಕ್ಕೆ ಪಾತ್ರರಾದವರು ಗೃಹಸ್ಥರೋ ಸಂನ್ಯಾಸಿಗಳೋ ಎಂಬ ಸಂದೇಹವಾಗಲೀ ಧರ್ಮರಾಯನಂತಹ ಅರಿತವನಿಗೆ ಬಂದಿರಲಾರದು; ಇವರಲ್ಲಿ ಯಾರು ಹೆಚ್ಚಿನವರು ಎಂಬ ಸಂದೇಹವಾದರೂ ಧರ್ಮರಾಯನಿಗೆ ಬಂದಿರಲಾರದು. ಗೃಹಸ್ಥಾಶ್ರಮಕ್ಕಿಂತಲೂ ಸಂನ್ಯಾಸಾಶ್ರಮವು ಮೇಲೆನಿಸದೆಂಬುದು ಸುವಿದಿತವಾದುದು. ಹೀಗಿರುವುದರಲ್ಲಿ ಸಂದೇಹಕ್ಕೆ ಕಾರಣವೇ ಇಲ್ಲ. ಇಂತಹ ಪ್ರಶ್ನೆಯನ್ನು ಧರ್ಮರಾಯನು ಕೇಳಿರಲಾರನು. ಆದರೆ ಬ್ರಾಹ್ಮಣರಲ್ಲಿ ವಿವಿಧ ಧರ್ಮಾನುಯಾಯಿಗಳಿರುವರಷ್ಟೆ. ಇವರಲ್ಲಿ ಯಾವ ಧರ್ಮದವರು ದಾನಕ್ಕೆ ಸತ್ಪಾತ್ರರು ಎಂಬ ಪ್ರಶ್ನೆ ಏಳುವುದು ಸ್ವಾಭಾವಿಕ. ಆಗ ಲಿಂಗಪೂಜೆಯು ಪ್ರಚಲಿತವಾಗಿದ್ದುದು ಮಹಾಭಾರತದಿಂದಲೇ ತಿಳಿದುಬರುತ್ತದೆ; ಆ ಕಾಲದಲ್ಲಿ ಪಾಶುಪತರಿದ್ದರೆಂದೂ ತಿಳಿದುಬರುತ್ತದೆ. ಪಾಶುಪತರು "ಲಿಂಗಧಾರಿ"ಗಳು ಎಂಬುದು ಅವರ ಆಧಾರ ಗ್ರಂಥಗಳಿಂದ ತಿಳಿದುಬರುವುದು. ಈ ಪಾಶುಪತರು ವೈದಿಕರೆ ಎಂಬ ಪ್ರಶ್ನೆಯು ಬ್ರಹ್ಮಸೂತ್ರಗಳ ಕಾಲದಲ್ಲಿಯೇ ಎದ್ದಿದ್ದಿತೆಂಬುದು "**ಪತ್ಯುರಸಾಮಂಜಸ್ಯಾತ್**" ಎಂಬ ಸೂತ್ರದಿಂದಲೇ ತಿಳಿದುಬರುವ ವಿಷಯ. ಆದರೆ, ಇದಕ್ಕೆ ವಿರುದ್ಧವಾಗಿ ಮಹಾಭಾರತದಲ್ಲಿ ಶ್ರೀಕೃಷ್ಣನೇ ಲಿಂಗಪೂಜೆಯ ಹಿರಿಮೆಯನ್ನರಿತು ಶಿವನನ್ನು ಆರಾಧಿಸಿದನೆಂದು ಹೇಳಿದೆ. ಆದುದರಿಂದ ಲಿಂಗಧಾರಿಗಳು, ಲಿಂಗಧಾರಿಗಳಲ್ಲದವರು ಎಂಬ ಪಂಗಡಗಳಲ್ಲಿ ದಾನಕ್ಕೆ ಸತ್ಪಾತ್ರರಾದವರು ಯಾರು ಎಂಬ ಬಗೆಗೆ ಧರ್ಮರಾಯನಿಗೆ ಸಂದೇಹ ಬಂದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಮಹಾಭಾರತದ ಕಾಲದಲ್ಲಿ ಲಿಂಗಿಪಾಶುಪತರು ಗೌರವಿಸಲ್ಪಡುತ್ತಿದ್ದರಾದರೂ ಆಕಾಲದ ಪದ್ಧತಿಗೆ ವಿರುದ್ಧವಾಗಿ ಅವರನ್ನು ನಿಂದಿಸುವ ಬ್ರಹ್ಮಸೂತ್ರದಿಂದಲೇ ಈ ಸಂದೇಹವೇಳುವುದಕ್ಕೆ ಅವಕಾಶವಿದ್ದಿತಷ್ಟೆ. ಆದುದರಿಂದ ಈ ಶ್ಲೋಕಗಳಲ್ಲಿ ಲಿಂಗಿಯೆಂದರೆ ಲಿಂಗಧಾರಿ ಎಂದು ಅರ್ಥಮಾಡುವುದೇ ಸರಿಯಾದುದು.

ಈ ತರದ ತೊಡಕು ಮುಂಡಕೋಪನಿಷತ್ತಿನ ಮಂತ್ರದ ಅರ್ಥವನ್ನು ಬಿಡಿಸುವುದರಲ್ಲಿಯೂ ಬರುವುದು. ಆ ಮಂತ್ರಭಾಗವಿದು:

"**ನಾಯಮಾತ್ಮಾ ಬಲಹೀನೇನ ಲಭ್ಯೋ ನ ಚ ಪ್ರಮಾದಾತ್ ತಪಸೋ ವಾಪ್ಯಲಿಂಗಾತ್**"

ಬಲಹೀನನಿಗೆ ಆತ್ಮಸಾಕ್ಷಾತ್ಕಾರವಾಗುವುದಿಲ್ಲ, ಲಿಂಗವಿಲ್ಲದೆ ತಪಸ್ಸನ್ನಾಚರಿಸಿದರೂ ಆತ್ಮಸಾಕ್ಷಾತ್ಕಾರವಾಗುವುದಿಲ್ಲವೆಂಬುದು ಈ ಮಂತ್ರಭಾಗದ ಸರಳವಾದ ಅರ್ಥ. ಶ್ರೀ ಶಂಕರಾಚಾರ್ಯರು ಈ ಮಂತ್ರದ ಭಾಷ್ಯದಲ್ಲಿ "**ತಪಸೋ ವಾಪ್ಯಲಿಂಗಾಲ್ಲಿಂಗರಹಿತಾತ್**" ಎಂದು ಭಾಷ್ಯವನ್ನು ಬರೆದಿರುವುದರಲ್ಲಿಯೂ ಇದೇ ಅರ್ಥವು ಬರುತ್ತದೆ;

ಆದರೆ ಅವರು ಲಿಂಗವೆಂದರೆ ಶಿವಲಿಂಗವೆಂಬ ರೂಢಿಯ ಅರ್ಥವನ್ನು ಬಿಟ್ಟು, ಲಿಂಗ ಶಬ್ದಕ್ಕೆ ಸಂನ್ಯಾಸವೆಂದು ಅರ್ಥ ಬರೆದಿದ್ದಾರೆ. ಆ ಭಾಗವಿದು: **"ತಪೋಽತ್ರ ಜ್ಞಾನಂ। ಲಿಂಗಂ ಸಂನ್ಯಾಸಃ ಸಂನ್ಯಾಸರಹಿತಾಜ್ಜ್ಞಾನಾನ್ನಲಭ್ಯತ ಇತ್ಯರ್ಥಃ"** ತಪಸ್ಸೆಂದರೆ ಜ್ಞಾನವು, ಲಿಂಗವೆಂದರೆ ಸಂನ್ಯಾಸವು, ಸಂನ್ಯಾಸವಿಲ್ಲದ ಜ್ಞಾನದಿಂದಲೂ ಮೋಕ್ಷವಾಗುವುದಿಲ್ಲವೆಂಬುದು ಶ್ರೀ ಶಂಕರಾಚಾರ್ಯರ ಭಾಷ್ಯದ ಅರ್ಥ. ಶ್ರೀ ರಾಮಾನುಜಾಚಾರ್ಯರ ಅನುಯಾಯಿಗಳಾದ ಶ್ರೀ ರಂಗರಾಮಾನುಜರಾದರೂ ಈ ಮಂತ್ರದ ಅವರ ಭಾಷ್ಯದ ಭಾಗದಲ್ಲಿ ಈ ರೀತಿಯಲ್ಲಿ ಅರ್ಥಮಾಡಿರುವರು:

**"ಲಿಂಗಂ ಶಿಖಾಯಜ್ಞೋಪವೀತಶಿಕ್ಯಜಲಪವಿತ್ರಾದಿ ತದ್ ರಹಿತಾತ್ ಸಂನ್ಯಾಸಾದಪೀತ್ಯರ್ಥಃ"**

ಲಿಂಗವೆಂದರೆ ಶಿಖಾಯಜ್ಞೋಪವೀತ, ಶಿಕ್ಯಜಲ (ನಿಲುವಿನಲ್ಲಿಟ್ಟಿರುವ ನೀರು), ಪವಿತ್ರವೇ ಮೊದಲಾದವುಗಳು; ಇವುಗಳಿಲ್ಲದೆ ಇರುವ ಸಂನ್ಯಾಸದಿಂದಲೂ ಮೋಕ್ಷವಾಗುವುದಿಲ್ಲವೆಂದು ರಂಗರಾಮಾನುಜಭಾಷ್ಯದ ಅರ್ಥ. ಶ್ರೀ ಶಂಕರಾಚಾರ್ಯರ ಪ್ರಕಾರ ಲಿಂಗವೆಂದರೆ ಸಂನ್ಯಾಸವೆಂದಾದರೆ, ಶ್ರೀ ರಂಗರಾಮಾನುಜರ ಪ್ರಕಾರ ಶಿಖಾಯಜ್ಞೋಪವೀತಾದಿಗಳು. ಇವುಗಳಿಲ್ಲದೆ ಸಂನ್ಯಾಸದಿಂದಲೂ ಮೋಕ್ಷವಾಗುವುದಿಲ್ಲವೆಂದು ಇವರು ಹೇಳಿದರೆ ಸಂನ್ಯಾಸವಿಲ್ಲದ ಜ್ಞಾನದಿಂದಲೂ ಮೋಕ್ಷವಾಗುವುದಿಲ್ಲವೆಂದು ಶ್ರೀ ಶಂಕರಾಚಾರ್ಯರು ಹೇಳುವರು. ಅವರವರ ನಿಲುವಿಗೆ ತಕ್ಕಂತೆ ಭಾಷ್ಯಕಾರರು ಉಪನಿಷದ್ ವಾಕ್ಯಗಳಲ್ಲಿ ಪದಗಳಿಗೆ ಅರ್ಥ ಹೇಳಬೇಕಾಗುವುದು. ಏಕೆಂದರೆ, ಭಾಷ್ಯಗಳನ್ನು ಬರೆದಿರುವುದು ತಮ್ಮ ಸಿದ್ಧಾಂತವು ಸರಿಯೆಂದು ತೋರಿಸುವುದಕ್ಕಾಗಿತಾನೆ! ಶ್ರೀ ಶಂಕರಾಚಾರ್ಯರ ಸಿದ್ಧಾಂತದ ಪ್ರಕಾರ **"ಮೋಕ್ಷಪ್ರಾಪ್ತಿರ್ನತ್ವಸಂನ್ಯಾಸಿನಃ"** ಎಂದು ಅವರ ಗೀತಾಭಾಷ್ಯದಲ್ಲಿ ಹೇಳಿದಂತೆ, ಸಂನ್ಯಾಸಿಗಳಲ್ಲದವರಿಗೆ ಮೋಕ್ಷವಾಗುವುದಿಲ್ಲ. ಲಿಂಗರಾಹಿತ್ಯದಿಂದ ಮೋಕ್ಷವಾಗುವುದಿಲ್ಲವೆಂದು ಉಪನಿಷತ್ತು ಹೇಳುವುದರಿಂದ ಲಿಂಗವೆಂದರೆ ಸಂನ್ಯಾಸವೆಂದೇ ಅವರು ಅರ್ಥಮಾಡಬೇಕಾಯಿತು. ಶ್ರೀ ರಂಗರಾಮಾನುಜರು ಅವರ ಸಿದ್ಧಾಂತಕ್ಕೆ ಅನುಕೂಲವಾಗಿ ಅರ್ಥವನ್ನು ಮಾಡಬೇಕಾಯಿತು. ಶ್ರೀ ಮಧ್ವಾಚಾರ್ಯರ ಮುಂಡಕೋಪನಿಷತ್ತಿನ ಭಾಷ್ಯದಲ್ಲಿ ಈ ಮಂತ್ರಕ್ಕೆ ಭಾಷ್ಯ ಬರೆದಂತೆ ಕಂಡುಬರುವುದಿಲ್ಲ. ಲಿಂಗವೆಂಬುದಕ್ಕೆ ರೂಢಿಯಲ್ಲಿರುವ ಅರ್ಥವು ಶಿವಲಿಂಗವೆಂಬುದು. ಈ ಅರ್ಥವನ್ನು ತ್ಯಜಿಸಿ ಯಾವ ಕಾರಣವನ್ನೂ ಕೊಡದೆ ತಮತಮಗೆ ಬೇಕಾದಂತೆ ಅರ್ಥ ಮಾಡುವುದು **"ಯೋಗಾತ್ ರೂಢಿರ್ಬಲೀಯಸೀ"** ಎಂಬ ನ್ಯಾಯಕ್ಕೆ ವಿರುದ್ಧವಾಗಿದೆ. ಮಹಾಭಾರತದಲ್ಲಿಯಾದರೂ ಲಿಂಗಿ ಶಬ್ದದ ಅರ್ಥವನ್ನೂ ಲಿಂಗಧಾರಣೆಯನ್ನೂ ಒಪ್ಪದ ಅಲಿಂಗಿಗಳು ಮೇಲಿನ ನ್ಯಾಯಕ್ಕೆ ವಿರುದ್ಧವಾಗಿ ಅರ್ಥಹೇಳುವುದರಲ್ಲಿ ಆಶ್ಚರ್ಯವೇನಿದೆ? ಲಿಂಗಿ ಎಂದರೆ ಲಿಂಗಧಾರಿಯೆಂದು ಅರ್ಥವೆಂಬುದು ಮಥಿತಾರ್ಥ.

## ಹಿಂದೆ ಚತುರ್ವರ್ಣದ ಸ್ತ್ರೀ ಪುರುಷರಲ್ಲಿ ಲಿಂಗಪೂಜೆ ಲಿಂಗಧಾರಣಗಳಲ್ಲಿ ತಾರತಮ್ಯ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾದಲ್ಲಿ ಮುದ್ರಿತವಾಗಿರುವ "ಶ್ರೀ ವ್ಯಾಸ ಮಹರ್ಷಿ ಪ್ರಣೀತಂ ಶಿವಮಹಾಪುರಾಣಂ, ಸ್ಕಾಂದಪುರಾಣಾಂತರ್ಗತ ಶಿವಪುರಾಣ

ಮಾಹಾತ್ಮ್ಯಸಹಿತಂ" ಎಂಬ ಗ್ರಂಥದ "ವಿದ್ಯೇಶ್ವರ ಸಂಹಿತಾ" ಭಾಗದ ೧೮ನೆಯ ಅಧ್ಯಾಯದಲ್ಲಿ (ಪುಟ ೩೯–೩೧೦) ಕೆಳಗೆ ಕಂಡ ಶ್ಲೋಕಗಳು ಗಮನಾರ್ಹವಾಗಿವೆ. ಏಕೆಂದರೆ ಹತ್ತು ಹನ್ನೆರಡನೆಯ ಶತಮಾನದಲ್ಲಿ ಎಲ್ಲ ವರ್ಣದ ಲಿಂಗಧಾರಿ ಸ್ತ್ರೀಪುರುಷರೂ ಒಂದೇ ರೀತಿಯಲ್ಲಿ ತಾರತಮ್ಯವಿಲ್ಲದೆ ಆಚರಿಸಬೇಕಾದ ಆಚರಣೆಗಳು ಆಚರಣೆಗೆ ಬರುವ ಮೊದಲು, ತದ್ವಿರುದ್ಧವಾಗಿ ವರ್ಣಾಶ್ರಮ ನಿಯಮಗಳಿಗೆ ಒಳಪಟ್ಟ ಜನರಲ್ಲಿ ಇದ್ದ ಲಿಂಗಪೂಜೆಯ ಮತ್ತು ಲಿಂಗಧಾರಣೆಯ ಕೆಲವು ನಿಯಮಗಳು ಈ ಶ್ಲೋಕಗಳಿಂದ ಬೆಳಕಿಗೆ ಬರುವುವು.

ರಸಲಿಂಗಂ ಬ್ರಾಹ್ಮಣಾನಾಂ ಸರ್ವಾಭೀಷ್ಟಪ್ರದಂ ಭವೇತ್ ।
ಬಾಣಲಿಂಗಂ ಕ್ಷತ್ರಿಯಾಣಾಂ ಮಹಾರಾಜ್ಯಪ್ರದಂ ಶುಭಂ ॥ ೪೮ ॥

ಸ್ವರ್ಣಲಿಂಗಂ ತು ವೈಶ್ಯಾನಾಂ ಮಹಾಧನಪತಿತ್ವದಂ ।
ಶಿಲಾಲಿಂಗಂ ತು ಶೂದ್ರಾಣಾಂ ಮಹಾಶುದ್ಧಿಕರಂ ಪರಂ ॥ ೪೯ ॥

ಸ್ಫಾಟಿಕಂ ಬಾಣಲಿಂಗಂ ಚ ಸರ್ವೇಷಾಂ ಸರ್ವಕಾಮದಂ ।
ಸ್ವೀಯಾಭಾವೇಽನ್ಯದೀಯಂತು ಪೂಜಾಯಾಂ ನ ನಿಷಿಧ್ಯತೇ ॥ ೫೦ ॥

ಸ್ತ್ರೀಣಾಂ ತು ಪಾರ್ಥಿವಂ ಲಿಂಗಂ ಸಭರ್ತೄರ್ಣಾಂ ವಿಶೇಷತಃ ।
ವಿಧವಾನಾಂ ಪ್ರವೃತ್ತಾನಾಂ ಸ್ಫಾಟಿಕಂ ಪರಿಕೀರ್ತಿತಂ ॥ ೫೧ ॥

ಪೂಜಾಂತೇ ಸ್ಥಾಪಯೇಲ್ಲಿಂಗಂ ಸಂಪುಟೇಷು ಪೃಥಗ್‌ಗೃಹೇ ।
ಕರಪೂಜಾನಿವೃತ್ತಾನಾಂ ಸ್ವ ಭೋಜ್ಯಂತು ನಿವೇದಯೇತ್ ॥ ೫೫ ॥

ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾ ಧಾರಯೇತ್ ಸದಾ ।
ವಿಭೂತಿಸ್ತ್ರಿವಿಧಾ ಪ್ರೋಕ್ತಾ ಲೋಕವೇದಶಿವಾಗ್ನಿಭಿಃ ॥ ೫೭ ॥

ವೇದಾಗ್ನಿಜಂ ತಥಾ ಭಸ್ಮ ತತ್ಕರ್ಮಾಂತೇಷು ಧಾರಯೇತ್ ।
ಮಂತ್ರೇಣ ಕ್ರಿಯಯಾ ಜನ್ಯಂ ಕರ್ಮಾಗ್ನೌ ಭಸ್ಮರೂಪಧೃಕ್ ॥ ೫೮ ॥

೫೭ನೆಯ ಶ್ಲೋಕದಲ್ಲಿ, ಲೋಕಾಗ್ನಿ, ವೇದಾಗ್ನಿ, ಶಿವಾಗ್ನಿಗಳೆಂದು ಮೂರು ವಿಧವಾದ ವಿಭೂತಿಗಳನ್ನು ಹೇಳಿರುವುದರಿಂದಲೂ, ಮುಂದೆ ೬೧ನೆಯ ಮಂತ್ರದಲ್ಲಿ ಹೋಮಾದಿ ಕರ್ಮಗಳಲ್ಲಿ ಅಗ್ನಿಯಿಂದ ಆಗುವ ಭಸ್ಮವು ವೇದಾಗ್ನಿಭಸ್ಮವೆಂದು ಹೇಳಿರುವುದರಿಂದಲೂ, ೧೦–೧೨ನೆಯ ಶತಮಾನಗಳಲ್ಲಿ ಸಂಸ್ಕರಿಸಲ್ಪಟ್ಟ ವೀರಶೈವಕ್ಕೆ ಮೊದಲೇ ಇದ್ದ ಪರಿಸ್ಥಿತಿಯನ್ನು ಮೇಲಿನ ಶ್ಲೋಕಗಳು ತೋರಿಸುತ್ತವೆ. ೫೫ನೆಯ ಶ್ಲೋಕದಲ್ಲಿ ಲಿಂಗವನ್ನು ಕರದಲ್ಲಿ ಪೂಜೆಮಾಡುವವರು ತಾವು ತಿನ್ನುವ ಆಹಾರವನ್ನು ಲಿಂಗಕ್ಕೆ ನಿವೇದಿಸಬೇಕೆಂದು ಹೇಳಿರುವುದೂ, ೫೭ನೆಯ ಶ್ಲೋಕದಲ್ಲಿ ಲಿಂಗವನ್ನು ಶಿರಸ್ಸಿನಲ್ಲಿ ಧರಿಸಬೇಕೆಂದು ಹೇಳಿರುವುದೂ ಗಮನಾರ್ಹವಾಗಿದೆ. ಶಂಕರ ವಿಜಯದಲ್ಲಿ "**ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ**" ಎಂದು ಹೇಳಿರುವಂತೆ ಹಣೆ, ಭುಜ, ಎದೆ, ಹೊಕ್ಕಳು—ಈ ಸ್ಥಳಗಳಲ್ಲಿ ಲಿಂಗವನ್ನು ಧರಿಸುವ ಪಾಶುಪತರು ಇವರಲ್ಲ. ಎರಡನೆಯದಾಗಿ ಗಮನಿಸಬೇಕಾದುದೇನೆಂದರೆ, ಲಿಂಗವನ್ನು ಧರಿಸದೇ ಹೋದರೂ ತಮ್ಮದೇ ಆದ ಲಿಂಗವನ್ನು ಪ್ರತಿಯೊಬ್ಬರೂ ಪೂಜಿಸಿ ಸಂಪುಟದಲ್ಲಿಟ್ಟು ಇದಕ್ಕಾಗಿಯೇ ಪ್ರತ್ಯೇಕವಾಗಿರುವ "ಪೃಥಗ್‌ಗೃಹ"ದಲ್ಲಿ ಪೂಜಾಂತ್ಯದಲ್ಲಿ ಇಡುವ ಶೈವರಿದ್ದುದು. ೫೦ನೆಯ ಶ್ಲೋಕದಲ್ಲಿ ತಮ್ಮದೇ ಆದ ಲಿಂಗವು ಪ್ರಮಾದದಿಂದ ಇಲ್ಲದಿರುವಾಗ ಇತರರ ಲಿಂಗವನ್ನು ಪೂಜಿಸುವುದು ನಿಷೇಧವಲ್ಲವೆಂದು ಹೇಳಿದೆ. ಲಿಂಗಧಾರಿಗಳಲ್ಲವಾದರೂ ದೇವಸ್ಥಾನದ ಲಿಂಗಗಳಿಗೆ ಬದಲಾಗಿ ಸ್ವಕೀಯವಾದ ಲಿಂಗಗಳನ್ನು ಸಂಪುಟಗಳಲ್ಲಿಟ್ಟುಕೊಂಡು ಪೂಜಿಸುತ್ತಿದ್ದುದು, ಸ್ಥಾವರ ಲಿಂಗ ಪೂಜಕರಿಗೂ ಲಿಂಗಧಾರಿಗಳಿಗೂ

ಮಧ್ಯಸ್ಥಿತಿಯಲ್ಲಿ ಕೆಲವರಿದ್ದರೆಂಬುದನ್ನು ಸೂಚಿಸುತ್ತದೆ. ಮೂರನೆಯದಾಗಿ ಬೇರೆ ಬೇರೆ ಜಾತಿಯವರಿಗೂ, ಸ್ತ್ರೀಯರಲ್ಲಿ ಸಧವೆಯರಿಗೂ ವಿಧವೆಯರಿಗೂ ಬೇರೆ ಬೇರೆ ಲಿಂಗಗಳನ್ನು ವಿಧಿಸಿರುವುದು ಕಂಡುಬರುವುದು. ಶೂದ್ರರಿಗೂ ಸ್ತ್ರೀಯರಿಗೂ ಲಿಂಗಪೂಜೆಯ ಅಧಿಕಾರ ವನ್ನು ಕೊಟ್ಟಿರುವುದು ೪೯ ಮತ್ತು ೫೧ ನೆಯ ಶ್ಲೋಕಗಳಲ್ಲಿ ಕಂಡುಬರುವುದಾದರೂ ಬೇರೆ ಬೇರೆ ವರ್ಣದವರಿಗೆ ಬೇರೆ ಬೇರೆ ಲಿಂಗಗಳನ್ನು ವಿಧಿಸಿರುವುದರಿಂದ ಇನ್ನೂ ಸ್ವಲ್ಪಮಟ್ಟಿಗೆ ವರ್ಣತಾರತಮ್ಯವೂ ಲಿಂಗತಾರತಮ್ಯವೂ ಉಳಿದಿದ್ದಿತೆನ್ನಬಹುದು.

ಸಿಂಗಿರಾಜಪುರಾಣದಲ್ಲಿ, ಬಸವೇಶ್ವರನು ಹುಟ್ಟಿದೊಡನೆಯೇ ಸಂಗಮೇಶ್ವರನು ಜಂಗಮ ರೂಪದಲ್ಲಿ ಬಂದು ಲಿಂಗವನ್ನಿತ್ತು "ಇಷ್ಟಲಿಂಗಮುದಕ್ಕು; ಈ ಲಿಂಗಮಂ ಸಿಂಹವಿಷ್ಟರ ದೊಳಿಟ್ಟರ್ಚಿಸಬೇಕು" ಎಂದು ಆಜ್ಞಾಪಿಸಿದುದಾಗಿ ಹೇಳಿದೆ. ಅಲ್ಲದೆ ಬಸವೇಶ್ವರನು ಕಪ್ಪಡಿ ಸಂಗಮಕ್ಕೆ ಹೋಗುವಾಗ "ಮನೆಯ ಒಳಗೆ ಪೊಕ್ಕು ತನ್ನಯ ಲಿಂಗಮಂ ಕೊಂಡು" ಹೋದು ದಾಗಿ ಹೇಳಿದೆ. ಇದು ೫೫ ನೆಯ ಶ್ಲೋಕದಲ್ಲಿ ಹೇಳಿರುವಂತೆ ಇಷ್ಟಲಿಂಗವನ್ನು ಪೂಜಾಂತ್ಯ ದಲ್ಲಿ ಸಂಪುಟದಲ್ಲಿಡುವ ಪದ್ಧತಿಗೆ ಅನುಸಾರವಾಗಿದೆ. ಸಿಂಗಿರಾಜಪುರಾಣದಲ್ಲಿ ಬಸವೇಶ್ವರ ನಿಗೆ ಉಪನಯನ ಸಂಸ್ಕಾರವು ಎಂಟನೆಯ ವರ್ಷದಲ್ಲಿ ಆದುದನ್ನು ಹೇಳಿದೆ. ಬಸವೇಶ್ವರನು ವೀರಶೈವನಾಗುವ ಮೊದಲು ಸ್ಮಾರ್ತ ಬ್ರಾಹ್ಮಣರಲ್ಲಿನ ಕಮ್ಮೆಯ ಕುಲದವನೇ ಅಥವಾ ಆರಾಧ್ಯ ಬ್ರಾಹ್ಮಣನೇ ಮೊದಲಾದ ಪ್ರಶ್ನೆಗಳೆದ್ದಿರುವುವು. ೫೫ ನೆಯ ಶ್ಲೋಕದಲ್ಲಿ ಹೇಳಿದಂತೆ ಪೂಜಾಂತ್ಯದಲ್ಲಿ ಇಷ್ಟಲಿಂಗವನ್ನು ಧರಿಸದೆ ಸಂಪುಟದಲ್ಲಿಡುವ ಕುಲವು ಇದ್ದುದೆಂದಮೇಲೆ, ಸಿಂಗಿರಾಜಪುರಾಣದ ಸಲಹೆಯಂತೆ, ಬಸವೇಶ್ವರನು ಪೂಜಾಂತ್ಯದಲ್ಲಿ ಇಷ್ಟಲಿಂಗವನ್ನು ಸಂಪುಟ ದಲ್ಲಿಡುವ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದವನೇ ಎಂಬ ಪ್ರಶ್ನೆಯೂ ಏಳುವುದು. ಇದು ಹೇಗೇ ಇರಲಿ, ಲಿಂಗಪೂಜೆಯಲ್ಲಿ ಹಂತಹಂತವಾಗಿ ಜನರ ಪ್ರೀತಿಯು ಹೆಚ್ಚಿ, ಹೆಚ್ಚು ಹೆಚ್ಚು ಜನರು ಲಿಂಗಧಾರಿಗಳಾದಂತೆ ತೋರುವುದು. ಮೊದಲು ಮೊದಲು ಪೂಜೆಗಾಗಿ ಕಾಶಿ ಮೊದಲಾದ ಕ್ಷೇತ್ರಗಳಿಗೆ ಜನರು ಹೋಗಬೇಕಾಗಿದ್ದಿತು. ಹಾಗೆ ಹೋಗಲು ಎಲ್ಲರಿಗೂ ಸಾಧ್ಯವಿಲ್ಲವಾಗಿ ಊರಿಗೊಂದು ದೇವಸ್ಥಾನವಾಯಿತು. ದೇವಸ್ಥಾನಗಳಲ್ಲಿ ಏಕಾಗ್ರತೆಗೆ ಅವಕಾಶವಿಲ್ಲವಾಗಿ ಮನೆ ಮನೆಗೂ ದೇವರುಗಳಾದುವು. ಅನಂತರ ಪ್ರತಿಯೊಬ್ಬರೂ ಅವರವರ ಇಷ್ಟ ಲಿಂಗವನ್ನು ಪೂಜಿಸಿ ಅವರವರ ಸಂಪುಟಗಳಲ್ಲಿ ಇಡುವುದು ಸರಿಯೆನಿಸಿತು. ಇವೆಲ್ಲ ಪದ್ಧತಿಗಳೂ ರೂಢಿ ಯಲ್ಲಿ ಇದ್ದುವು. ಇವೆಲ್ಲಕ್ಕೂ ಅತಿಶಯವೆನಿಸಿದ ಲಿಂಗಧಾರಣೆಯಲ್ಲಿ ಜನರ ಒಲುಮೆ ಹೆಚ್ಚಿದುದರಲ್ಲಿ ಆಶ್ಚರ್ಯವೇನೂ ಇಲ್ಲ.

## ಪಾಶುಪತ ಸೂತ್ರದಲ್ಲಿಯೂ, ಸರ್ವದರ್ಶನ ಸಂಗ್ರಹದಲ್ಲಿಯೂ ಲಿಂಗಧಾರಿ ಪದಪ್ರಯೋಗ

ವೀರಶೈವ ಗ್ರಂಥಗಳಲ್ಲಿ ವೈದಿಕಪಾಶುಪತರು ಲಿಂಗಧಾರಿಗಳೆಂಬ ನಿಲುವೇ ಕಂಡುಬರುವು ದೆಂಬುದನ್ನು ತಿಳಿಸಲಾಯಿತು. ಪಾಶುಪತ ಮತದವರಿಗೆ ಲಿಂಗಧಾರಣೆಯಿದ್ದಿತೆಂಬುದು ವಿಚಾರಾರ್ಹವಾಗಿದೆ. ಈ ವಿಷಯದಲ್ಲಿ ಶ್ರೀಯುತ ಭಂಡಾರ್ಕರವರ ಅಭಿಪ್ರಾಯವಿದು:

The author of Sutras (Panchadyayi of Nakula) has laid down that one should besmear his body after the worship and wear the faded flowers and

leaves which had been removed from the God and a Linga (*S.V. and O.M.S.*, page 123). ಸಾಯಣಮಾಧವಪ್ರಣೀತವಾದ ಸರ್ವದರ್ಶನಸಂಗ್ರಹದ ಆಧಾರ ದಿಂದ ಇವರು ಈ ಅಭಿಪ್ರಾಯಕ್ಕೆ ಬಂದಿರುವರು "**ಅನುಸ್ನಾನ ನಿರ್ಮಾಲ್ಯ ಲಿಂಗಧಾರೀತಿ**" (ಸ.ವ.ಸಂ., ಪು. ೧೭೦, Ed. Abhyankar).

ಪಾಶುಪತಸೂತ್ರಗಳ ಪ್ರಥಮಾಧ್ಯಾಯದಲ್ಲಿ "**ಲಿಂಗಧಾರಿ**" ಎಂಬುದೊಂದು ಸೂತ್ರ ವಿರುವುದೂ ಪಾಶುಪತಸೂತ್ರದ ಕೌಂಡಿನ್ಯ ಭಾಷ್ಯದಲ್ಲಿ "**ಭಸ್ಮಸ್ನಾನ ಶಯನಾನುಷ್ಠಾನ ನಿರ್ಮಾಲ್ಯೈಕವಾದಿ ನಿಷ್ಪನ್ನಂ, ಸ್ವಶರೀರ ಲೀನಂ, ಪಾಶುಪತಮಿತಿ ಲೌಕಿಕಾದಿ ಜ್ಞಾನ ಜನಕಂ ತತ್ । ಲೀಯನಾಲ್ಲಿಂಗನಾಚ್ಚ ಲಿಂಗಂ । ತದ್‌ಧಾರಯನ್ ಲಿಂಗಧಾರೀ ಭವತಿ । ದಂಡಧಾರಿವದಿತ್ಯರ್ಥಃ**" ಎಂದು ಹೇಳಿರುವುದರಿಂದ ಪಾಶುಪತಸೂತ್ರಗಳ ಪ್ರಕಾರವೇ ಪಾಶುಪತರು ಶಿವಲಿಂಗಧಾರಿಗಳೆಂಬುದು ಸ್ಪಷ್ಟವಾಗುತ್ತದೆ. ಆದರೆ ಶ್ರೀಯುತ ಕಪಟರಾಳ ಕೃಷ್ಣರಾಯರು ಅವರ 'ಕರ್ನಾಟಕ ಲಾಕುಳಶೈವರ ಇತಿಹಾಸ' ಎಂಬ ಗ್ರಂಥದಲ್ಲಿ ಈ ಪಾಶುಪತಸೂತ್ರಭಾಗದ ಆಧಾರದ ಮೇಲೆಯೇ ಲಿಂಗಧಾರಿಯೆಂದರೆ ದಂಡಧಾರಿ ಯೆಂದರ್ಥವಾಗುವುದೆಂದೂ, 'ಲಿಂಗಧಾರಿ' ಎಂದಿರುವ ಪಾಶುಪತಸೂತ್ರವನ್ನು ಸರ್ವದರ್ಶನ ಸಂಗ್ರಹದಲ್ಲಿ ಉದ್ಧರಿಸಿರುವುದನ್ನು ಅನುಸರಿಸಿ ಕೆಲ ಆಧುನಿಕರು ಈಗಿನ ಲಿಂಗಾಯತರಂತೆ ಪಾಶುಪತರಲ್ಲಿ ಲಿಂಗಧಾರಣೆಯಿತ್ತೆಂದು ಹೇಳುವುದು ಸರಿಯಲ್ಲವೆಂದೂ ತೀರ್ಮಾನಿಸಿದ್ದಾರೆ. ಶ್ರೀಯುತ ಭಂಡಾರ್ಕರರನ್ನೇ ಅನುಲಕ್ಷಿಸಿ 'ಆಧುನಿಕ'ರೆಂದು ಅವರು ಹೇಳಿರುವಂತಿದೆ. ಆದರೆ ಯಾವ ಸಂಪ್ರದಾಯಶರಣರೇ ಆಗಲಿ ಹೇಗೆ ಮೇಲಿನ ಕೌಂಡಿನ್ಯಭಾಷ್ಯ ಭಾಗದಲ್ಲಿರುವ ಲಿಂಗ ಶಬ್ದಕ್ಕೆ ದಂಡವೆಂದೂ ಲಿಂಗಧಾರಿಯೆಂದರೆ ದಂಡಧಾರಿಯೆಂದೂ ಅರ್ಥಮಾಡುವರೋ ಅದನ್ನು ಶ್ರೀ॥ ಕಪಟರಾಳರು ಸ್ಪಷ್ಟಮಾಡಿಲ್ಲ. ಭಾಷ್ಯದಲ್ಲಿಯೇ "**ಲೀಯನಾತ್, ಲಿಂಗ ನಾತ್, ಚ ಲಿಂಗಂ**" ಎಂದು ಲಿಂಗ ಶಬ್ದದ ನಿರ್ವಚನ ಮಾಡಿದೆ. ಲೀಯನಾತ್ ಲಿಂಗಂ ಎಂದು ಹೇಳುವುದರಲ್ಲಿ ಶಿವಲಿಂಗವೇ ಲಿಂಗವೆಂಬುದರ ಅರ್ಥವೆನ್ನುವುದಕ್ಕೆ ಸೂತಸಂಹಿತೆಯ ಆಧಾರವಿದೆ.

**ಲೀಯನಾಲ್ಲಿಂಗಮಿತ್ಯಾಹುಃ ಅಪರೇ ವೇದವಿತ್ತಮಾಃ ।**
**ತಥಾಪಿ ಲಿಂಗಂ ಭಗವಾನ್ ಸ್ವಯಮೇವ ಮಹೇಶ್ವರಃ ॥**

— **ಸೂತಸಂಹಿತೆ, ಪುಟ ೫೭೨.**

ಇನ್ನು ಲಿಂಗನಾತ್ ಲಿಂಗಂ ಎಂದರೆ ಎಲ್ಲವನ್ನೂ ಆಲಿಂಗಿಸಿಕೊಂಡಿರುವುದರಿಂದ ಲಿಂಗವೆನಿಸಿ ಕೊಳ್ಳುವುದು. "**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್**" ಎಂಬ ಆಧಾರದಂತೆ ಈಶನು ಜಗತ್ತೆಲ್ಲವನ್ನು ಆಲಿಂಗಿಸಿಕೊಂಡು ಕಾಪಾಡುತ್ತಿದ್ದಾನೆ. ಆದುದರಿಂದ 'ಲಿಂಗನಾತ್ ಲಿಂಗಂ' ಎನ್ನುವುದರಲ್ಲಿಯೂ ಶಿವಲಿಂಗವೆಂದೇ ಅಭಿಪ್ರಾಯವಾಗುತ್ತದೆ. "**ತದ್ ಧಾರಯನ್ ಲಿಂಗಧಾರೀ ಭವತಿ । ದಂಡಧಾರಿವದಿತ್ಯರ್ಥಃ**" ಎಂದು ಕೌಂಡಿನ್ಯ ಭಾಷ್ಯದಲ್ಲಿ ಹೇಳಿರುವುದರಿಂದ ಲಿಂಗವೆಂದರೆ ದಂಡವಲ್ಲ, ಶಿವಲಿಂಗವೇ ಎಂಬುದು ಮತ್ತೂ ಸ್ಪಷ್ಟವಾಗುವುದು. ದಂಡಧಾರಿವದಿತ್ಯರ್ಥಃ ಎಂದು ಹೇಳದೆ "**ದಂಡಧಾರೀತ್ಯರ್ಥಃ**" ಎಂದು ಹೇಳಿದ್ದರೆ ಲಿಂಗಧಾರಿಯೆಂದರೆ ದಂಡಧಾರಿಯೆಂದೇ ಅರ್ಥವಾಗುತ್ತಿತ್ತು. ಕೌಂಡಿನ್ಯ ಭಾಷ್ಯದ ಅಭಿಪ್ರಾಯವು ಹಾಗಿದ್ದಿದ್ದರೆ, ಅದರಲ್ಲಿ 'ದಂಡಧಾರೀತ್ಯರ್ಥಃ' ಎಂದೇ ಹೇಳ ಲಾಗುತ್ತಿತ್ತು. ಅದರಲ್ಲಿ ಹಾಗೆ ಹೇಳದೆ "**ದಂಡಧಾರಿವದಿತ್ಯರ್ಥಃ**" ಎಂದೇ ಹೇಳಿದೆ.

ದಂಡವನ್ನು ಧರಿಸಿದವನನ್ನು ದಂಡಧಾರಿ ಎಂದು ಹೇಗೆ ಹೇಳುವರೋ ಹಾಗೆಯೇ ಲಿಂಗವನ್ನು ಧರಿಸಿದವನನ್ನು ಲಿಂಗಧಾರಿಯೆಂದು ಹೇಳಬೇಕೆಂಬುದು ಮೇಲಿನ ಭಾಷ್ಯಭಾಗದ ವಿವರಣೆ. ದಂಡಧಾರಿಯೆಂಬುದು ಉಪಮಾನ, ಲಿಂಗಧಾರಿಯೆಂಬುದು ಉಪಮೇಯ. ಉಪಮಾನ–ಉಪಮೇಯಗಳು ಬೇರೆ ಬೇರೆಯಾಗಿರಬೇಕಲ್ಲವೆ? ಮುಖವು ಕಮಲದಂತೆ ಮನೋಹರವಾಗಿದೆ ಯೆನ್ನುವಾಗ ಮುಖವೇ ಬೇರೆ ಕಮಲವೇ ಬೇರೆಯಷ್ಟೆ. ಹಾಗೆಯೇ ಲಿಂಗಧಾರಿಯು ದಂಡ ಧಾರಿಯಲ್ಲ. "ಲಿಂಗಧಾರಿ" ಪದವನ್ನು "ದಂಡಧಾರಿ" ಪದದಹಾಗೆ ಅರ್ಥಮಾಡಿಕೊಳ್ಳ ಬೇಕೆಂಬುದು "**ದಂಡಧಾರಿವದಿತ್ಯರ್ಥಃ**" ಎಂದು ಭಾಷ್ಯದಲ್ಲಿ ಹೇಳಿರುವುದರ ಅಭಿಪ್ರಾಯ. ಇದರಿಂದ ಲಿಂಗಧಾರಿಯೆಂದರೆ ದಂಡಧಾರಿಯೆಂದು ಅರ್ಥವಾಗುವುದಿಲ್ಲವೆಂಬುದು ಸ್ಪಷ್ಟ ವಾಗಿದೆ.

ಮನುಸ್ಮೃತಿಯ ಶ್ಲೋಕವೊಂದರಲ್ಲಿ ಯಾವ ಆಶ್ರಮದಲ್ಲಿದ್ದರೂ ಎಲ್ಲ ಪ್ರಾಣಿಗಳಲ್ಲಿಯೂ ಸಮದರ್ಶಿಯಾಗಿರುವುದು ಮುಖ್ಯವೇ ಹೊರತು, ಆ ಆಶ್ರಮದ ಚಿಹ್ನವಲ್ಲವೆಂದು ಹೇಳಿದೆ. ಆಶ್ರಮದ ಚಿಹ್ನವು ಧರ್ಮಕಾರಣವಲ್ಲ ಎಂಬ ವಿಷಯವನ್ನು "**ನ ಲಿಂಗಂ ಧರ್ಮ ಕಾರಣಂ**" ಎಂಬ ಪದಗಳಿಂದ ಹೇಳಿದೆ. ಇದೇ ಅರ್ಥದಲ್ಲಿಯೇ ಲಿಂಗಿ ಲಿಂಗಧಾರಿ ಪದಗಳು ಮಹಾಭಾರತದಲ್ಲೂ, ಪಾಶುಪತಾಗಮದಲ್ಲೂ ಉಪಯೋಗಿಸಲ್ಪಟ್ಟಿವೆ ಎಂಬುದು ಶ್ರೀಯುತ ಕಪಟರಾಳರ ವಾದ. ಮನುಸ್ಮೃತಿಯಲ್ಲಿನ ಲಿಂಗ ಪದವನ್ನು ಉಪಯೋಗಿಸಿರುವ ಸನ್ನಿವೇಶ ದಲ್ಲಿ ಆ ಪದಕ್ಕೆ ಚಿಹ್ನವೆಂದು ಅರ್ಥ. ಆದರೆ ಇದೇ ಅರ್ಥವನ್ನು ಬೇರೆ ಕಡೆಗಳಲ್ಲೂ ಉಪಯೋಗಿಸಬೇಕೆಂಬುದು ಸರಿಯಲ್ಲ. ಏಕೆಂದರೆ ಲಿಂಗ ಪದಕ್ಕೆ ಶಿವಲಿಂಗವೆಂಬ ಪ್ರಸಿದ್ಧ ವಾದ ಅರ್ಥವು ಇದೆ. ಆ ಅರ್ಥವು ಹೊಂದುವ ಕಡೆ ಆ ಅರ್ಥವನ್ನೇ ಹೇಳಬೇಕಾಗುವುದು. ಒಂದು ಪದಕ್ಕೆ ಎರಡು ಅರ್ಥಗಳಿರುವಾಗ ಆ ಪದವನ್ನು ಉಪಯೋಗಿಸಿರುವ ಸನ್ನಿವೇಶಕ್ಕೆ ತಕ್ಕಂತಹ ಅರ್ಥವನ್ನು ಹೇಳಬೇಕಾಗುವುದು. ಸೈಂಧವ ಎಂದರೆ ಕುದುರೆಯೆಂದೂ ಉಪ್ಪೆಂದೂ ಎರಡು ಅರ್ಥಗಳಿವೆ. ಊಟಮಾಡುವಾಗ 'ಸೈಂಧವಮಾನಯ' ಎಂದರೆ ಕುದುರೆ ಯನ್ನು ತಂದರೆ ಆಗುವುದೆ ರುಚಿ? ಪ್ರಯಾಣಕ್ಕೆ ಹೊರಟಾಗ 'ಸೈಂಧವಮಾನಯ' ಎಂದರೆ ಉಪ್ಪನ್ನು ತಂದರೆ ಸಾಗುವುದೆ ಪಯಣ? ಮಹಾಭಾರತದ ವಿಷಯವನ್ನು ಬೇರೆ ಕಡೆಯಲ್ಲಿ ವಿಚಾರಮಾಡಲಾಗಿದೆಯಷ್ಟೆ; ಹಾಗೆಯೇ ಪಾಶುಪತ ಆಗಮದಲ್ಲಿ ಲಿಂಗಧಾರಿ ಯೆಂದರೆ ದಂಡಧಾರಿಯೆಂದು ಅರ್ಥಮಾಡಲಾಗುವುದಿಲ್ಲವೆಂದು ಮೇಲೆ ತೋರಿಸಿದೆ. ಅದರಲ್ಲಿ ಶಿವಲಿಂಗಧಾರಿಯೆಂದೇ ಅರ್ಥಮಾಡಬೇಕು. ಶಂಕರದಿಗ್ವಿಜಯದಲ್ಲಿ "**ಲಲಾಟೇ ಭುಜದ್ವಯೋ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ**" ಎಂದು ಹೇಳಿರುವುದು ಶ್ರೀಯುತ ಕಪಟರಾಳರ ಅಭಿಪ್ರಾಯವು ಸರಿಯಲ್ಲವೆಂಬುದನ್ನೂ, ಪಾಶುಪತರನ್ನು ಲಿಂಗಿ ಎಂದು ಕರೆದಾಗ ಶಿವಲಿಂಗಧಾರಿಯೆಂದು ಅರ್ಥಮಾಡುವುದೇ ಸರಿಯೆಂಬುದನ್ನೂ ದೃಢಪಡಿಸುತ್ತದೆ.

## ಲಿಂಗಿ, ಅಲಿಂಗಿ ಪದಗಳ ಅರ್ಥಕ್ಕೆ ಆಗಮಾಧಾರ

ಮುಂದೆ ವಿವೇಚಿಸುವ ಶಿಲಾಲೇಖಗಳಲ್ಲಿ ಸಹಾ 'ಲಿಂಗಿ' ಪದವು ಪ್ರಯೋಗಿಸಲ್ಪಟ್ಟಿರು ವುದರಿಂದಲೂ, ಹಿಂದೆ ಈ ಪದದ ಅರ್ಥದ ವಿಷಯದಲ್ಲಿ ತಕ್ಕಷ್ಟು ವಿಮರ್ಶೆ ನಡೆದಿರುವುದ ರಿಂದಲೂ 'ಲಿಂಗಿ' ಎಂದರೆ ಶಿವಲಿಂಗಧಾರಿ ಎಂದೂ 'ಅಲಿಂಗಿ' ಎಂದರೆ ಶಿವಲಿಂಗಧಾರಿ

ಯಾದ ವೀರಶೈವನಲ್ಲವೆಂದೂ ಅರ್ಥವಾಗುವುದೆಂಬುದನ್ನು ತಿಳಿಸಲು ಆಗಮಾಧಾರವನ್ನು ಕೊಟ್ಟು, ಈ ವಿಷಯವನ್ನು ಮುಗಿಸಬಹುದು. ಪಾರಮೇಶ್ವರಾಗಮದ ೯ನೆಯ ಪಟಲದಲ್ಲಿ:

ವೀರಶೈವ ಮತಂ ಪ್ರಾಪ್ಯ ಯಃ ಕುರ್ಯಾತ್ ಪ್ರಾಣಹಿಂಸನಂ ।
ಕರ್ಮಣಾ ಮನಸಾ ವಾಚಾ ಸ ವಸೇದ್ ರೌರವೇ ಚಿರಂ ॥ ೩೯ ॥

ಎಂದು ಹೇಳಿ, ಪ್ರಾಣಿಹಿಂಸೆಯನ್ನು ಮಾಡುವ ವೀರಶೈವನಿಗಾಗುವ ಶಿಕ್ಷೆಯನ್ನು ತಿಳಿಸಿದೆ. ಏಳನೆಯ ಪಟಲದಲ್ಲಿಯೇ ಪ್ರಾಣಿಹಿಂಸೆಗೆ ಕಾರಣವಾದ ಮಾಂಸಭಕ್ಷಣವನ್ನು ನಿಷೇಧ ಮಾಡಿದೆ.

ನ ಮಾಂಸಂ ಭಕ್ಷಯೇಲ್ಲಿಂಗೀ ನಾಪ್ಯಪೇಯಂ ಪಿಬೇತ್ ಕ್ವಚಿತ್ ।
ನಾಭ್ಯಭಕ್ಷಂ ಭಕ್ಷಯೇದ್ದೇವಿ ನಾನಾವಶ್ಯ ನಿಮಿತ್ತಕಂ ॥ ೪೦ ॥

ಹಾಗೆಯೇ ಮುಂದುವರಿದು ವೀರಶೈವರಲ್ಲದವರ ವಿಷಯದಲ್ಲಿ ದ್ವೇಷಮಾಡಬಾರದೆಂದು ಹೇಳಿದೆ.

ನೌದಾಸೀನ್ಯಂ ನ ಚ ದ್ವೇಷಂ ನ ಹಿಂಸಾಂ ನಾಪಿ ವಂಚನಂ ।
ಕುರ್ವೀತ ಲಿಂಗೀ ಯತ್ನೇನ ವಿಮತೇಷ್ವಪ್ಯಲಿಂಗಿಷು ॥ ೪೧ ॥

ಲಿಂಗಿಗಳು ವಿಮತದವರಾದ ಅಲಿಂಗಿಗಳ ವಿಷಯದಲ್ಲಿ ತೋರಬೇಕಾದ ನಡತೆಯನ್ನು ಇಲ್ಲಿ ಹೇಳಿರುವುದರಿಂದ ಲಿಂಗಿ ಮತ್ತು ಅಲಿಂಗಿಗಳು ಬೇರೆ ಬೇರೆ ಮತದವರೆಂಬುದು ಸ್ಪಷ್ಟವಾಗಿದೆ. ಇದರಿಂದ ಲಿಂಗಿ ಮತ್ತು ಅಲಿಂಗಿ ಪದಗಳಿಗೆ ಬೇರೆ ಅರ್ಥ ಮಾಡುವುದು ತಪ್ಪಾಗುವುದು.

## ಶಾಸನಗಳಲ್ಲಿ ಲಿಂಗಿ ಪದದ ಪ್ರಯೋಗ

ಹನ್ನೆರಡನೆಯ ಶತಮಾನಕ್ಕೆ ಹಿಂದೆಯೇ ಪಾಶುಪತಲಾಕುಳಕಾಳಾಮುಖಾದಿಗಳನ್ನು 'ಲಿಂಗಿ' ಎಂದು ಶಾಸನಗಳಲ್ಲಿ ಕರೆದಿರುವರೆಂಬುದು ಎಲ್ಲರೂ ಒಪ್ಪಿದ ಮಾತು. ಆದರೂ ಉದಾಹರಣಾರ್ಥವಾಗಿ ಒಂದೆರಡು ಶಾಸನಪದ್ಯಗಳನ್ನು ಕೊಟ್ಟಿದೆ. ಕ್ರಿ.ಶ. ೧೦೭೪ರಲ್ಲಿ ಬರೆದ ಬಳ್ಳಿಗಾವಿಯ ೯೪ನೆಯ ಶಾಸನದ ಒಂದು ಪದ್ಯವಿದು:

ಇವನೀಯಂದದೊಳೆಯ್ದೆ ರಕ್ಷಿಸಿದವಂಗಿಷ್ಟಾರ್ಥ ಸಂಸಿದ್ಧಿ ಸಂ ।
ಭವಿಕುಂ. ಪೂಣ್ದಳಿದಂಗೆ, ಗಂಗೆಗಯಕೇದಾರಂಕುರುಕ್ಷೇತ್ರಮಂ ॥
ಬಿವರೊಳ್ ಪೇಸದೆ ಪಾರ್ವರಂ ಕವಿಲೆಯಂ ಸ್ತ್ರೀ ಬಾಳರಂ ಲಿಂಗಿಯ ।
ಪ್ಪವರಂ, ಕೊಂದನವಂ ಸ್ವಗೋತ್ರಸಹಿತಂ ಬೀಳ್ಗುಂ ಮಹಾ ಘೋರದೊಳ್ ॥

ಕ್ರಿ.ಶ. ೧೧೧೩ರ ಬೆಳಗಾವಿಯ ೯೯ನೆಯ ಶಾಸನದ ಪದ್ಯಗಳಿವೆರಡು:

ಗಂಗಾಯಮುನಾ ಸಾಗರ । ಸಂಗಮದೊಳ್ ಕೋಟಿ ಪಾರ್ವರುಂ ಕವಿಲೆಗಳುಂ ॥
ಲಿಂಗಿಗಳುಂ ಬೆರಸಳಿದಂ । ಲಿಂಗಮನೀ ಧರ್ಮಮಂ ಕರುತ್ತಳಿದಧಮಂ ॥

ಕವಿಲೆಗಳಂ ಕೋಟಿಯನೊಸೆ । ದವನೀ ಸುರಕೋಟಿಗಿತ್ತನೀ ಧರ್ಮಕ್ಕು ॥
ದ್ಭವವಂ ಪಡೆದವನೀ ತೀ । ರ್ಥ ವಿತತಿಯೊಳ್ ಲಿಂಗ ಲಿಂಗಿಜನ ಸನ್ನಿಧಿಯೊಳ್ ॥

ಈ ಪದ್ಯಗಳಲ್ಲಿ ಶಾಸನದ ಧರ್ಮಗಳನ್ನು ಕೆಡಿಸಿದವರಿಗೆ "ಪಾರ್ವರಂ, ಕವಿಲೆಯಂ ಸ್ತ್ರೀ ಬಾಳರಂ ಲಿಂಗಿಯಪ್ಪವರಂ" ಕೊಂದ ಪಾಪಬರುವುದೆಂದು ಹೇಳಿದೆ. ಆಗಮಾಧಾರಗಳಿಂದಲೂ ಶಂಕರದಿಗ್ವಿಜಯ, ಸರ್ವದರ್ಶನ ಸಂಗ್ರಹ, ಪಾಶುಪತಸೂತ್ರ ಮತ್ತು ಅದರ ಭಾಷ್ಯವೇ ಮೊದಲಾದವುಗಳಿಂದಲೂ ಲಿಂಗಿಯೆಂದರೆ ಶಿವಲಿಂಗಧಾರಿಗಳೆಂಬುದನ್ನು ಸ್ಪಷ್ಟ

ಮಾಡಲಾಯಿತು. ಆದರಂತೆಯೇ ಶಾಸನಾಧಾರಗಳಿಂದಲೂ ಹನ್ನೆರಡನೆಯ ಶತಮಾನಕ್ಕೆ ಹಿಂದೆಯೇ ಲಿಂಗಧಾರಿಗಳಿದ್ದರೆಂಬುದನ್ನು ಸ್ಪಷ್ಟಮಾಡಲಾಗಿದೆ. ಈ ಪದ್ಯಗಳ ವಿಷಯವಾಗಿ ಜಯಕರ್ನಾಟಕದ, ೯ನೆಯ ಸಂಪುಟದಲ್ಲಿ ಚನ್ನಮಲ್ಲಪ್ಪ ಗಲಗಲಿಯವರು ಒಂದು ಲೇಖನ ವನ್ನು ಬರೆದು "ಲಿಂಗಿಗಳು ಎಂಬ ಶಬ್ದಕ್ಕೆ ಲಿಂಗರೂಪದಲ್ಲಿ ಸನಾತನ ಬ್ರಹ್ಮವನ್ನರ್ಚಿಸುವ ತಪಸ್ವಿಗಳೆಂದು" ಅರ್ಥಮಾಡಿರುವರು. ತಮಗೆ ಸರಿಹೊಂದದ ಈ ಅಭಿಪ್ರಾಯವನ್ನು ಶ್ರೀಯುತ ಕಪಟರಾಳ ಕೃಷ್ಣರಾಯರು ಅನುಮೋದಿಸಿಲ್ಲವಾದರೂ ಆದನ್ನು ಒಪ್ಪದಿರಲು ಕಾರಣವಿಲ್ಲ. 'ಲಿಂಗಿ' ಪದವು ಲಿಂಗ ಪದದೊಡನೆ ಇರುವುದು ಗಮನಾರ್ಹ.

## ಶ್ರೀಯುತ ಕಪಟರಾಳರ ಭಿನ್ನಾಭಿಪ್ರಾಯ

ಮೇಲಿನ ಪದ್ಯಗಳಲ್ಲಿ "ಪಾರ್ವರಂ" ಮತ್ತು "ಲಿಂಗಿಗಳಂ" ಎಂದು ಎರಡು ಪೂಜ್ಯ ಜನಾಂಗಗಳನ್ನು ಹೇಳಿದೆ; ಹಾಗಾದರೆ ಈ ಬ್ರಾಹ್ಮಣೇತರ ಪೂಜ್ಯರು ಯಾರು? ಎಂಬ ಪ್ರಶ್ನೆ ಯನ್ನು ಶ್ರೀಯುತ ಚನ್ನಮಲ್ಲಪ್ಪನವರು ಎತ್ತಿರುವರು. ಈ ಲಿಂಗಿಗಳು (ಕಾಳಾಮುಖರು) ಬ್ರಾಹ್ಮಣರಲ್ಲವೆಂದು ಶ್ರೀಮಾನ್ ಗಲಗಲಿ ಚನ್ನಮಲ್ಲಪ್ಪನವರು "ಶಾಸನಗಳ ಫಲ ಶ್ರುತಿ" ಪದ್ಯಗಳನ್ನು ಉದಹರಿಸಿ ದೃಢಪಡಿಸಿರುವರು, ಎಂದು ಶ್ರೀಯುತ ಕಪಟರಾಳ ಕೃಷ್ಣರಾಯರು, ಅವರ "ಕರ್ನಾಟಕದ ಲಾಕುಳಶೈವರ ಇತಿಹಾಸ" ಎಂಬ ಗ್ರಂಥದಲ್ಲಿ ಹೇಳಿ ಈ ವಾದವನ್ನು ಅನುಮೋದಿಸಿದ್ದಾರೆ. ಈ ವಾದವು ಸರಿಯಲ್ಲ. ಮೊದಲನೆಯ ಪದ್ಯದಲ್ಲಿ "ಪಾರ್ವರಂ ಕವಿಲೆಯಂ ಸ್ತ್ರೀಬಾಳರಂ ಲಿಂಗಿಯುಪ್ಪವರಂ" ಎಂದು ಹೇಳಿದ ಮಾತ್ರಕ್ಕೆ ಪಾರ್ವರೂ ಲಿಂಗಿಗಳೂ ಬೇರೆ ಬೇರೆ ಜನಾಂಗವೆಂದು ಏಕೆ ಹೇಳಬೇಕು? ಪಾರ್ವರಲ್ಲಿ ಸ್ತ್ರೀಬಾಳರೂ ಇರುವಂತೆ ಲಿಂಗಿಗಳೂ ಇರಬಹುದಷ್ಟೆ. ಆದುದರಿಂದ ಬ್ರಾಹ್ಮಣರಲ್ಲಿ "ಲಿಂಗಿ"ಗಳಿರಲಿಲ್ಲ ವೆನ್ನುವುದು ಸರಿಯಲ್ಲ.

ಮತ್ತೊಂದು ರೀತಿಯಲ್ಲಿ ಈ ವಾದವು ಸರಿಯಲ್ಲವೆಂದು ತೋರಿಸಬಹುದು. ಶ್ರೀಯುತ ಕಪಟರಾಳರ ಗ್ರಂಥದ ೪೪ನೆಯ ಪುಟದಲ್ಲಿ ಒಂದು ಶಾಸನಪದ್ಯವನ್ನು ಉದ್ಧರಿಸಿದ್ದಾರೆ. ಅದರಲ್ಲಿ **"ಗೊರವರ್ ಕಾಳಾಮುಖರ್ ನೈಷ್ಠಿಕರೆನಿಸದೊಡಂ"** ಎಂದು ಹೇಳಿದೆ. ಇಲ್ಲಿ ಗೊರವರೂ ಕಾಳಾಮುಖರೂ ಎಂಬ ಎರಡು ಪೂಜ್ಯಜನಾಂಗಗಳನ್ನು ಹೇಳಿದೆಯೆಂದೂ, ಆದುದರಿಂದ ಕಾಳಾಮುಖರು ಗೊರವರಲ್ಲವೆಂದೂ ಶ್ರೀಯುತ ಕಪಟರಾಳರ ಮೇಲಿನ ವಾದವನ್ನನುಸರಿಸಿ ಹೇಳಬೇಕಾಗುವುದು. ಆದರೆ ಶ್ರೀಯುತ ಕಪಟರಾಳರ ಗ್ರಂಥದಿಂದಲೇ ಸ್ಪಷ್ಟವಾಗುವಂತೆ ಕಾಳಾಮುಖರು ಗೊರವರಲ್ಲಿ ಒಂದು ವಿಶಿಷ್ಟ ದೀಕ್ಷೆಯನ್ನು ಪಡೆದವರು. ಆದುದರಿಂದ ಮೇಲಿನ ಶ್ರೀಯುತ ಕಪಟರಾಳರ ವಾದವು ಸರಿಯಲ್ಲ. ಗೊರವರಲ್ಲಿ ಒಂದು ವಿಶಿಷ್ಟ ದೀಕ್ಷೆಯನ್ನು ಪಡೆದವರು ಕಾಳಾಮುಖರಾಗಿರುವಂತೆ, ಬ್ರಾಹ್ಮಣರಲ್ಲಿ ಒಂದು ವಿಶಿಷ್ಟ ದೀಕ್ಷೆಯನ್ನು—ಎಂದರೆ ಲಿಂಗ ದೀಕ್ಷೆಯನ್ನು—ಪಡೆದ ಲಿಂಗಿಗಳಿರಬಹುದಷ್ಟೆ!

ಶ್ರೀಯುತ ಕಪಟರಾಳರ ಗ್ರಂಥದ ೧೪೪ನೆಯ ಪುಟದಲ್ಲಿ—"ಶುದ್ಧ ಶೈವಸಿದ್ಧಾಂತ ಮತ್ತು ಲಾಕುಳ ಸಿದ್ಧಾಂತ ಎರಡು ಭಿನ್ನ ಭಿನ್ನ ಸಿದ್ಧಾಂತಗಳಿದ್ದುವು. ಶುದ್ಧ ಶೈವಸಿದ್ಧಾಂತ ಬ್ರಾಹ್ಮಣರದು, ಮತ್ತು ಲಾಕುಳ ಸಿದ್ಧಾಂತವು ಈಗಿನ ಜಂಗಮರ ಪೂರ್ವಜರದು....ನಿಜ ಗುಣಶಿವಯೋಗಿಯೂ, ಹರಿಹರರಾಘವಾಂಕರು ಬ್ರಾಹ್ಮಣರಾಗಿದ್ದು ಈ ಶುದ್ಧ ಸಂಪ್ರದಾಯ

ದವರಾಗಿದ್ದರೆಂದು ತೋರುವುದು'' ಎಂದು ಶ್ರೀಯುತ ಕಪಟರಾಳರವರು ಹೇಳುತ್ತಾರೆ. ಈ ಅಭಿಪ್ರಾಯದಲ್ಲಿ ಏನೂ ತಿರುಳಿಲ್ಲವಾಗಿದೆ.

ಶ್ರೀಯುತ ಕಪಟರಾಳರಿಗೆ ನಿಜಗುಣಶಿವಯೋಗಿಗಳು ಬ್ರಾಹ್ಮಣರೆಂಬ ಭ್ರಾಂತಿಯೂ, ಅವರು ಶುದ್ಧ ಶೈವಸಿದ್ಧಾಂತದವರೆಂಬ ಭ್ರಾಂತಿಯೂ ಅಡಿಗಲ್ಲಿಲ್ಲದ ಊಹಾಪೋಹೆಯ ಕಟ್ಟಡಗಳನ್ನು ಕಟ್ಟಲು ಕಾರಣವಾಗಿವೆ. ಮತ್ತೊಂದು ಲೇಖನದಲ್ಲಿ ''ವೀರಶೈವರಲ್ಲಿ ಸಾಂಪ್ರದಾಯ ಭೇದವಿಲ್ಲವೆ'' ಎಂಬ ಪ್ರಶ್ನೆಯನ್ನೆತ್ತಿ ವಚನಕಾರರದು ಅದ್ವೈತಸಿದ್ಧಾಂತವೆಂದೂ, ನಿಜಗುಣರು ಹೇಳುವ ಶಿವಸಿದ್ಧಾಂತವು ದ್ವೈತಪ್ರತಿಪಾದಕವೆಂದೂ ಹೇಳಿ ಅದರಂತೆ ಮೋಕ್ಷದಲ್ಲಿ ಜೀವನು ಶಿವಸಮಾನತೆಯನ್ನು ಪಡೆದು ಪತಿಸೇವೆಗಯ್ಯುತ್ತಿರುವನು ಎಂದಿದಾರೆ. ಮೊದಲನೆಯದಾಗಿ ನಿಜಗುಣರು ಬ್ರಾಹ್ಮಣರಲ್ಲ. ಅವರು ಶಂಭುಲಿಂಗನ ಬೆಟ್ಟದ ಸುತ್ತಮುತ್ತಲಿನ ಪ್ರದೇಶದ ವೀರಶೈವರಾಜರಾಗಿದ್ದು ವೈರಾಗ್ಯದಿಂದ ವಿರಕ್ತರಾಗಿ ಶಂಭುಲಿಂಗನ ಬೆಟ್ಟದಲ್ಲಿ ಯೋಗತತ್ಪರರಾಗಿದ್ದರು. ಎರಡನೆಯದಾಗಿ ಅವರ ಸಿದ್ಧಾಂತದ ಪ್ರಕಾರ ಮೋಕ್ಷದಲ್ಲಿ ಜೀವನು ಸಂಪೂರ್ಣ ಐಕ್ಯವನ್ನು ಪಡೆವನು. ಹೀಗೆ, ಅವರದೂ ಅದ್ವೈತ ಸಿದ್ಧಾಂತವೆ. ಅವರು ಶುದ್ಧಶೈವ ಸಿದ್ಧಾಂತವನ್ನೂ ಹೇಳಿರುವುದು ನಿಜ. ಇದಕ್ಕೆ ಕಾರಣ ಏನೆಂದರೆ ಅವರು ಎಲ್ಲ ಸಿದ್ಧಾಂತಗಳನ್ನು ಕುರಿತು ಹೇಳಿರುವ ವಿಶ್ವಕೋಶವೆನಿಸಿದ ವಿವೇಕಚಿಂತಾಮಣಿಯಲ್ಲಿ ಇದನ್ನೂ ಹೇಳಬೇಕಾಯಿತು. ಅದರಲ್ಲಿಯೇ ''ನಾನಾಮತವಾದಿಗತಿಗಳು'' ಎಂಬ ವಿಷಯವಾಗಿ ಹೀಗೆ ಬರೆದಿರುವರು: ''ಕೌಳಯಾಮಳಾದಿ ಮತಾಭಿಮಾನಿಗಳಿಗೆ ಪಿಶಾಚಪದ ಪ್ರಾಪ್ತಿ ...ಅದ್ವೈತಿಗಳಿಗೆ.... ನಿಜಸ್ವರೂಪಮೆನಿಪ ಪುರುಷತತ್ವ ಪ್ರಾಪ್ತಿ.... **ಶೈವರ್ಗೆ ಪರಶಿವ ಸಮಾನತ್ವ ಪ್ರಾಪ್ತಿ.** ವೇದವೇದಾಂತಾಗಮ ಪುರಾಣಂಗಳಲ್ಲಿ ಸಾರತರಮೆನಿಸಿದ ರಹಸ್ಯಾರ್ಥಪ್ರತಿಪಾದಕಮಾದ **ವೀರಶೈವ ಮಾರ್ಗದಿಂ ಲಿಂಗಾಂಗ ಸಂಬಂಧಿಗಳಾದ ಷಟ್ಸ್ಥಳ ಜ್ಞಾನಿಗಳಿಗೆ** ಸರ್ವೋತ್ಕೃಷ್ಟಮಾದ ಅವಿರಳ **ಶಿವೈಕ್ಯ ಪ್ರಾಪ್ತಿ.''** ನಿಜಗುಣರ ಇತರ ಗ್ರಂಥಗಳಲ್ಲಿ, ಅವರ ಐಕ್ಯಪ್ರತಿಪಾದನೆಯು, ಶಂಕರಾಚಾರ್ಯರ ಅದ್ವೈತ ಸಿದ್ಧಾಂತವೂ ಅವರದೂ ಒಂದೆಯೋ ಎನ್ನುವಷ್ಟು ದೂರ ಹೋಗುವುದು. ಆದುದರಿಂದ ನಿಜಗುಣರ ಸಿದ್ಧಾಂತವು ಮೋಕ್ಷದಲ್ಲಿ ಶಿವಸಮಾನತೆಯನ್ನು ಹೇಳುವುದಿಲ್ಲ. ನಿರಾಧಾರವಾದ ಊಹೆಗಳ ಆಧಾರದಿಂದ ಬರೆದ ಲೇಖನಗಳಿಂದ ಶ್ರೀಯುತರು ವೃಥಾ ಆಯಾಸಮಾಡಿಕೊಂಡಿದ್ದಾರೆ. ಸಿದ್ಧಾಂತಶಿಖಾಮಣಿಯಲ್ಲಿ ನೀರು ನೀರಿನಲ್ಲಿ ಕೂಡಿದಂತೆ ಶಿವನಲ್ಲಿ ಜೀವನು ಐಕ್ಯನಾಗುವನೆಂದು ಹೇಳಿರುವುದು ಗಮನಾರ್ಹ. ಲಿಂಗಾಯತರಿಗೆ ಅಲಿಂಗಿಗಳೂ ಅಬ್ರಾಹ್ಮಣರು ಮೂಲವೆಂಬುದೂ ಇವರ ಊಹಾಪೋಹೆಯ ಸಿದ್ಧಾಂತ. ಲಾಕುಳ ಶೈವರು ಬಾಹ್ಮಣರಲ್ಲವಂತೆ, ಅವರು ಲಿಂಗಧಾರಿಗಳೂ ಅಲ್ಲವಂತೆ; ಆದರೂ ಇವರು ಜಂಗಮರ ಪೂರ್ವಜರಂತೆ. ಲಿಂಗಧಾರಿಗಳಲ್ಲದವರಿಂದ ಲಿಂಗಧಾರಿಗಳಾದ ಜಂಗಮರ ಉದಯವು ಹೇಗಾಯಿತೆಂಬುದನ್ನು ಅವರು ಹೇಳಲು ಪ್ರಯತ್ನಿಸಿಲ್ಲ. ಲಿಂಗಧಾರಣೆಯು ಹೇಗೆ ಪ್ರಾರಂಭವಾಯಿತೆಂಬುದು ಜಟಿಲವಾದ ಪ್ರಶ್ನೆಯೆಂದು ಅದನ್ನು ಕೈಬಿಟ್ಟಿದ್ದಾರೆ. ಆದುದರಿಂದ ಲಿಂಗಧಾರಿಗಳಲ್ಲದವರು ಲಿಂಗಧಾರಿ ಜಂಗಮರ ಪೂರ್ವಜರೆಂದು ಹೇಳುವುದೂ ಬುಡ ಭದ್ರವಿಲ್ಲದ ಮಾತೇ. ''ಲಾಕುಳ ಗುರುಗಳು ಎಲ್ಲಿ ಅಡಗಿದರೂ ವಿಶಿಷ್ಟವಾದ ಜಾತಿಯೊಂದರಲ್ಲಿ ಕಾಣಿಸಿಕೊಳ್ಳಲೇಬೇಕು. ಇವರು ಬ್ರಾಹ್ಮಣರಾಗಿದ್ದುದಾದರೆ ಬ್ರಾಹ್ಮಣ ಸಮಾಜದ ಒಳ ಜಾತಿಗಳಲ್ಲಿ ಕಾಣಿಸಿಕೊಳ್ಳುವಷ್ಟು ಐತಿಹಾಸಿಕ ಪ್ರಮಾಣಗಳಿಲ್ಲ'' ಎಂದು ಅವರ ಗ್ರಂಥದ ೧೩೩ ನೆಯ ಪುಟದಲ್ಲಿ ಶ್ರೀಯುತ ಕಪಟರಾಳರೇ ಹೇಳಿರುವರು.

## ವೀರಶೈವದ ಶುದ್ಧಿ ಮತ್ತು ಸಂಘಟನೆ

ಕಾಳಾಮುಖರನ್ನೊಳಗೊಂಡ ಲಾಕುಳರು ಬ್ರಾಹ್ಮಣರಾಗಿರಲಿ ಇಲ್ಲದಿರಲಿ, ಅವರು ಲಿಂಗಧಾರಿಗಳಾಗಿರಲಿ ಇಲ್ಲದಿರಲಿ, ತಪೋಧನರೂ ರಾಜಪೂಜಿತರೂ ಆದ ಅವರ ಮಠಗಳಲ್ಲಿ ಅನೇಕ ಮಠಗಳು ವೀರಶೈವ ಮಠಗಳಾಗಿ ಪರಿವರ್ತಿತವಾಗಿಹೋಗಿವೆಯೆಂಬುದು ಎಲ್ಲರೂ—ಶ್ರೀಯುತ ಕಪಟರಾಳರೂ—ಒಪ್ಪಿದ ಮಾತು. ಇವರೆಲ್ಲರೂ ಎಲ್ಲಿ ಅಡಗಿದರು ಎಂಬ ವಿಷಯ ವಾಗಿ ವಚನಶಾಸ್ತ್ರವಿಶಾರದರಾದ ಶ್ರೀಯುತ ಎಂ. ಆರ್. ಶ್ರೀನಿವಾಸಮೂರ್ತಿಗಳು ಬರೆದಿರುವ ಉತ್ತರವಿದು :

"ವಚನ ಧರ್ಮೋದಯು ಶಕ್ತಿಯುಕ್ತವಾಗಿದ್ದಿತೆಂಬುದರಲ್ಲಿ ಲೇಶವೂ ಸಂದೇಹವಿಲ್ಲ. ಹಿಂದಿನ ದುರಾಚಾರದ ದುಷ್ಟ ಪದ್ಧತಿಗಳ ಶೈವಪಂಥಗಳನ್ನು ಇದು ಅಡಗಿಸಿಯೇ ಬಿಟ್ಟಿತು. ಕನ್ನಡನಾಡಿನ ಇತಿಹಾಸವನ್ನು ನೋಡಿದರೆ ಕ್ರಿ.ಶ. ೧೧–೧೨ನೆಯ ಶತಮಾನಗಳಲ್ಲಿ ಕಾಳಾ ಮುಖ ಶಾಖೆಯವರು ಪ್ರಬಲರಾಗಿದ್ದರೆಂದು ತಿಳಿಯುತ್ತದೆ. ಈ ಮಠಗಳಲ್ಲಿದ್ದ ಆಚಾರ್ಯರು 'ಯಮನಿಯಮಸ್ವಾಧ್ಯಾಯಧ್ಯಾನಧಾರಣ ಮೌನಾನುಷ್ಠಾನ ಜಪ ತಪ ಸಮಾಧಿ ಶೀಲ ಗುಣ ಸಂಪನ್ನ'ರಾಗಿಯೂ, ವಸ್ತುತಃ 'ಸಕಲಾಗಮಾಚಾರ್ಯ'ರಾಗಿಯೂ ಇದ್ದರು. ಅವರದು ಸ್ವಂತ ಪಾಂಡಿತ್ಯದ ಪ್ರಭಾವವೊಂದೇ ಅಲ್ಲ. ಅವರು ರಾಜಗುರುಗಳಾಗಿಯೂ ಪ್ರಬಲರಾಗಿಯೂ ಪ್ರತಿಷ್ಠಾವಂತರಾಗಿಯೂ ಇದ್ದರು. ಇಂಥವರ ಮೇಲೆಲ್ಲ ಧಾಳಿಮಾಡಿ ವಚನಧರ್ಮದಲ್ಲಿ ಸೇರಿಕೊಳ್ಳುವಂತೆ ಮಾಡಿದ್ದು ನಿಜವಾಗಿಯೂ ದೊಡ್ಡ ಸಾಹಸದ ಪ್ರಕರಣ. ಕ್ರಿ.ಶ. ೧೪ನೆಯ ಶತಮಾನ ಮುಗಿಯುವ ಹೊತ್ತಿಗೆ ಈ ಕಾಳಾಮುಖಮಠಗಳು ಹೇಳ ಹೆಸರಿಲ್ಲದೆ ಅದೃಶ್ಯವಾಗಿ ಹೋದುದು ಪರಮಾಶ್ಚರ್ಯ ಪ್ರಕರಣ. ಈ ದಿಗ್ವಿಜಯ ಪ್ರಕರಣದಲ್ಲಿ ಮಹಾನಾಯಕರಾಗಿದ್ದ ಮೂವರು ಅತಿರಥರು ಬಸವಣ್ಣ, ಚೆನ್ನಬಸವಣ್ಣ ಮತ್ತು ಅಲ್ಲಮಪ್ರಭು. ಬ್ರಹ್ಮಾಸ್ತ್ರ–ವೈಷ್ಣವಾಸ್ತ್ರ–ಪಾಶುಪತಾಸ್ತ್ರಗಳು ಏಕಕಾಲದಲ್ಲಿ ಶತ್ರುಸೈನ್ಯಗಳ ಮೇಲೆ ಪ್ರಯೋಗವಾದಂತೆ ಪರಿಣಾಮವಾಯಿತು. ಆದರೆ, ಪ್ರಳಯಕಾಲದ ಅಂಧಕಾರವನ್ನು ಅವರು ಬರಗೊಡಿಸಲಿಲ್ಲ. ವೀರಶೈವದ ಪರಿಭಾಷೆಯಲ್ಲಿ ಹೇಳಬಹುದಾದರೆ, ಬಸವಣ್ಣ ಇಷ್ಟಲಿಂಗವಾಗಿ, ಚೆನ್ನಬಸವಣ್ಣ ಪ್ರಾಣಲಿಂಗವಾಗಿ, ಅಲ್ಲಮಪ್ರಭು ಭಾವಲಿಂಗವಾಗಿ ಜ್ಯೋತಿರ್ಮಯವಾದ ಮಹಾಲಿಂಗದ ಮೂರು ಮುಖಗಳಂತೆ ವಚನಧರ್ಮದ ಮೂರು ಮುಖಗಳಾಗಿ ಕ್ರಾಂತಿಯನ್ನು ಬೀರಿದರು. ದಾರಿತಪ್ಪಿದವರು ಧರ್ಮಮಾರ್ಗಕ್ಕೆ ಬರುವಂತಾಯಿತು. ಹಾಗೆ ಬಂದವರನ್ನು ಆದರದಿಂದ ಧರ್ಮದಲ್ಲಿ ಸೇರಿಸಿಕೊಂಡರು." (ವಚನ ಧರ್ಮಸಾರ, ಪುಟ ೮.)

ಶಾಸನಗಳಲ್ಲಿ ಹೇಳಿರುವ ಪೂಜಾರಿಗಳೇ ಮೊದಲಾದ ಕೆಲವರು ಲಿಂಗಧಾರಿಗಳಲ್ಲದಿರ ಬಹುದು. ಆದರೆ 'ಲಿಂಗಿ'ಗಳೆಂದು ಶಾಸನಗಳಲ್ಲಿ ಹೇಳಲ್ಪಟ್ಟಿರುವ ಕಾಳಾಮುಖರನ್ನೊಳ ಗೊಂಡ ಲಕುಲೀಶ ಪಾಶುಪತಾದಿಗಳೆಲ್ಲರೂ ಲಿಂಗಧಾರಿಗಳೇ. ಅವರೆಲ್ಲರೂ ಶಿವನಲ್ಲಿ ಅವ್ಯಭಿ ಚರಿತಭಕ್ತಿಯುಳ್ಳವರಾಗಿದ್ದು, ಲಿಂಗವನ್ನು ಧರಿಸಿ, ಪೂಜಿಸಿ, ಶಿವಯೋಗದಿಂದ ಮೋಕ್ಷವನ್ನು ಪಡೆಯುವ ಧರ್ಮದ ಮತಾನುಯಾಯಿಗಳೇ. ಹಾಗೆಯೇ "ಭುಜದ್ವಯ ಲಿಂಗಧರಾಃ ಶೈವಾಃ····ಶಿರಸಿ ಪಾಷಾಣಲಿಂಗಂ ಚ ಧಾರಿಣಃ ಜಂಗಮಾಃ, ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ" ಎಂದು ಶಂಕರದಿಗ್ವಿಜಯದಲ್ಲಿ ಹೇಳಿರುವ ವಿವಿಧ ಪಂಗಡದ ಲಿಂಗಧಾರಿಗಳೂ ಆಚರಣೆಯ ದೃಷ್ಟಿಯಿಂದ ಬೇರೆ ಬೇರೆ ಪಂಗಡದವ

ರಾಗಿದ್ದರು. ಇವರ ಗತಿಯೆಲ್ಲ ಏನಾಯಿತು? ಭಿನ್ನಭಿನ್ನವಾದ ಮಣ್ಣಿನಲ್ಲಿನ, ಭಿನ್ನಭಿನ್ನ ವರ್ಣದ ಭಿನ್ನಭಿನ್ನ ರುಚಿಯ ರುಜುಕುಟಿಲಗತಿಗಳ ನದೀನದಗಳೆಲ್ಲವೂ ಸಮುದ್ರವನ್ನೇ ಸೇರಿ ಒಂದೇತರದ ಜಲವಾಗುವಂತೆ, ವಿವಿಧ ವಿಭಾಗಗಳಲ್ಲಿ ವಿವಿಧ ಆಚಾರ ಭೇದಗಳಿಗೊಳಗಾಗಿ, ವಿವಿಧ ಸಂಪ್ರದಾಯಗಳಿಗೊಳಪಟ್ಟ ವಿವಿಧ ರೀತಿಯ ಲಿಂಗಧಾರಿಗಳೆಲ್ಲರೂ ಸಂಸ್ಕರಿಸಲ್ಪಟ್ಟ ಲಿಂಗಧಾರಿ ಧರ್ಮಕ್ಕೆ ಸೇರಿ ಒಂದೇ ರೂಪವನ್ನು ಪಡೆದರು. ಬೇರೆ ಬೇರೆ ನದಿಗಳಲ್ಲಿದ್ದ ನೀರೇ ಒಟ್ಟುಗೂಡಿ ಸಮುದ್ರವಾಗಿದೆ; ವೈವಿಧ್ಯತೆ ಹೋಗಿ ಸಾಮರಸ್ಯವುಂಟಾಗಿದೆ, ಅಷ್ಟೆ; ಮೂಲದಲ್ಲಿ ವ್ಯತ್ಯಾಸವೇನೂ ಆಗಿಲ್ಲ. ಲೂಥರನು ಕ್ರಿಶ್ಚಿಯನ್ ಧರ್ಮವನ್ನು ಸಂಸ್ಕರಿಸಿದನು; ಹಿಂದೆ ಇದ್ದ ಅನೇಕ ಕ್ಯಾಥೊಲಿಕ್ ಪಂಗಡದ ಕ್ರಿಶ್ಚಿಯನ್ನರು ಇದಕ್ಕೆ ಸೇರಿಕೊಂಡರು; ಆದರೆ ಹಿಂದೆ ಇದ್ದುದೂ ಕ್ರಿಶ್ಚಿಯನ್ ಧರ್ಮವೇ, ಸುಧಾರಣೆಗೊಳಪಟ್ಟ ಪ್ರಾಟೆಸ್ಟೆಂಟರೂ ಕ್ರಿಶ್ಚಿಯನ್ ಧರ್ಮಕ್ಕೊಳಗಾದವರೇ. ಲಿಂಗಧಾರಿಗಳಲ್ಲಿ ಹೊಸದಾದ ಧರ್ಮವು ಸ್ಥಾಪನೆಯಾಗಲಿಲ್ಲ. ಹಿಂದೆ ಇದ್ದುದರಲ್ಲಿನ ಅಪಚಾರಗಳನ್ನೂ ಅತಿರೇಕಗಳನ್ನೂ ತೆಗೆದುಹಾಕಿ ಎಲ್ಲರೂ ಅನುಸರಿಸಬಹುದಾದ ಸಾಮಾನ್ಯ ಧರ್ಮಗಳನ್ನು ಅಳವಡಿಸಿಕೊಂಡು ಶುದ್ಧಿಸಂಘಟನೆಯನ್ನು ಉಂಟುಮಾಡಲಾಯಿತು. ಭವರೋಗವನ್ನು ಪರಿಹರಿಸಲು ಹೊಸ ಔಷಧವನ್ನೇನೂ ಪ್ರತಿಪಾದಿಸಲಿಲ್ಲ. ಶಿವನಲ್ಲಿ ಏಕಾಂತಿಕವಾದ, ಅವ್ಯಭಿಚಾರಿಣಿಯಾದ ಭಕ್ತಿಯೆಂಬ ಔಷಧವನ್ನು ಲಿಂಗವನ್ನು ಧರಿಸಿ ಪೂಜಿಸಬೇಕೆಂಬ ಅನುಪಾನದೊಡನೆ ಸೇವಿಸಿದರೆ ಈ ಭವರೋಗವು ಪರಿಹಾರವಾಗುವುದೆಂದು ಹಿಂದಿನಿಂದಲೂ ಪ್ರತಿಪಾದಿಸಿದಂತೆಯೇ ನೂತನ ಸಮಾಜಸುಧಾರಕರು ಪ್ರತಿಪಾದಿಸಿದರು. ಆದರೆ ಔಷಧದಲ್ಲಿಯೂ, ಅನುಪಾನದಲ್ಲಿಯೂ ಸೇರಿದ ಕಲ್ಮಷವನ್ನು ಮಾತ್ರ ಶೋಧಿಸಿ ತೆಗೆಯಲಾಯಿತು. ವಿವಿಧ ಬಣ್ಣದ ವಿವಿಧ ಆಕಾರದ ಶೈವ, ಪಾಶುಪತ, ಕಾಳಾಮುಖ ಮೊದಲಾದ ಹೆಸರುಗಳಿಂದ ಕರೆಯಲ್ಪಡುತ್ತಿದ್ದ ಹಳೆಯ ಶೀಷೆಗಳನ್ನು ಒಡೆದುಹಾಕಿ, ಹೊಸ ಶೀಷೆಯೊಂದರಲ್ಲಿ ಶೋಧಿಸಿದ ಹಳೆಯ ಔಷಧವನ್ನೇ ತುಂಬಿ, ಅದನ್ನು ವೀರಶೈವ ಅಥವಾ ಲಿಂಗಾಯತ ಎಂಬ ಒಂದೇ ಹೆಸರಿನಿಂದ ಕರೆದರು. ಈ 'ವೀರಶೈವ' ಪದವಾದರೂ ಹಿಂದಿನಿಂದ ಬಂದ ಶಾಸ್ತ್ರೀಯವಾದ ಹೆಸರೇ.

ಲಿಂಗಧಾರಿಗಳಾದ ಶೈವ–ಪಾಶುಪತ–ಕಾಳಾಮುಖರೂ, ಲಿಂಗಧಾರಿಗಳಲ್ಲದ ಶೈವರಲ್ಲಿ ಅನೇಕರೂ ಶುದ್ಧಿ ಸಂಘಟನೆಗೊಳಗಾದ ವೀರಶೈವ ಮತಾವಲಂಬಿಗಳಾದರು. ಲಿಂಗಧಾರಿಗಳಾಗಲೀ ಅಲಿಂಗಿಗಳಾಗಲೀ ನೂತನ ಭಕ್ತಿ ಪಂಥವನ್ನು ಸೇರದೆ ಪ್ರತಿಭಟಿಸಿದ ಈ ಪಂಥಗಳವರು ಹೇಳ ಹೆಸರಿಲ್ಲದಂತೆ ನಿರ್ನಾಮವಾದರು.

"ಶೈವ ಸೈವೆರಗಾದ, ಪಾಶುಪತಿ ಪಥವನರಿಯ, ಕಾಳಾಮುಖಿ ಕಂಗೆಟ್ಟ, ಮಹಾವ್ರತಿ ಮದವೇರಿದ, ಸನ್ಯಾಸಿ ಪಾಷಂಡಿಯಾದ, ಕೌಲಿ ಮರುಳಾಗಿ ಹೋದ, ಈ ಆರು ಭಕ್ತಿಸ್ಥಲಕ್ಕೆ ಸಲ್ಲವು"—ಎಂಬುದು ಒಂದು ವಚನ.

ವಚನಧರ್ಮಸಾರದಲ್ಲಿ ವಚನಶಾಸ್ತ್ರ ವಿಶಾರದರಾದ ಶ್ರೀಯುತ ಶ್ರೀನಿವಾಸಮೂರ್ತಿಗಳು ಹೇಳಿದಂತೆ "ಈ ಶೈವ ಪಂಥಗಳನ್ನು ಹೀಗೆ ತಿರಸ್ಕರಿಸುವುದಕ್ಕೆ ಅವುಗಳಲ್ಲಿ ಸೇರಿಕೊಂಡ ದುರಾಚಾರಗಳು ಮುಖ್ಯ ಕಾರಣವಾಗಿದ್ದಿರಬೇಕು. ಶಿವನ ಘೋರರೂಪವಾದ ಉಪಾಸನೆಯಲ್ಲಿ ಘೋರ ವಿಧಿಗಳನೇಕ ಕಾಪಾಲಿಕಾದಿ ಮತಗಳಲ್ಲಿ ಕಂಡುಬರುತ್ತವೆ....ವೈದಿಕ ಮತದ ಪ್ರಾಬಲ್ಯದಿಂದ ವರ್ಣ ವ್ಯತ್ಯಾಸಗಳು ಪಾಶುಪತರಲ್ಲಿ ಸೇರಿಕೊಂಡು ಹಿಂದಿನ ಆಶಯ

ಗಳಿಗೆ ಭಂಗವನ್ನು ತರುತ್ತಿದ್ದಾಗ, ಆ ಪ್ರಯತ್ನಗಳನ್ನು ಮುರಿದು ಪರಿಶುದ್ಧಗೊಳಿಸುವುದು ಧರ್ಮ; ಪರಮಾತ್ಮನ ಸೌಮ್ಯರೂಪದ ಉಪಾಸನೆಯನ್ನು ಬಿಟ್ಟು, ಆತನ ಕರುಣೆ, ಅನುಗ್ರಹ ಗಳನ್ನು ಮರೆತು ಅಡ್ಡ ದಾರಿಯಲ್ಲಿ ಕೊಂಡೊಯ್ಯುವ ಪಂಥಗಳನ್ನು, ಅವು ಯಾವ ಹೆಸರಿನವಾಗಿ ದ್ದರೂ, ಖಂಡಿಸುವುದು ಮಹದುಪಕಾರ. ಆದುದರಿಂದ ವಚನಕಾರರು ಈ ಪಂಥಗಳ ಮೇಲೆ ಧಾಳಿಯೆತ್ತಿ ಅವುಗಳನ್ನು ನಿರ್ಮೂಲಗೊಳಿಸಿದರು.''

ಈ ತರದ ಕಳೆಗಳನ್ನು ಕಿತ್ತು, ಉಳಿಸಿಕೊಳ್ಳಬಹುದಾದ ಧರ್ಮದ ಸಸಿಗಳನ್ನು ಕಾಣಿಸಿದುದು ಹೊಸ ಹೊಲದಲ್ಲಲ್ಲ; ಹಳೆಯ ಪಾಶುಪತ ಕ್ಷೇತ್ರದಲ್ಲೇ. ಹೊಸ ಸಸಿಗಳನ್ನು ನೆಡಲಿಲ್ಲ; ಹಳೆಯ ಸಸಿಗಳನ್ನು ಕಾಣಿಸಲಾಯಿತು. ಮೇಲೆ ಹೇಳಿದ ವಚನಶಾಸ್ತ್ರ ವಿಶಾರದರು ಹೇಳಿದಂತೆ ''ಪಾಶುಪತಮತವಾದರೋ ಬಹಳ ಪ್ರಾಚೀನವಾದುದೂ, ಭರತಖಂಡದಲ್ಲಿ ಹೆಚ್ಚಾಗಿ ವ್ಯಾಪಿಸಿದ್ದುದೂ ಆಗಿತ್ತು. ವೀರಶೈವದ ಕೆಲವು ಮುಖ್ಯ ಲಕ್ಷಣಗಳನ್ನು ಆ ಹಿಂದಿನ ಪಾಶುಪತದಲ್ಲಿ ಕಾಣಬಹುದಾಗಿದೆ. ಮಹಾಭಾರತದ ಕಾಲದಿಂದ ಹಿಡಿದು ಅದರ ನಿಷ್ಕೃಷ್ಟವಾದ ಕುರುಹುಗಳನ್ನು ವಚನಕಾರರ ಕಾಲದವರೆಗೂ, ಇಲ್ಲಿಯವರೆಗೂ ಕಾಣಬಹುದಾಗಿದೆ....ಮೊದಲಿನ ವಚನಕಾರರು ಹೆಚ್ಚಾಗಿ ಸಿದ್ಧಾಂತದ ಗೋಜಿಗೆ ಹೋಗಲಿಲ್ಲ. ಸತ್ಕ್ರಿಯಾಚರಣೆ, ಅಂತರಂಗಶುದ್ಧಿ, ಶುದ್ಧಚಾರಿತ್ರ ಇವುಗಳನ್ನೇ ಒತ್ತಿಒತ್ತಿ ಹೇಳಿ, ಆಚಾರವೇ ಲಿಂಗವೆಂದು ತಳಹದಿಯನ್ನು ಭದ್ರಪಡಿಸಿದರು; ಸ್ವಂತ ಆಚರಣೆ ಯಿಂದಲೂ ಪುರಾತನರ ಉದಾಹರಣೆಗಳಿಂದಲೂ ಭಕ್ತಿಯ ಹುಚ್ಚನ್ನು ಹಿಡಿಸಿದರು, ಜ್ಞಾನ ಜ್ಯೋತಿಯನ್ನು ಬೆಳಗಿದರು. ಹೀಗೆ ಕಳೆಗಳನ್ನು ಕಿತ್ತು ಕೃಷಿಮಾಡಿ ಪಾಶುಪತ ಕ್ಷೇತ್ರದಲ್ಲಿ ವಚನಧರ್ಮದ ಸಸಿಗಳನ್ನು ಕಾಣಿಸಿದರು. ವಚನಧರ್ಮದ ಉದಯ ಈ ಸಸಿಗಳ ಉದಯ ದಂತೆ. ವಚನಧರ್ಮ ಹೊಸತೆಂದರೆ ಹೊಸತು, ಹಳೆಯದೆಂದರೆ ಹಳತು....ಸಿದ್ಧಾಂತದ ಮೂಲಗಳು ಹಿಮಾಚಲಕ್ಕೂ ಹಿಂದಿನವಾಗಿರಬಹುದು.''

ಮೊದಲಿನ ವಚನಕಾರರು ಹೆಚ್ಚಾಗಿ ಸಿದ್ಧಾಂತದ ಗೋಜಿಗೆ ಹೋಗದಿದ್ದುದು ಅದರ ಆವಶ್ಯಕತೆಯು ಇರಲಿಲ್ಲವಾದಕಾರಣದಿಂದಲ್ಲ. ಅಲಿಂಗಿಗಳಲ್ಲಿ ವಿವಿಧವಾದ ದ್ವೈತಿಗಳು ಮತ್ತು ವಿವಿಧವಾದ ಅದ್ವೈತಿಗಳು ಇದ್ದಂತೆ, ಶೈವರ ಸಿದ್ಧಾಂತದಲ್ಲಿಯೂ ಆಚರಣೆಗಳಲ್ಲಿಯೂ ವೈವಿಧ್ಯತೆಯಿದ್ದಿತು. ಸಿದ್ಧಾಂತವನ್ನು ಒಮ್ಮುಖಮಾಡುವ ಹಿರಿಯ ಕೆಲಸವನ್ನು ಶಿವಯೋಗಿ ಶಿವಾಚಾರ್ಯರು ಮಾಡಿದರು. ರೇಣುಕಾಚಾರ್ಯೋಪದೇಶರೂಪವಾದ ಸಿದ್ಧಾಂತ ಶಿಖಾಮಣಿಯೇ ವೀರಶೈವ ಸಿದ್ಧಾಂತವನ್ನು ಪ್ರಪ್ರಥಮವಾಗಿ ಸಿದ್ಧಾಂತಗೊಳಿಸಿದ ಶ್ರೇಷ್ಠ ಸಂಸ್ಕೃತಗ್ರಂಥ. ಇದರ ಆಧಾರವನ್ನೇ ಇತರ ಗ್ರಂಥಗಳು ತೆಗೆದುಕೊಳ್ಳುತ್ತವೆ. ಮತ್ತಾವ ವೀರಶೈವಗ್ರಂಥದ ಆಧಾರದಮೇಲೂ ಸಿದ್ಧಾಂತಶಿಖಾಮಣಿಯು ನಿಂತಿಲ್ಲ. ಹೀಗೆ ಸಿದ್ಧಾಂತವೂ, ಸದಾಚರಣೆಯೂ ಒಮ್ಮುಖವಾದುವು.

ಶುದ್ಧಿ ಸಂಘಟನೆಗೊಳಗಾದ ವೀರಶೈವದ ಹಿರಿಮೆಯು ದೇಶವಿದೇಶದ ವಿವಿಧಮತ ದವರನ್ನು ಆಕರ್ಷಿಸಿತು. ಶ್ರೀಯುತ ಕಪಟರಾಳರು ಹೇಳುವಂತೆ ಹರಿಹರ ರಾಘವಾಂಕರು ಬ್ರಾಹ್ಮಣರೆಂಬುದು ನಿಜ; ಆದರೆ ಅವರು ಬ್ರಾಹ್ಮಣ್ಯವನ್ನು ಉಳಿಸಿಕೊಳ್ಳಲಿಲ್ಲ. ಬಸವೇಶ್ವರರಂತೆ ವೀರಶೈವಧರ್ಮಾವಲಂಬಿಗಳಾದರು. ಇಲ್ಲವಾದರೆ, ಬಸವೇಶ್ವರರು ಜನಿವಾರವನ್ನು ತೆಗೆದು ಹಾಕಿದುದನ್ನು ''ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದುಬಿಸುಟು, ಹೋತನ ಗಂಟಲಂ

ಬಗಿವಂತಿರ್ದ ಮೌಂಜಿಯಂ ಪರಿದು ಬಿಸುಟು" ಎಂದು ವರ್ಣಿಸಲು ಹರಿಹರನಿಗೆ ಬಾಯಿ ಬರುತ್ತಿರಲಿಲ್ಲ.

'ವೀರಶೈವದ ಪ್ರಾಚೀನತೆ ಮತ್ತು ಘನತೆ' ಎಂಬ ವಿಷಯದಲ್ಲಿ ದಿವಾನ್ ಬಹದ್ದೂರ್ ರಾಜಧರ್ಮ ಪ್ರವೀಣ ರಿಟೈರ್ಡ್ ಚೀಫ್ ಜಸ್ಟಿಸ್ ಶ್ರೀ ಪಿ. ಮಹದೇವಯ್ಯನವರು ಶರಣ ಸಾಹಿತ್ಯ ಮಾಸಿಕದಲ್ಲಿ ಪ್ರಸಿದ್ಧವಾಗಿರುವ ಲೇಖನದಲ್ಲಿ ಹೀಗೆ ಹೇಳಿದ್ದಾರೆ:

"ಉಪನಿಷತ್ತುಗಳಲ್ಲಿಯೂ, ಅದರಲ್ಲಿಯೂ ಮುಖ್ಯವಾಗಿ ಶ್ವೇತಾಶ್ವತರ ಉಪನಿಷತ್ತಿನಲ್ಲಿ ವಿವರಿಸಲ್ಪಟ್ಟಿರುವ ವಿಶೇಷ ಶಕ್ತಿಯನ್ನುಳ್ಳ ಪರಮಾತ್ಮ ತತ್ವವನ್ನು ಅನುಸರಿಸಿ ದೇವದೇವತೆಗಳಲ್ಲಿ ಶಿವನೇ ಮಹೋನ್ನತನೆಂದು ವೀರಶೈವ ಮಠಾಚಾರ್ಯರು ಪ್ರಚಾರಮಾಡಿದರು. ಅಷ್ಟೇ ಅಲ್ಲದೆ ಅವರು ವೇದಾಂತ ತತ್ವವು ಜಾತಿಕೋಮುಗಳ ಭೇದಭಾವವಿಲ್ಲದೆ ಇಡೀ ಮಾನವಜಾತಿಗೆ ಕೊಡಲ್ಪಟ್ಟಿರುವ ದೈವಿಕ ವರವೆಂದು ಸಾರಿದರು. ಉಪನಿಷತ್ತುಗಳು ಮಾನವನ ಹಕ್ಕುಬಾಧ್ಯತೆಗಳ ಪವಿತ್ರವಾದ ಶಾಸನಗಳೆಂದು ಘೋಷಿಸಿ, ಅವರು ವೀರಶೈವ ಮತಕ್ಕೆ ಹಿಂದುಗಳ ಪೈಕಿ, ಅತ್ಯಂತ ಮೇಲು ಪಂಗಡದಿಂದ ಅತ್ಯಂತ ಕೀಳು ಪಂಗಡದವರೆಗೂ ಇರುವ ಎಲ್ಲ ಕೋಮಿನವರನ್ನೂ ಸೇರಿಸಿಕೊಂಡು ತಾವು ಪ್ರತಿಪಾದಿಸಿರುವ ಈ ಘನ ತತ್ವವನ್ನು ಅನುಷ್ಠಾನಕ್ಕೆ ತಂದರು. ನಮ್ಮ ಆಚಾರ್ಯರು ಬ್ರಹ್ಮಸೂತ್ರಗಳಿಗೆ ವಿಶೇಷ ಪಾಂಡಿತ್ಯದಿಂದ ಕೂಡಿದ ಭಾಷ್ಯಗಳನ್ನು ಬರೆದಿದ್ದಾರೆ. ನಮ್ಮ ತತ್ವಜ್ಞಾನವೂ ಮತ್ತು ಅದರಿಂದುಂಟಾಗುವ ಆತ್ಮವಿಕಾಸತೆಯೂ, ಬ್ರಾಹ್ಮಣ ಮತ್ತು ಜೈನ ಪಂಗಡಗಳ ಅತ್ಯಂತ ಪ್ರಸಿದ್ಧರಾದ ಹಲವು ವಿದ್ವಾಂಸರನ್ನೂ ಕವಿವರ್ಯರನ್ನೂ ಆಕರ್ಷಿಸಿ ಅವರು ವೀರಶೈವ ಮತವನ್ನು ಅವಲಂಬಿಸುವಂತೆ ಮಾಡಿವೆ. ಈಗಲೂ ಸಹ ಆಂಧ್ರ ದೇಶದಲ್ಲಿ ವೀರಶೈವ ಮತವನ್ನವಲಂಬಿಸಿರುವ ಸಾವಿರಾರು ಸಾಂಪ್ರದಾಯಿಕ ಬ್ರಾಹ್ಮಣ ಕುಟುಂಬಗಳಿವೆ."

## ವೀರಶೈವ ಆರಾಧ್ಯ ಬ್ರಾಹ್ಮಣರು

ವೀರಶೈವದ ಉದಾತ್ತ ತತ್ವಗಳನ್ನು ಮೆಚ್ಚಿಕೊಂಡವರಲ್ಲಿ ಕೆಲವರು ಹರಿಹರಾದಿಗಳಂತೆ ಸಂಪೂರ್ಣವಾಗಿ ವೀರಶೈವಾಚರಣೆಗೆ ಒಳಪಟ್ಟರೂ, ಕೆಲವರು ಜನಿವಾರದ ಹಂಗನ್ನು ತೊರೆದು ತಮ್ಮ ಸಮಾಜದ ಕಿರುಕುಳಕ್ಕೆ ಒಳಗಾಗಲು ಸಿದ್ಧರಾಗಲಿಲ್ಲ. ಅವರು ಬ್ರಾಹ್ಮಣ್ಯಕ್ಕೆ ಚ್ಯುತಿಯನ್ನು ತಂದುಕೊಳ್ಳದೆ ವೀರಶೈವಾನುಯಾಯಿಗಳಾದರು. ಅಂಥವರಲ್ಲಿ ಆಂಧ್ರ ದೇಶದ ಆರಾಧ್ಯ ಬ್ರಾಹ್ಮಣರು ಮುಖ್ಯರು. ಅವರ ಒಡನಾಡಿಗಳಾಗಿ ಅವರನ್ನು ಚೆನ್ನಾಗಿ ಬಲ್ಲ "ಶಿವಸುತ"ರು ಬರೆದ ಶರಣಸಾಹಿತ್ಯದಲ್ಲಿ ಪ್ರಕಟವಾದ ಲೇಖನದಲ್ಲಿ ಹೇಳಿದಂತೆ, ಪಂಚಾಚಾರ್ಯರನ್ನೂ ಬಸವೇಶ್ವರಾದಿ ಶರಣರನ್ನೂ ಸಹಾ ಆರಾಧ್ಯರು ತಮ್ಮ ಗುರುಪರಂಪರೆಯಲ್ಲಿ ಸೇರಿಸಿಕೊಂಡಿದ್ದಾರೆ. ಮಠಸ್ಥಲ ನಿರ್ಣಯವೆಂಬ ಆರಾಧ್ಯ ಬ್ರಾಹ್ಮಣರ ಗ್ರಂಥದಲ್ಲಿ ಅವರ ಗುರುಪರಂಪರೆಯನ್ನು ಹೀಗೆ ಕೊಟ್ಟಿದ್ದಾರೆ:

"ಕೃತೇತು ರೇವಣಸ್ಸಿದ್ಧೋ ತ್ರೇತಾಯಾಂ ಮರುಳಪ್ರಭುಃ ।
ದ್ವಾಪರೇ ರಾಮದೇವಶ್ಚ ಕಲೌ ಪಂಡಿತ ದೇಶಿಕಃ ॥
ಶ್ರೀಪತಿರ್ಮಂಚನಶ್ಚೈವ ಮಲ್ಲಿಕಾರ್ಜುನ ಪಂಡಿತಃ ॥
ಉದ್ಭಟಃ ಕೋಟಿಪಲ್ಲಾಖ್ಯೋ ವೇಮಾರಾಧ್ಯಪ್ರಸಿದ್ಧಕಃ ॥
ಕೊಟ್ಟೂರು ಬಾಚೋ ಬಸವಸ್ಸಕಲೇಶ್ವರಮಾದಿರಾಟ್ ॥"

ಆರಾಧ್ಯ ಬ್ರಾಹ್ಮಣರು ಶಿವಪೂಜಾ ಕಾಲದಲ್ಲಿ ಈ ರೀತಿ ಬಸವೇಶ್ವರಸ್ತೋತ್ರವನ್ನು ಮಾಡಬೇಕೆಂದು ವಿಧಿಸಲ್ಪಟ್ಟಿದೆ:

ಮುನಿಯಾಚನಯಾ ಶಿವಾಜ್ಞಯಾ ಶಿವಭಕ್ತ್ಯುದ್ಧರಣಾರ್ಥಮಾಗತಂ ।
ವೃಷರಾಜ ಪರಾವತಾರತಾ । ಮಹಿತಂ ಶ್ರೀ ಬಸವೇಶ್ವರಂ ಭಜೇ ॥

ಹಿಂದಿನಿಂದ ರೂಢಿಯಲ್ಲಿರುವ ಈ ಪ್ರಾರ್ಥನೆಯು, ನಂದೀಶ್ವರಾವತಾರರಾಗಿ ಶ್ರೀ ಬಸವೇಶ್ವರರು ಶಿವಭಕ್ತರನ್ನು ಉದ್ಧರಿಸಲು ಬಂದರೇ ಹೊರತು ಹೊಸ ಮತವನ್ನು ಸ್ಥಾಪಿಸುವುದಕ್ಕಲ್ಲವೆಂಬುದನ್ನು, ಬಸವೇಶ್ವರರ ಕಾಲದಲ್ಲಿಯೇ ವೀರಶೈವದ ಉಗಮವಾಯಿತೆಂದು ಹೇಳುವ ಪ್ರೊಫೆಸರ್ ಸಾಖರೆಯವರಂತಹವರಿಗೆ ಸ್ಪಷ್ಟಮಾಡುತ್ತದೆ. ಮತ್ತೊಂದು ಮುಖ್ಯ ವಿಚಾರವೆಂದರೆ ವೀರಶೈವ ವೈದಿಕವಾಙ್ಮಯವು ಬಹುಮಟ್ಟಿಗೆ ಆರಾಧ್ಯ ಬ್ರಾಹ್ಮಣರ ಕಾರ್ಯವಾಗಿದೆ. ಬಸವೇಶ್ವರರ ತತ್ವಗಳನ್ನು ಎಲ್ಲ ವಿಷಯಗಳಲ್ಲಿಯೂ ಒಪ್ಪಿಕೊಂಡು, ಬಸವೇಶ್ವರರನ್ನು ತಮ್ಮ ಆಚಾರ್ಯಪುರುಷರನ್ನಾಗಿ ಇಟ್ಟುಕೊಂಡು — ಆದರೆ ಯಜ್ಞೋಪವೀತವನ್ನು ಧರಿಸುವುದು ಮತ್ತು ಸಂಧ್ಯಾವಂದನಾದಿ ಕೆಲವು ನಿರ್ದೋಷವಾದ ಬ್ರಾಹ್ಮಣ ಕರ್ಮಗಳನ್ನು ಆಚರಿಸುವ—ಆರಾಧ್ಯ ಬ್ರಾಹ್ಮಣರು ವೀರಶೈವರೆಂದು ಕರೆದುಕೊಳ್ಳುವರು. ಶುದ್ಧಿಸಂಘಟನೆ ಕಾರ್ಯದಲ್ಲಿ ತೊಡಗಿದ ಜನಾಂಗದಲ್ಲೆಲ್ಲ ಇರುವಂತೆ, ವೀರಶೈವ ಶುದ್ಧಿಸಂಘಟನಾ ಕಾರ್ಯದ ಕಾಲದಲ್ಲೂ ತದನಂತರವೂ ಪ್ರಗತಿಪರರಾದ ತೀವ್ರಗಾಮಿಗಳೂ, ಸಂಪ್ರದಾಯ ಶರಣರಾದ ಮಂದಗಾಮಿಗಳೂ ಇದ್ದರು—ಇದ್ದಾರೆ—ಮುಂದೆಯೂ ಇರುವರು. ವೀರಶೈವವೆಂಬ ನಾಣ್ಯಕ್ಕೆ ಇವು ಎರಡೂ ಎರಡು ಮುಖ; ನಾಣ್ಯ ಮಾತ್ರ ಒಂದೇ. ಆಂಧ್ರದ ವೀರಶೈವರಲ್ಲಿ ಈ ಎರಡು ಮುಖಗಳನ್ನು ಈಗಲೂ ನೋಡಬಹುದು.

## ಕಾಕತೀಯ ವೀರಶೈವ ಸುವರ್ಣಯುಗ

ಕಲ್ಯಾಣದ ಕ್ರಾಂತಿಯಾದಮೇಲೆ ವೀರಶೈವರಲ್ಲಿ ಕೆಲವರು ಉಳುವಿಯ ಕಡೆಗೂ, ಕೆಲವರು ಮೈಸೂರಿನ ಕಡೆಗೂ, ಮತ್ತೆ ಕೆಲವರು ಶ್ರೀಶೈಲದ ಕಡೆಗೂ ಚದುರಿದರು. ಈ ಕಷ್ಟ ಕಾಲದಲ್ಲಿ ವೀರಶೈವದ ರಕ್ಷಣೆಗೆ ನಿಂತವರು ಕಾಕತೀಯ ಅರಸರು. ಶ್ರೀ ಬಸವೇಶ್ವರರ ಕಾಲದಲ್ಲಿಯೇ ಆಂಧ್ರದೇಶವನ್ನಾಳುತ್ತಿದ್ದ ಜೈನರಾಜನಾದ ಪ್ರೋಲರಾಜನು ವೀರಶೈವನಾದನು. ಈತನ ಮಗ ರುದ್ರದೇವನ ಕಾಲದಲ್ಲಿ ಪಂಡಿತತ್ರಯರೂ, ಪಾಲ್ಕುರಿಕೆ ಸೋಮನಾಥ ಮತ್ತು ಇವನಿಗೆ ವಾದದಲ್ಲಿ ಸೋತು ವೀರಶೈವ ಧರ್ಮವನ್ನವಲಂಬಿಸಿದ ಚಕ್ರಪಾಣಿ ರಂಗನಾಥ ಮೊದಲಾದ ವೀರಶೈವಪಂಡಿತರೂ ಇದ್ದರು. ಮುಂದಿನ ರಾಜನಾದ ಗಣಪತಿದೇವನ ಕಾಲವು ವೀರಶೈವ ಧರ್ಮದ ಸುವರ್ಣಯುಗವೆಂದು ತಜ್ಞರಿಂದ ಕೊಂಡಾಡಲ್ಪಟ್ಟಿದೆ. ಪ್ರಸಿದ್ಧವಾದ ಮಲ್ಕಾಪುರ ಶಾಸನದಲ್ಲಿ "ವೀರಶೈವಾಚಾರ್ಯ ಶತೈರ್ವೃತಃ" ಎಂದು ಹೊಗಳಲ್ಪಟ್ಟಿರುವ ವಿಶ್ವೇಶ್ವರ ದೇವನು ವೀರಶೈವನಾದ ಗಣಪತಿದೇವನ ದೀಕ್ಷಾಗುರು. ವೀರಶೈವಾಚಾರ್ಯ ವಿಶ್ವೇಶ್ವರ ದೇವನ ಅಧಿಕಾರದಲ್ಲಿ ಬ್ರಾಹ್ಮಣರಾದಿಯಾಗಿ ಚಂಡಾಲಪರ್ಯಂತ ಪ್ರತಿಯೊಬ್ಬರಿಗೂ ಅನ್ನದಾನದ ಸೌಕರ್ಯವು ಏರ್ಪಾಟಾದುದು ಮಲ್ಕಾಪುರ ಶಾಸನದಿಂದ ತಿಳಿಯುವುದು:

ಉಪೇಯುಷಾಂ ಶೈವತಪೋಧನಾನಾಂ, ಕಾಲಾನನಾಸಾಂ, ಶಿವಶಾಸನಾನಾಂ ।
ವಿದ್ಯಾರ್ಥಿನಾಂ, ಪಾಶುಪತವ್ರತಾನಾಮುಪಸ್ಕನ್ನವಸ್ತ್ರಾದಿ ಸಮರ್ಪಣಾಯ ॥
ಆರಭ್ಯ ವಿಪ್ರಾನನಿವಾದಿತಾನಾಂ, ಚಂಡಾಲಪರ್ಯಂತಮುಪಾಗತಾನಾಂ ।
ಅನ್ನಪ್ರದಾನಾಯ ಚ ಸರ್ವಕಾಲಮಕಲ್ಪಯದ್ ರಾಜಗುರುರ್ಮಹಾತ್ಮಾ ॥

ಗಣಪತಿದೇವನಿಗೆ ಗಂಡು ಮಕ್ಕಳಿರಲಿಲ್ಲವಾಗಿ ದಾಯಾದಿಗಳ ಗಂಡುಮಕ್ಕಳಲ್ಲೊಬ್ಬನಿಗೆ ಪಟ್ಟಾಭಿಷೇಕ ಮಾಡಬೇಕೆಂಬ ಪ್ರಯತ್ನವು ವೈದಿಕಪಂಡಿತರಿಂದ ನಡೆಯಿತು. ಆದರೆ ರಾಜಗುರು ವಿಶ್ವೇಶ್ವರದೇವನು ಸ್ತ್ರೀಗೆ ಪುರುಷನಷ್ಟೇ ಹಕ್ಕಿರುವುದೆಂದು ನಿರ್ಣಯಮಾಡಿದ ನಾದುದರಿಂದ ಗಣಪತಿದೇವನ ಪುತ್ರಿ ರುದ್ರಮದೇವಿಯು, "ಪ್ರತಾಪರುದ್ರದೇವ" ಎಂಬ ಹೆಸರಿನಿಂದ ಪಟ್ಟಾಭಿಷಿಕ್ತಳಾಗಿ, ಘನವಾದ ಆ ಹೆಸರನ್ನು ಸಾರ್ಥಕಪಡಿಸಿಕೊಂಡುದು ಚರಿತ್ರೆಯಲ್ಲಿ ಸುವರ್ಣಾಕ್ಷರಗಳಲ್ಲಿ ಬರೆಯಬೇಕಾದ ವಿಷಯವಾಗಿದೆ. ವೀರಶೈವ ಧರ್ಮವು ಎಷ್ಟರ ಮಟ್ಟಿಗೆ ಹರಡಿತೆಂದರೆ ಅರ್ಧನಾರೀಶ್ವರನಾಗಿದ್ದ ಶಂಕರನು ರುದ್ರಮದೇವಿಯಲ್ಲಿ ಪೂರ್ಣ ನಾರೀಶ್ವರನಾದನೆಂದು ಕವಿ ವಿದ್ಯಾನಾಥನು ಆಕೆಯನ್ನು ವರ್ಣಿಸಿದನು. ಸ್ತ್ರೀ ಪುರುಷ ಸಮಾನತ್ವವನ್ನು ಎತ್ತಿಹಿಡಿದ ವಿಶ್ವೇಶ್ವರದೇವನ ತೀರ್ಮಾನವು ಸಾರ್ಥಕವಾಯಿತು. ಈ ಆಂಧ್ರ ಸಾಮ್ರಾಜ್ಯದ ಕಾಲದಲ್ಲಿಯೂ, ಮುಂದೆ ವಿಜಯನಗರದಲ್ಲಿ ಪ್ರೌಢದೇವರಾಯನ ಕರ್ನಾಟಕ ಸಾಮ್ರಾಜ್ಯದ ಕಾಲದಲ್ಲಿಯೂ ವೀರಶೈವರ ಅತ್ಯುತ್ತಮ ವಾಙ್ಮಯದ ಸೃಷ್ಟಿಯಾಯಿತು. ಈ ವಾಙ್ಮಯದ ಯಾವ ಗ್ರಂಥದಲ್ಲಾಗಲೀ ಹೊಸ ಮತವು ಬಸವೇಶ್ವರರಿಂದ ಸ್ಥಾಪಿಸಲ್ಪಟ್ಟಿತೆಂಬ ಅಭಿಪ್ರಾಯವು ಕಂಡುಬರುವುದಿಲ್ಲ.

## ಮಧ್ಯಕಾಲದ ವಾತಾವರಣ

ಹನ್ನೆರಡನೆಯ ಶತಮಾನದ ಹಿಂದು-ಮುಂದೆ ನಡೆದ ವೀರಶೈವದ ಶುದ್ಧಿಸಂಘಟನೆಯ ವಾತಾವರಣದ ಕಲ್ಪನೆಯುಂಟಾಗಲೆಂಬ ಉದ್ದೇಶದಿಂದ ಆಂಧ್ರ ವೀರಶೈವದ ಪ್ರಾರಂಭ ಸ್ಥಿತಿಯನ್ನು ಅವಲೋಕಿಸಿದ್ದಾಯಿತು. ಶಂಕರದಿಗ್ವಿಜಯದಲ್ಲಿ ಹೇಳಿದಂತೆ ಲಿಂಗಧಾರಿಗಳು ವಿವಿಧ ಪ್ರಭೇದಗಳಾಗಿ ತ್ರಿಶೂಲ-ಡಮರು-ಲಿಂಗಚಿಹ್ನಧಾರಿಗಳೊಡನೆ ಸೇರಿಸಲ್ಪಟ್ಟು ಶೈವದ ಆಚಾರಭೇದವೆಂದು ಪರಿಗಣಿಸಲ್ಪಟ್ಟಿದ್ದರು. ಇವರುಗಳ ಸಿದ್ಧಾಂತದಲ್ಲಿಯೂ ಸ್ವಲ್ಪಮಟ್ಟಿಗೆ ಮತಭೇದಗಳಿದ್ದಿರಬೇಕು. ಇಂತಹವುಗಳನ್ನೆಲ್ಲ ಸಂಘಟನೆಗೆ ಒಳಪಡಿಸಿದುದನ್ನು ಎಲ್ಲಕ್ಕಿಂತಲೂ ಮೊದಲು ಸಂಸ್ಕೃತದಲ್ಲಿಯೇ ರಚಿಸಲ್ಪಟ್ಟ ಆಧಾರಗ್ರಂಥವಾದ ಸಿದ್ಧಾಂತಶಿಖಾಮಣಿಯಲ್ಲಿ ಕಾಣಬಹುದು. ಕೆಲವರು ಆಧಾರಚಕ್ರದಲ್ಲಾಗಲೀ ಹೃದಯದಲ್ಲಾಗಲೀ ಭ್ರೂಮಧ್ಯದಲ್ಲಾಗಲೀ ಜ್ಯೋತಿರ್ಲಿಂಗಾನುಸಂಧಾನವನ್ನು ಮಾಡುವುದು ಅಂತರ್ಲಿಂಗಧಾರಣವೆಂದೂ, ಈ ಅಂತರ್ಲಿಂಗಧಾರಣವು ಬಾಹ್ಯಲಿಂಗಧಾರಣಕ್ಕಿಂತ ಶ್ರೇಷ್ಠವೆಂದೂ, ಅಂತರ್ಲಿಂಗಧಾರಿಗಳಿಗೆ ಬಹಿರ್ಲಿಂಗಧಾರಣೆಯ ಆವಶ್ಯವೇ ಇಲ್ಲವೆಂದೂ ಆ ಹಿಂದೆ ವಾದಿಸಿರಬೇಕು. ಸಿದ್ಧಾಂತ ಶಿಖಾಮಣಿಯಲ್ಲಿ ಅಂತರ್ಲಿಂಗಧಾರಣೆಯು ಬಹಿರ್ಲಿಂಗಧಾರಣೆಗಿಂತ ಉತ್ತಮವೆಂದು ಹೇಳಿದೆಯಾದರೂ, ಅಂತರ್ಲಿಂಗಧಾರಿಗಳಿಗೂ ಬಹಿರ್ಲಿಂಗಧಾರಣೆಯು ಆವಶ್ಯವೆಂದು ವಿಧಿಸಲಾಗಿದೆ.

> ಅಂತರ್ಧಾರಯಿತುಂ ಲಿಂಗಮಶಕ್ತಃ ಶಕ್ತ ಏವ ವಾ ।
> ಬಾಹ್ಯಂ ಚ ಧಾರಯೇಲ್ಲಿಂಗಂ ತದ್ರೂಪಮಿತಿ ನಿಶ್ಚಯಾತ್ ॥

ಮದ್ರಾಸಿನಲ್ಲಿ ಪ್ರಕಟವಾಗಿರುವ (Unpublished Upanishads) "ಅಪ್ರಕಾಶಿತ ಉಪನಿಷದಃ" ಎಂಬ ಗ್ರಂಥದ ಸದಾನಂದೋಪನಿಷತ್ತಿನ ಪುಟ ೩೦೮—೩೦೦ ರಲ್ಲಿಯೂ ಇದೇ ವಿಷಯವು ಹೇಳಲ್ಪಟ್ಟಿದೆ:

> ಅಂತರ್ಧಾರಣ ಶಕ್ತೇನಪ್ಯಶಕ್ತೇನ ದ್ವಿಜೋತ್ತಮಃ
> ಸಂಸ್ಕೃತ್ಯ ಗುರುಣಾದತ್ತಂ ಶೈವಂ ಲಿಂಗ ಮುರಃಸ್ಥಲೇ
> ಧಾರ್ಯಂ ವಿಪ್ರೇಣ ಮುಕ್ತ್ಯರ್ಥೇ....

ಸದಾನಂದೋಪನಿಷತ್ತಿನಲ್ಲಿ ಹೇಳಿರುವುದಕ್ಕೂ ಸಿದ್ಧಾಂತಶಿಖಾಮಣಿಯಲ್ಲಿ ಹೇಳಿರುವುದಕ್ಕೂ ಇರುವ ವ್ಯತ್ಯಾಸವು ಗಮನಾರ್ಹವು. ಲಿಂಗಧಾರಿಯು ವಿಪ್ರನು ದ್ವಿಜನು ಎಂದು ಸದಾನಂದೋಪನಿಷತ್ತಿನಲ್ಲಿದೆ; ಸಿದ್ಧಾಂತಶಿಖಾಮಣಿಯಲ್ಲಿ ಜಾತಿ ತಾರತಮ್ಯಕ್ಕೆ ಅವಕಾಶ ಕೊಡುವ 'ವಿಪ್ರ' 'ದ್ವಿಜ' ಎಂಬ ಪದಗಳೇ ಇಲ್ಲ. ಶೈವಮತದಲ್ಲಿ ಮೊದಲಿನಿಂದಲೂ ಜಾತಿ ಬ್ರಾಹ್ಮಣ್ಯಕ್ಕೆ ಗೌರವ ಕೊಡುತ್ತಿರಲಿಲ್ಲವೆಂಬುದು ವ್ರಾತ್ಯರ ಚರಿತ್ರೆಯಿಂದ ಗೊತ್ತಾಗುವುದು. ದಕ್ಷಿಣ ದೇಶದ ಶುದ್ಧ ಶೈವಮಠಗಳಲ್ಲಿ ಬ್ರಾಹ್ಮಣೇತರ ಗುರುಗಳಿರುವರು. ಡಾ॥ ಕಾಂತಿಚಂದ್ರ ಪಾಂಡೆಯವರು ಬರೆದಿರುವ 'ಅಭಿನವಗುಪ್ತ' ಎಂಬ ಆಧಾರಗ್ರಂಥದ 171ನೆಯ ಪುಟದಲ್ಲಿ ಹೇಳಿದಂತೆ "Unlike the Vedic systems this school of thought knows no caste restriction (T.A., II 81·6) ಎಂದರೆ ಕಾಶ್ಮೀರ ಶೈವದಲ್ಲಿ ವರ್ಣತಾರತಮ್ಯವನ್ನು ಒಪ್ಪುವುದಿಲ್ಲ. ಹೀಗೆ ಬಹುಮಟ್ಟಿಗೆ ವರ್ಣತಾರತಮ್ಯವನ್ನು ಶೈವರು ಮಾಡದಿದ್ದರೂ, ಕೆಲವು ಆಗಮಗಳು ಇದಕ್ಕೆ ಅನುಕೂಲವಾಗಿದ್ದರೂ, ಕೆಲವು ಆಗಮಗಳು ಜಾತಿಬ್ರಾಹ್ಮಣ್ಯಕ್ಕೆ ಗೌರವವನ್ನು ಕೊಟ್ಟು ಮೋಕ್ಷಾಧಿಕಾರಕ್ಕೆ ಬ್ರಾಹ್ಮಣ್ಯವು ಅವಶ್ಯವಿರುವುದಾಗಿ ಉಪದೇಶಿಸುತ್ತವೆ. ಶಾಕ್ತ ಸಿದ್ಧಾಂತದಲ್ಲಿಯೂ ಇದೇ ರೀತಿಯಾಗಿರುವುದು. ವಾಯವೀಯಸಂಹಿತೆಯ ಉತ್ತರ ಭಾಗದ ಹದಿಮೂರನೆಯ ಅಧ್ಯಾಯದಲ್ಲಿ:

ಶೂದ್ರಾಣಾಮಂತ್ಯಜಾತೀನಾಂ ಪತಿತಾನಾಂ ವಿಶೇಷತಃ ।
ತಥಾ ಸಂಕರಜಾತೀನಾಂ ನಾಧ್ವಶುದ್ಧಿರ್ವಿಧೀಯತೇ ॥ ೬೭ ॥

ಎಂದು ಹೇಳಿರುವುದರಲ್ಲಿ ಜಾತಿಸಾಂಕರ್ಯದ ನಿಷೇಧವು ಕಂಡುಬರುವುದು. ಆದರೂ ಈ ನಿಷೇಧವೇ ಶೈವಮಾಹೇಶ್ವರರಲ್ಲಿ ಜಾತಿಸಾಂಕರ್ಯವನ್ನು ಲಕ್ಷಿಸದ ಧೋರಣೆಯಿತ್ತೆಂಬುದನ್ನೂ, ಅದನ್ನು ನಿಷೇಧಮಾಡುವುದು ಅವಶ್ಯವಾಯಿತೆಂಬುದನ್ನೂ ಸೂಚಿಸುವುದು. ಸಿದ್ಧಾಂತ ಶಿಖಾಮಣಿಯಲ್ಲಿನ ಮತ್ತೆರಡು ಶ್ಲೋಕಗಳು ಸಹಾ ಗಮನಾರ್ಹವಾಗಿವೆ:

ಶೈವೈರ್ಮಾಹೇಶ್ವರೈಶ್ಚೈವ ಕಾರ್ಯಮಂತರ್ಬಹಿಃ ಕ್ರಮಾತ್ ।
ಶಿವೋಮಹೇಶ್ವರಶ್ಚೇತಿ ನಾತ್ಯಂತಮಿಹಭಿದ್ಯತೇ ॥
ಯಥಾತಥಾ ನ ಭಿದ್ಯಂತೇ ಶೈವಾ ಮಾಹೇಶ್ವರಾ ಅಪಿ ॥ ೫–೧೯ ॥

ಶಿವಾಶ್ರಿತೇಷು ತೇ ಶೈವಾ ಜ್ಞಾನಯಜ್ಞರತಾ ನರಾಃ ।
ಮಾಹೇಶ್ವರಾಃ ಸಮಾಖ್ಯಾತಾಃ ಕರ್ಮಯಜ್ಞರತಾ ಭುವಿ ॥
ತಸ್ಮಾದಭ್ಯಂತರೇ ಕುರ್ಯುಃ ಶೈವಾಮಾಹೇಶ್ವರಾ ಬಹಿಃ ॥ ೫–೨೦ ॥

ವೀರಶೈವರಿಗೂ ಮಾಹೇಶ್ವರರಿಗೂ ವ್ಯತ್ಯಾಸವಿಲ್ಲವೆಂದೂ, ವೀರಶೈವರು ಜ್ಞಾನಯಜ್ಞದಲ್ಲಿ ರತರಾಗಿರುವರಾದರೆ ಮಾಹೇಶ್ವರರು ಕರ್ಮಯಜ್ಞದಲ್ಲಿ ರತರಾಗಿರುವರೆಂದೂ ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದೆ. ಮೇಲಿನ ಶ್ಲೋಕಗಳೆರಡೂ ವಾಯವೀಯಸಂಹಿತೆಯ ಉತ್ತರ ಭಾಗದ ೨೩ನೆಯ ಅಧ್ಯಾಯದಲ್ಲಿ ಇರುವವೇ ಆಗಿವೆ. ಈ ಮಾಹೇಶ್ವರರು ಯಾರು ಎಂಬ ಪ್ರಶ್ನೆಯು ಇಲ್ಲಿ ಏಳುವುದು.

ಹೂಲಿಯಲ್ಲಿನ ಶಿಲಾಲಿಪಿಯಲ್ಲಿ ಈ ಪದ್ಯವಿದೆ:

ಸ್ನಾನ ಜಪ ಹೋಮ ನಿಯಮ । ಧ್ಯಾನಾನುಷ್ಠಾನ ಶೀಲತತ್ಪರನಂ ಸು ॥
ಜ್ಞಾನನಿಧಿ ಮಾನನಿಧಿಯೆಂ । ವಾನಂಪಡೆ ಪೊಗಳ್ಪುದವನಿ ಸಿದ್ಧೇಶ್ವರನಂ ॥

ಈ ಪದ್ಯದ ಆಧಾರದಿಂದ ಶ್ರೀಯುತ ಚೆನ್ನಮಲ್ಲಪ್ಪ ಗಲಗಲಿಯವರು ಸೂಚಿಸುವಂತೆ— "ಸಿದ್ಧೇಶ್ವರನೆಂಬ ಕಾಳಾಮುಖ ಮುನಿಯು ಹೋಮಾದಿ ಕರ್ಮಗಳಲ್ಲಿ ರತನಾಗಿದ್ದುದು ಕಾಲಾಮುಖ ಕರ್ಮಮಾರ್ಗಿತ್ವವನ್ನು ಸೂಚಿಸುವುದಿಲ್ಲವೇ? ಈ ಮಾಹೇಶ್ವರ ಸಂಪ್ರದಾಯದವರ ಹೆಸರುಗಳ ಮುಂದೆ ದೇವ, ಪಂಡಿತ, ರಾಶಿ, ಶಕ್ತಿ, ಶಿವ, ಜೀಯ ಮುಂತಾದ ಉಪಾಧಿಗಳು ಸೇರಿರುವುದುಂಟು......ಶಿಲಾಲಿಪಿಗಳಲ್ಲಿ ಲಿಂಗಿಗಳು ಎಂಬುದಕ್ಕೆ ಪರ್ಯಾಯವಾಗಿ ಮುನಿಗಳೆಂದು ಹೇಳಿರುವುದರಿಂದ ಕಾಳಾಮುಖ ಮುನಿಗಳಿಗೆ ಮಾತ್ರ ಲಿಂಗಧಾರಣೆ ಇದ್ದರೂ ಇರಬಹುದು." ಶ್ರೀಯುತ ಡಿ. ಎಲ್. ನರಸಿಂಹಾಚಾರ್ಯರೂ ಸಹಾ, "ಕಾಳಾಮುಖ ಮುನಿಗಳಿಗೆ ಅಥವಾ ಗೊರವರಿಗೆ ಲಿಂಗಧಾರಣೆ ಇದ್ದಿರಬೇಕು. ಕಾಳಾಮುಖ ಮುನಿಗಳಲ್ಲಿ ಕೆಲವು ವೈದಿಕ ಸಂಪ್ರದಾಯಗಳಿದ್ದವು" ಎಂದೂ, ಅವರು ಕರ್ಮಮಾರ್ಗಿಗಳೆಂಬುದು ಮೇಲೆ ಹೇಳಿದ ಶಾಸನಪದ್ಯದಿಂದ ತಿಳಿದುಬರುವುದೆಂದೂ, ಈ ಕಾಳಾಮುಖ ಗುರುಗಳನ್ನು ಆರಾಧ್ಯರೆಂದು ಕರೆಯುತ್ತಿದ್ದರು ಎಂದೂ ಹೇಳಿರುವರು.

ಪಾಶುಪತಸೂತ್ರವೇ ಮೊದಲಾದ ಆಧಾರಗಳಿಂದ ಲಿಂಗಿ ಎಂದರೆ ಲಿಂಗಧಾರಿಯೆಂದು ಹಿಂದೆಯೇ ಸ್ಪಷ್ಟಮಾಡಲಾಗಿದೆ. ವಾಯವೀಯಸಂಹಿತೆಯಲ್ಲಿ ಮಾಹೇಶ್ವರರು ಕರ್ಮಮಾರ್ಗಾನುಯಾಯಿಗಳೆಂದು ಹೇಳಿರುವುದು ಲಿಂಗಧಾರಿಗಳಾದ ಈ ಕಾಳಾಮುಖ ಮಾಹೇಶ್ವರರನ್ನು ಕುರಿತೇ ಎಂಬುದು ಸ್ಪಷ್ಟವಾಗಿದೆ. ಇವರಿಗೂ ಲಿಂಗಧಾರಿಗಳಾದ (ವೀರ) ಶೈವರಿಗೂ ವಾಯವೀಯಸಂಹಿತೆಯಲ್ಲಿ ವ್ಯತ್ಯಾಸ ಮಾಡದಿರುವುದು ಗಮನಾರ್ಹವಾಗಿದೆ. ಹಾಗೆಯೇ ಈ ಕರ್ಮಮಾರ್ಗದಲ್ಲಿ ರತರಾದ ಲಿಂಗಿಆರಾಧ್ಯಬ್ರಾಹ್ಮಣರು ಮಾಹೇಶ್ವರರೆಂದು ಕರೆಯಲ್ಪಟ್ಟಿರಬೇಕಲ್ಲವೆ?

ಹನ್ನೆರಡನೆಯ ಶತಮಾನದ ಶುದ್ಧಿಸಂಘಟನೆಯಲ್ಲಿ ಲಿಂಗಧಾರಿಗಳಾದ ಕಾಳಾಮುಖಾದಿ ಮಾಹೇಶ್ವರರೂ, ಆರಾಧ್ಯರೇ ಮೊದಲಾದವರೂ, ಇತರ ಪಾಶುಪತ ಲಿಂಗಧಾರಿಗಳೂ, ಪ್ರಾಟೆಸ್ಟೆಂಟ್ ಧರ್ಮಕ್ಕೆ ಸೇರಿದ ಕ್ಯಾಥೊಲಿಕ್ ಪಂಗಡಗಳಂತೆ, ಶುದ್ಧಿಸಂಘಟನೆಗೊಳಗಾದ ವೀರಶೈವ ಪಂಥದ ಅನುಯಾಯಿಗಳಾದರು. ಆಂಧ್ರ ಬಸವಪುರಾಣದಲ್ಲಿ ಪಾಲ್ಕುರಿಕೆ ಸೋಮನಾಥನು,

"ದೇವಲಕುಲು ಮಂತ್ರದೀಕ್ಷಾನ್ವಿತುಲುಘು
ಶೈವ ಪಾಶುಪತಾದಿ ಶಾಸನಧರಲು,
ವಾರುವಾರಿಕ ಲಿಂಗವಂತುಲೈ ಚೂಬಿ,
ಪಾರುವಾರಿಕ ಲಿಂಗವಂತುಲೈ ಕೂಡಿ
ವೀರಮಾಹೇಶ್ವರಾಚಾರನಿರೂಢಿ
ಭೂರಿಪ್ರಸಾದೋಪಭೋಗವ್ಯೆ ನಡವ"

ಎಂದು ಹೇಳಿದ ರೀತಿಯಲ್ಲಿ ಪಾಶುಪತ–ಕಾಳಾಮುಖ–ಮಾಹೇಶ್ವರರೇ ಮೊದಲಾದ ಲಿಂಗವಂತರು ಶುದ್ಧಿಸಂಘಟನೆಗೊಳಗಾದರೂ, ಹಿಂದಿನ ಸತ್‌ಸಂಪ್ರದಾಯವೇ ಮುಂದುವರಿದುದನ್ನು ಶ್ರೀಯುತ ಕಪಟರಾಳರ ಗ್ರಂಥದಿಂದ ತಿಳಿಯಬಹುದು:

"ಶಿವಾಲಯದ ಮಠ, ಒಡೆಯ, ಸುಯಿದಾನ, ಆರೋಗಣೆ ಎಂಬ ಮಾತುಗಳು ಈಗಿನ ಕಾಲದ ಜಂಗಮರಿಗೂ ಅನ್ವಯಿಸುತ್ತವೆ. ಗಣಾಂಗಳೆಂದು ಇಂದಿಗೂ ಜಂಗಮರಿಗೆ

ರೂಢವಾದ ಹೆಸರು. ತಪೋಧನರೆಂದು ಇಂದಿಗೂ ಕೆಲವೆಡೆಗಳಲ್ಲಿ ಇವರಿಗೇನೇ ಅನ್ನುವ ರೂಢಿಯಿದೆ. ಜಂಗಮರಿಗೆ ಉಣಿಸುವ ಪದ್ಧತಿಯು ಹಿಂದಿನ ಕಾಲದಲ್ಲಿದ್ದಂತೆ ಇಂದಿಗೂ ವೀರಶೈವರಲ್ಲಿದೆ. ಲಾಕುಳ ಶೈವಗುರುಗಳಲ್ಲಿ ಯತಿಗಳೂ ಸಂಸಾರಿಗಳೂ ಇದ್ದಂತೆ ಈಗಿನ ಜಂಗಮರಲ್ಲಿಯೂ ಯತಿಗಳೂ ಸಂಸಾರಿಗಳೂ ಉಂಟು. ಗೋರವವಾಡ ಅಥವಾ ಮಠವನ್ನು ದೇವಾಲಯದೊಡನೆ ಕಟ್ಟಿಸಲಾಗುತ್ತಿದ್ದಿತು. ಈಗ ದೇವಸ್ಥಾನವಿಲ್ಲದೆ ಪ್ರತಿ ಊರಿನಲ್ಲಿ ಜಂಗಮರ ಮಠಗಳಿವೆ. ಆಗಿನ ಕಾಲದಲ್ಲಿ ಪ್ರಸಿದ್ಧ ದೇವಸ್ಥಾನಗಳಲ್ಲಿ ತಪೋಧನ ವಿದ್ಯಾರ್ಥಿಗಳಿರುತ್ತಿದ್ದರು. ಈಗಿನ ಕಾಲದ ಜಂಗಮರ ಪ್ರಸಿದ್ಧ ಮಠಗಳಲ್ಲಿ ವಿದ್ಯಾರ್ಥಿಗಳಿಗೆ ವ್ಯವಸ್ಥೆ ಇದೆ. ಒಂದೇ ಮನೆಯಲ್ಲಿ ಒಬ್ಬನನ್ನು ಯತಿಯಾಗಿರಿಸುವುದು, ಇತರರು ಸಂಸಾರಿಗಳಾಗಿರುವುದು ಇಂದಿಗೂ ಜಂಗಮರಲ್ಲಿ ನಡೆದುಬಂದಿದೆ. ಈ ಪದ್ಧತಿಯು ಪೂರ್ವದ ಲಾಕುಳ ಶೈವ ಗುರುಗಳಲ್ಲಿಯೂ ಇದ್ದಿತು. ಮಠಗಳಲ್ಲಿ ದೇಶಿಕರು ಹಿಂದಿನ ಕಾಲದಲ್ಲಿದ್ದಂತೆ ಇರುವ ರೂಢಿಯಿದೆ. ಲಾಕುಳ ಗುರುಗಳು ಭಕ್ತರಿಗೆ ದೀಕ್ಷೆಯನ್ನು ಕೊಡುತ್ತಿದ್ದಂತೆ, ಈಗಲೂ ಜಂಗಮರು ದೀಕ್ಷಾಕಾರ್ಯವನ್ನು ಮಾಡುತ್ತಾರೆ. ಭಕ್ತರಿಗೆ ಶಿಕ್ಷೆಯ ಮಕ್ಕಳೆಂದು ಕರೆಯಲಾಗುತ್ತಿತ್ತು. ಈಗಲೂ ಭಕ್ತರು ಶಿಕ್ಷೆಯ ಮಕ್ಕಳೆಂದು ಕರೆಯಲ್ಪಡುತ್ತಾರೆ. ಸ್ವಜಾತಿಯವರು ಶಿಶುಗಳು—ಮರಿಗಳು ಆಗುವ ರೂಢಿ ಜಂಗಮರಲ್ಲಿದೆ; ಗೌಡರು, ಸೆಟ್ಟರು ಮುಂತಾದವರು ಇಂದಿಗೂ ಜಂಗಮರ ಶಿಷ್ಯರಾಗಿರುವರು. ಆಗಿನ ಕಾಲದಲ್ಲಿ ಅರಸರು ಮೊದಲುಗೊಂಡು ಗೌಡರವರೆಗೆ ಶಿಷ್ಯರಾಗಿದ್ದರು. ಲಾಕುಳ ಶೈವಗುರುಗಳಿಗೆ ಧಾರ್ಮಿಕಕ್ಷೇತ್ರದಲ್ಲಿ ಪ್ರಾದೇಶಿಕ ಅಧಿಕಾರವಿತ್ತು. ಈಗಲೂ ಗುರುವರ್ಗದ ಮಠಗಳ ಶಿಷ್ಯಶಾಖೆಯು ಆಯಾ ಸ್ಥಳದ ಅಧಿಕಾರವನ್ನು ನಡೆಯಿಸುತ್ತಿದೆ. ಲಾಕುಳ ಗುರುಗಳಲ್ಲಿ ಅದೇ ಸಂತತಿಯ ಬ್ರಹ್ಮಚರ್ಯವುಳ್ಳವರನ್ನು ಇರಿಸಬೇಕೆಂದು ನಿಯಮವಿದ್ದುದು ಕಂಡುಬರುವುದಲ್ಲದೆ, ದೀಕ್ಷೆಯ ಸಂತತಿಯನ್ನು ಹೇಳಲಾಗಿದೆ. ಇಂದಿಗೂ ಜಂಗಮರಲ್ಲಿ ಪುತ್ರವರ್ಗ ಮತ್ತು ಶಿಷ್ಯವರ್ಗದವರನ್ನು ಮಠಗಳಿಗೆ ಅಧಿಪತಿಗಳನ್ನಾಗಿ ಆರಿಸುವ ರೂಢಿಯಿದೆ. ಈಗಿನ ಜಂಗಮರು ಮಾಹೇಶ್ವರರು ಆ ಮೊದಲಿಗರಂತೆ ಅಹುದು. ಕೇದಾರ, ಶ್ರೀಶೈಲ ಮುಂತಾದ ಶಿವಾಲಯಗಳು ಈಗಿನ ಜಂಗಮರ ಪೂಜ್ಯಸ್ಥಾನಗಳಾಗಿವೆ. ಕಾಳಾಮುಖರು ಇವನ್ನು ಪೂಜ್ಯಸ್ಥಾನಗಳೆಂದು ಭಾವಿಸಿದ್ದರು. ಹೂಲಿ, ಪಂಚವಣ್ಣಿಗೆ ಮುಂತಾದುವುಗಳು ಈಗಿನ ಜಂಗಮರ ವಶದಲ್ಲಿವೆ. . . . ಈ ಎಲ್ಲ ಸಂಗತಿಗಳನ್ನು ಪರ್ಯಾಲೋಚಿಸಿದರೆ ಪೂರ್ವದ ಲಾಕುಳ ಗುರುಗಳು ಈಗಿನ ಜಂಗಮರ ಪೂರ್ವಜರೆಂದು ನಿರ್ಧಾರವಾಗುವುದು. ದೇವಸ್ಥಾನಗಳಲ್ಲಿಯ ಸ್ಥಾವರಲಿಂಗೋಪಾಸನೆ ಮತ್ತು ತತ್ಸಂಬಂಧವಾದ ಭೂವೃತ್ತಿ ಇವೆರಡನ್ನು ಕಳೆದುಳಿದದ್ದೇ ಈಗಿನ ಜಂಗಮರ ಸಂಸ್ಥೆಯೆಂದು ಸ್ಪಷ್ಟವಾಗಿ ಹೇಳಬಹುದು. ಅದೇ ಪೂರ್ವದ ಧಾರ್ಮಿಕ ಸಂಸ್ಥೆ, ಅದೇ ವ್ಯವಸ್ಥೆ, ಅದೇ ಸಮಾಜ—ರೂಪ ಬೇರೆಯಷ್ಟೆ.''

ಮೇಲೆ ಹೇಳಿದ ಶ್ರೀಯುತ ಕಪಟರಾಳರ ಮಾತುಗಳಲ್ಲಿ ಬಹುಮಟ್ಟಿನ ನಿಜಾಂಶವಿದೆ. ಮುಖ್ಯ ವಿಷಯವೊಂದೆರಡರಲ್ಲಿ ಶ್ರೀಯುತ ಕಪಟರಾಳರು ಎಡವಿರುವರು. ಇವರು ಹಿಂದಿನ ಲಾಕುಳ ಶೈವರು ಲಿಂಗಧಾರಿಗಳಲ್ಲವೆಂದಿರುವುದೂ, ಹಿಂದಿನ ಲಾಕುಳರಲ್ಲಿ ಬ್ರಾಹ್ಮಣರೇ ಇರಲಿಲ್ಲವೆನ್ನುವುದೂ ತಪ್ಪೆಂಬುದನ್ನು ಹಿಂದೆಯೇ ತೋರಿಸಿದೆ. ಲಿಂಗವಂತರಾದ ಶೈವ-ಜಂಗಮ-ಪಾಶುಪತಾದಿಗಳಲ್ಲಿ ರೂಢವಾಗಿದ್ದ ಸಂಪ್ರದಾಯಗಳೇ ಮುಂದುವರಿದುವು. ಅವುಗಳಲ್ಲಿ ಆಕ್ಷೇಪಣೀಯವಾಗಿದ್ದುದೇನಾದರೂ ಇದ್ದರೆ ಅವನ್ನು ಬಿಡಲಾಯಿತು.

ಒಳಪಂಗಡಗಳಲ್ಲಿ ಭಿನ್ನಪದ್ಧತಿಗಳಿದ್ದರೆ ಅವನ್ನು ಸಮನ್ವಯಗೊಳಿಸಲಾಯಿತು. ಮಾರ್ಗವು ಅದೇ ಆದರೂ ಹಳ್ಳಕೊಳ್ಳಗಳನ್ನು ಮುಚ್ಚಿ ಮುಳ್ಳುಕಲ್ಲುಗಳನ್ನು ತೆಗೆದು ತಿರುವು-ಮುರಿವುಗಳಿದ್ದರೆ ನೇರಮಾಡಿ ಉತ್ತಮಗೊಳಿಸಲಾಯಿತು. ಆದುದರಿಂದ ಹೊಸ ಮತವನ್ನು ಸ್ಥಾಪನೆ ಮಾಡಿದರೆನ್ನುವುದು ಸ್ವಲ್ಪವೂ ಸರಿಯಲ್ಲ.

ವೀರಶೈವದ ಉಗಮವು ಹನ್ನೆರಡನೆಯ ಶತಮಾನದಲ್ಲಿ ಆಯಿತೆನ್ನುವ ವಾದವು ಸರಿಯಲ್ಲವೆನ್ನುವುದನ್ನು ಸಾಕಾದಷ್ಟು ಆಧಾರಗಳಿಂದ ಸಿದ್ಧಾಂತಮಾಡಲಾಗಿದೆ. ವೀರಶೈವದ ಉಗಮವು ಬಹಳ ಪ್ರಾಚೀನ ಕಾಲದಲ್ಲಿಯೇ ಆಯಿತೆಂಬುದನ್ನು ಸಿದ್ಧಾಂತಮಾಡುವ ಮೊದಲು, ಸಿಂಹಾವಲೋಕನದ ರೀತಿಯಿಂದ ಇದುವರೆಗೆ ಹೇಳಿದುದನ್ನು ಸಂಗ್ರಹಿಸಿ ಈ ವಿಷಯವನ್ನು ಹಿಂದೆ ಹೇಳದಿರುವ ಒಂದೆರಡು ಆಧಾರಗಳೊಡನೆ ಮುಕ್ತಾಯಮಾಡಬಹುದು.

## ಸಿಂಹಾವಲೋಕನ

ವೀರಶೈವ ಧರ್ಮವು ಬಹಳ ಉತ್ಕೃಷ್ಟವಾದ ಧರ್ಮವೆಂಬುದೂ, ಅದು ವಿಶ್ವಧರ್ಮವಾಗಲು ತಕ್ಕ ಗುಣಗಳಿಂದ ಕೂಡಿದೆಯೆಂಬುದೂ ತಜ್ಞರ ಮತ. ಇಂತಹ ಉತ್ಕೃಷ್ಟ ಧರ್ಮದ ಉಗಮ-ಪ್ರಗತಿಗಳ ಚರಿತ್ರೆಯು ವಿಮರ್ಶಾರ್ಹವಾಗಿದೆ. ಇದು ಹನ್ನೆರಡನೆಯ ಶತಮಾನದಲ್ಲಿ ಉಗಮವಾಯಿತೆನ್ನುವುದು ಸರಿಯಲ್ಲ. ಆದರೆ ಅನೇಕರು ಹಾಗೆ ತಿಳಿದುಕೊಂಡಿರುವುದರಿಂದ ಆ ಅಭಿಪ್ರಾಯವು ಸರಿಯಲ್ಲವೆಂದು ಸಿದ್ಧಾಂತಮಾಡಿದ ಹೊರತು, ಅದು ಬಹು ಹಿಂದೆ ಉದಯವಾಯಿತೆಂಬುದರ ವಿಚಾರವು ಅನವಶ್ಯವಾಗುವುದು. ಕ್ರೈಸ್ತ-ಮಹಮದೀಯ ಮತಗಳಂತೆ ವೀರಶೈವ ಮತವು ಯಾರಿಂದಲೂ ಸ್ಥಾಪಿಸಲ್ಪಟ್ಟ ಮತವಲ್ಲ. "ಪರಶಿವಂ ಪಾರ್ವತಿಗೆ ಪುತ್ರ ಷಣ್ಮುಖಂಗೆ ಪೇಳಿದಂ ಪಳೆಯ ಷಟ್ಸ್ಥಲ ಸಿದ್ಧಾಂತಮಂ" ಎನ್ನುವಷ್ಟು ಪ್ರಾಚೀನವಾದುದು ಈ ಮತ. ಈ ಲೋಕದಲ್ಲಿ ಬಹು ಪ್ರಾಚೀನ ಕಾಲದಲ್ಲೆ ಉಗಮವಾಗಿ "ಮೊಗ್ಗು ಭೂಮಿಯ ಸಾರವನ್ನು ಬಳ್ಳಿಯ ಮೂಲಕ ಹೀರಿಕೊಂಡು ತನ್ನ ಸುತ್ತಮುತ್ತಣ ವಾತಾವರಣದ ಪ್ರಭಾವಕ್ಕೊಳಗಾಗಿ, ನೈಸರ್ಗಿಕವಾಗಿ ಕಾಲಕ್ರಮೇಣ ವಿಕಾಸಹೊಂದಿ, ಸರ್ವಾಂಗೀಕರಣ ಸುಂದರವಾದ ಪುಷ್ಪವಾಗಿ ವಿಕಸಿಸುವಂತೆ ಈ ಧರ್ಮವು ಸಹಾ ವಿಕಾಸಹೊಂದಿತು". ವೇದ ಕಾಲಕ್ಕೆ ವೇದಮಂತ್ರಗಳು ಯಜ್ಞಯಾಗಾದಿಗಳ ಉಪಯೋಗಕ್ಕಾಗಿ ಸಂಹಿತೆಗೊಳಗಾದಾಗ ಈ ಶೈವಧರ್ಮವು ಅದನ್ನು ಎದುರಿಸಿ, ಪ್ರಬಲ ವಿರೋಧದಿಂದ ಸ್ವಲ್ಪ ಕಾಲ ಹಿಮ್ಮೆಟ್ಟಿತು. ಆದರ ವ್ರಾತ್ಯ ಚರಿತ್ರೆಯಿಂದ ತಿಳಿದುಬರುವಂತೆ ಮತ್ತೆ ಚೇತನಗೊಂಡಿತು. ದಕ್ಷಯಾಗವು ವೀರಭದ್ರನಿಂದ ಧ್ವಂಸಗೊಂಡಂದಿನಿಂದ ವೀರಶೈವದ ವ್ಯಕ್ತಿತ್ವವು ಸ್ಫುಟಗೊಂಡಿತೆನ್ನಬಹುದು. ಶಿವರುದ್ರನ ವಿಜಯವಿದು. "ವೀರ" ಪದದ ಮೂಲವನ್ನು ಶಂ. ಬಾ. ಜೋಶಿಯವರು ಋಗ್ವೇದದಲ್ಲಿಯೇ ಕಾಣುವರು. ಶೈವ ಮತ್ಸ್ಯ ಜನಾಂಗವನ್ನು ವೀರ ಮತ್ಸ್ಯರೆಂದು ಕರೆದುದುಂಟು. ಪಾಶುಪತದ ಮುಖ್ಯ ಸಿದ್ಧಾಂತವು ಶ್ವೇತಾಶ್ವತರೋಪನಿಷತ್ತಿನಲ್ಲಿ ರೂಪುಗೊಂಡಿತು. ಇದರಲ್ಲಿ ಪಶು-ಪಾಶ-ಪತಿಗಳ ಸಂಬಂಧವು ಸ್ಪಷ್ಟಮಾಡಲ್ಪಟ್ಟಿರುವುದಲ್ಲದೆ "ದೇವಾತ್ಮ ಶಕ್ತಿ"ಯ ಗೋಚರವು ಧ್ಯಾನಯೋಗಿಗಳಿಗಾಯಿತು. ಅತ್ಯಾಶ್ರಮಿಗಳಿಗೆ ಉಪದೇಶಿಸಲ್ಪಟ್ಟಿತು ಶ್ವೇತಾಶ್ವತರವು ಎಂದು ಅದರಲ್ಲೇ ಹೇಳಿದೆ. ಸನ್ಯಾಸವನ್ನೊಳಗೊಂಡ ನಾಲ್ಕು ಆಶ್ರಮಗಳಿಗೂ ಮೀರಿದುದು ಅತ್ಯಾಶ್ರಮ. ವ್ರತಗಳಲ್ಲೆಲ್ಲ ಶ್ರೇಷ್ಠವಾದುದು ಶಿರೋವ್ರತವು. ಪಾಶುಪತ ವ್ರತವೂ, ಶಾಂಭವವ್ರತವೂ, ಅತ್ಯಾಶ್ರಮವೂ, ಶಿರೋವ್ರತವೂ ಒಂದೇ ಎಂಬುದು ಮತ್ತು

ಲಿಂಗಸಂಬಂಧದಿಂದಲೇ ಈ ವ್ರತಗಳು ಪ್ರಾಪ್ತವಾಗುವುವೆಂಬುದು ಕಾರಣೋತ್ತರ ತಂತ್ರದ ಕ್ರಿಯಾಪಾದದಲ್ಲಿ ಹೇಳಿದೆ:

ನಿವೇದಯಿಷ್ಯನ್ ಮದ್‌ಜ್ಞಾನಂ ದದ್ಯಾದಾದೌ ಶಿರೋವ್ರತಂ
ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ
ಇತೀದಂ ನಾಮಭಿಃ ಪುಣ್ಯೈಃ ನಿಗಮಾಂತೇಷು ಗೀಯತೇ
ತನುತ್ರಯ ಗತಾನಾದಿ ಮಲತ್ರಯಮಸೌ ಗುರುಃ
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶೇತ್
ಸ್ವಾಗ್ರೇ ಸ್ಥಿತಸ್ಯ ಶಿಷ್ಯಸ್ಯ ದೇಶಿಕಃ ಕರುಣಾನಿಧಿಃ
ಕುರ್ಯಾದ್ ದೀಕ್ಷಾಂ ಮಹಾಶೈವೀಂ ಅವಿದ್ಯಾ ಪಾಶ ಕೃಂತನೀಂ
ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ
ದೀಯತೇ ಕ್ಷೀಯತೇ ಯಸ್ಮಾತ್ ತಸ್ಮಾತ್ ದೀಕ್ಷೇತಿ ಕಥ್ಯತೇ
ಸಾದೀಕ್ಷಾ ಪರಮಾಶೈವೀ ತ್ರಿಧಾ ಭವತಿ ನಿರ್ಮಲಾ

ಶಂಕರ ದಿಗ್ವಿಜಯದಲ್ಲಿ **"ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ"** ಎಂದು ಹೇಳಿರುವುದರಿಂದ ಪಾಶುಪತವ್ರತವೆಂದರೆ ವೀರಶೈವವ್ರತವೆಂಬುದು ಸ್ಪಷ್ಟ. ಮಹಾಭಾರತದಲ್ಲಿ ಪಾಶುಪತರ ವಿಷಯವು ಬಂದಿರುವುದಲ್ಲದೆ, ಲಿಂಗಿ ಮತ್ತು ಅಲಿಂಗಿ ಬ್ರಾಹ್ಮಣರ ವಿಷಯವೂ ಬಂದಿದೆ. ರಾವಣನು ಕೆಲವರು ತಿಳಿದಿರುವಂತೆ ದ್ರಾವಿಡನಲ್ಲ. ಅವನು ಬ್ರಾಹ್ಮಣಶ್ರೇಷ್ಠನು, ಸಾಮಗಾನಪ್ರಿಯನು. ಅವನು ಹೋದ ಕಡೆಯಲ್ಲೆಲ್ಲ ಲಿಂಗವನ್ನು ತೆಗೆದುಕೊಂಡುಹೋಗುತ್ತಿದ್ದನೆಂದು ರಾಮಾಯಣದ ಉತ್ತರ ಕಾಂಡದಲ್ಲಿ ಹೇಳಿರುವುದು ವೀರಶೈವ ಆಚರಣೆಯನ್ನು ಜ್ಞಾಪಕಕ್ಕೆ ತರುವುದು:

ಯತ್ರ ಯತ್ರ ಚ ಯಾತಿಸ್ಮ ರಾವಣೋ ರಾಕ್ಷಸೋತ್ತಮಃ ।
ಜಾಂಬೂನದಮಯಂ ಲಿಂಗಂ ತತ್ರ ತತ್ರ ಚ ನೀಯತೇ ॥

ಇನ್ನು ಕ್ರಿಸ್ತಶಕದ ಆರಂಭಕ್ಕೆ ಬಂದರೆ, ಕುಷಾನರಲ್ಲಿ ಒಬ್ಬ ರಾಜನು ತಾನು "ಮಾಹೇಶ್ವರ"ನೆಂದು ಕರೆದುಕೊಂಡಿರುವಂತೆ ಅವನ ನಾಣ್ಯಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೫೦ ರ ಸುಮಾರಿನಲ್ಲಿ ಆಳುತ್ತಿದ್ದ ಭಾರಶೈವರು ಶಿವಭಕ್ತಾಗ್ರೇಸರರಾಗಿದ್ದರು. **"ಅಂಸಭಾರಸನ್ನಿಹಿತ ಶಿವಲಿಂಗೋದ್ವಹನ ಶಿವಪರಿತುಷ್ಟ ಸಮುತ್ಪಾದಿತ ರಾಜ ವಂಶಾನಾಂ"** ಎಂದು ಮೊದಲಾಗಿ ಇವರನ್ನು ವರ್ಣಿಸಿರುವುದರಿಂದ ಇವರು ಶಿವಲಿಂಗಧಾರಿಗಳೆಂದು ಸ್ಪಷ್ಟವಾಗುತ್ತದೆ. ಕ್ರಿ.ಶ. ನಾಲ್ಕನೆಯ ಶತಮಾನದ ವಯಲೂರು ಶಾಸನದಲ್ಲಿ (E. I. XVIII, pp. 149–150) ರಾಜಸಿಂಹನೆಂಬ ದೊರೆಯನ್ನು **"ಮಹೇಶ್ವರ ಶಿಖಾಮಣಿ ದೀಪ್ತಿಮೌಲಿಃ"** ಎಂದು ವರ್ಣಿಸಿರುವುದರಿಂದಲೂ, ಅವನಿಗೆ **"ಶಿವಚೂಡಾಮಣಿ"** ಎಂಬ ಬಿರುದಿದ್ದುದರಿಂದಲೂ ಇವನು ಮೂರ್ಧ್ನಿಪ್ರದೇಶದಲ್ಲಿ ಲಿಂಗವನ್ನು ಧರಿಸಿದವನೆಂದು ತಜ್ಞರು ಅಭಿಪ್ರಾಯಪಡುವರು. ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆಯ 'ಶ್ರೀ ವ್ಯಾಸ ಮಹರ್ಷಿ ಪ್ರಣೀತಂ ಶಿವಮಹಾಪುರಾಣಂ' ಎಂಬ ಗ್ರಂಥದ ಶ್ಲೋಕಗಳನ್ನು ೨೪ನೆಯ ಪುಟದಲ್ಲಿ ಮುದ್ರಿಸಿದೆಯಷ್ಟೆ. ಆ ಗ್ರಂಥದ ಮುನ್ನುಡಿಯಲ್ಲಿ ಹೇಳಿದಂತೆ "ಶ್ರೀಮಚ್ಛಂಕರ ಭಗವತ್ಪಾದರು ತಮ್ಮ ಸೂತ್ರಭಾಷ್ಯದಲ್ಲಿ ಈ ಪುರಾಣದ ಅನೇಕ ಶ್ಲೋಕಗಳನ್ನು ಪ್ರಮಾಣವಾಗಿ ಉದಹರಿಸಿರುತ್ತಾರೆ." ಆದುದರಿಂದ ಈ ಗ್ರಂಥವು ಶ್ರೀ ಶಂಕರಾಚಾರ್ಯರ ಕಾಲಕ್ಕಿಂತಲೂ ಹಿಂದಿನದೆಂಬುದು ಸ್ಪಷ್ಟ. ಈ ಗ್ರಂಥದಲ್ಲಿ, **'ಲಿಂಗಂ ಶಿರಸಾ ಧಾರಯೇತ್ಸದಾ'**

ಎಂದಿರುವುದರಿಂದ, ಆಗ ಲಿಂಗಧಾರಣೆಯು ಪ್ರಚಲಿತವಾಗಿದ್ದಿತೆಂಬುದು ಸ್ಪಷ್ಟ. ಶಂಕರ ದಿಗ್ವಿಜಯದಲ್ಲಿ ಹೇಳಿದಂತೆ, ಶ್ರೀ ಶಂಕರಾಚಾರ್ಯರು ತಪ್ತಲಿಂಗ ಮುದ್ರೆಯ ಧಾರಣೆಯನ್ನು ಖಂಡಿಸಿರುವರಾದರೂ ಲಿಂಗಧಾರಣೆಯನ್ನು ಖಂಡಿಸದಿರುವುದು ಗಮನಾರ್ಹವಾಗಿದೆ.

ಶ್ರೀ ಶಂಕರಾಚಾರ್ಯರು "ಪತ್ಯುರಸಾಮಂಜಸ್ಯಾತ್" ಎಂಬ ಸೂತ್ರದ ಭಾಷ್ಯದಲ್ಲಿ ಪಾಶುಪತರನ್ನು ಮಾಹೇಶ್ವರರೆಂದು ಕರೆದಿರುವುದರಿಂದ ಪಾಶುಪತ ಮತ್ತು ಮಾಹೇಶ್ವರ ಪದಗಳು ಸಮಾನಾರ್ಥದಲ್ಲಿ ಉಪಯೋಗಿಸಲ್ಪಡುತ್ತಿದ್ದುವೆಂಬುದು ಸ್ಪಷ್ಟವಾಗಿದೆ. ಈ ಸೂತ್ರವು ಪಾಶುಪತರಿಗೇನೇ ಅನ್ವಯಿಸುವುದೆಂದು ಭಾಷ್ಯಕಾರರೆಲ್ಲರೂ ಒಪ್ಪುವುದರಿಂದ ಪಾಶುಪತ ಮತವು ಬ್ರಹ್ಮಸೂತ್ರದ ಕಾಲದಲ್ಲಿಯೇ ಪ್ರಚಾರದಲ್ಲಿತ್ತೆಂಬುದು ಸ್ಪಷ್ಟ. ಪೂರ್ವೋಕ್ತ 'ಶಿವಮಹಾಪುರಾಣ'ದಲ್ಲಿ ಶ್ರೀಕೃಷ್ಣನು ಉಪಮನ್ಯು ಋಷಿಯನ್ನು ಪ್ರಾರ್ಥಿಸಿ ಪಡೆದುದು 'ದಿವ್ಯಂ ಪಾಶುಪತಂ ಜ್ಞಾನಂ' ಎಂದಿದೆ. ಲಿಂಗವನ್ನು ಧರಿಸಿದ ಪಾಶುಪತರನ್ನು ಶ್ರೀ ಶಂಕರಾಚಾರ್ಯರು ಜಯಿಸಿದರೆಂದು ಶಂಕರ ದಿಗ್ವಿಜಯದಲ್ಲಿ ಹೇಳಿರುವುದರಿಂದ ಪಾಶುಪತರು ಲಿಂಗಧಾರಿಗಳೆಂದು ತಿಳಿಯಬರುತ್ತದೆ. ಹಿಂದೆ ಹೇಳಿದಂತೆ ಸರ್ವದರ್ಶನ ಸಂಗ್ರಹದಿಂದಲೂ, ಪಾಶುಪತ ಸೂತ್ರದಿಂದಲೂ, ಅದರ ಕೌಂಡಿನ್ಯಭಾಷ್ಯದಿಂದಲೂ ಪಾಶುಪತರು ಶಿವಲಿಂಗಧಾರಿಗಳೆಂಬುದು ಸಂದೇಹವಿಲ್ಲದಂತೆ ತಿಳಿದುಬರುವುದು; ಅಲ್ಲದೆ ಪಾಶುಪತರಲ್ಲಿ ಒಂದು ಶಾಖೆಯಾದ ಕರ್ನಾಟಕ ಕಾಳಾಮುಖ ಗುರುಗಳು ಮಹಾತಪಸ್ವಿಗಳೂ, ಘನ ವಿದ್ವಾಂಸರೂ, ರಾಜಗುರುಗಳೂ ಆಗಿ, ಬಹಳ ಗೌರವದಿಂದ ಬಾಳುತ್ತಿದ್ದುದು ಅನೇಕ ಶಿಲಾಶಾಸನಗಳಿಂದ ತಿಳಿದುಬರುವುದು. ಇವರನ್ನು ಮಾಹೇಶ್ವರರೆಂದೂ, ಲಿಂಗಿಗಳೆಂದೂ, ಶಾಸನಗಳಲ್ಲಿ ಕರೆಯಲಾಗಿದೆ. ಮೇಲೆ ಹೇಳಿದಂತೆ ಪಾಶುಪತ ಮತದ ಒಳಶಾಖೆಗಳಲ್ಲಿ ಶಿವಲಿಂಗಧಾರಿಗಳಿದ್ದುದು ಸಂದೇಹವಿಲ್ಲದಂತೆ ತಿಳಿದುಬರುವುದರಿಂದಲೂ, ಹತ್ತು–ಹನ್ನೊಂದನೆಯ ಶತಮಾನಗಳಿಗೆ ಹಿಂದೆಯೇ ರಾಜಪೂಜಿತರಾಗಿದ್ದ ಇವರನ್ನು "ಕುಲಿಂಗಿ" ಗಳೆಂದು ಜೈನ ಕವಿಗಳು ದೂಷಿಸಿರುವುದರಿಂದಲೂ ಕಾಳಾಮುಖರಲ್ಲಿ ಶಿವಲಿಂಗಧಾರಿಗಳಿದ್ದರೆಂಬುದರಲ್ಲಿ ಸಂದೇಹವಿಲ್ಲ. ಈ ಶಿವಲಿಂಗಧಾರಿಗಳಲ್ಲಿ ಅನೇಕ ಪಂಗಡಗಳಿದ್ದು, ಅವರ ಆಚರಣೆಗಳಲ್ಲಿಯೂ, ಸಿದ್ಧಾಂತಗಳಲ್ಲಿಯೂ ಕೆಲವು ವ್ಯತ್ಯಾಸಗಳಿದ್ದುವು. ಆದರೆ ಮೂಲ ಸಿದ್ಧಾಂತವು ಇವರೆಲ್ಲರಿಗೂ ಒಂದೇ ಆದುದರಿಂದ ಇವರೆಲ್ಲರನ್ನೂ ಒಂದುಗೂಡಿಸಿ ಸಿದ್ಧಾಂತದಲ್ಲಿಯೂ, ಆಚರಣೆಯಲ್ಲಿಯೂ ಒಮ್ಮುಖಮಾಡುವ ಕಾರ್ಯವು ಅವಶ್ಯವಾಯಿತು. ಲಿಂಗಧಾರಿಗಳ ಸಿದ್ಧಾಂತವು ಸಿದ್ಧಾಂತ ಶಿಖಾಮಣಿಯಲ್ಲಿ ಒಮ್ಮುಖವಾಯಿತು. ಶುದ್ಧಿ ಸಂಘಟನಾಕಾರ್ಯವು ವಚನಕಾರರಾದ ಶರಣರಿಂದ ಭರದಿಂದ ಸಾಗಿತು. ಕನ್ನಡ ಉಪನಿಷತ್ತುಗಳೆಂದು ಪ್ರಸಿದ್ಧವಾಗಿರುವ ವಚನ ವಾಙ್ಮಯದ ರಚನೆಯಾಯಿತು. ನಿರ್ದೋಷವಾದ ಹಿಂದಿನ ಸಂಪ್ರದಾಯಗಳೆಲ್ಲ ಮುಂದುವರಿದುವು. ಹರಿಹರಾದಿ ಪ್ರಮುಖ ಪ್ರತಿಭಾಶಾಲಿಗಳು ವೀರಶೈವ ಧರ್ಮಾನುಯಾಯಿಗಳಾದರು. ಕಾಕತೀಯ ರಾಜರು ಮತ್ತು ವಿಜಯನಗರದ ಹಲವು ಮಂದಿ ಅರಸರು ವೀರಶೈವ ಧರ್ಮದ ಉತ್ಕರ್ಷಕ್ಕೆ ಕಾರಣರಾದರು.

ರಾನಡೆಯವರು ಸೂಚಿಸಿದಂತೆ ಅಲ್ಲಮಪ್ರಭುವಿನ ವ್ಯೋಮದಲ್ಲಿ, ಬಸವಭಾನುವಿನ ಪ್ರಕಾಶದಲ್ಲಿ ಬೆಳಗಿತು ವೀರಶೈವ ಧರ್ಮ; ಚನ್ನಬಸವೇಶ್ವರರೇ ಈ ಗಗನದ ಗುರುವೆನ್ನಬಹುದು; ಅಕ್ಕಮಹಾದೇವಿಯನ್ನು ಈ ಗಗನದ ಅರುಂಧತಿಯೆನ್ನಬಹುದು. ಇವರ ಪ್ರಭಾವದಿಂದ ಸರ್ವಸಂಪೂಜ್ಯವಾದ ವಿಶ್ವಧರ್ಮವಾಯಿತು—ವೀರಶೈವ ಧರ್ಮ,

## ದ್ವಿತೀಯಾಧ್ಯಾಯ

# ಆದಿಮಾನವನ ಕಾಲದಲ್ಲಿ ವೀರಶೈವದ ಉಗಮ

### ವೈದಿಕದ ಹೆಸರಿನಲ್ಲಿ ಆಗಮಿಕ ಧರ್ಮದ ಮುನ್ನಡೆ

ಭಾರತ ದೇಶದಲ್ಲಿನ ಧರ್ಮಗಳಲ್ಲಿ ಅತಿ ಪ್ರಾಮುಖ್ಯವಾದುದು ಹಿಂದೂಧರ್ಮ. ಇದು ವೈದಿಕ ಧರ್ಮವೆಂದು ಪ್ರಸಿದ್ಧವಾಗಿದೆ. ಈ ಧರ್ಮದ ವಿವಿಧ ಶಾಖೆಗಳ ಆಚಾರ್ಯರು ಅವರವರ ಮತವು ವೈದಿಕ ಧರ್ಮವೆಂದು ಸಿದ್ಧಾಂತಮಾಡುವುದಕ್ಕಾಗಿ ಭಾಷ್ಯಗಳನ್ನು ಬರೆದಿರುವರು. ಯಾವುದಾದರೂ ಮತವನ್ನು ಖಂಡಿಸಬೇಕಾದಾಗ ಅದು ಅವೈದಿಕ ಮತವೆಂದು ತೋರಿಸುವುದು ಸಂಪ್ರದಾಯ. ಬ್ರಹ್ಮಸೂತ್ರದ "ಪತ್ಯುರಸಾಮಂಜಸ್ಯಾತ್" ಎಂಬ ಸೂತ್ರವು ಪಾಶುಪತ ಮತವು ಅವೈದಿಕವೆಂಬುದನ್ನು ಸಾರುತ್ತದೆ. ಆದರೂ ಆಗಮಗಳಲ್ಲಿ ವೈದಿಕಾಗಮಗಳೆಂದೂ, ಅವೈದಿಕಾಗಮಗಳೆಂದೂ ಎರಡು ವಿಭಾಗಮಾಡಿ ಈ ಸೂತ್ರವು ಅವೈದಿಕ ಮತವನ್ನು ಖಂಡಿಸುತ್ತದೆಂದು ಕೆಲವು ಆಗಮಾನುಯಾಯಿ ಮತಗಳವರು ಹೇಳಿ, ತಮ್ಮ ಮತವು ವೈದಿಕಾಗಮಾನುಸಾರವಾಗಿದೆಯೆಂದು ಸಿದ್ಧಾಂತಮಾಡುತ್ತಾರೆ. ಹಿಂದೂಧರ್ಮದಲ್ಲಿ ವೈದಿಕವೆಂಬುದಕ್ಕೆ ಇಷ್ಟೊಂದು ಪ್ರಾಮುಖ್ಯತೆಯಿದ್ದರೂ, ಶುದ್ಧ ವೈದಿಕ ಧರ್ಮವು ಹಿಂದುಗಳಲ್ಲಿ ಪ್ರಚಲಿತವಾಗಿಲ್ಲವೆಂಬುದು ಅನೇಕರು ತಿಳಿದುಕೊಳ್ಳದಿರುವ ವಿಷಯವಾಗಿದೆ.

'*Outlines of Indian Philosophy*' ಎಂಬ ಗ್ರಂಥದ ೧೩೦ ನೆಯ ಪುಟದಲ್ಲಿ ಮಾನ್ಯ ರಾಧಾಕೃಷ್ಣನ್‌ರವರು ಹೇಳಿದಂತೆ:

"The living Hindu religion of today from Cape Comorin to the remotest corners of Tibet is essentially Tantric. Even the few genuine Vedic rites that are preserved and are supposed to be derived straight from the Vedas, *e.g.*, the Samdhya, have been modified by the addition of Tantric practices."

ಹೀಗೆ ಹಿಂದೂದೇಶದಲ್ಲೆಲ್ಲ ಶುದ್ಧ ವೈದಿಕ ಧರ್ಮವು ಮಾಯವಾಗಿ ಆಗಮಿಕ ಆಚರಣೆಗಳು ಪ್ರಚಲಿತವಾಗಿವೆ. ಹೀಗೆ ಇರುವುದಕ್ಕೆ ಕಾರಣಗಳನ್ನು ಡಾ॥ ಆರ್. ಶಾಮಾಶಾಸ್ತ್ರಿಗಳಂತಹ ಮಹಾಮಹೋಪಾಧ್ಯಾಯ ಅರ್ಥಶಾಸ್ತ್ರವಿಶಾರದರ 'ದ್ರಾವಿಡಸಂಸ್ಕೃತಿ' ಎಂಬ ಜಯಕರ್ನಾಟಕದ ಒಂಭತ್ತನೆಯ ಸಂಪುಟದಲ್ಲಿ ಪ್ರಕಟವಾದ ಲೇಖನದಿಂದ ತಿಳಿದರೆ ಅಧಿಕೃತ ವಾಣಿಯಿಂದ ತಿಳಿದಂತಾಗುವುದು:

"ವೈದಿಕ ಆರ್ಯರ ಪೂಜೆ ಮುಖ್ಯವಾಗಿ ಅಗ್ನಿಪೂಜೆಯು. ಅವರ ದೇವತೆಗಳು ಭೂಮ್ಯಂತರಿಕ್ಷಗಳಲ್ಲಿ ತೋರಿಯಡಗುವ ಅನೇಕ ದಿವ್ಯಶಕ್ತಿಗಳು. ಅಗ್ನಿಯೊಂದನ್ನುಳಿದು ಆರ್ಯರ ಯಾವ ದೇವರನ್ನಾಗಲೀ ಸಾಕಾರವಾಗಿ ತೋರಿಸಲು ಬರುವಂತಿಲ್ಲ....ಆರ್ಯರ ರುದ್ರನು ಈಗಿನ ತ್ರಿಶೂಲಧಾರಿಯಾದ ಶಿವನಲ್ಲ; ಅದ್ಭುತಶಕ್ತಿಯುಳ್ಳ ಪ್ರಚಂಡ ವಾಯುವು. ಆರ್ಯರ ವಿಷ್ಣುವು ಶಂಖಚಕ್ರಧಾರಿಯಾದ ಈಗಿನ ವಿಷ್ಣುವಲ್ಲ; ವಿಶ್ವಪೋಷಕನಾದ ಸೂರ್ಯನು....ಆರ್ಯರ ನಿತ್ಯನೈಮಿತ್ತಿಕ ಕರ್ಮಗಳಲ್ಲಿಯೂ ಕೂಡ ನಾವು ಭಾವಿಸುವಂತೆ

ವಿಷ್ಣುಶಿವರ ಬಗ್ಗೆ ಉಲ್ಲೇಖವಿರುವುದಿಲ್ಲ. ಇದೇ ರೀತಿಯಾಗಿ ಆಯಾ ದೇವತೆಗಳ ಕುರುಹು ಗಳೆಂದು ನಾವು ಧರಿಸುವ ಚಿಹ್ನೆಗಳೂ ಕಂಡುಬರುವುದಿಲ್ಲ. ಆರ್ಯರ ದಿನಚರಿಯು ಈ ರೀತಿ ಯಾಗಿ ಸರಳವಾಗಿತ್ತು. ಅವರು ಸಂಧಿಕಾಲಗಳಲ್ಲಿ ಔಪಾಸನೆಯೆಂದರೆ ಅಗ್ನಿಪೂಜೆಯನ್ನು ಮಾಡುತ್ತಿದ್ದರು. ತ್ರಿಕಾಲಗಳಲ್ಲಿ ಸೂರ್ಯನನ್ನು ಆರಾಧಿಸುವರು. ಪಂಚಮಹಾಯಜ್ಞ ಬಲಿಹರಣಗಳನ್ನು ನೆರವೇರಿಸುವರು. ಈ ಎಲ್ಲ ವಿಧಿಗಳಲ್ಲಿ ಅವರು ತಕ್ಕ ವೇದದ ಭಾಗಗಳನ್ನು ಪಠಿಸುತ್ತಿದ್ದರು. ಆದರೆ ಈಗಿನ ಶೈವ-ವೈಷ್ಣವರು ಪೂಜೆಯ ಕಾಲಕ್ಕೆ ಪಠಿಸುವ ಮಂತ್ರಗಳಿಗೂ ಪೂಜೆಗೂ ಸಂಬಂಧವೇ ತೋರದು. ಒಂದೇ ಉದಾಹರಣೆಯನ್ನು ಹೇಳಬೇಕಾದರೆ—ದೇವರಿಗೆ ಗಂಧ ಹಚ್ಚುವ ಕಾಲದಲ್ಲಿ 'ಗಂಧದ್ವಾರಾಂ' ಎಂಬ ಮಂತ್ರವನ್ನು ಅನ್ನುವ ಪರಿಪಾಠವಿದೆ. ಈ ಮಂತ್ರದಲ್ಲಿ 'ಗಂಧ'ವೆಂಬ ಶಬ್ದ ಮಾತ್ರವಿದೆ; ಆದರೆ ವಿಷ್ಣುವಿಗಾಗಲೀ, ಶಿವನಿಗಾಗಲೀ, ಹಚ್ಚುವ ಗಂಧಕ್ಕಾಗಲೀ ಏನೂ ಸಂಬಂಧವಿಲ್ಲ. ಭಾಗ್ಯದೇವತೆಯಾದ 'ಶ್ರೀ'ಯನ್ನು ಕರೆಯುವ ಮಂತ್ರವಿದು. ಪ್ರಾಚೀನ ಆರ್ಯರಿಗೆ ಗುಡಿಗೋಪುರಗಳ ಅವಶ್ಯಕತೆಯಿರಲಿಲ್ಲ. ದೀಪಧೂಪಗಳ ಆಡಂಬರವಿರಲಿಲ್ಲ. ಅವರ ಪೂಜೆ ತೀರ ಸರಳವಾದುದು. ವೇದಿಕೆಯಲ್ಲಿ ಪ್ರಜ್ವಲಿಸುವ ಅಗ್ನಿಯೊಂದಿದ್ದರೆ ತೀರಿತು. ಹಾಲುಬೆಣ್ಣೆಗಳೇ ಅವರ ಹವಿಸ್ಸು; ಹೆಚ್ಚಿನ ಯಜ್ಞಗಳಿಗಾಗಿ ತಮ್ಮ ಅರಸರಿಂದ ತಕ್ಕ ಸಹಾಯವನ್ನು ಅವರು ಹೊಂದುತ್ತಿದ್ದರು. ಆದರೆ ಮುಂದೆ ಸಾವಿರಾರು ವರ್ಷಗಳಾದ ಮೇಲೆ ಆರ್ಯರಲ್ಲಿಯೇ ಎರಡು ಪಂಗಡಗಳಾದುವೆಂದು ಕೆಲವರು ಹೇಳುವರು. ಮೊದಲು ಜೈನರು, ಆಮೇಲೆ ಬೌದ್ಧರು ಆರ್ಯರ ಈ ಪಶುಯಜ್ಞ ವನ್ನು ವಿರೋಧಿಸಿದರು. ಆರ್ಯರ ಅನೇಕ ಅರಸರೂ, ಅವರ ಪ್ರಜೆಗಳೂ ಈ ಹೊಸ ಪಂಗಡ ಗಳಿಗೆ ಹೊಂದಿಕೊಂಡರು....ಬೌದ್ಧ-ಜೈನ ಭಿಕ್ಷುಗಳು ವಿಂಧ್ಯೆಯನ್ನಿಳಿದು ದಕ್ಷಿಣದಲ್ಲಿ ತಮ್ಮ ಧರ್ಮಪ್ರಸಾರವನ್ನು ಇದೇ ಸಮಯಕ್ಕೆ ಜೋರಿನಿಂದ ನಡೆಸಿದರು. ಅಧ್ಯಾಪಕವೃತ್ತಿಗಾಗಿ ಅನೇಕ ಬ್ರಾಹ್ಮಣರು ದಕ್ಷಿಣಕ್ಕಿಳಿದುಬಂದಿದ್ದರು. ಈ ಬ್ರಾಹ್ಮಣರು ತಮ್ಮ ಪ್ರತಿಕಕ್ಷಿಗಳಾದ ಬೌದ್ಧ-ಜೈನರನ್ನು ಎದುರಿಸಲು, ದ್ರಾವಿಡರಲ್ಲಿಯ ಶೈವ-ವೈಷ್ಣವ ಪಂಥಗಳಲ್ಲಿ ಸೇರಿಕೊಂಡು ತನ್ಮಯರಾದರು. ಈ ತನ್ಮಯತೆಯು ಪರಾಕಾಷ್ಠೆಗಿಳಿಯಿತು. ಅವರು ತಮ್ಮ ಪೂರ್ವದ ವೈದಿಕಾಚಾರವನ್ನು ಬಿಟ್ಟುಕೊಟ್ಟರು. ಸುಗಮವಾದ ಹೊಸ ಸಂಸ್ಕಾರಗಳನ್ನೂ, ಸಂಪ್ರದಾಯ ಗಳನ್ನೂ ಎತ್ತಿಕೊಂಡರು. ವೈದಿಕ ಯಜ್ಞಯಾಗಾದಿಗಳು ದುಃಸಾಧ್ಯವೆಂದು ಮಾಯ ವಾದವು. ಸುಗಮವಾದ ಶ್ರೌತಗೃಹ್ಯಸೂತ್ರಗಳು ಅವುಗಳ ಸ್ಥಾನಕ್ಕೆ ಬಂದವು. ತೀರ ಅಸಂಸ್ಕೃತರಾದವರು ಇವುಗಳನ್ನು ಕೂಡ ಬಿಟ್ಟುಕೊಟ್ಟು, ಕೇವಲ ಶೈವ-ವೈಷ್ಣವ ಪಂಥಗಳ ಆಗಮಾಚಾರಗಳನ್ನಷ್ಟೇ ಇಟ್ಟುಕೊಂಡರು. ವೇದೋಪನಿಷತ್ತುಗಳಲ್ಲಿ ಪಂಡಿತರಾದವರು ಕೂಡ ತಾವು ಮಾಡಿಕೊಂಡ ಮಾತೃಭೂಮಿಯ ಸಂಸ್ಮರಣೆಗಾಗಿ ಅಲ್ಲಿಯ ಭಾಷೆಯನ್ನೂ, ಆಚಾರಗಳನ್ನೂ ಅನುಸರಿಸಹತ್ತಿದರು. ಮೇಲಾಗಿ ದಕ್ಷಿಣಕ್ಕೆ ಸಾಗಿಬಂದ ಬ್ರಾಹ್ಮಣರೆಲ್ಲರೂ ಗುಂಪುಕಟ್ಟಿಕೊಂಡಿರಲಿಲ್ಲ. ಅಲ್ಲಿ-ಇಲ್ಲಿ ಎಲ್ಲ ಕಡೆಯಲ್ಲಿಯೂ ಹಂಚಿಹೋಗಿದ್ದರು. ಹೀಗಾಗಿ ವ್ಯವಹಾರಕ್ಕಾಗಿ ಅವರು ತಮ್ಮ ಆರ್ಯಭಾಷೆಯನ್ನು ಬಿಟ್ಟು ದ್ರಾವಿಡರ ದೇಶಭಾಷೆಯನ್ನು ಕಲಿಯಬೇಕಾಯಿತು. ಇದರಿಂದ ತಮ್ಮ ಆರ್ಯಭಾಷೆಯನ್ನು ಅವರು ಕಳೆದುಕೊಂಡರು. ಸಧನರೂ ಸಬಲರೂ ಆದ ದ್ರಾವಿಡ ಅರಸರನ್ನು ಸಂತೋಷಗೊಳಿಸಲೋಸುಗ ಬ್ರಾಹ್ಮಣರು ತಾವು ಹೊಂದಿದ ಹೊಸ ಧರ್ಮದ ಗುಣಾನುವಾದನಪರವಾದ ಅನೇಕ ಪುರಾಣೇತಿಹಾಸ ಗಳನ್ನು ರಚಿಸಿದರು. ವೇದಗಳಲ್ಲಿಯೂ ಗೃಹ್ಯಸೂತ್ರಗಳಲ್ಲಿಯೂ ಹೇಳದ ಅನೇಕ ಸಂಪ್ರ

ದಾಯಗಳನ್ನು ಬ್ರಾಹ್ಮಣರು ಅನುಸರಿಸಹತ್ತಿದರು. ಇವುಗಳನ್ನು ಅವರು ದ್ರಾವಿಡರಿಂದ ಕಲಿತುಕೊಂಡರೆಂದು ಸಾಮಾನ್ಯವಾಗಿ ಹೇಳಬಹುದು."

ಇದರಿಂದ ತಿಳಿಯಬರುವುದೇನೆಂದರೆ, ಹಿಂಸಾತ್ಮಕವಾದ ಪಶುಯಜ್ಞಗಳನ್ನು ತಮ್ಮಾವರಲ್ಲಿಯೇ ಕೆಲವರ ಆಕ್ಷೇಪದಿಂದಲೂ, ಜೈನಬೌದ್ಧರ ಆಕ್ಷೇಪದಿಂದಲೂ, ದ್ರಾವಿಡರ ಸಂಪರ್ಕದಿಂದಲೂ ಆರ್ಯರು ಬಿಡಬೇಕಾಯಿತು. ವೈದಿಕ ಕರ್ಮಗಳು ಹೋಗಿ, ಆಗಮಿಕ ಪೂಜೆ ಪುಂಸ್ಕಾರಗಳು ಬಂದವು. ಸಂಸ್ಕೃತವು ಮರೆತುಹೋಗಿ ದ್ರಾವಿಡಭಾಷೆಯೇ ಆರ್ಯರ ಭಾಷೆಯಾಯಿತು. ಆರ್ಯದೇವತೆಗಳಾದ ಇಂದ್ರಾದಿಗಳನ್ನು ಕೇಳುವವರೇ ಇಲ್ಲದಂತಾಯಿತು. ಅದಕ್ಕೆ ಬದಲು ದ್ರಾವಿಡರ ದೇವರುಗಳಾದ ಶಿವ, ವಿಷ್ಣು ಮೊದಲಾದವರ ಪೂಜೆಯನ್ನು ಮಾಡುತ್ತ, ಅವುಗಳ ಮಹಿಮೆಯನ್ನು ಹೆಚ್ಚಿಸುವ ಗ್ರಂಥರಾಶಿಯನ್ನು ನಿರ್ಮಿಸಿ ಧನವಂತರೂ ಬಲಿಷ್ಠರೂ ಆದ ದ್ರಾವಿಡರಾಜರನ್ನು ಆರ್ಯರು ಮೆಚ್ಚಿಸಲು ಪ್ರಾರಂಭಿಸಿದರು. ಹೀಗೆ ವೈದಿಕ ಧರ್ಮವು ಹೋಗಿ ಆಗಮಿಕ ಧರ್ಮವು ಅದರ ಸ್ಥಾನವನ್ನು ಆಕ್ರಮಿಸಿತು. ಇದೇ ಮಹಾಮಹೋಪಾಧ್ಯಾಯ ಅರ್ಥಶಾಸ್ತ್ರವಿಶಾರದ ಡಾ॥ ಶ್ಯಾಮಾಶಾಸ್ತ್ರಿಗಳ ಲೇಖನದ ಸಾರಾಂಶ. ಆದುದರಿಂದ ಶೈವದ ಹಾಗೂ ವೀರಶೈವದ ಉಗಮವನ್ನು ನಿರ್ಧರಿಸಬೇಕಾದರೆ ದ್ರಾವಿಡರ ಸಂಸ್ಕೃತಿಯ ಮೂಲವನ್ನು ನೋಡಬೇಕಾಗುವುದು.

## ಪುರಾತನ ದ್ರಾವಿಡಸಂಸ್ಕೃತಿಯು ವೀರಶೈವದ ಉಗಮಕ್ಕೆ ಉತ್ಕೃಷ್ಟವಾದ ಕ್ಷೇತ್ರವಾಯಿತು

ದ್ರಾವಿಡಸಂಸ್ಕೃತಿಯ ಮೂಲವು ಕಾಲಗರ್ಭದಲ್ಲಿ ಅಡಗಿಹೋಗಿತ್ತು. ಸಿಂಧೂನದಿಯ ತೀರದ ಅವಶೇಷಗಳು ಬೆಳಕಿಗೆ ಬಂದಾಗ ದ್ರಾವಿಡಸಂಸ್ಕೃತಿಯ ದೃಶ್ಯವು ವಿಚಾರಪರರ ಆಶ್ಚರ್ಯವನ್ನು ಚಕಿತಗೊಳಿಸಿತು. ಏಕೆಂದರೆ ಅದುವರೆಗೂ ನಾಗರಿಕರಾದ ಆರ್ಯರು ಅನಾಗರಿಕರಾದ ಕುರೂಪಿ ದ್ರಾವಿಡರನ್ನು ಸುಲಭವಾಗಿ ಜಯಿಸಿ ದಕ್ಷಿಣದ ಕಡೆಗೆ ದೂಡಿದರೆಂಬುದೇ ಪ್ರಚಲಿತವಾದ ಅಭಿಪ್ರಾಯವಾಗಿತ್ತು. ಋಗ್ವೇದದಲ್ಲಿ ದ್ರಾವಿಡರ ವಿಷಯವಾಗಿ ಅವರ ಶತ್ರುಗಳು ಹೇಳಿರುವ ಮಾತುಗಳಿಂದಲೂ ಸಹಾ ಅವರ ವಿಷಯದಲ್ಲಿ ಮೂಡಿದ್ದ ಅಭಿಪ್ರಾಯವು ಸರಿಯಲ್ಲವೆಂದು ಕಂಡುಬರುತ್ತದೆ. ಆದರೆ ಮೊಹೆಂಜೊದಾರೊ ಮತ್ತು ಹರಪ್ಪಗಳಲ್ಲಿ ಕಂಡುಬಂದ ಅವಶೇಷಗಳಿಂದ ದೊರಿತ ದೃಶ್ಯವು, ದ್ರಾವಿಡರದು ಉತ್ಕೃಷ್ಟವಾದ ನಾಗರಿಕತೆಯೆಂಬುದನ್ನು ಹೊರಗೆಡವಿತು. ಅವರ ನಾಗರಿಕತೆಯು ಆರ್ಯರ ನಾಗರಿಕತೆಗಿಂತಲೂ ಉತ್ತಮವಾಗಿದ್ದಿತೆಂಬುದು ತಜ್ಞರ ಮತ. ಹಳ್ಳಿಗಳಲ್ಲಿ ವಾಸಮಾಡುತ್ತ ಕೃಷಿ ಪಶುಪಾಲನೆಗಳಿಂದ ಜೀವನ ಮಾಡುತ್ತಿದ್ದ ಆರ್ಯರಿಗಿಂತ ಪಟ್ಟಣಗಳಲ್ಲಿ ವಾಸಮಾಡುತ್ತ, ಪರದೇಶಗಳೊಡನೆ ವ್ಯಾಪಾರಮಾಡುತ್ತ, ವಾಣಿಜ್ಯದಿಂದ ಜೀಪನಮಾಡುತ್ತಿದ್ದ ದ್ರಾವಿಡರು ಉತ್ತಮ ನಾಗರಿಕರೆಂದು ಸಂಶೋಧಕರು ನಿರ್ಧರಿಸಿರುವರು. ಅಷ್ಟೇ ಅಲ್ಲ, ಹಿಂದಿನ ಸಂಶೋಧಕರು ದ್ರಾವಿಡರ ಸಂಸ್ಕೃತಿಯನ್ನು ಎಷ್ಟು ಹೀನಾಯವಾಗಿ ಕಂಡರೋ, ಈಚಿನ ಸಂಶೋಧಕರು ಅಷ್ಟು ಉತ್ಕೃಷ್ಟವಾಗಿ ಅದನ್ನು ವರ್ಣಿಸಿ, ಆರ್ಯಸಂಸ್ಕೃತಿಯನ್ನು ಅಷ್ಟೇ ತೀವ್ರವಾಗಿ ಕೆಳಗಿಳಿಸಿದರು. ೧೯೪೪ರಲ್ಲಿ ಡೈರೆಕ್ಟರ್ ಜನರಲ್ ಆಫ್ ಆರ್ಕ್ಯಿಯಾಲಜಿಯಾಗಿ ನಿಯಮಿಸಲ್ಪಟ್ಟ ಸರ್ ಮಾರ್ಟಿಮರ್ ವ್ಹೀಲರನು 'ಪ್ರಿ-ಹಿಸ್ಟಾರಿಕ್ ಇಂಡಿಯಾ' ಎಂಬ ಗ್ರಂಥದ ೨೬೩ ನೆಯ ಪುಟದಲ್ಲಿ ಹೀಗೆ ಬರೆದಿದ್ದಾನೆ:

"The recent excavation of Harappa may be thought to have changed the picture. Here we have a highly evolved civilization of essentially non-Aryan type now known to have employed massive fortifications and known to have also dominated the river system of north-western India at a time not distant from the likely period of the earlier Aryan invasions of that region."

ಇಂತಹ ಉತ್ಕೃಷ್ಟವಾದ ನಾಗರಿಕ ಜನವನ್ನು ಅನಾಗರಿಕರಾದರೂ ಯುದ್ಧದಲ್ಲಿ ಪ್ರವೀಣರಾದ ಆರ್ಯರು ಹಿಂದೂದೇಶವನ್ನು ಪ್ರವೇಶಿಸಿ ನಾಶಮಾಡಿದರೆಂಬುದು ವ್ಹೀಲರನ ಅಭಿಪ್ರಾಯ. ಎಡಿನ್‌ಬರೋ ವಿಶ್ವವಿದ್ಯಾಲಯದ ಪ್ರೊಫೆಸರ್ ಸ್ಟೂಅರ್ಟ್ ಪಿಗ್ಗಟ್ಟನು 'ಪ್ರಿ-ಹಿಸ್ಟಾರಿಕ್ ಇಂಡಿಯಾ' ಗ್ರಂಥದ ಪುಟ ೨೫೭–೨೫೮ ರಲ್ಲಿ ಉತ್ತಮ ನಾಗರಿಕರೂ ಓದುಬರಹ ಬಲ್ಲವರೂ ಆದ ದ್ರಾವಿಡರ ಸುಸಂಘಟಿತವಾದ ಚಕ್ರಾಧಿಪತ್ಯದ ಮೇಲೆ ಕಾಡುಜನರಂತಿದ್ದ ಆರ್ಯರು ದಂಡೆತ್ತಿಬಂದರೆಂದಿರುವನು: "The Aryan advent in India was in fact the arrival of barbarians into a region already highly organised into an empire based on a long established tradition of literate urban culture." ಈ ಅಭಿಪ್ರಾಯಗಳಲ್ಲಿ ಅತಿಶಯೋಕ್ತಿಯಿರುವುದು ಎನ್ನಬಹುದಾದರೂ, ದ್ರಾವಿಡರು ಹೆಚ್ಚು ನಾಗರಿಕರಾಗಿದ್ದರೆಂಬುದನ್ನು ಅಲ್ಲಗಳೆಯುವಂತಿಲ್ಲ. ಆದರೆ, ಅಮೆರಿಕ ಮತ್ತು ಆಫ್ರಿಕದ ಮೂಲ ನಿವಾಸಿಗಳನ್ನು, ಹೆಚ್ಚು ಸುಧಾರಿಸಿದವರಾದರೂ ನವನಾಗರಿಕತೆಯ ಈಚಿನ ಕಾಲದಲ್ಲಿಯೇ ನಿರ್ನಾಮಗೊಳಿಸಲು ಪ್ರಯತ್ನಿಸಿದ ಐರೋಪ್ಯ ಆಕ್ರಮಣಕಾರರಂತೆ ನಡೆಯದೆ, ಹಿಂದಿನ ಕಾಲದಲ್ಲೇ ದ್ರಾವಿಡರಲ್ಲಿ ಬೆರತು ಅವರ ಸಂಸ್ಕೃತಿಯನ್ನೇ ಅಂಗೀಕರಿಸಿದ ಆರ್ಯರನ್ನು ಮೇಲೆ ಹೇಳಿದಂತೆ ವರ್ಣಿಸುವುದು ಅತಿಶಯೋಕ್ತಿಯೇ ಸರಿ. ಅದೇನೇ ಇರಲಿ; ದ್ರಾವಿಡರ ನಾಗರಿಕತೆಯು ಬಹಳ ಉತ್ತಮಸ್ಥಿತಿಯಲ್ಲಿ ಇತ್ತೆಂಬುದರಲ್ಲಿ ಸಂದೇಹವಿಲ್ಲ. ಮೊಹೆಂಜೊದಾರೊ ಮತ್ತು ಹರಪ್ಪದ ಅವಶೇಷಗಳನ್ನು ಮೊದಲು ಪರೀಕ್ಷಿಸಿದ ಸರ್ ಜಾನ್ ಮಾರ್ಷಲ್ಲರ ಅಭಿಪ್ರಾಯವು ಬಹುಮಟ್ಟಿಗೆ ಸರಿಯೆನ್ನಬಹುದಾದುದರಿಂದ ಅವರ ಗ್ರಂಥದ ಪೀಠಿಕೆಯಿಂದ ನಿಜಾಂಶವನ್ನು ಗ್ರಹಿಸಬಹುದು.

ಸುಮಾರು ಐದಾರು ಸಹಸ್ರ ವರ್ಷಗಳ ಹಿಂದಿನ ಮಾತು. ಜನರು ಇನ್ನೂ ಕಲ್ಲಿನ ಆಯುಧ ಮತ್ತು ಪಾತ್ರೆಗಳೊಡನೆ ತಾಮ್ರದ ಮತ್ತು ಕಂಚಿನ ಪಾತ್ರೆಗಳನ್ನೂ ಆಯುಧಗಳನ್ನೂ ಉಪಯೋಗಿಸುತ್ತಿದ್ದ ಕಾಲ. ಆಗಲೇ ದ್ರಾವಿಡರು ಸುಸಜ್ಜಿತವಾದ ನಗರಗಳಲ್ಲಿ ವಾಸಮಾಡುತ್ತಿದ್ದರು. ನಾನಾ ದೇಶಗಳೊಡನೆ ವ್ಯಾಪಾರಮಾಡುತ್ತಿದ್ದರು; ಗೋಧಿ, ಜವೆಗೋಧಿಗಳನ್ನು ಬೆಳೆಯುತ್ತಿದ್ದರು. ಎಮ್ಮೆ, ಎತ್ತು, ಕುರಿ, ಹಂದಿ, ನಾಯಿ, ಆನೆ, ಒಂಟೆಗಳನ್ನು ಆಗಲೇ ಪಳಗಿಸಿಕೊಂಡಿದ್ದರು. ಚಕ್ರದ ಗಾಡಿಗಳು ಉಪಯೋಗದಲ್ಲಿದ್ದುವು. ಚಿನ್ನ, ಬೆಳ್ಳಿ, ಸೀಸ, ತಾಮ್ರ, ಕಂಚುಗಳ ಉಪಯೋಗವನ್ನು ಬಲ್ಲವರಾಗಿದ್ದು, ಈ ಲೋಹಗಳಲ್ಲಿ ಉತ್ತಮ ಕೆಲಸವನ್ನು ಮಾಡಬಲ್ಲವರಾಗಿದ್ದರು. ರಾಟೆಯಲ್ಲಿ ನೂಲುವುದನ್ನು ಚೆನ್ನಾಗಿ ಬಲ್ಲವರಾಗಿದ್ದರು. ಯುದ್ಧದಲ್ಲಿ ಬಿಲ್ಲು-ಬಾಣ, ಕೊಡಲಿ, ಭರ್ಜಿಗಳನ್ನು ಉಪಯೋಗಿಸುತ್ತಿದ್ದರು. ರತ್ನಖಚಿತವಾದ ಬಂಗಾರದ ಒಡವೆಗಳನ್ನು ಐಶ್ವರ್ಯವಂತರು ಉಪಯೋಗಿಸುತ್ತಿದ್ದರು. ಓದುಬರಹವನ್ನು ಚೆನ್ನಾಗಿ ಬಲ್ಲವರಾಗಿದ್ದರು. ತಾವು ವಾಸಮಾಡುತ್ತಿದ್ದ ನಗರಗಳಲ್ಲಿ ಉತ್ತಮವಾದ ಒಳಚರಂಡಿಗಳನ್ನೂ, ಸ್ನಾನಗೃಹಗಳನ್ನೂ ಏರ್ಪಡಿಸಿಕೊಂಡಿದ್ದರು. ಆ ಕಾಲದಲ್ಲಿ ಪ್ರಸಿದ್ಧವಾಗಿದ್ದ

ಮೆಸಪೊಟೋಮಿಯ ಮತ್ತು ಈಜಿಪ್ಟ್ ದೇಶದವರಿಗಿಂತ ಕೆಲವು ವಿಷಯಗಳಲ್ಲಿ ಇಲ್ಲಿನವರು ಮುಂದುವರಿದಿದ್ದರು.

ಇಂತಹ ಉನ್ನತಮಟ್ಟದ ನಾಗರಿಕ ಜನಾಂಗದಲ್ಲಿ ಶೈವ ಹಾಗೂ ವೀರಶೈವದ ಮುಖ್ಯ ಲಕ್ಷಣಗಳುಳ್ಳ ಧರ್ಮವು ಪ್ರಚಲಿತವಾಗಿದ್ದಿತೆಂದರೆ ಸೋಜಿಗಪಡಬೇಕಾದುದಿಲ್ಲ.

## ಶೈವವು ಪ್ರಪಂಚದಲ್ಲೆಲ್ಲ ಅತ್ಯಂತ ಪ್ರಾಚೀನವಾದ ಮತ

ಸರ್ ಜಾನ್ ಮಾರ್ಷಲ್ಲರ 'ಮೊಹೆಂಜೊದಾರೊ ಅಂಡ್ ದಿ ಇಂಡಸ್ ಸಿವಿಲಿಜೇಷನ್' ಎಂಬ ಗ್ರಂಥದ ಮುನ್ನುಡಿಯಲ್ಲಿನ ಸ್ವಲ್ಪ ಭಾಗವು ಇಲ್ಲಿ ಉಲ್ಲೇಖಾರ್ಹವಾಗಿದೆ:

"Equally peculiar to the Indus Valley and stamped with an individual character of their own, are its art and its religion. Nothing that we know of, in other countries, at this period, bears any resemblance, in point of style, to the miniature faience models of rams, dogs and other animals or to the intaglio engravings on the seals, the best of which—notably the humped and short-horn bulls—are distinguished by a breadth of treatment and a feeling for line and plastic form that has rarely been surpassed in glyptic art; nor would it be possible until the classic age of Greece to match the exquisitely supple modelling of the two human statuettes from Harappa figured in Plates X and XI. In the religion of the Indus peoples, there is much, of course, that might be paralleled in other countries. This is true of every pre-historic and of most historic religions as well. But taken as a whole, their religion is so characteristically Indian, as hardly to be distinguishable from still living Hinduism or at least from that aspect of it which is bound up with animism and the cults of Siva and the mother Goddess—still the two most potent forces in popular worship. Among the many revelations that Mohenjo-Daro and Harappa have had in store for us, none perhaps is more remarkable than this discovery that *Saivism has a history going back to the Chalcolithic Age or perhaps even further still, and that it thus takes its place as the most ancient living faith in the world.*"

ಸರ್ ಜಾನ್ ಮಾರ್ಷಲ್ಲರು ಮೊಹೆಂಜೊದಾರೊ, ಹರಪ್ಪ ನಾಗರಿಕತೆಯ ಕಾಲದ ಜನರ ಉತ್ತಮ ಕಲಾಭಿಜ್ಞತೆಯನ್ನು ಕೊಂಡಾಡಿ, ಅವರ ಶೈವಮತಾಚರಣೆಯು ಹಿಂದೂ ದೇಶದಲ್ಲಿ ಇನ್ನೂ ಉಳಿದು ನಿಂತಿದೆಯೆಂದು ಹೇಳಿದ್ದಾರೆ. ಶೈವಮತಾಚರಣೆಯು ಆದಿಮಾನವನ ಕಾಲದಿಂದಲೂ ಅಸ್ತಿತ್ವದಲ್ಲಿರುವುದೆಂಬುದೂ, ಪ್ರಪಂಚದ ಮತಗಳಲ್ಲೆಲ್ಲ ಶೈವಮತವೇ ಅತ್ಯಂತ ಪ್ರಾಚೀನ ಮತವಾದುದೆಂಬುದೂ, ಮೊಹೆಂಜೊದಾರೊ-ಹರಪ್ಪ ನಾಗರಿಕತೆಯ ಅವಶೇಷಗಳಿಂದ ತಿಳಿದುಬಂದಿರುವ ಅತ್ಯಂತ ಚಕಿತಗೊಳಿಸುವ ವಿಷಯಗಳಾಗಿವೆ ಎಂದಿದ್ದಾರೆ. ಮೊಹೆಂಜೊದಾರೊ-ಹರಪ್ಪ ನಾಗರಿಕತೆಯು ಬಹು ಹಿಂದಿನಿಂದ ಬಳೆದುಬಂದುದೆಂದು ಅವರು ಅಭಿಪ್ರಾಯಪಟ್ಟಿರುವುದರಿಂದ ಶೈವಧರ್ಮವು ಚೆನ್ನಾಗಿ ರೂಪುಗೊಂಡು ವೀರಶೈವದ ಮುಖ್ಯ

ಲಕ್ಷಣಗಳು ಮೊಹೆಂಜೊದಾರೊ ಜನರಲ್ಲಿ ಕಂಡುಬಂದಿರುವುದರಲ್ಲಿ ಆಶ್ಚರ್ಯವೆನಿಸದು. ಏಕೆಂದರೆ ಆಗಲೇ ಅವರು ಶಕ್ತಿವಿಶಿಷ್ಟ ಶಿವನನ್ನು ಅರ್ಚಿಸುತ್ತಿದ್ದುದು ಸಿದ್ಧಾಂತವಾದ ಮಾತು. ಶ್ರೀ ಮಹೇಶಚಂದ್ರ ಮಜಂದಾರ್, ವೈಸ್‌ಛಾನ್ಸಲರ್, ಡೆಕ್ಕಾ ಯೂನಿವರ್ಸಿಟಿ, ಇವರು 'ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯ'ದ ೩ ನೇ ಸಂಪುಟದಲ್ಲಿ ಹೇಳಿದಂತೆ :

*General Conclusions.*—That some fundamental ideas of Hinduism may be traced as far back as third Millinium B.C.

That the theistic worship of Siva and Shakti may be regarded as the oldest form of Hindu religion.

## ವೀರಶೈವದ ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ ಮೂಲಕಲ್ಪನೆಗಳನ್ನು ಮೊಹೆಂಜೊದಾರೊ ಕಾಲದಲ್ಲಿಯೇ ಗುರುತಿಸಬಹುದು

ಆದಿಮಾನವನ ಕಾಲದಲ್ಲಿ ಉಗಮವಾಗಿ, ವೇದಾಗಮೋಪನಿಷತ್ ಪುರಾಣಗಳಲ್ಲಿ ಪ್ರಗತಿಹೊಂದಿ, ಹನ್ನೊಂದು-ಹನ್ನೆರಡನೆಯ ಶತಮಾನದಿಂದ ಈಚೆಗೆ ಪರಿಪೂರ್ಣತೆಯನ್ನು ಹೊಂದಿದ, ವೀರಶೈವದ ಎಲ್ಲ ಲಕ್ಷಣಗಳನ್ನು, ಉಗಮವಾಗಿ ಪ್ರಗತಿಹೊಂದುತ್ತಿದ್ದ ಆಗಿನ ಕಾಲದ ವೀರಶೈವದಲ್ಲಿಯೇ ನಿರೀಕ್ಷಿಸುವುದು ಸರಿಯಲ್ಲ. ಇಂದು ಜಟಾಧಾರಿಯಾಗಿ ಗಂಗಾ ತೀರದಲ್ಲಿರುವ ಋಷಿ ದೇವದತ್ತನ ಎಲ್ಲ ಲಕ್ಷಣಗಳನ್ನು, ಅಂದು ಕಾವೇರಿ ತೀರದಲ್ಲಿದ್ದ ವಟು ದೇವದತ್ತನಲ್ಲಿಯೋ, ಶಿಶುದೇವದತ್ತನಲ್ಲಿಯೋ ನಿರೀಕ್ಷಿಸಲಾಗುವುದಿಲ್ಲ. ಆದರೆ ಶಿಶು ದೇವದತ್ತನೇ ವಟುದೇವದತ್ತನಾಗಿ, ಮತ್ತೆ ಜಟಾಧಾರಿದೇವದತ್ತನಾಗಿ ಬೆಳೆದುದು ಸರಿಯಷ್ಟೆ. ಹಾಗೆಯೇ ಜಟಾಧಾರಿದೇವದತ್ತನ ಎಲ್ಲ ಲಕ್ಷಣಗಳನ್ನು ವಟುದೇವದತ್ತನಲ್ಲಿ ಕಾಣಲಾಗ ದಿದ್ದರೂ, ವಟುದೇವದತ್ತನಲ್ಲಿ ಇದ್ದ ಎಲ್ಲ ಲಕ್ಷಣಗಳನ್ನು ಶಿಶುದೇವದತ್ತನಲ್ಲಿ ಕಾಣಲಾಗ ದಿದ್ದರೂ, ಜಟಾಧಾರಿದೇವದತ್ತನ ಮುಖ್ಯ ಲಕ್ಷಣಗಳಲ್ಲಿ ಕೆಲವು ಶಿಶುದೇವದತ್ತನಲ್ಲಿ ಇದ್ದೇ ಇರಬೇಕಷ್ಟೆ. ಹಾಗೆಯೇ ಇಂದು ಪರಿಪೂರ್ಣವಾಗಿರುವ ವೀರಶೈವದ ಎಲ್ಲ ಲಕ್ಷಣಗಳನ್ನು ಐದು ಸಾವಿರ ವರ್ಷಗಳ ಹಿಂದೆ ಬಾಲ್ಯಾವಸ್ಥೆಗೆ ಬರುತ್ತಿದ್ದ ವೀರಶೈವದಲ್ಲಿ ಕಾಣಲಾಗದಿದ್ದರೂ, ಆದೇ ಇದು ಎನ್ನುವಷ್ಟು ಮಟ್ಟಿನ ವೀರಶೈವದ ಮುಖ್ಯ ಲಕ್ಷಣಗಳನ್ನು ಆಗಿನ ಕಾಲದ ವೀರಶೈವ ಧರ್ಮದಲ್ಲಿಯೇ ಕಾಣಬಹುದು. ಇಂದಿನ ವೀರಶೈವದ ಮುಖ್ಯ ಲಕ್ಷಣಗಳನ್ನು ಮೂರು ತೆರದವನ್ನಾಗಿ ವಿಂಗಡಿಸಬಹುದು. ವೀರಶೈವದ ಆಧಿದೈವಿಕ ಕಲ್ಪನೆ, ಇದರ ಆಧ್ಯಾತ್ಮಿಕ ಕಲ್ಪನೆ ಮತ್ತು ಆಚರಣೆಯ ದೃಷ್ಟಿಯಿಂದ ಆಧಿಭೌತಿಕ ಕಲ್ಪನೆಯೆಂಬಿವೇ ಈ ಮೂರು ತೆರೆದ ವಿಭಾಗಗಳು. ಆಧಿದೈವಿಕ ದೃಷ್ಟಿಯಿಂದ ವೀರಶೈವರು ಸರ್ವೇಶ್ವರನಾದ ಶಿವನೇ ತಮ್ಮ ದೈವವೆನ್ನುವರು. ಸೃಷ್ಟಿ ಸ್ಥಿತಿ ಲಯ ಕರ್ತನು ಅವನೇ. ತ್ರಿನೇತ್ರನೂ, ತ್ರಿಶೂಲಧಾರಿಯೂ, ಸರ್ಪಭೂಷಣನೂ, ಚಂದ್ರಚೂಡನೂ, ಅರ್ಧನಾರೀಶ್ವರನೂ, ಪಶುಪತಿಯೂ, ಅಷ್ಟತನುವೂ, ಯೋಗೀಶ್ವರನೂ ಶಿವನೇ ಎಂಬುದು ಅವರ ಆಧಿದೈವಿಕ ಕಲ್ಪನೆ. ಆಧ್ಯಾತ್ಮಿಕ ದೃಷ್ಟಿಯಪ್ರಕಾರ ಶಿವ-ಶಕ್ತಿ-ಜೀವರು ಒಂದೇ ಎಂಬ ಅದ್ವೈತ ಕಲ್ಪನೆಯೂ ಜೀವನು ಮೋಕ್ಷವನ್ನು ಪಡೆಯಲು ಸಾಧ್ಯವಾಗುವುದೆಂಬ ಭಾವನೆಯೂ ವೀರಶೈವರಲ್ಲಿದೆ. ಇಹಲೋಕದಲ್ಲಿ ಆಚರಣೆಯ ದೃಷ್ಟಿಯಿಂದ ನೋಡುವುದಾದರೆ, ವೀರಶೈವರು ಲಿಂಗವನ್ನು ಧರಿಸಿ ಪೂಜಿಸಿ ಶಿವಯೋಗದಿಂದ ಮೋಕ್ಷವನ್ನು ಸಾಧಿಸುವರು. ಇಷ್ಟೆಲ್ಲವನ್ನು ಮೊಹೆಂಜೊದಾರೊ-ಹರಪ್ಪ ಕಾಲದ ವೇಷ

ಪೂರ್ವನಾಗರಿಕತೆಯಲ್ಲಿ ಕಾಣುವುದಾದರೆ, ವೀರಶೈವದ ಉಗಮವು ಆ ಮೊದಲೇ ಆಗಿದ್ದಿತೆಂಬುದು ಸಿದ್ಧಾಂತವಾಗುವುದು.

## ಮೊಹೆಂಜೊದಾರೊ–ಹರಪ್ಪ ನಾಗರಿಕತೆಯಲ್ಲಿ ವೀರಶೈವದ ಆಧಿದೈವಿಕ ಮೂಲಕಲ್ಪನೆ

ಶ್ರೀ ಎ. ಪಿ. ಕರ್ಮಾರ್‌ಕರ್ ಅವರು, 'ರಿಲಿಜನ್ಸ್ ಆಫ್ ಇಂಡಿಯ' ಗ್ರಂಥದ ೩೮–೩೯ನೇ ಪುಟದಲ್ಲಿ ಬರೆದಿರುವ ಸಿಂಧೂನದಿಯ ತೀರದ ನಾಗರಿಕತೆಯಲ್ಲಿನ ಶಿವನ ವಿಷಯವು ಸಂಗ್ರಾಹ್ಯವಾಗಿದೆ:

"The Indus Valley period endows Siva with a full-fledged mythology. It is really a surprising phenomenon in the literary history of India that very little has been said in the early Aryan documents about this most ancient god of the Vratyas. Various scholars have tried to trace the development of Siva and the other deities of the Vratya Pantheon by adducing evidence from early Indian literature. But no convincing explanation is given to show how so many myths regarding Siva as a dancer, a Trimurti, a yogin, a Himalaya God, a God with three eyes, a Pasupati, a fertility God and others came into vogue abruptly in the Puranic period alone. However, the Indus Valley finds have created a new avenue of thought in the field of scholarship and they fill in a great gap in the history of Indian religion.

The inscriptions relate that the Supreme Being exists by itself. The name of the Supreme Being is Siva. He is the Supreme Being of all the gods of the Temple. He is the lord of the whole universe. The fact that the other name of Siva is "Ān" becomes very clear from the corroborative evidence obtaining in the Puranas and the Epics. The *Mahabharata* refers to "Ān" meaning Siva. Further the word 'Anu' which is a later rendering of the word 'Ān' is frequently used as a name of Siva. The word 'Stanu' according to Brahmanda and other Puranas meant a standing figure of Siva. Further the *Harivamsa* narrates that 'Anuha' practised the Anu-dharma, which expression evidently meant the religion of Ān or Siva or the Saivism of the later period. The word Ān-Siva travelled to Sumer, Egypt and other countries. Father Heras observes that the word 'Ānu' in the feast of the striking of 'Ānu' in Egypt is actually connected with the followers of Ānu or Ān—(Heras—'Ānu in Egypt and India' read before the Indian History Congress, Hyderabad, 1941)."

ಆರ್ಯರ ಋಗ್ವೇದವೇ ಮೊದಲಾದ ಹಿಂದಿನ ವಾಙ್ಮಯದಲ್ಲಿ ಶಿವನ ಸಂಬಂಧವಾಗಿ ತ್ರಿನೇತ್ರ, ತ್ರಿಶೂಲಧಾರಿ ಮೊದಲಾದ ಕಲ್ಪನೆಗಳು ಹುಟ್ಟಿದುವು ಎಂಬುದಕ್ಕೆ ಆಧಾರಗಳು ದೊರೆತಿರಲಿಲ್ಲ. ಸಿಂಧೂನದಿಯ ತೀರದ ಅವಶೇಷಗಳ ಪರೀಕ್ಷೆಯಿಂದ ಇವಕ್ಕೆಲ್ಲ ಆಧಾರಗಳು

ದೊರೆತಿವೆ. ಶಿವನೇ ದೇವದೇವೋತ್ತಮ, ಸ್ವಯಂಭು ಮೊದಲಾದ ಕಲ್ಪನೆಗಳು ಆಗಿನ ಕಾಲದಲ್ಲಿಯೇ ಇದ್ದುವೆಂಬುದಕ್ಕೆ ಲಿಖಿತರೂಪದ ಆಧಾರಗಳು ಸಿಕ್ಕಿವೆ. ಶಿವನನ್ನು 'ಆನ್' ಎಂದು ಆ ಕಾಲದಲ್ಲಿ ಕರೆಯುತ್ತಿದ್ದರು. ಮುಂದೆ 'ಅಣು' ಎಂಬ ರೂಪಾಂತರದಲ್ಲಿ ಈ ಪದವು ಶಿವನ ಹೆಸರಾಗಿ ಉಪಯೋಗಿಸಲ್ಪಡುತ್ತಿತ್ತು. 'ಸ್ಥಾಣು' ಎಂಬ ಪದವು ನಿಂತಿರುವ ಶಿವನು ಎಂಬ ಅರ್ಥದಲ್ಲಿ ಬ್ರಹ್ಮಾಂಡ ಮೊದಲಾದ ಪುರಾಣಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಈ "ಆಣು" ಧರ್ಮವು ಸುಮೆರ್, ಈಜಿಪ್ಟ್ ಮೊದಲಾದ ದೇಶಕ್ಕೂ ಇಲ್ಲಿಂದ ಹರಡಿತು, ಎಂದು ಮೊದಲಾಗಿ ಮೇಲಿನ ಆಧಾರದಲ್ಲಿ ಹೇಳಿದೆ.

## ಶಿವನು ಯೋಗಾರೂಢನಾದ ದಕ್ಷಿಣಾಮೂರ್ತಿ ಎಂಬ ಕಲ್ಪನೆಯು ಸಿಂಧೂನದಿಯ ತೀರದ ನಾಗರಿಕರಲ್ಲಿಯೇ ಇದ್ದಿತು

"Siva was one of the principal deities of the people along with Mother Goddess" ಎಂದೂ, "The deity is sitting cross-legged in a *padmasana* posture with eyes turned towards the tip of the nose which evidences *yogeshvara* aspect of the deity" ಎಂದೂ "*Vedic Age*" ಎಂಬ ಗ್ರಂಥದಲ್ಲಿ ಅಲೆನ್ ಮತ್ತು ಅನ್‌ವಿನ್ ಎಂಬುವರು ಬರೆದಿದ್ದಾರೆ. ಶಿವಶಕ್ತಿಯರನ್ನು ಮೊಹೆಂಜೊದಾರೊ-ಹರಪ್ಪ ಜನರು ಪೂಜಿಸುತ್ತಿದ್ದುದನ್ನೂ, ಪದ್ಮಾಸನದಲ್ಲಿ ಕುಳಿತು ನಾಸಾಗ್ರದಲ್ಲಿ ದೃಷ್ಟಿಯನ್ನಿಟ್ಟು ಕುಳಿತಿರುವ ಶಿವನ ವಿಗ್ರಹವು ಸಿಕ್ಕಿರುವುದನ್ನೂ ಕುರಿತು ಅವರು ಉಲ್ಲೇಖಿಸಿದ್ದಾರೆ. ಆದುದರಿಂದ ಶಿವನು 'ಯೋಗೇಶ್ವರ'ನು ಮತ್ತು 'ದಕ್ಷಿಣಾಮೂರ್ತಿ' ಎಂಬ ಈಗಿನ ಕಲ್ಪನೆಯ ಮೂಲವನ್ನು ಸಿಂಧೂನದಿಯ ತೀರದ ನಾಗರಿಕತೆಯಲ್ಲಿಯೇ ನೋಡಬಹುದಾಗಿದೆ.

## ಮೂರು ಕಣ್ಣಿನವನೆಂದರೆ ಶಿವನೆಂದು ಆಗಲೇ ಪ್ರಸಿದ್ಧವಾಗಿದ್ದಿತು

ಆಗಿನ ಕಾಲದ ಶಿವನ ವಿಷಯದಲ್ಲಿನ ಕಲ್ಪನೆಗಳನ್ನು ಕುರಿತು, ಆಗಿನ ಕಾಲದ ಲೇಖಗಳನ್ನು ಓದಿ ವಿಮರ್ಶಿಸಿದ ಫಾದರ್ ಹೆರಾಸರು, ೧೯೩೬ ನೇ ಜುಲೈ ತಿಂಗಳ ಬೊಂಬಾಯಿ ಯೂನಿವರ್ಸಿಟಿ ಜರ್ನಲ್ಲಿನಲ್ಲಿ ಬಹಳ ಒಳ್ಳೆಯ ದೀರ್ಘಲೇಖನವೊಂದನ್ನು ಬರೆದಿದ್ದಾರೆ. ಆ ಲೇಖನವೆಲ್ಲವನ್ನೂ ಉಲ್ಲೇಖಿಸುವುದು ಸೂಕ್ತವಾದರೂ, ಒಂದೊಂದು ವಿಷಯಕ್ಕೂ ಸಂಬಂಧಿಸಿದ ಲೇಖನ ಭಾಗವನ್ನು ಮಾತ್ರ ಇಲ್ಲಿ ಕೊಡಲಾಗಿದೆ:

"The Supreme Being is three eyed—This is the idea about Siva in modern Hinduism which we find clearly expressed with reference to God in the inscriptions of proto Indians; and the idea was so well known that the only mention of 'his three eyes' as we find in two inscriptions revealed to those people, the idea of the Supreme Being.... Thus the inscription which reads '*Parava nila īr minanir avana mūnkan*', *i.e.*, the three-eyed he of the Minas who are the moon Paravas." ಇದರಿಂದ ತಿಳಿಯುವುದೇನೆಂದರೆ ಈಗಿನ ಕಾಲದಲ್ಲಿ ಮುಕ್ಕಣ್ಣನೆಂದರೆ ಶಿವನೆಂದು ಹೇಗೆ ಅರ್ಥಮಾಡಿಕೊಳ್ಳುತ್ತೇವೆಯೋ, ಹಾಗೆಯೇ ಆಗಿನ ಕಾಲದಲ್ಲಿಯೂ ಮೂನ್‌ಕಣ್ಣನೆಂದರೆ ಶಿವನೆಂದೇ ಅರ್ಥಮಾಡಿಕೊಳ್ಳುತ್ತಿದ್ದರು. ಶಿವನಿಗೆ ಮೂರು ಕಣ್ಣೆವೆಯೆಂಬುದು ಆಗಲೇ ಸುಪ್ರಸಿದ್ಧವಾಗಿದ್ದಿತು.

## ಶಿವನು—ಸ್ವಯಂಭು, ಅಸ್ಥತನು, ನಟರಾಜ, ತಾಂಡವನ್ ಎಂಬ ಕಲ್ಪನೆಗಳು ಆಗಿನವೇ

"Iruvan, 'the one who is,' seems to be one of the names given to God. Another name.... is Enmai a name which is still given to Siva among the Dravidian nations of South India. Similarly Vidukan.... is used nowadays in the South.... Pēran or Perumal is a very common name of Siva in South India. Accordingly another inscription calls god 'Pēran of the chariot and of the cultivated fields'. A fifth name is contained in an epigraph which reads: 'Tāndavan īr nāl maram', *i.e.*, the Tāndavan is among the four trees". ಶಿವನನ್ನು ಇರುವನ್, ಎಣ್‌ಮೈ, ಪೀರಾನ್ ಮತ್ತು ತಾಂಡವನ್ ಎಂಬ ಹೆಸರುಗಳಿಂದಲೂ ಈಗಿನಂತೆ ಆಗಲೂ ಕರೆಯುತ್ತಿದ್ದರೆಂದು ಫಾದರ್ ಹೆರಾಸರು ಹೇಳಿದ್ದಾರೆ. ಇರುವನ್ ಎಂದರೆ ಯಾವಾಗಲೂ ಇರುವವನು, ಶಾಶ್ವತನು, ಸ್ವಯಂಭು ಎಂದರ್ಥ. ಎಣ್‌ಮೈ ಎಂದರೆ ಅಸ್ಥತನು ಎಂದರ್ಥ. ತಾಂಡವನ್ ಎಂಬುದು ನರ್ತನ ಮಾಡುವ ಶಿವಮೂರ್ತಿ ನಟರಾಜನ ಹೆಸರು.

## ಶಿವನು—ತ್ರಿಶೂಲಧಾರಿ, ಸರ್ಪಭೂಷಣ, ಪರಶುಧಾರಿ ಎಂಬ ಕಲ್ಪನೆಗಳು ಆಗಿನವೇ

"The most commonly mentioned emblem of God is the trident.... Another emblem of God only once referred to, is the snake.... Similarly another inscription mentions the axe which is also often seen in the hands of Siva;" "Whatever is of the axe of the 'fish' is of the village trident". ಇದರಿಂದ ತಿಳಿಯಬರುವುದೇನೆಂದರೆ—ಆಗಿನ ಕಾಲದಲ್ಲಿಯೇ ಶಿವನು ತ್ರಿಶೂಲಧಾರಿ, ಸರ್ಪಭೂಷಣ ಮತ್ತು ಪರಶುಧಾರಿ ಎಂಬ ಕಲ್ಪನೆಗಳಿದ್ದುವು. ತ್ರಿಶೂಲಧಾರಿಯಾಗಿದ್ದ ಶಿವನನ್ನು ಪೂಜಿಸುತ್ತಿದ್ದರಲ್ಲದೆ, ತ್ರಿಶೂಲವನ್ನೇ ದೇವಸ್ಥಾನಗಳಲ್ಲಿ ಪೂಜಿಸುತ್ತಿದ್ದರು. ತ್ರಿಶೂಲಗಳನ್ನು ಹೊಲಗಳ ಎಲ್ಲೆಯನ್ನು ಗುರುತಿಸುವುದಕ್ಕೆ ನೆಡುವುದೂ ಆಗಿನ ಕಾಲದಲ್ಲಿ ರೂಢಿಯಲ್ಲಿತ್ತೆಂಬುದಕ್ಕೆ ಆಗಿನಕಾಲದ ಅನೇಕ ಲೇಖಗಳ ಉದಾಹರಣೆಯನ್ನು ಫಾದರ್ ಹೆರಾಸರು ಕೊಟ್ಟಿರುವರು.

## ಶಿವನು—ಅರ್ಧನಾರೀಶ್ವರ ಎಂಬ ಕಲ್ಪನೆ ಅಂದಿನದೇ

ಶಿವನು ಅರ್ಧನಾರೀಶ್ವರನು ಎಂಬ ಕಲ್ಪನೆಯೂ ಹಿಂದಿನದೇ. "What has been found is the combination of Ān and Amma. The inscription reads: '*Uyarel tēr or Amman, i.e.*, One Amman of the chariot of the Sun. This deity half-man (proper left) and half-woman (proper right), which is also found in Sumer with the name of Amma—seems to be the original idea of Ardhanarīshvara which is only found in Saivism and which has two parts put in the same relative position." ಈಗಿನ ಕಾಲದ ಅರ್ಧನಾರೀಶ್ವರನ ಕಲ್ಪನೆಯಲ್ಲಿ ಯಾವ ಕಡೆ ಪುರುಷಾಕಾರವಿದೆಯೋ, ಆಗಿನಕಾಲದ ಅರ್ಧನಾರೀಶ್ವರ ವಿಗ್ರಹದಲ್ಲಿಯೂ ಅದೇ ಕಡೆಯಲ್ಲಿಯೇ ಪುರುಷಾಕಾರವೂ, ಮತ್ತೊಂದು ಕಡೆ ಸ್ತ್ರೀಯ ಆಕಾರವೂ ಇರುವುದು ಕಂಡುಬಂದಿದೆ.

## ಶಿವನು—ಪರಾತ್ಪರ, ಸರ್ವಜ್ಞ, ವರದ ಎಂಬ ಅಂದಿನ ಕಲ್ಪನೆ

ಶಿವನು ಪರಾತ್ಪರನು, ಸರ್ವಜ್ಞನು ಮತ್ತು ವರದನು ಎಂಬ ಕಲ್ಪನೆಗಳೂ ಆಗಲೇ ಇದ್ದುವು. "'*Kōil ella Kadavalu—adu*'.... 'the Supreme God of all the gods of the temple'. This epigraph shows that in reality this sign refers to a being which is superior to all other gods and consequently above the whole universe." ಇಲ್ಲಿ ಶಿವನು ಪರಾತ್ಪರನೆಂಬ ಕಲ್ಪನೆಯು ಕಂಡುಬರುವುದು.

"The inscriptions speak of the God of the City of Nalur under the name of Vidukan. Now this name properly means 'open eye' and refers to a person who has always the eyes open and who sees and knows everything." ವಿಡುಕಣ್ ಎಂದರೆ ತೆರದ ಕಣ್ಣುಳ್ಳವನು ಎಂದರೆ ಸರ್ವಜ್ಞನು ಎಂದು ಫಾದರ್ ಹೆರಾಸರು ಅಭಿಪ್ರಾಯಪಟ್ಟಿರುವರು.

"Benevolence—according to this attribute, the Supreme Being helps man in their needs. A very important inscription reveals to us the belief the Mohenjo Daro people had regarding this point. The inscription reads '*Udavu ir Min-adu An*', *i.e.*, the Supreme Being of Mina being help." ಇದರಿಂದ ಶಿವನು ವರದನೆಂಬ ಕಲ್ಪನೆಯು ಆಗಲೇ ಇದ್ದಿತೆನ್ನಬಹುದು. ಶಿವನನ್ನು ಸುಲಭವಾಗಿ ಒಲಿಸಿ ವರಗಳನ್ನು ಪಡೆಯಬಹುದೆಂಬುದು ಪುರಾಣಗಳ ಕಾಲದಿಂದಲೂ ಬಂದ ನಂಬಿಕೆ.

## ಶಿವನು—ಊರ್ಧ್ವರೇತು, ಪಶುಪತಿ ಎಂಬ ಅಂದಿನ ಕಲ್ಪನೆ

"Power of destruction and generation: Another seal that has been very often reproduced represents a nude, three-faced god seated in a sort of yoga pose wearing a trident like headgear. Round the figure several animals are placed. It has been said that this is a figure of Pasupati.... The epigraph reads as follows: '*An Nand velkei Kuda minadu*', *i.e.*, the Supreme Being enfeebling and strengthening is of the (mouth of) jar and the fish.... This enfeebling and strengthening was directly attributed to the Supreme Being by the Proto Indians. He is elsewhere often called 'the god of the chariot and of the cultivated fields, two symbols of destruction and fertility which finally reveal 'Ān' as the fore-runner of the modern Siva." ತ್ರಿಶೂಲ ಧಾರಿಯೂ, ಊರ್ಧ್ವರೇತುವೂ ಆದ ಶಿವನ ಸುತ್ತಲೂ ವಿವಿಧ ಪಶುಗಳ ಚಿತ್ರವಿರುವ ವಿಗ್ರಹದ ಆಧಾರದಿಂದ ಶಿವನು ಪಶುಪತಿಯು, ಯೋಗೀಶ್ವರನು (ದಕ್ಷಿಣಾಮೂರ್ತಿ) ಎಂಬ ಕಲ್ಪನೆಗಳನ್ನು ಮಾಡಿದ್ದಾರೆ. ಅದರಲ್ಲಿರುವ ಲೇಖನದಿಂದ ಶಿವನು ಲಯಕರ್ತನೂ ಅಹುದು, ಉದ್ಧಾರಕರ್ತನೂ ಅಹುದು, ಎಂಬ ಭಾವನೆಗಳು ಆ ಹಿಂದಿನ ಕಾಲದಲ್ಲಿಯೇ ಇದ್ದಂತೆ ನಿರ್ಧಾರವಾಗಿದೆ.

## ಸೃಷ್ಟಿ-ಸ್ಥಿತಿ-ಲಯ ಕಾರಣನೆಂಬ ಕಲ್ಪನೆಯ ಮೂಲ

ಚಾರಿತ್ರಿಕ ಕಾಲದಲ್ಲೇ ಶಿವನನ್ನು ಮೂರು ಮುಖಗಳಿಂದ ಚಿತ್ರಿಸುತ್ತಿದ್ದುದು ಅಪರೂಪವಾದರೂ, ಆ ರೀತಿ ಚಿತ್ರಿಸುತ್ತಿದ್ದುದರಲ್ಲಿ ಸಂದೇಹವಿಲ್ಲ. ಕುಶಾನರ ಕಾಲದ ನಾಣ್ಯಗಳಲ್ಲಿ ಇದು ಕಂಡುಬರುವುದು. ಶ್ರೀ ಕರ್ಮಾರ್‌ಕರ್‌ರವರ 'ರಿಲಿಜನ್ಸ್ ಆಫ್ ಇಂಡಿಯ' ಗ್ರಂಥದ ೧೬ನೆಯ ಪುಟದಲ್ಲಿ ಈ ನಾಣ್ಯಗಳ ವಿಷಯವಾಗಿ ಹೀಗೆ ಹೇಳಿರುವರು: "The coins contain various representations of Siva and the Bull in different poses. Coin 7*b* contains the image of the hump-backed Bull with the three-faced figure of Siva standing in front of it. Siva is holding the rope in his right hand and a trident in his left. 9*a* consists of a similar representation, the Trisula borne in the hand being represented in a more clear and vivid manner. 9*b* and 15*c* have the representations of Siva with one face.'' ಈ ನಾಣ್ಯಗಳಲ್ಲಿ ತ್ರಿಶೂಲಧಾರಿಯಾಗಿ ವೃಷಭನ ಮುಂದಿರುವ ಶಿವನು ಮೂರು ತಲೆಯುಳ್ಳವನು. ಕೆಲವು ನಾಣ್ಯಗಳಲ್ಲಿ ಶಿವನಿಗೆ ಒಂದು ತಲೆಯಿರುವುದೂ ಉಂಟು. ಮೊಹೆಂಜೊದಾರೊ ನಾಗರಿಕರ ಕಾಲದಲ್ಲಿ ಶಿವನಿಗೆ ಮೂರು ತಲೆಗಳಿದ್ದುವೆಂಬ ಭಾವನೆಯೇ ಚಾರಿತ್ರಿಕ ಕಾಲದವರೆಗೂ ಮುಂದುವರಿದು, ಕೊನೆಯಲ್ಲಿ ಒಂದು ತಲೆಯ ಶಿವನ ವಿಗ್ರಹಗಳೇ ಕಂಡುಬರುತ್ತವೆ. ಸರ್‌ಜಾನ್ ಮಾರ್ಷೆಲ್ಲರ ಗ್ರಂಥದ ೫೩ನೆಯ ಪುಟದಲ್ಲಿ ಈ ವಿಷಯವಾಗಿ ಹೀಗೆ ಹೇಳಲಾಗಿದೆ: In the first place he is three-faced (trimukha) and we are at once reminded that in historic times Siva was portrayed with one three, four or five faces and always with three eyes and that the familiar triad of Siva, Brahma and Vishnu is habitually represented by a three-faced image. Of the three-faced Siva—that is Siva without Brahma and Vishnu—there is a fine example among the ruined temples of Devangana near Mount Abu and other examples are illustrated by T. A. Gopinath Rao. ಮೊಹೆಂಜೊದಾರೊ ಜನರ ಮೂರು ಮುಖದ ಶಿವನ ಕಲ್ಪನೆಗೆ ಕಾರಣವುಂಟು. ವೀರಶೈವರು ಇತರರಂತೆ ತ್ರಿಮೂರ್ತಿಗಳ ಕಲ್ಪನೆಯುಳ್ಳವರಾದರೂ ಅವರ ಪರಶಿವನು ಬ್ರಹ್ಮ ವಿಷ್ಣು ಶಿವರೆಂಬ ತ್ರಿಮೂರ್ತಿಗಳಿಗೂ ಕಾರಣನು. ತ್ರಿಮೂರ್ತಿಗಳು ಆನಂದಲಹರಿಯಲ್ಲಿ ಶ್ರೀ ಶಂಕರಾಚಾರ್ಯರು ಹೇಳುವಂತೆ ತ್ರಿಗುಣ ಜನಿತರು; ತ್ರಿಗುಣಾತೀತನಾದ ಪರಶಿವನ ಶಕ್ತಿಯಿಂದ ಇವರು ಹೊರಹೊಮ್ಮಿದವರು. ವೀರಶೈವರ ಪರಶಿವನೂ, ಶಾಂಕರ ಸಿದ್ಧಾಂತದ ಪರಬ್ರಹ್ಮನೂ ಒಂದೇ. ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದಂತೆ:

ಬ್ರಹ್ಮೇತಿ ವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ ।
ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂ ಶಿವಂ ॥

ಪರಶಿವ ಬ್ರಹ್ಮದಲ್ಲಿಯೇ ಜಗತ್ತು ಹೊರಹೊಮ್ಮಿ ಅದರ ಆಧಾರದಿಂದಲೇ ಸ್ವಲ್ಪಕಾಲವಿದ್ದು ಕೊನೆಯಲ್ಲಿ ಅದರಲ್ಲಿಯೇ ಲಯವಾಗುತ್ತದೆ. ಪರಶಿವನೇ ಸೃಷ್ಟಿಸ್ಥಿತಿಲಯಕರ್ತನು. ಕರ್ಮಾರ್‌ಕರ್ ಅವರ ಗ್ರಂಥದ ೪೦ನೆಯ ಪುಟದಲ್ಲಿ ಹೇಳಿದಂತೆ, There is every possibility of the above representation indicating the exact nature of the three cosmogonic functions of God, a fact which is conveyed by the later idea of the Hindu

Trinity consisting of Brahma, Vishnu and Siva. ಅಂದಿನ ಶಿವನ ಮೂರು ಮುಖಗಳು ಸೃಷ್ಟಿ-ಸ್ಥಿತಿ-ಲಯಕಾರ್ಯ ಕರ್ತೃತ್ವದ ಸಂಕೇತವಾಗಿದ್ದು, ಮುಂದೆ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ತ್ರಿಮೂರ್ತಿ ಮುಖಗಳನ್ನು ಮೊದಲು ಒಟ್ಟಿಗೂ, ತದನಂತರ ಬೇರೆ ಬೇರೆಯಾಗಿಯೂ ಚಿತ್ರಿಸುವ ಭಾವನೆಗೆ ಮೂಲವಾಗಿರಬೇಕು.

## ಚಂದ್ರಚೂಡ, ಧವಳಗಿರಿನಿವಾಸ ಎಂಬ ಕಲ್ಪನೆಗಳು

ಅಂದಿನ ಕಲ್ಪನೆಗಳ ಪ್ರಕಾರ ಕೊಂಬುಗಳಿಂದ ಅಲಂಕೃತವಾದ ಕಿರೀಟವು ದೈವಿಕ ಭಾವನೆಯನ್ನುಂಟುಮಾಡುವುದಾಗಿದ್ದಿತು. ವೃಷಭನ ಪೂಜೆಯು ಈಗಿನಂತೆ ಆಗಲೂ ಬಹು ರೂಢಿಯಲ್ಲಿದ್ದಿತು. ಕೊಂಬುಗಳು, ಪೂಜಿಸಲ್ಪಡುವ ಪ್ರಾಣಿಯ ಸಂಕೇತವಾಗಿದ್ದು ಅವು ಪೂಜ್ಯತೆಯ ಕುರುಹಾಗಿ ದೇವರುಗಳ ತಲೆಯನ್ನು ಅಲಂಕರಿಸುತ್ತಿದ್ದುವು. "This image had its origin no doubt in primitive animal worship, the horns alone being retained when the animal-god assumed human shape and afterwards becoming a badge, as it were, of super-human prowess, which might be transferred to any other deity or hero" (page 67). ಎಂದು ಸರ್ ಜಾನ್ ಮಾರ್ಷೆಲ್ಲರು ಹೇಳಿದ್ದಾರೆ. ಕರ್ಮರ್‌ಕರ್ ಗ್ರಂಥದ ೧೮ನೆಯ ಪುಟದಲ್ಲಿ ಹೇಳಿರುವಂತೆ, ಶಿವವಿಗ್ರಹದ ತಲೆಯ ಮೇಲಿನ ಕೊಂಬುಗಳ ಕಿರೀಟವೇ ಮುಂದಿನ **ಚಂದ್ರಶೇಖರ** ಕಲ್ಪನೆಗೆ ಮೂಲವಾಯಿತು.

ಶಿವನು **ಧವಳಗಿರಿನಿವಾಸನೆಂಬ** ಭಾವನೆಯು ಮೊಹೆಂಜೊದಾರೊ-ಹರಪ್ಪ ಜನರ ಕಾಲದಲ್ಲಿಯೇ ಇತ್ತೆಂಬುದಕ್ಕೆ ಆಧಾರವಿದೆ. ಕರ್ಮರ್ಕರ್‌ರವರ "ರಿಲಿಜನ್ಸ್ ಆಫ್ ಇಂಡಿಯ" ಗ್ರಂಥದ ೪೩ನೆಯ ಪುಟದಲ್ಲಿ ಹೇಳಿದಂತೆ—"The notion of Siva as a Himalayan god seems to have been in vogue during the proto Indian period. One of the inscriptions states 'Those are the middle mountains of the holy Fish of the Vedas'. Another inscription makes a more definite statement, *e.g.*, 'the moon (is) over the white mountain of he of Velen of the Linga of the divided house of the two high suns'. The Linga was already identified with Siva during this period."

## ವೃಷಭ ಪೂಜೆ

ಶಿವನೊಡನೆ ವೃಷಭನಿರುವುದು ಕ್ರಿಸ್ತಶಕೆಯ ಪ್ರಾರಂಭದ ಕುಷಾನರ ನಾಣ್ಯದಲ್ಲಿ ಕಂಡುಬರುವುದನ್ನು ಹಿಂದೆಯೇ ಹೇಳಿದೆ. ಶೈವಮತದಲ್ಲಿ ವೃಷಭನಿಗೆ ಬಹು ಗೌರವ ಸ್ಥಾನವಿದೆ. ಶಿವನನ್ನು ಸರ್ವೋತ್ಕೃಷ್ಟದೈವವೆಂದು ಪೂಜಿಸುತ್ತಿದ್ದ ಮೊಹೆಂಜೊದಾರೊ-ಹರಪ್ಪ ಜನರಲ್ಲಿ ವೃಷಭ ಪೂಜೆಯಿತ್ತೆಂಬುದರಲ್ಲಿ ಸಂದೇಹವಿಲ್ಲ. ಸರ್ ಜಾನ್ ಮಾರ್ಷೆಲ್ಲರ ಗ್ರಂಥದ ೭೨ನೆಯ ಪುಟದಲ್ಲಿ ಹೀಗೆ ಹೇಳಿದೆ: The bull, both humped and humpless, is closely associated with Siva and daily worshipped by his followers....In pre-historic times the worship of the bull.... was widely prevalent throughout the Middle and Nearer East.... That this cult was very

prevalent in chalcolithic times throughout Sind, the Punjab and Beluchistan is proved by the large number of terra-cotta bulls found at Mohenjo Daro and Harappa. ಆ ಕಾಲದಲ್ಲಿ ವಿಷ್ಣುವಿನ ಕಲ್ಪನೆಯು ಇತ್ತೆಂಬುದಕ್ಕೆ ಆಧಾರವಿಲ್ಲ. ಆದುದರಿಂದಲೋ ಏನೋ ಈಗ ಬಹು ಪ್ರಚಲಿತವಾಗಿರುವ ಹನುಮಂತ ದೇವರ ಆರಾಧನೆಯು ಆಗಿನ ಕಾಲದಲ್ಲಿ ಇದ್ದಂತೆ ಕಂಡುಬರುವುದಿಲ್ಲ. ಮಾರ್ಷೆಲ್ಲರು ೭೩ ನೆಯ ಪುಟದಲ್ಲಿ ಹೇಳಿದಂತೆ, The cult of Monkey God is more widespread and deeply rooted in India than in any other country.... It is curious therefore that he finds no place among the animals depicted on the seals whose cults seem to have been the most popular at Mohenjo Daro.

## ವೀರಶೈವದ ಆಧ್ಯಾತ್ಮಿಕ ಕಲ್ಪನೆ—ಮೊಹೆಂಜೊದಾರೊ-ಹರಪ್ಪ ಜನರಲ್ಲಿ

ಮೊಹೆಂಜೊದಾರೊ-ಹರಪ್ಪ ಜನರ ಕಾಲ ಸುಮಾರು ಐದಾರು ಸಹಸ್ರ ವರ್ಷಗಳ ಹಿಂದಿನದಷ್ಟೆ. ಅವರಲ್ಲಿ ವೀರಶೈವರ ಆಧ್ಯಾತ್ಮಿಕ ಕಲ್ಪನೆಯನ್ನು ನಿರೀಕ್ಷಿಸುವುದು ಸರಿಯೆ ಎನ್ನಿಸಬಹುದು. ಆದರೆ ಅವರು ಆರ್ಯರಿಗಿಂತಲೂ ಸುಧಾರಿಸಿದ್ದರೆಂಬುದು ತಜ್ಞರ ಮತ. ಆರ್ಯರ ಆದಿಕಾಲದ ವರ್ತನೆಯು ಶೈವಧರ್ಮಕ್ಕೆ ವಿರುದ್ಧವಾಗಿದ್ದಿತೆಂಬುದನ್ನು ಮುಂದೆ ತೋರಿಸಲಾಗುವುದು. ಆದುದರಿಂದ ಶೈವಧರ್ಮದ ಆಧ್ಯಾತ್ಮಿಕ ವಿದ್ಯೆಯ ಮೂಲವನ್ನಾದರೂ ಆರ್ಯರಿಗಿಂತಲೂ ಮುಂದುವರಿದಿದ್ದ ಹಿಂದಿನ ಜನಾಂಗದಲ್ಲೇ ಕಾಣುವುದರಲ್ಲಿ ಆಶ್ಚರ್ಯವಿಲ್ಲ. ಸರ್ ಜಾನ್ ಮಾರ್ಷೆಲ್ಲರ ಅಭಿಪ್ರಾಯವೂ ಇದೇ ಎಂಬುದನ್ನು ಅವರ ಗ್ರಂಥದ ೭೭ ನೆಯ ಪುಟದಲ್ಲಿ ನೋಡಬಹುದು :

There is enough in the fragments we have recovered to demonstrate that, so far as it was capable of expression in outward concrete forms, this religion of the Indus people was the lenial progenitor of Hinduism..... Of its other and more rational side, of esoteric ideas and philosophic concepts that may have been as fundamental to it as to later Hinduism—they have nothing to tell us. This is the misfortune of our possessing no documentary material that can be deciphered. Yet there must have been such another side to this religion can hardly be doubted..... Many of the basic features of Hinduism are not traceable to an Indo-Aryan source at all. They come into view not in the earliest Vedic literature.... Chief among such features are the cults of Siva and Mother Goddess..... In view of these facts is it not reasonable to presume that the people who contributed so much to the cultural and material side of Hinduism, contributed also some of the essential metaphysical and theological ideas so intimately associated with it?

ಸರ್ ಜಾನ್ ಮಾರ್ಷೆಲ್ಲರು ಹೀಗೆ ತರ್ಕಮಾಡಿ!ನಿರ್ಧರಿಸಿದ ಕಾಲದಲ್ಲಿ ಮೊಹೆಂಜೊದಾರೊ-ಹರಪ್ಪ ಜನಾಂಗದ ಲೇಖಗಳನ್ನು ಓದಲು ಸಾಧ್ಯವಾಗಿರಲಿಲ್ಲ. ಫಾದರ್ ಹೆರಾಸರು ಆ ಲೇಖಗಳನ್ನು ಓದಲು ಬಲ್ಲವರಾಗಿ ಮೊಹೆಂಜೊದಾರೊ-ಹರಪ್ಪ ಜನರು ಅವರ ದೈವವಾದ ಶಿವ-ಶಕ್ತಿಯರ ವಿಷಯದಲ್ಲಿ ಇಟ್ಟಿದ್ದ ಆಧ್ಯಾತ್ಮಿಕ ಭಾವನೆಯನ್ನು "ಬಾಂಬೆ ಯೂನಿವರ್ಸಿಟಿ

ಜರ್ನಲ್ "ನಲ್ಲಿ ಹೊರಗೆಡಹಿದ್ದಾರೆ. ಅದರಲ್ಲಿ ಶಿವತತ್ವವು ಏಕವೂ, ಸತ್-ಚಿತ್-ಆನಂದ ರೂಪವೂ ಆಗಿದ್ದಿತೆಂಬುದು ಕಂಡುಬರುವುದೆಂದು ಹೇಳಿರುವರು.

## ಸಚ್ಚಿದಾನಂದಾದ್ವಿತೀಯ ಶಿವನ ಕಲ್ಪನೆ

'*Iruvan—adu kom minanir*', *i.e.*, the horn playing Minas of one who exists. Now since the horn players in religious festivals are even today servants of the temples, 'one who exists' must be an idea that is only referable to God. Iruvan must have been a name of God and indeed God is the only being who really exists. 'ಇರುವನ್' ಎಂಬ ಪದದಿಂದಲೇ ಪರಶಿವನು ಸತ್‌ಪದ ವಾಚ್ಯನು ಎಂಬುದು ಸ್ಪಷ್ಟವಾಗುತ್ತದೆ.

Life—God being the only self-subsistent is the source of life and activity. Thus in an inscription he is called 'the Supreme Being of Life'. The word 'Val' may mean life and happiness perhaps because originally life and happiness were synonymous which is still true in the case of God. ಲೇಖನದಲ್ಲಿರುವ "ವಾಲ್" ಎಂಬ ಪದವು ಚೇತನ ಮತ್ತು ಆನಂದ ಎಂಬರ್ಥವನ್ನುಳ್ಳದು. ಆದುದರಿಂದ ಆ ಜನರ ದೈವವಾದ ಪರಶಿವನು ಚಿತ್‌ಸ್ವರೂಪನು ಮತ್ತು ಆನಂದಸ್ವರೂಪನು ಎಂದಾಯಿತು. ಹೀಗೆ ಶಿವನು ಸಚ್ಚಿದಾನಂದಸ್ವರೂಪನು ಎಂಬ ಕಲ್ಪನೆ ಆಗಿನ ಜನರಲ್ಲೇ ಇದ್ದಿತೆಂಬುದು ಸ್ಪಷ್ಟವಾಗಿದೆ.

Oneness—He is the only one *Oruvan tirpu tirpu irkra min nandil ulavan*', *i.e.*, "Mina, the farmer of the Crab, about whom 'the one' has decreed." As we shall see later, the farmer of the Crab is a royal title. Therefore no other but the Supreme Being, the one, could decree anything about him. ರಾಜನಿಗೇನೆ, ಶಾಸನಮಾಡುವ ಒರ್ವನ್ ಎಂಬಲ್ಲಿ ಏಕನು, ಅದ್ವಿತೀಯನು ಎಂಬ ಭಾವನೆಯಿದೆ. ಹೀಗೆ ಪರಶಿವನು ಸಚ್ಚಿದಾನಂದಾದ್ವಿತೀಯನೆಂಬ ಕಲ್ಪನೆ ಆಗಲೇ ಇದ್ದಿತು.

## ಶಕ್ತಿವಿಶಿಷ್ಟಶಿವನ ಕಲ್ಪನೆ

ಹಿಂದೆ ಹೇಳಿದಂತೆ ಒಂದೇ ವಿಗ್ರಹದಲ್ಲಿ ಪುರುಷರೂಪವು ಅರ್ಧದಲ್ಲೂ, ಸ್ತ್ರೀರೂಪವು ಉಳಿದರ್ಧದಲ್ಲೂ ಇರುವ ಅರ್ಧನಾರೀಶ ಕಲ್ಪನೆಯಲ್ಲಿಯೇ ಶಿವಶಕ್ತಿಯರು ಒಂದೆಯೆಂಬ ಭಾವನೆಯು ಬರುವುದು. ಆದರೆ ಆಗಿನ ಕಾಲದ ಭಾವನೆಯು ಇದಕ್ಕಿಂತಲೂ ಮುಂದೆ ಹೋಗಿದ್ದಿತು. ಅದರಲ್ಲಿ ಶಿವ ಜೀವರ ಐಕ್ಯತೆಯು ಸಹಾ ಕಂಡುಬರುವುದು; "ಆನ್" ಎಂಬ ಶಿವನು, "ಅಮ್ಮ" ಎಂಬ ಶಕ್ತಿಯಿಂದ ವಿಶಿಷ್ಟನಾಗಲು "ಅನಿಲ್" ಎಂಬ ಜೀವನ ಉದಯವಾದರೂ, ಅವರೆಲ್ಲರೂ ಒಂದೆಯೆಂಬ ಭಾವನೆಯಿದ್ದಿತು.

The Divine Triad—Among the Mohenjo Daro inscriptions there is one of extraordinary importance, on account of its unexpected revelations in the

field of the history of comparative religions and even in the general field of ancient civilization. The inscription reads: *Uda mūn pēr kadavul—adu kalak air*, *i.e.*, "the joined .life of the three Great Gods".... A similar triad of gods is also found in Sumerian inscriptions and the three gods of Sumer in pre-historic times were the Ān, Amma and Enlil. Ān was the father, Amma was the mother and Enlil was the son.... The proto-Indian triad is supposed to be similar to this. In fact, Ān, the father of Sumer, is the same Ān, the Supreme Being of India. The mother is called Amma in Sumerian. Now Amma is the common word for mother in Dravidian languages and a good number of clay statuettes of the mother Goddess have been found in Mohenjo Daro and Harappa. Such an idea of Mother Goddess must be the first foundation of the Shakta sect in India. This mother received a name which is the female denomination corresponding to the denomination Mīnkan attributed to Ān. In the inscription she is called Mīnkanni. This in fact had to be the original name of the Goddess of Madura Mīnakshi whose name now is partly Dravidian Mīna and partly Sanskrit akshi. The son of the proto-Indian Triad is named Anil. The corresponding sign occurs in several inscriptions.

ಮೊಹೆಂಜೊದಾರೊ ಜನರ ಲೇಖವೊಂದು ತುಲನಾತ್ಮಕ ಮತಧರ್ಮ ಮತ್ತು ಪ್ರಾಚೀನ ನಾಗರಿಕತೆಯ ವಿಷಯದಲ್ಲಿ ಮಹತ್ವವಾದ ಬೆಳಕನ್ನು ಬೀರುವುದೆಂದು, ಅದನ್ನೋದಿದ ಫಾದರ್ ಹೆರಾಸರು ಹೇಳಿದ್ದಾರೆ. ಶಿವಶಕ್ತಿಯರೂ ಅವರ ಪುತ್ರನೂ ಒಂದೇ ಎಂಬ ಆಗಿನ ಜನರ ಅದ್ವೈತ ಕಲ್ಪನೆಯೇ ಅದರಲ್ಲಿ ಕಂಡುಬಂದ ವಿಶೇಷ ವಿಷಯ. ಶಿವನನ್ನು ಮೀನ್ ಕಣ್ಣನೆಂದು ಕರೆಯುತ್ತಿದ್ದರೆಂದೂ, ಶಕ್ತಿಯನ್ನು ಮೀನ್‌ಕಣ್ಣಿಯೆಂದು ಕರೆಯುತ್ತಿದ್ದರೆಂದೂ, ಮೀನ್‌ಕಣ್ಣಿಯೆಂದು ಹೆಸರಿಸಿದ್ದುದರಲ್ಲಿ ಮಧುರೆಯ ಮೀನಾಕ್ಷಿಯ ಹಿನ್ನೆಲೆಯು ಕಂಡು ಬರುವುದೆಂದೂ ಫಾದರ್ ಹೆರಾಸರು ಅಭಿಪ್ರಾಯಪಟ್ಟಿದ್ದಾರೆ. ಈ ಮಾತೃದೇವತೆಯನ್ನು ಪೂಜಿಸುವ ಶಾಕ್ತರು ಆಗಿನ ಕಾಲದಲ್ಲಿ ಇದ್ದರೆಂದು ಅವರು ಅಭಿಪ್ರಾಯಪಡುತ್ತಾರೆ. ಮಾರ್ಷೆಲ್ಲರ ಗ್ರಂಥದಿಂದ ಯೋನಿರೂಪವಾದ ಮುದ್ರಿಕೆಗಳನ್ನೂ, ಶಿಶ್ನರೂಪವಾದ ಲಿಂಗಗಳನ್ನೂ ಆರಾಧಿಸುತ್ತಿದ್ದ ಜನರಿದ್ದರೆಂಬುದು ಸಹಾ ಕಂಡುಬರುವುದರಿಂದ ಆಗಿನ ಕಾಲದಲ್ಲಿ ಶಾಕ್ತರೂ ಇದ್ದರೆಂದು ಊಹಿಸಬಹುದಾಗಿದೆ. ಶಿಶ್ನರೂಪದ ಲಿಂಗಗಳಲ್ಲದೆ ಶಿಶ್ನರೂಪದವಲ್ಲದ ಲಿಂಗಗಳು ಸಹಾ ಸಿಕ್ಕಿರುವುದರಿಂದ, ಈ ಲಿಂಗಗಳನ್ನು ಅರ್ಚಿಸುತ್ತಿದ್ದ ಶೈವರು ಆಗ ಇದ್ದುದರಲ್ಲೂ ಸಂದೇಹವಿಲ್ಲ. ಪ್ರಸ್ತುತ ವಿಷಯವೇನೆಂದರೆ, ಆಗಿನ ಜನರಲ್ಲಿ ಪ್ರಚಾರದಲ್ಲಿದ್ದ ಅಸಾಧಾರಣ ಅದ್ವೈತ ಕಲ್ಪನೆ. ಅರ್ಧನಾರೀಶ್ವರರೂಪದ ಶಿವಶಕ್ತಿಯರ ಕಲ್ಪನೆಯ ಜತೆಗೆ ಶಿವಶಕ್ತಿಯರಲ್ಲಿ ಅವಿನಾಭಾವ ಕಲ್ಪನೆಯು ಸಹಾ ಅವರಿಗಿದ್ದುದರಲ್ಲಿ ಆಶ್ಚರ್ಯವಿಲ್ಲ. ಆದರೆ ಶಿವಶಕ್ತಿಯರೂ ಶಿವಪುತ್ರನೂ ಒಂದೆಯೆಂಬ ಅದ್ವೈತಭಾವನೆಯು ಅವರಿಗಿದ್ದುದು, ಫಾದರ್ ಹೆರಾಸರು ಹೇಳುವಂತೆ, ಮಹತ್ವವಿಷಯವಾಗಿದೆ. ಶಿವಪುತ್ರನೆಂದರೆ ಷಣ್ಮುಖನಾಗಲೀ ವಿನಾಯಕ ನಾಗಲೀ ಅಲ್ಲ. ಏಕೆಂದರೆ ಇವರಲ್ಲಿ ಯಾರೂ ಶಿವಶಕ್ತಿಯರೊಡನೆ ಅದ್ವೈತವಾಗಿರುವರೆಂಬ ಕಲ್ಪನೆ ಇಂದೂ ಇಲ್ಲ, ಹಿಂದೂ ಇಲ್ಲ; ಎಂದೂ ಇದ್ದುದು ಕಂಡುಬಂದಿಲ್ಲ. ಶಿವಶಕ್ತಿಯರಿಂದ

ಹುಟ್ಟಿರುವುದು ಜೀವ. "ಸಚ್ಚಿದಾನಂದ ನಿತ್ಯಪರಿಪೂರ್ಣವಪ್ಪ ನಿಃಕಲ ಲಿಂಗವು···· ತನ್ನ ಚಿತ್‌ಪ್ರಭಾ ಸಾಮರ್ಥ್ಯಶಕ್ತಿಯ ಮುಂದುಗೊಂಡು····ಅನಂತಕೋಟಿ ಆತ್ಮರುಗಳನ್ನು ತನ್ನಲ್ಲಿಯೇ ಪುಟ್ಟಿಸಿ" ಎಂಬಲ್ಲಿ ಶಿವಶಕ್ತಿಯರಲ್ಲಿ ಜೀವನು ಹುಟ್ಟಿದುದು ಸ್ಪಷ್ಟವಾಗುತ್ತದೆ. ಶಿವ–ಜೀವರುಗಳು ಒಂದೆಯೆಂಬುದು ಎಲ್ಲ ಅದ್ವೈತಿಗಳ ನಿಲುವು. ಶಿವ–ಶಕ್ತಿಗಳಲ್ಲಿ ಅಭೇದವನ್ನು ಎಲ್ಲ ಅದ್ವೈತಿಗಳು ಹೇಳುವರು. ಆದುದರಿಂದ ಶಿವ–ಶಕ್ತಿಗಳಲ್ಲಿ ಹುಟ್ಟಿದವನೆಂದರೆ ಜೀವನೆ. ದೇವ-ಆತ್ಮ-ಶಕ್ತಿಗಳು ಏಕವೆಂದು ಶ್ವೇತಾಶ್ವತರ ಶ್ರುತಿಯು ಅದರ ಮೂರನೆಯ ಮಂತ್ರದಲ್ಲಿಯೇ ಹೇಳುವುದು. "ದೇವಾತ್ಮಶಕ್ತಿಯೆಂಬಾ···· ವೇದದಲಿ ತಿಳಿ ಮಾಯೆ ತತ್ವದೊಳೋವಿ ಬೇರಿಲ್ಲದಿಹುದೆಂದು" ಎಂದು ನಿಜಗುಣರೂ ಹೇಳಿರುವರು. "ಜ್ಞಾಜ್ಞಾದ್ವಾವಜಾವೀಶನೀಶಾವಜಾಹ್ಯೇಕಾ" ಎಂದು ಮೊದಲಾಗುವ ಶ್ವೇತಾಶ್ವತರ ಶ್ರುತಿಯಲ್ಲಿ ಸರ್ವಜ್ಞನಾದ ಈಶನೂ, ಅಜ್ಞನಾದ ಜೀವನೂ, ಶಕ್ತಿಯೂ ಒಂದೆಯೆಂದು ಹೇಳುವ ಶಕ್ತಿವಿಶಿಷ್ಟಾದ್ವೈತದ ಬೀಜವು ಅಂದಿನ "Divine Triad" ಕಲ್ಪನೆಯಲ್ಲಿ ಕಂಡುಬಂದಿರುವುದರಿಂದ ಈ ವಿಷಯವು ಮಹತ್ವಪೂರ್ಣವಾದುದೇ ಸರಿ.

## ಶಿವಾದ್ವೈತ ಮೋಕ್ಷದ ಕಲ್ಪನೆ

ಶಿವೋಹಂ ಭಾವನೆಯಿಂದ ಶಿವನ ಉಪಾಸನೆಯನ್ನು ಮಾಡಿದವರು, ಶಿವನೇ ಆಗಿಹೋಗಿ, ಮೋಕ್ಷವನ್ನು ಪಡೆವರೆಂಬುದು ವೀರಶೈವ ಸಿದ್ಧಾಂತ. ಸರ್ವಜ್ಞಾನೋತ್ತರ ಆಗಮದ 'ಶಿವಾನನ್ಯಸಾಕ್ಷಾತ್ಕಾರಪಟಲ'ದಲ್ಲಿ ಇದಕ್ಕೆ ಆಧಾರವುಂಟು. ಆ ಶ್ಲೋಕಗಳಿವು:

ಅಹಮಾತ್ಮಾ ಶಿವೋಽಹ್ಯನ್ಯಃ ಪರಮಾತ್ಮೇತಿ ಯಃ ಸ್ಮೃತಃ ।
ಏವಂ ಯೋಽಪಾಸನಯೇಽನ್ಮೋಹಾತ್ ನ ಶಿವತ್ವಮವಾಪ್ನುಯಾತ್ ॥

ಶಿವೋಽನ್ಯಸ್ತ್ವಹಮೇವಾನ್ಯಃ ಪೃಥಗ್‌ಭಾವಂ ವಿವರ್ಜಯೇತ್ ।
ಯಶ್ಶಿವಸ್ಸೋಽಹಮೇವೇತಿ ಹೃದ್ವಯಂ ಭಾವಯೇತ್ ಸದಾ ॥

ಪರಮಾತ್ಮನಾದ ಶಿವನೇ ಬೇರೆ, ಜೀವಾತ್ಮನಾದ ನಾನೇ ಬೇರೆ ಎಂದು ಮೌಢ್ಯದಿಂದ ಉಪಾಸನೆಯನ್ನು ಮಾಡಿದರೆ ಶಿವತ್ವವನ್ನು ಪಡೆಯಲಾಗುವುದಿಲ್ಲ. ಶಿವನೇ ಬೇರೆ, ನಾನೇ ಬೇರೆಯೆಂಬ ಪೃಥಗ್‌ಭಾವನೆಯನ್ನು ಬಿಟ್ಟು ಶಿವನೇ ನಾನೆಂಬ ಅದ್ವಯಭಾವನೆಯಿಂದ ಸದಾ ಉಪಾಸನೆಯನ್ನು ಮಾಡಬೇಕೆಂದು ಭಾವ. ವೀರಶೈವರು "ಶಿವ ಏವ ಭವತಿ" ಎಂಬ ಆಧಾರವನ್ನು ಸಂಪೂರ್ಣವಾಗಿ ಒಪ್ಪಿ ಮೋಕ್ಷದಲ್ಲಿ ಜೀವನು ಶಿವನಲ್ಲಿ ಐಕ್ಯವಾಗುವನೆನ್ನುವರು. ಶ್ರೀಕಂಠಶಿವಾಚಾರ್ಯ ಭಾಷ್ಯದ ಪ್ರಕಾರವಾದರೂ ಶಿವೋಹಂ ಭಾವನೆಯಿಂದಲೇ ಉಪಾಸನೆಯನ್ನು ಮಾಡಬೇಕು. ಈ ರೀತಿಯ ವೀರಶೈವರ ಶಿವೋಹಂ ಭಾವನೆಯ ಹಿನ್ನೆಲೆಯು ಸೈಂಧವ ನಾಗರಿಕತೆಯ ಜನರ ನಿಲುವಿನಲ್ಲಿಯೇ ಕಂಡುಬಂದಿರುವುದು ಅನಿರೀಕ್ಷಿತವಾದ ಸೋಜಿಗವೆನಿಸದಿರದು.

"The inscriptions themselves reveal the fact that only those that reach a definite perfection may obtain heavenly happiness. Thus an inscription which reads: *Van ter or Min Kan Val*, *i.e.*, Reaching the sky one who is fish-eyed is happy. There is still another similar inscription which runs as follows: The fish-eyed one reaching the sky is happy. Now these inscriptions do not

speak of Ān who is the supreme fish-eyed for Ān cannot reach the sky or heaven as he is always there. Therefore the inscriptions refer to persons who reach the sky. The limit of perfection in order to enter heaven is therefore to be fish-eyed and since this is a perfection of Ān, to be fish-eyed was a possibility to men." ಫಾದರ್ ಹೆರಾಸರ ಈ ಬರವಣಿಗೆಯು ಆಗಿನ ಕಾಲದ ಜನರಿಗೆ ಮೋಕ್ಷವನ್ನು ಪಡೆಯುವ ಕಲ್ಪನೆಯು ಇದ್ದಿತೆಂಬುದನ್ನೂ, ಪಡೆಯುವುದು ಹೇಗೆಂಬುದರ ಕಲ್ಪನೆಯು ಸಹಾ ಇದ್ದಿತೆಂಬುದನ್ನೂ ತೋರಿಸುತ್ತದೆ. ಶಿವನನ್ನು ಮೀನ್‌ಕಣ್ಣನೆಂದು ಕರೆಯುತ್ತಿದ್ದರಷ್ಟೆ. ಜೀವನು ಮೋಕ್ಷವನ್ನು ಪಡೆಯಲು ಅವನೂ ಮೀನ್‌ಕಣ್ಣನೇ ಆಗಬೇಕೆಂಬುದು ಆ ಜನರ ಕಲ್ಪನೆ. ಮೋಕ್ಷಾರ್ಥಿಯಾದವನು ಶಿವನಾಗಿಯೇ ಶಿವನನ್ನು ಪೂಜಿಸಬೇಕೆಂಬ ವೀರಶೈವ ಸಿದ್ಧಾಂತದ ತಳಹದಿಯನ್ನು ಮೊಹೆಂಜೊದಾರೊ-ಹರಪ್ಪ ಜನರಲ್ಲಿನ ಮೇಲೆ ಹೇಳಿದ ಕಲ್ಪನೆಯಲ್ಲಿ ಕಾಣಬಹುದು.

"The phrase 'Reaching the sky' seems to be synonymous of reaching heaven.... The phrase 'Reaching the sun' identified with Ān or reaching the Crab which is one of the forms of Ān shows that heaven is first of all the dwelling of God and consequently to reach the sky would mean to dwell in company with Ān". ಆಕಾಶವನ್ನು ಸೇರುವನು, ಸೂರ್ಯನನ್ನು ಸೇರುವನು ಎಂದು ಮೊದಲಾಗಿ ಹೇಳಿರುವ ವಾಕ್ಯಗಳಿಗೆ ಶಿವಸಾನ್ನಿಧ್ಯವನ್ನು ಪಡೆವನೆಂದರ್ಥ ಎಂದು ಫಾದರ್ ಹೆರಾಸರು ಹೇಳಿರುವರು. ಏಕೆಂದರೆ ಸೂರ್ಯನೂ ಶಿವನೂ ಒಂದೆಯೆಂದು ಆ ಜನರು ಭಾವಿಸಿದ್ದರು. ಶಿವನಾಗಿ ಶಿವನನ್ನು ಸೇರಬೇಕೆಂದು ಅವರು ಹೇಳಿರುವುದರಲ್ಲಿ ಜೀವನು ಶಿವನೇ ಆಗಿಹೋಗುವನೆಂಬ ಐಕ್ಯಭಾವನೆ ಕಂಡುಬರುವುದೇ ಹೊರತು, ಮೋಕ್ಷದಲ್ಲಿ ದ್ವೈತ ಭಾವನೆಯಿತ್ತೆಂಬುದು ಕಂಡುಬರುವುದಿಲ್ಲ. Divine Triad ಎಂಬ ವಿಷಯದಲ್ಲಿ, ಹಿಂದೆ ಹೇಳಿದಂತೆ, ಜೀವ, ಶಿವ, ಶಕ್ತಿ ಎನಿಸಿದ ಮೂವರೂ ಒಂದೆಯೇ ಒಂಬ ಭಾವವೇ ಇರುವಂತೆ ಕಾಣುತ್ತದೆ. ಜೀವನು ಶಿವಶಕ್ತಿಯಿಂದ ಉದಯಿಸಿ ಅದರಲ್ಲಿಯೇ ಲಯವಾಗುವುದು ಈ ಸಿದ್ಧಾಂತದ ತಿರುಳು.

ಹೀಗೆ ವೀರಶೈವರ ಆಧಿದೈವಿಕ ಕಲ್ಪನೆಯ ಮೂಲವನ್ನು ಆಗಿನ ಕಾಲದ ಜನರ ಆಧಿದೈವಿಕ ಕಲ್ಪನೆಯಲ್ಲಿ ನೋಡಬಹುದಲ್ಲದೆ, ವೀರಶೈವದ ಆಧ್ಯಾತ್ಮಿಕ ಕಲ್ಪನೆಯ ಮೂಲವನ್ನು ಸಹಾ ಆಗಿನ ಕಾಲದ ಜನರ ಆಧ್ಯಾತ್ಮಿಕ ಕಲ್ಪನೆಯಲ್ಲಿ ನೋಡಬಹುದು.

## ವೀರಶೈವರ ಆಧಿಭೌತಿಕ ಆಚರಣೆ

ವೀರಶೈವರ ಆಧಿಭೌತಿಕ ಆಚರಣೆಯನ್ನು ಲೌಕಿಕಾಚರಣೆ, ಪಾರಮಾರ್ಥಿಕ ಆಚರಣೆ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ವೀರಶೈವರನ್ನು ಬಣಜಿಗರೆಂದು ರೂಢಿಯಾಗಿ ಕರೆಯುವುದುಂಟು. ಏಕೆಂದರೆ ವಾಣಿಜ್ಯವೇ ಅವರ ಮುಖ್ಯ ಉದ್ಯೋಗ. ಮೊಹೆಂಜೊದಾರೊ-ಹರಪ್ಪ ಕಾಲದ ವೀರಬಣಜಿಗರಾದ ವೀರಮತ್ಸ್ಯರೂ, ಫಣಿಗಳೂ ದೇಶದೇಶಗಳಲ್ಲಿ ವ್ಯಾಪಾರ ಮಾಡುತ್ತ ಈ ದೇಶದ ಸಂಸ್ಕೃತಿಯನ್ನು ಪರದೇಶಗಳಲ್ಲಿ ಹರಡಿದರು. ಕರ್ಮಾರ್‌ಕರ್ ಅವರ ಗ್ರಂಥದ ೭ನೆಯ ಪುಟದಲ್ಲಿ ಹೇಳಿರುವಂತೆ, The early tribes of Mīnas and the

Panis actively travelled abroad and spread the indigenous culture of India in early Egypt, Greek, Spain, Portugal, England and Ireland.... They.... retained their profession here as the expression vanic (derived from Pani) in later literature indicates.

ಇನ್ನು ಈ ಲೋಕದ ಬಾಳುವೆಯಲ್ಲಿ ವೀರಶೈವರ ಪಾರಮಾರ್ಥಿಕ ಆಚರಣೆಯೆಂದರೆ ಶಿವಯೋಗ-ಲಿಂಗಾರ್ಚನೆ-ಲಿಂಗಧಾರಣೆ. ಇವುಗಳ ಮೂಲವನ್ನು ನೋಡುವ.

## ಶಿವಯೋಗ

"One marble statuette has the head, neck and body quite erect and half-shut eyes fixed on the tip of the nose. Another is draped in the Upavita fashion passing over the left shoulder and under his right arm. His shawl has rosettes having in form of the Bilva leaf, the most sacred material for worship in the Siva cult. The philosophy of the age crystallised in the discipline known later as Brahmacharya: sexual restraint is in evidence in the urdhva medhra representation of Siva on the seal. It is not phallic orgies but their conquest, that constituted the essence of religion at the time. It is not without significance that the icon of the Goddess (Fig. 18 of Plate XII) has seven other goddesses standing below in a row. It is the theme of the Chandi Saptasati that the seven symbolize the conquest of the powers of the flesh—lust, anger, greed, pride, jealousy, infatuation and ignorance. The victory of the goddess was after these purified qualities had entered into her spirit and she was single and entire"—*Pro-Indian Culture* by Sri. S. V. Venkateshvara, M.A.

ಯೋಗಾರೂಢನಾದ ಶಿವನ ಪ್ರತಿಮೆಯಿಂದ ಶಿವಯೋಗದ ಕಲ್ಪನೆಯು ಆ ಕಾಲದಲ್ಲಿ ಇತ್ತೆಂಬುದು ನಿಶ್ಚಯವಾಗುವುದು. ಎದೆ, ಕತ್ತು, ಶಿರಸ್ಸುಗಳು ನೇರವಾಗಿದ್ದು ಅರ್ಧ ನಿಮೀಲಿತ ನೇತ್ರದ ದೃಷ್ಟಿಯು ನಾಸಾಗ್ರದಲ್ಲಿರುವುದರಿಂದ ಇಂದ್ರಿಯಗಳನ್ನು ಮನಸ್ಸಿನಿಂದ ದಮನಮಾಡಿರುವುದು ಕಂಡುಬರುವುದು. ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿರುವಂತೆ,

> ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ಹೃದೀಂದ್ರಿಯಾಣಿ ಮನಸಾ ಸನ್ನಿವೇಶ್ಯ ।
> ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್, ಸ್ರೋತಾಂಸಿ ಸರ್ವಾಣಿ ಭಯಾನಕಾನಿ ॥

ಇದರ ಕನ್ನಡ ಅನುವಾದವಿದು:

> ಕಂದ—ನಿಲೆ, ಕಂಧರವಕ್ಷಶಿರಂ । ಸಲೆ ನೆಟ್ಟನೆ, ಮನದಿನಿಂದ್ರಿಯತತಿ ಹೃದಯದೊಳ್ ॥
> ನಿಲಲಾ ಬ್ರಹ್ಮೋಡುಪದೊಳ್ । ಜಲದ ಭಯಾನಕ ಸೆಳೆವನೆ ದಾಂಟುಗುಮಲ್ತೇಂ ॥

ಹೀಗೆ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿರುವ ರೀತಿಯಲ್ಲಿಯೇ ಶಿವನು ಯೋಗಾರೂಢನಾಗಿರುವಂತೆ ಕಾಣುವುದು. ಈ ಪ್ರತಿಮೆಯಲ್ಲಿ ಕಾಣಬರುವ ಊರ್ಧ್ವಮೇಢ್ರವು ಬ್ರಹ್ಮಚರ್ಯವನ್ನು ಸೂಚಿಸುವುದು. ಸಪ್ತಮಾತೃಕೆಗಳ ಮೇಲೆ ನಿಂತಿರುವ ಶಕ್ತಿಪ್ರತಿಮೆಯು ಚಂಡಿ ಸಪ್ತಸತಿಯಲ್ಲಿ ಹೇಳಿದಂತೆ ವಿಷಯವಾಸನೆ, ಕೋಪ, ದುರಾಶೆ, ಅಹಂಭಾವ, ಮತ್ಸರ, ಮೋಹ

ಮತ್ತು ಅವಿದ್ಯೆಗಳನ್ನು ದಮನಮಾಡಿರುವುದರ ಕುರುಹಾಗಿದೆ. ಬಿಲ್ವದಳಗಳು, ಆಗಲೂ ಶಿವಪೂಜೆಗೆ ಅವು ಮುಖ್ಯವಾದುವೆಂದು ಭಾವಿಸಲ್ಪಟ್ಟದ್ದುವೆಂಬುದನ್ನು ಸೂಚಿಸುತ್ತವೆ. ಯೋಗೀಶ್ವರನಾದ ಶಿವನ ಪ್ರತಿಮೆಯ ಕೆಳಗೆ ಎರಡು ಜಿಂಕೆಗಳ ಪ್ರತಿಮೆಯಿರುವುದು ಶಿವಯೋಗವನ್ನೇ ಸೂಚಿಸುತ್ತದೆ. ಈ ಪದ್ಧತಿಯನ್ನು ಮುಂದೆ ಬೌದ್ಧರು ಸಹಾ ಅನುಕರಣ ಮಾಡಿದರೆಂದು ಮಾರ್ಷಲ್ಲರು ಹೇಳುತ್ತಾರೆ:

Finally, there remain the deer or ibexes beneath the seat of the god. Two deer in a like position are portrayed on many mediaeval images of Siva, especially when he appears in the form of Dakshinamurti or Yoga-dakshinamurti; and a deer (mriga) held in one of his hands is a frequent attribute of the god in other manifestations.... It seems probable that Buddhists themselves adopted it as they adopted so much else from the popular religion of the day (Page 55).

ಮೇಲೆ ಹೇಳಿದ ಯೋಗಾರೂಢಶಿವನ ಪ್ರತಿಮೆಯು ಸಿಕ್ಕುವುದಕ್ಕೆ ಮೊದಲೇ ರಾಯ ಬಹದ್ದೂರ್ ರಾಮಪ್ರಸಾದಚಂದ್ರರವರು ಮತ್ತೊಂದು ಪ್ರತಿಮೆಯನ್ನು ನೋಡಿ, ಅದರಲ್ಲಿ ನಾಸಾಗ್ರದೃಷ್ಟಿಯಿದೆಯೆಂಬ ಕಾರಣದಿಂದ, ಆ ಕಾಲದ ಜನರಿಗೆ ಯೋಗದ ಅಭ್ಯಾಸವಿತ್ತೆಂದು ನಿರ್ಧರಿಸಿದ್ದರೆಂದು ಮಾರ್ಷಲ್ಲರು ಹೇಳಿದ್ದಾರೆ: "Even before the discovery of this seal *Rai Bahadur* Ramaprasad Chandra had pointed out that the head of the male statue from Mohenjo Daro illustrated in Plate XCVIII has its eyes concentrated on the tip of the nose and had concluded—with remarkable intuition—that it was portrayed in an attitude of yoga. Probably it is a statue of a priest (page 54). In his conclusion at page 77 Marshall says, "There is evidence that yoga was already playing its part as a religious practice".

## ಲಿಂಗಾರ್ಚನ – ಲಿಂಗಧಾರಣ

ಮೊಹೆಂಜೊದಾರೊ ಮತ್ತು ಹರಪ್ಪ ಅವಶೇಷಗಳಲ್ಲಿ ಲಿಂಗಗಳು ಸಿಕ್ಕಿರುವುದನ್ನು ಸರ್ ಜಾನ್ ಮಾರ್ಷಲ್ಲರು ಹೇಳಿರುವರಷ್ಟೆ. ಅವುಗಳಲ್ಲಿ ಸಣ್ಣ ಲಿಂಗಗಳನ್ನು ಇಂದಿನ ಶೈವರಂತೆ ದೇಹದಲ್ಲಿ ಧರಿಸಿಕೊಳ್ಳಲು ಉಪಯೋಗಿಸುತ್ತಿದ್ದರೆಂಬುದೂ, ದೊಡ್ಡವನ್ನು ಪೂಜೆಗಾಗಿ ಉಪಯೋಗಿಸುತ್ತಿದ್ದರೆಂಬುದೂ ಸ್ಪಷ್ಟವೆಂದು ಅವರು ಅಭಿಪ್ರಾಯಪಟ್ಟಿರುವರು. ಈ ಶೈವರೆಂದರೆ ವೀರಶೈವರೆಂದೇ ಅವರ ಗ್ರಂಥದ ೬೧ನೆಯ ಪುಟದ ಅಡಿ ಟಿಪ್ಪಣಿಯಲ್ಲಿ ಸ್ಪಷ್ಟಮಾಡಿರುವರು: Indeed the only explanation applicable to them all is that they were sacred objects of some sort, the larger ones serving as aniconic agalmata for cult purposes, the smaller, as amulets to be carried on the person, just as miniature lingas are commonly carried by Saivites today (page 59).

ಶಂ. ಬಾ. ಜೋಶಿಯವರ ಶಿವರಹಸ್ಯವೆಂಬ ಸಣ್ಣ ಹೊತ್ತಗೆಯ ೨೪–೨೫ನೆಯ ಪುಟಗಳಲ್ಲಿ ಹೀಗೆ ಹೇಳಿದ್ದಾರೆ:

"ಕೀಥರು ಸಹ ಫ್ರೀಲಸ್ಕಿಯವರ ವಿಚಾರಸರಣಿಗೆ ಸಮ್ಮತಿಯನ್ನಿತ್ತಿದ್ದಾರೆ. ಕೀಥರು ಹೇಳುವುದೇನೆಂದರೆ— It may be noted that here the paucity of phallic worship in the case of Indo-European peoples strengthens the argument for borrowing. ಯೂರೋಪಿನಲ್ಲಿ ಭೂಮಧ್ಯ ಸಮುದ್ರತೀರದ ಕೆಲವು ಜನಗಳಲ್ಲಿ ಲಿಂಗಚಿಹ್ನವನ್ನು ತಾಯತದಂತೆ ಪೀಡಾನಿವಾರಣೆಗಾಗಿ ಕೊರಳಲ್ಲಿ ಕಟ್ಟಿಕೊಳ್ಳುವ ರೂಢಿಯಿದ್ದಿತು. ಆದರೂ ಅದು ಆರ್ಯ ಜನಾಂಗದ ಆಚಾರವಲ್ಲವೆಂದು ಎಲ್ಲರೂ ಒಪ್ಪಿದ್ದಾರೆ. ಅದರಂತೆ ಲಿಂಗವು ದ್ರಾವಿಡರ ದೇವತೆಯೂ ಅಲ್ಲ. ಹಿಂದೂ ದೇಶದೊಳಗಿನ ಆರ್ಯರೂ ದ್ರಾವಿಡರೂ ಲಿಂಗದೇವರನ್ನು ಆಸ್ಟ್ರೋ-ಏಷಿಯಾಟಿಕ್ ಜನಾಂಗದವರಿಂದ ಸ್ವೀಕರಿಸಿರುವ ಸಂಭವವಿದೆಯೆಂದು ಫ್ರೀಲಸ್ಕಿಯವರ ಮತ. ಇವರು ಬರೆಯುವುದೇನೆಂದರೆ—It is more probable that the Aryans (and Dravidians) have borrowed from the aborigines of India, the cult of linga as well as the name of the idol."

ಮಥಿತಾರ್ಥವೇನೆಂದರೆ, ಮೆಡಿಟರೇನಿಯನ್ ತೀರದ ಜನರು ಇಷ್ಟಪ್ರಾಪ್ತಿಗೂ ಅನಿಷ್ಟ ನಿವಾರಣೆಗೂ ಲಿಂಗವನ್ನು ಕೊರಳಲ್ಲಿ ಕಟ್ಟಿಕೊಳ್ಳುತ್ತಿದ್ದರು. ಹಿಂದೂದೇಶದ ಮತ್ತು ಯೂರೋಪಿನ ಆರ್ಯರಿಗೆ 'ಲಿಂಗ' ವಿಷಯವು ಅಪರಿಚಿತವಾದುದು; ಇದನ್ನು ಭಾರತದ ಮೂಲನಿವಾಸಿಗಳಿಂದ ಆರ್ಯರೂ ದ್ರಾವಿಡರೂ ಕಲಿತಿರಬೇಕು. ಇದೇ ಫ್ರೀಲಸ್ಕಿಯವರ ಮತ. ಒಟ್ಟಿನಲ್ಲಿ, ಮೊಹೆಂಜೊದಾರೊ-ಹರಪ್ಪ ನಿವಾಸಿಗಳು ಲಿಂಗವನ್ನು ಧರಿಸುತ್ತಿದ್ದಂತೆ ಮೆಡಿಟರೇನಿಯನ್ ತೀರದಲ್ಲೂ ಲಿಂಗವನ್ನು ಕೊರಳಲ್ಲಿ ಕಟ್ಟಿಕೊಳ್ಳುತ್ತಿದ್ದರು; ಇದು ಯೂರೋಪಿನ ಆರ್ಯರಿಗೆ ತಿಳಿಯದ ವಿಷಯವಾದುದರಿಂದ ಇಂಡಿಯಾದ ಪೂರ್ವನಿವಾಸಿಗಳಿಂದ ಇದನ್ನು ಕಲಿತಿರಬೇಕು, ಎಂಬುದೇ ಇದರ ಅಭಿಪ್ರಾಯ.

ಲಿಂಗವನ್ನು ಧರಿಸಿಕೊಳ್ಳಲು ಅದರಲ್ಲಿ ರಂಧ್ರವಿಲ್ಲದುದರಿಂದ ಯಾವುದಾದರೂ ತರದ ಕರಡಿಗೆಯಲ್ಲಿಯೇ ಇದನ್ನು ಇಟ್ಟು ಅದನ್ನು ಧರಿಸಿಕೊಳ್ಳುತ್ತಿರಬೇಕಷ್ಟೆ. ಪೂಜ್ಯ ವಸ್ತುಗಳನ್ನು ಧರಿಸಿಕೊಳ್ಳಲು ಚಿನ್ನದ ಅಥವಾ ಇತರ ಲೋಹದ ಕರಡಿಗೆಗಳನ್ನು ಸೈಂಧವ ನಾಗರಿಕತೆಯ ಜನರು ಉಪಯೋಗಿಸುತ್ತಿದ್ದರೆಂಬುದಕ್ಕೆ ಡಾ॥ ಮ್ಯಾಕೆಯವರ ಆಧಾರವಿದೆ. ಅವರನ್ನು ಪ್ರಶಂಸೆಮಾಡುತ್ತ ಮಾರ್ಷೆಲ್ಲರು ಅವರ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ:

It was my anxiety to ensure that the exploration of Mohenjo Daro and the publication of these valuable materials should lack nothing which expert knowledge could supply, that decided me three years ago to enlist for our work here, the help of a specialist in Mesopotamium Archaeology, the intimate bearing of which on our Indus culture had become absolutely clear. By a stroke of good fortune I was able to secure the services of Mr. Ernest Mackay well-known for his excavations at Kish and Jemdet Nasr and an archaeologist of long experience in Egypt and Palestine as well. To this officer my debt in regard to these volumes is particularly a heavy one.

ಆದುದರಿಂದ ಡಾ॥ ಮ್ಯಾಕೆಯವರ ಅಭಿಪ್ರಾಯವು ಮಾನ್ಯವಾದುದು. ಇವರ ಅನ್ವೇಷಣವು ಮುಂದುವರಿದಮೇಲೆ ಆ ವಿಷಯವಾಗಿ ಅವರು ಮಾಡಿದ ಉಪನ್ಯಾಸದ ಕನ್ನಡ

ಅನುವಾದವನ್ನು ಶ್ರೀಯುತ ಡಿ. ಎಲ್. ನರಸಿಂಹಾಚಾರ್ಯರು ಪ್ರಬುದ್ಧ ಕರ್ಣಾಟಕದ ಭಾವಸಂವತ್ಸರದ ಕಾಮನ ಸಂಚಿಕೆಯಲ್ಲಿ ಪ್ರಸಿದ್ಧಪಡಿಸಿದ್ದಾರೆ. ಇದರ ೫೧ನೆಯ ಪುಟದ ಭಾಗವಿದು ಗಮನಾರ್ಹವಾಗಿದೆ—''ಎಂಟನೆಯ ಚಿತ್ರದಲ್ಲಿ ಪುರೋಹಿತನು ತನ್ನ ಎದೆಯಲ್ಲಿ ಧರಿಸುತ್ತಿದ್ದ ಒಂದು ಬಗೆಯ ಭಾರವಾದ ಪದಕವಿದೆ. ಇದನ್ನು ಹಳದಿಯ ಬಳಪದ ಕಲ್ಲಿನಲ್ಲಿ ಕೊರೆದಿದೆ. ಅಳತೆ ಎಲ್ಲ ಕಡೆಯಲ್ಲಿಯೂ ಎರಡೂವರೆ ಅಂಗುಲ. ಮುದ್ರಿಕೆಗಳಲ್ಲಿ ಕಂಡು ಬರುವ ಪ್ರಾಣಿಯ ಚಿತ್ರವೇ ಇದರಲ್ಲಿಯೂ ಇದೆ. ಆ ಪ್ರಾಣಿಯ ಎದುರುಗಡೆ ಯಾವುದೋ ಒಂದು ಬಗೆಯ ಪೂಜಾವಸ್ತುವಿದೆ. . . . ಈ ಪದಕವನ್ನು ಬಹುಶಃ ಚಿನ್ನದ ಕರಡಿಗೆಯಲ್ಲಿಯೋ ಅಥವಾ ಇನ್ನಾವುದೋ ಲೋಹದ ಭರಣಿಯಲ್ಲಿಯೋ ಇಡುತ್ತಿದ್ದಂತೆ ಕಾಣುತ್ತದೆ. ಈ ವಿಜಾತೀಯವಾದ ವಸ್ತುವನ್ನು ಯಾವುದೋ ಧಾರ್ಮಿಕ ಕರ್ಮಕ್ಕೆ ಉಪಯೋಗಿಸಲಾಗು ತ್ತಿತ್ತೆಂದು ಧಾರಾಳವಾಗಿ ಹೇಳಬಹುದು.''

ಡಾ॥ ಮ್ಯಾಕೆಯವರು ಹೇಳುವ ಚಿತ್ರದಲ್ಲಿರುವ ಪ್ರಾಣಿಯು ಎರಡು ಕೊಂಬಿನ ಚತುಷ್ಪಾದ ಪ್ರಾಣಿಯು. ಈ ತೆರದ ಪ್ರಾಣಿಯ ಚಿತ್ರವು ಮೊಹೆಂಜೊದಾಕೊದಲ್ಲಿ ಸಿಕ್ಕಿದ ಊರ್ಧ್ವರೇತು ಪಶುಪತಿ ಶಿವನ ಮುದ್ರಿಕೆಯಲ್ಲಿ ಶಿವನ ವಿಗ್ರಹದ ಕೆಳಗಿದೆ. ಅಲ್ಲದೆ ಮಾರ್ಷೆಲ್ಲರ ಗ್ರಂಥದ ೬೦ನೆಯ ಪುಟದ ಎದುರುಪುಟದಲ್ಲಿ ಮುದ್ರಿತವಾದ ಮುದ್ರಿಕೆಗಳ ಚಿತ್ರಪಟದಲ್ಲಿ ೨೨ನೆಯ ಮುದ್ರಿಕೆಯ ಚಿತ್ರದಲ್ಲಿಯೂ ಈ ತರದ ಪ್ರಾಣಿಯ ಚಿತ್ರವಿದೆ (Pl. XIII–22). ಆದರ ಮುಂದೆಯೂ ಪ್ರಸ್ತುತ ಚಿತ್ರದಲ್ಲಿರುವಂತಹ ಚತುಷ್ಪಾದ ಪ್ರಾಣಿಯ ಮುಂದೆ 'ಪೂಜಾವಸ್ತು'ವಿದೆ. ಈ ಪೂಜಾವಸ್ತುವು ಧೂಪಾರತಿಯೆಂದು ಮಾರ್ಷೆಲ್ಲರು, ಅವರ ಗ್ರಂಥದ ೬೯ನೆಯ ಪುಟದಲ್ಲಿ ನಿರ್ಧರಿಸಿದ್ದಾರೆ. ಪ್ರಸ್ತುತ ಚಿತ್ರದಲ್ಲಿಯೂ ಪ್ರಾಣಿಯ ಚಿತ್ರದ ಮುಂದೆ ಇರುವುದು ಧೂಪಾರತಿಯೆಂದೇ ಹೇಳಬಹುದು. ಚತುಷ್ಪಾದ ಪ್ರಾಣಿಯ ಚಿತ್ರದ ಮೇಲೆ ಭರಣಿಯಾಕಾರದ ವಸ್ತುವಿನ ಚಿತ್ರವಿದೆ. ಅದು ಲಿಂಗದ ಚಿತ್ರವೋ ಏನೋ ಹೇಳುವುದು ಸುಲಭವಲ್ಲ. ಪಶುಪತಿ ಶಿವನ ಮುದ್ರಿಕೆಯಲ್ಲಿ ಶಿವನ ಚಿತ್ರದ ಆಸನದ ಕೆಳಗೆ ಕೊಂಬುಳ್ಳ ಚತುಷ್ಪಾದ ಪ್ರಾಣಿಯ ಚಿತ್ರವಿರುವುದರಿಂದಲೂ, ಇಂದೂ ಶಿವನ ವಾಹನವು ವೃಷಭವೆಂದು ನಂಬುಗೆಯಿರುವುದರಿಂದಲೂ ಪ್ರಸ್ತುತ ಮುದ್ರಿಕೆಯಲ್ಲಿನ ಕೊಂಬುಳ್ಳ ಚತುಷ್ಪಾದ ಪ್ರಾಣಿಯ ಚಿತ್ರದ ಮೇಲಿರುವ ಭರಣಿಯಾಕಾರದ ಚಿತ್ರವು ಶಿವಲಿಂಗದ ಚಿತ್ರವೋ ಎನ್ನುವುದು ವಿಚಾರಾರ್ಹವಾದ ವಿಷಯವಾಗಿದೆ. ಇದು ಹೇಗೇ ಇರಲಿ, ಡಾ॥ ಮ್ಯಾಕೆಯವರ ಹೇಳಿಕೆಯಿಂದ ಸೈಂಧವನಾಗರಿಕರು ಧರಿಸುತ್ತಿದ್ದ ಪೂಜಾರ್ಹ ವಸ್ತುವನ್ನು ಚಿನ್ನದ ಅಥವಾ ಇತರ ಲೋಹದ ಕರಡಿಗೆಯಲ್ಲಿ ಇಡುತ್ತಿದ್ದರೆಂಬುದು ಮುಖ್ಯ. ಮಾರ್ಷೆಲ್ಲರು ಹೇಳುವಂತೆ ಆ ಜನರು ಲಿಂಗವನ್ನು ಧರಿಸುತ್ತಿದ್ದರೆಂದಮೇಲೆ, ಈ ಪೂಜಾರ್ಹ ವಸ್ತುವನ್ನು ಚಿನ್ನದ ಅಥವಾ ಇತರ ಲೋಹದ ಕರಡಿಗೆಯಲ್ಲಿಯೇ ಇಟ್ಟು ಧರಿಸುತ್ತಿದ್ದರೆಂದು ಗ್ರಹಿಸಬಹುದು.

ಭಾರತ ದೇಶದ ಈ ಆದಿನಿವಾಸಿಗಳಲ್ಲಿ ಹಿಂದೆ ಲಿಂಗಧಾರಣೆಯಿದ್ದಿತಾದರೆ, ಅಂದಿನಿಂದ ಹೆಚ್ಚು ಬದಲಾವಣೆಗಳಾಗದೆ ಇಂದೂ ಉಳಿದುಬಂದಿರುವ ಭಾರತದ ಆದಿನಿವಾಸಿಗಳಲ್ಲಿ ಲಿಂಗ ಧಾರಣೆಯ ಪದ್ಧತಿಯು ಉಳಿದುಬಂದಿದೆಯೇ ಎಂಬುದು ವಿಚಾರಾರ್ಹವಾದ ವಿಷಯ. 'ವೀರಶೈವ' ತ್ರೈಮಾಸಿಕದ ೧೯೬೨ನೆಯ ಸೆಪ್ಟೆಂಬರ್ ಸಂಚಿಕೆಯಲ್ಲಿ 'ವಿಮರ್ಶವಿಶಾರದ ಧರ್ಮಸಂಶೋಧನಾಸಕ್ತ ಆಕ್ಕುಲಯ್ಯ ದೀಕಿತರ ಲೇಖನ'ದ ಅನುವಾದದಲ್ಲಿ ಹೇಳಿರುವ ವಿಷಯವಿದು ಸಂಶೋಧನಾರ್ಹವಾಗಿದೆ:

"ಪ್ರಮಥಗಣವೇ ನಮ್ಮ ದೇಶದ ಆದಿವಾಸಿಗಳೆಂದು ನಿರ್ಣಯಿಸಲು ಅನೇಕ ಆಧಾರಗಳಿವೆ— ವೇದಗಳಲ್ಲಿ ಹೇಳಿರುವ ವೃಷಭಗಣ, ಫಣಿಗಣ, ಮರುತ್‌ಗಣಗಳು ಸೇರಿದ ಸಂಘಕ್ಕೆ ಪ್ರಮಥಗಣವೆಂದು ಹೆಸರು (ಋ. ೯–೯೭–೮). ಇವರೇ ಲಿಂಗಧಾರಿಗಳ ಮೂಲಪುರುಷರು. ಇವರ ಸಂಸ್ಕೃತಿಪರಂಪರೆ ಇಂದಿಗೂ ನೀಲಗಿರಿಯಲ್ಲಿದೆಯೆಂದು ಚಾರಿತ್ರಕರು ಹೇಳುತ್ತಿದ್ದಾರೆ. ಇಲ್ಲಿಯ ಬಡಗರು ಆದಿನಿವಾಸಿಗಳ ಸಂತತಿಯೆಂದು ಹೇಳುವರು. ಪರಿಶೋಧಕರ ಹೇಳಿಕೆಯಲ್ಲಿ ಈ ಬಡಗರು ದಕ್ಷಿಣಭಾರತದ ಪರ್ವತ ಪ್ರಾಂತದಲ್ಲಿ ವಿಶೇಷವಾಗಿ ವ್ಯಾಪಿಸಿರುವ ಒಂದು ಅನಾಥ ಜಾತಿಗೆ ಸೇರಿದವರು. ಈ ಪ್ರದೇಶದಲ್ಲಿ ಇವರ ಸಂಖ್ಯೆಯು ಇಂದು ಅತ್ಯಲ್ಪವಾಗಿದೆ. ಇವರಲ್ಲಿ ಕೆಲವರು ಶಾಖಾಹಾರಿಗಳು, ಮತ್ತೆ ಕೆಲವರು ಮಾಂಸಾಹಾರಿಗಳು. ಇವರಲ್ಲಿ ಒಂದು ಬಗೆಯವರು ಬ್ರಾಹ್ಮಣರಂತೆ ಜನಿವಾರ ಹಾಕುವರು. ಅವರ ಬಾಲಕರಿಗೆ ಹನ್ನೆರಡನೆಯ ವರ್ಷದಲ್ಲಿ ಲಿಂಗಧಾರಣವೆಸಗುವರು. ಲಿಂಗಪೂಜೆ ಮಾಡುವರು. ಬಾಲಕನು ಪ್ರಾರ್ಥನೆ ಮಾಡುವನು. ಲಿಂಗವು ಕೊರಳಲ್ಲಿ ಕಟ್ಟಿರುವುದು. ಬಡಗರಲ್ಲಿ 'ಉದಯ' ಎಂಬ ಬಗೆಯವರು ಮೃತಕ್ರಿಯೆಗಳಲ್ಲಿ ವೃಷಭಾರಾಧನ ಮಾಡುವರು. 'ಪರ್ಗಾನ್ ಥರ್ಸ್ಟನ್' ಮಾತ್ರ ಇವರ ಬಗ್ಗೆ ಸಾಕಷ್ಟು ಬರೆದಿರುವರು. ಆತನ ತರುವಾಯ 'ಆರ್ಥರ್ ವೇಲ್ಸ್' ಎಂಬಾತ ಇವರ ಬಗ್ಗೆ ಒಂದು ಉಲ್ಲೇಖ ಬರೆದನು (೧೯–೮–೧೯೪೫, 'ಆಂಧ್ರಪ್ರಭಾ' ದಿನಪತ್ರಿಕೆ). ಇಂದಿಗೂ ನೀಲಗಿರಿಯಲ್ಲಿ ವಾಸಿಸುವ ಬಡಗರು ಮೊದಲು ಗುಂಟೂರು ಜಿಲ್ಲೆಯವರೆಗೆ ವ್ಯಾಪಿಸಿದ್ದರೆಂಬುದಕ್ಕೆ ಎಷ್ಟೋ ಶಾಸನಾಧಾರಗಳಿವೆಯೆಂದೂ, ಇಂದಿಗೂ ನೆಲ್ಲೂರು ಜಿಲ್ಲೆ 'ಪೋದಿಲಿ ಡಿವಿಜನ್, ಬಡಗೂರು' ಎಂಬ ಗ್ರಾಮವಿರುವುದೆಂದೂ ಶ್ರೀ ವೇಟೂರು ವಿಶ್ವನಾಥಶರ್ಮ ಇವರು ತಿಳಿಸಿದ್ದಾರೆ ('ಆಂಧ್ರಪ್ರಭಾ' ದಿನಪತ್ರಿಕೆ)."

ಮೇಲಿನ ಲೇಖನ ಭಾಗದಲ್ಲಿ ವಿವರಿಸಲ್ಪಟ್ಟ ಬಡಗರೇನೋ ಭಾರತ ದೇಶದ ಆದಿನಿವಾಸಿಗಳ ಸಂತತಿಯವರೆಂಬುದರಲ್ಲಿ ಸಂದೇಹವಿಲ್ಲ. ಅಂದಿನಿಂದ ಇಂದಿನವರೆಗೂ ಹೆಚ್ಚು ವ್ಯತ್ಯಾಸವಿಲ್ಲದ ಆಚಾರವಿಚಾರಗಳುಳ್ಳ ಕಾಡುಜನರಿವರಾದುದರಿಂದ, ಇವರಲ್ಲಿನ ಲಿಂಗಧಾರಣ ಪದ್ಧತಿಯಾದರೂ ಇವರ ಪೂರ್ವಿಕರು ಸಹಸ್ರಾರು ವರ್ಷಗಳ ಹಿಂದೆಯೇ ಆಚರಿಸುತ್ತಿದ್ದ ಪದ್ಧತಿಯೇ ಆಗಿರಬೇಕೆನ್ನಬಹುದು. ಆದರೆ ಕೇವಲ ಗುಡಿಸಲುಗಳಲ್ಲಿ ಇಂದೂ ವಾಸಿಸುವ ಈ ಅನಾಗರಿಕ ಜನರ ನಡವಳಿಕೆಯಿಂದ, ಸೊಗಸಾದ ಪ್ರಾಸಾದಗಳನ್ನು ಕಟ್ಟಿಕೊಂಡು ಆರ್ಯರಿಗಿಂತಲೂ ಹೆಚ್ಚು ನಾಗರಿಕರೆನಿಸಿಕೊಂಡಿದ್ದ ಸಿಂಧೂನದಿಯ ತೀರದ ಜನಾಂಗದ ನಡವಳಿಕೆಯನ್ನು ಊಹಿಸಬಹುದೇ ಎಂಬ ಸಂದೇಹ ಬರಬಹುದು. ಆದರೆ ಈ ಸಂದೇಹವನ್ನು ಮಾರ್ಷೆಲ್ಲರ ಗ್ರಂಥದಲ್ಲಿನ ಈ ಮಾತುಗಳು ಪರಿಹಾರಮಾಡುವುವು :

"A mistake, as it seems to me, that has too often been made, has been to take the modern jungle tribes as the lenial representatives of the pre-Aryans and to assume that they have perpetuated all that is worth perpetuating of the cultural and religious traditions of the latter. India has always had her jungle tribes. She had them five thousand years ago, as she has them today. But side by side with them she also had her cultured classes of the cities, and the gulf between the two was probably as great then as it

is now. As to the primitive beliefs of these jungle folk, they may, it is true, be reckoned as part and parcel of Hinduism, which has ever been ready to admit within its fold any and every kind of teaching, creed, or cult, from the most transcendental doctrines of theology to the most degraded types of fetishism. This has been a characteristic of Hinduism, as far back as its history can be traced, and it was doubtless a characteristic of the still earlier Indus religion which preceded it, only that in that remote age there was presumably less diversity of belief than now. To this limited extent, then, we are justified in believing that the non-Aryan jungle tribes of today do, in fact, preserve for us some of the cruder and more elemental features of the pre-Aryan religion. But to assume, as so many have done, that such features represent the sum total of that religion is as irrational as to suppose that the rude grass and mud hovels of these same jungle tribes are representative of the massive edifices of Mohenjo Daro and Harappa (page 78).

ಇದರ ಮಥಿತಾರ್ಥವಿದು—ಇಂದು ಒಳ್ಳೆಯ ನಾಗರಿಕತೆಯುಳ್ಳ ನಗರನಿವಾಸಿಗಳ ಕಾಲದಲ್ಲಿಯೇ ಗುಡ್ಡಗಾಡುಗಳಲ್ಲಿ ಕಾಡುಜನರಿರುವಂತೆ, ಅಂದು ಸಿಂಧೂನದಿಯ ತೀರದ ಉತ್ತಮ ನಾಗರಿಕತೆಯ ಜನರು ನಗರಗಳಲ್ಲಿ ವಾಸಮಾಡುತ್ತಿದ್ದಾಗ ಕಾಡುಗುಡ್ಡಗಳಲ್ಲಿ ಕಾಡುಜನರಿದ್ದರು. ಆ ಕಾಲದಲ್ಲಿ ಅನೇಕ ಆಚಾರವಿಚಾರಗಳಲ್ಲಿ ನಗರನಿವಾಸಿಗಳಿಗೂ ಕಾಡುಜನರಿಗೂ ವೈವಿಧ್ಯತೆಯು ಇದ್ದಿತಾದರೂ, ಸಾಮಾನ್ಯ ವಿಷಯಗಳಲ್ಲಿ ಅವರವರಿಗೆ ಹೋಲಿಕೆ ಇದ್ದಿತು. ಆದುದರಿಂದ ಈಗಿನ ಕಾಡುಜನರ ಆಚಾರವಿಚಾರಗಳು ಅಂದಿನ ನಾಗರಿಕ ಜನರ ಆಚಾರಗಳ ಮೇಲೆ ಬೆಳಕನ್ನು ಚೆಲ್ಲುವವೆನ್ನಬಹುದು. ಇಂದೂ ಬಡಗರು ಲಿಂಗವನ್ನು ಧರಿಸುತ್ತಿರುವುದು ಇವರ ಮೂಲಪುರುಷರು ಸಿಂಧೂನದಿಯ ನಾಗರಿಕರ ಕಾಲದಲ್ಲಿ ಲಿಂಗವನ್ನು ಧರಿಸುತ್ತಿದ್ದರೆಂಬುದನ್ನೂ, ಅಂದಿನ ನಾಗರಿಕರಲ್ಲಿಯೂ ಇದು ಪ್ರಚಲಿತವಾಗಿದ್ದ ಪದ್ಧತಿಯಾಗಿತ್ತೆಂಬುದನ್ನೂ ನಿರ್ಧರಿಸಲು ಸಹಾಯ ಮಾಡುತ್ತದೆ. ಇಂದು ಲಿಂಗಧಾರಿಗಳಾಗಿಲ್ಲದ ಹರಿಜನರೇ ಮೊದಲಾದವರ ದೇವತಾ ವಿಗ್ರಹಗಳಿಗೆ ಕರಡಿಗೆಯನ್ನು ಹಾಕುತ್ತಿರುವುದನ್ನು ನೋಡಿದರೆ ಭಾರತದ ಆದಿನಿವಾಸಿಗಳಲ್ಲಿ ಹಿಂದೆ ಇದ್ದ ಲಿಂಗಧಾರಣೆಯ ಕುರುಹು ಇದು ಎನಿಸುವುದು. ಇವುಗಳೆಲ್ಲದರಿಂದಲೂ, ಅಂದು ಲಿಂಗಪೂಜೆಯೂ ಲಿಂಗಧಾರಣೆಯೂ ಇತ್ತೆಂಬ ಮಾರ್ಷಲ್ಲರ ಅಭಿಪ್ರಾಯಕ್ಕೆ ಸಮರ್ಥನೆಯು ದೊರೆಯುತ್ತದೆ. ಸೈಂಧವ ನಾಗರಿಕರು ದಕ್ಷಿಣದೇಶಕ್ಕೆ ಆರ್ಯರಿಂದ ತಳ್ಳಲ್ಪಟ್ಟಾಗ ಈ ಬಡಗ ಕಾಡುಜನರೂ ದಕ್ಷಿಣಕ್ಕೆ ತಳ್ಳಲ್ಪಟ್ಟು ಇವರಲ್ಲಿದ್ದ ಲಿಂಗಪೂಜೆ ಲಿಂಗಧಾರಣೆಯ ಪದ್ಧತಿಗಳು ದಕ್ಷಿಣದಲ್ಲೇ ಉಳಿದಿರುವುದರಲ್ಲಿ ಆಶ್ಚರ್ಯವಿಲ್ಲ. ನಾಗಜನರಲ್ಲಿ ಲಿಂಗಧಾರಿಗಳಿರುವರೆಂದು ತಿಳಿದುಬಂದಿದೆ. ಈ ಪದ್ಧತಿಗಳು ಮೆಡಿಟರೇನಿಯನ್ ತೀರದ ದೇಶಗಳಿಗೆ ಹೇಗೆ ವ್ಯಾಪಿಸಿತೆಂಬುದು ವಿಚಾರಾರ್ಹವಾದ ಸಂಗತಿಯಾಗಿದೆ.

## ಲಿಂಗಧಾರಣೆಯು ಸಿಂಧೂನದಿಯ ತೀರದವರೆಗೆ ಹರಡಿ ಮೆಡಿಟರೇನಿಯನ್ ತೀರದವರೆಗೆ ಹರಿಯಿತು

ಮೆಡಿಟರೇನಿಯನ್ ಸಮುದ್ರ ತೀರದ ಲಿಂಗಧಾರಿಗಳಿಗೂ ಸಿಂಧೂನದಿಯ ತೀರದ ಲಿಂಗಧಾರಿಗಳಿಗೂ ಹೇಗೆ ಸಂಬಂಧ? ಈಗ ಕರ್ನಾಟಕದಲ್ಲಿಯೇ ಬಹುಮಟ್ಟಿಗೆ ಲಿಂಗಧಾರಿ

ಗಳಿರುವಲ್ಲಿ ಆಗ ಸಿಂಧೂನದಿಯ ತೀರದಲ್ಲಿಯೂ ಲಿಂಗಧಾರಿಗಳಿದ್ದುದು ಹೇಗಾಯಿತು? ಈ ಪ್ರಶ್ನೆಗಳೇಳುವುವು. ಕೆಲವು ಆಧಾರಗಳನ್ನು ಮೊದಲು ಕೊಟ್ಟು ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳಬಹುದು.

"The importance of the role played by palæolithic man in India has long been recognized and from a typological comparison of palæolithic and neolithic artifacts the inference has been drawn that it was actually in Indian soil that the latter was first evolved from the former....

One thing that stands out clear and unmistakable both at Mohenjo Daro and Harappa is that the civilization hitherto revealed at these two places is not an incipient civilization, but one already age-old and stereotyped on Indian soil with many millennia of human endeavour behind it. Thus India must henceforth be recognized along with Persia, Mesopotamia and Egypt as one of the most important areas where the civilizing processes of society were initiated and developed."—Marshall's *Mohenjo Daro*, pages vii + viii.

"In the Dharwar and Bijapur Districts—the Southern Mahratta country—all sorts of implements of the old stoneage have been picked up.... This proves that from the earliest times, man flourished in the edge of the Deccan Plateau .... The fact that the primitive representatives of the four existing types of anthropoid apes—the gorilla and chimpanjee, the gibbon and the orang-outang—have been discovered in Southern India proves that here man ought to have risen and flourished in ancient times."—pages 3–8 in *The Stone Age in India*, by Mr. P. T. Srinivasa Iyengar.

"We shall not be far wrong if we infer that South India gave a refuge to the survivors of the deluge, that the culture developed in Lemuria was carried to South India after its submergence was probably the cradle of the post-deluvion human race. As the centre of gravity of the Dravidian people as determined by density of population lies somewhere about Mysore, south of India, must be considered as the house of these people whence they might have spread to the North."—*Indian Antiquary*, 1911, p. 118.

"It is to this Dravidian ethnic type of India that the ancient Sumerian bears most resemblance, so far as we can judge from his monuments. He was very much like a Southern Hindu of the Deccan (who still speaks Dravidian languages). And it is by no means improbable that the Sumerians were an Indian type which passed certainly by land, perhaps also by sea, through Persia to the valley of two rivers."—Hall—*Cultural Heritage of India*, Vol. III, page 677.

"Southern India was probably the cradle of human race. Investigations in relation to race show it to be possible that Southern India was once the

passage ground by which the ancient progenitors of Northern and Mediterranean races proceeded to the parts of the globe which they inhabit."— Sir John Evan's Presidential Address to the British Association—*Cultural Heritage of India*, Vol. III, page 677.

"Western Alpines are said to be strongly represented among the Kanarese-speaking people of the Western Deccan and Mysore but if racial characteristics can be taken into account in this problem of language, it is clearly the long-headed mediterraneans who have the strongest claim to a connection by blood with the Dravidians."—Marshall, *Mohenjo Daro and the Indus Civilization*, page 42.

Much of the gold of Mohenjo Daro and Harappa is alloyed with a substantial percentage of silver and this alloy....is found in Kolar Gold Fields of Mysore and at Anantapur in Madras.... The nearest spot from which the beautiful green amazon stone....could be got was Dodbetta in Nilgiris far away in South India and it is probable that amethyst was procured from Deccan Trap."—Sir John Marshall's *Mohenjo Daro and the Indus Civilization*, pages 29 and 32.

## ಕರ್ನಾಟಕವು ಆದಿಮಾನವನ ತೊಟ್ಟಿಲು

ಈ ಆಧಾರಗಳಿಂದ ಹೊರಹೊಮ್ಮುವ ಮಥಿತ್ರಾರ್ಥವಿದು: ಬಹುಬಹು ಹಿಂದೆ ಆಫ್ರಿಕಾ, ಏಷಿಯಾ, ಆಸ್ಟ್ರೇಲಿಯಾ ಖಂಡಗಳನ್ನು ಸೇರಿಸುತ್ತಿದ್ದ ಲೈಮುರಿಯ ಎಂಬುದು ಒಂದು ದೊಡ್ಡ ಭೂಭಾಗವಿದ್ದಿತು. ಅನಂತರ ಕೆಲವು ಭಾಗ ಭೂಮಿ ಕುಸಿದು ಸಮುದ್ರವಾಗಿ ಈಗಿನಂತೆ ಮೂರು ಖಂಡಗಳು ಬೇರೆಬೇರೆಯಾದವು. ಆ ಪ್ರಳಯದಲ್ಲಿ ಕಳೆದುಳಿದ ಜನರು ಇಂಡಿಯಾ ದೇಶದ ದಕ್ಷಿಣದಲ್ಲಿ ಉಳಿದರು. ಆ ಕಾಲದಿಂದೀಚೆಗೆ ಹುಟ್ಟಿ ಬೆಳೆದುಬಂದ ಜನಾಂಗಕ್ಕೆ ಕರ್ನಾಟಕವೇ ಕೇಂದ್ರವಾಗಿ ಉಳ್ಳ ದಕ್ಷಿಣದೇಶವು ನಾಗರಿಕತೆಗೆ ಮೂಲಸ್ಥಾನವಾಯಿತು. ಪುರಾತನ ಶಿಲಾಯುಗದ ಮತ್ತು ನೂತನ ಶಿಲಾಯುಗದ ಅವಶೇಷಗಳು ಕರ್ನಾಟಕ ವನ್ನೊಳಗೊಂಡ ಈ ಪ್ರದೇಶದಲ್ಲಿಯೇ ಸಿಕ್ಕುವುದರಿಂದಲೂ, ಆದಿಮಾನವನ ಪೂರ್ವಜರೆನಿಸಿದ ಗೊರಿಲಾ ಮೊದಲಾದ ಕಪಿಗಳ ಅವಶೇಷಗಳು ಇಲ್ಲಿ ಸಿಕ್ಕಿರುವುದರಿಂದಲೂ ಈ ದೇಶವನ್ನು ಆದಿಮಾನವನು ಹುಟ ಬೆಳದ ತೊಟ್ಟಿಲೆನ್ನಬಹುದು. ಈ ದ್ರಾವಿಡ ಜನರೇ ಹಿಂದೂ ದೇಶವಲ್ಲೆಲ್ಲ ಹರಡಿದರು. ಸಿಂಧೂನದಿಯ ತೀರದ ನಾಗರಿಕತೆಯು ಐದಾರು ಸಹಸ್ರ ವರ್ಷಗಳ ಹಿಂದಿನದಾದರೂ ಅದು ಆಗಲೇ ಅನೇಕ ಸಹಸ್ರ ವರ್ಷಗಳು ಬಳೆದುಬಂದು ನಿಂತ ನಾಗರಿಕತೆಯಾಗಿದ್ದಿತು.

ಈ ಕರ್ನಾಟಕದ ಜನರಿಗೂ ಮೆಡಿಟರೇನಿಯನ್ ತೀರದ ಜನರಿಗೂ ರಕ್ತಸಂಬಂಧ ವಿದ್ದುದು ಕಂಡುಬರುವುದು. ಈ ಜನರೇ ಇಂಡಿಯದಿಂದ ವಲಸೆಹೋಗಿ ಸುಮೇರಿಯನ್ನ ರಾದರು; ಇವರೇ ಮೆಡಿಟರೇನಿಯನ್ ಸಮುದ್ರ ತೀರದವರೆಗೂ ವ್ಯಾಪಿಸಿದರು. ಸಿಂಧೂ ನದಿಯ ತೀರದ ಜನರು ಉಪಯೋಗಿಸುತ್ತಿದ್ದ ಚಿನ್ನವೂ ರತ ಗಳೂ ಕರ್ನಾಟಕ ದೇಶದವೆಂದು

ನಿರ್ಧರಿಸಿರುವುದರಿಂದ ಈ ಎರಡು ದೇಶಭಾಗಗಳಿಗೆ ಸಂಪರ್ಕವಿದ್ದುದು ತಿಳಿದುಬರುವುದು. ಇಂದಿನ ಕರ್ನಾಟಕದ ಲಿಂಗಾಯತರಂತೆ ಲಿಂಗಗಳನ್ನು ಸಿಂಧೂನದಿಯ ತೀರದ ಜನರು ಧರಿಸುತ್ತಿದ್ದರೆಂಬ ಮಾರ್ಷಲ್ಲರ ತೀರ್ಮಾನದಿಂದಲೂ, ಮೆಡಿಟರೇನಿಯನ್ ತೀರದ ಜನರು ಲಿಂಗವನ್ನು ಧರಿಸುತ್ತಿದ್ದರೆಂಬುದರಿಂದಲೂ ಇವರಿವರ ಸಂಬಂಧವು ಹೆಚ್ಚು ಪರಿಷ್ಕಾರವಾಗಿದೆ.

## ಕರ್ನಾಟಕವೂ ಮೊಹೆಂಜೊದಾರೋವೂ

ಮೇಲೆ ಹೇಳಿದುದಕ್ಕಿಂತಲೂ ಹೆಚ್ಚಿನ ಸಂಬಂಧವು ಫಾದರ್ ಹೆರಾಸರು ೧೯೩೭ ನೆಯ ಜುಲೈ ತಿಂಗಳ ಕರ್ನಾಟಕ ಹಿಸ್ಟಾರಿಕಲ್ ರಿವ್ಯೂನಲ್ಲಿ ಬರೆದಿರುವ ಕರ್ನಾಟಕ ಮತ್ತು ಮೊಹೆಂಜೊದಾರೊ ಎಂಬ ಲೇಖನದಿಂದ ತಿಳಿದುಬರುವುದು.

The fact that the ancient people of Mohenjo Daro were proto-Dravidians ....is already a link between all the Dravidian countries including therefore Karnataka and Mohenjo Daro. But the connection between Karnataka and Mohenjo Daro is still more explicit than this general inter relation. The people of Karnataka are apparently referred to in one of the seal inscriptions of Mohenjo Daro as one of the ancient tribes of the land. The complete sign will read Kannanir.... The second inscription....reads.... '*Kei Kudaga Nal*' which means many strong Kudagas.... The Kudagas are people of Coorg whose language is still Kudaga.... There is still the form in ru which is purely Kannada. This plural is obtained by adding the sign U-ru."

ಕರ್ನಾಟಕ ಜನರ ವಿಷಯವಾಗಿಯೂ ಕೊಡಗರ ವಿಷಯವಾಗಿಯೂ ಮೊಹೆಂಜೊದಾರೊ ಲೇಖನಗಳಲ್ಲಿ ಬರೆದಿರುವುದನ್ನು ಫಾದರ್ ಹೆರಾಸರು ಹೇಳಿರುವರಲ್ಲದೆ ಬಹುವಚನಕ್ಕೆ ಕನ್ನಡದಲ್ಲಿ ಸೇರಿಸುವಂತೆ "ರು" ಎಂಬುದನ್ನು ಅಲ್ಲಿನ ಜನರು ಸೇರಿಸುತ್ತಿದ್ದರೆಂದು ಹೇಳಿದ್ದಾರೆ. ಬೇರೆ ಲೇಖನದಲ್ಲಿ ಮೊಹೆಂಜೊದಾರೊ ಜನರು ಆಡುತ್ತಿದ್ದ ಭಾಷೆ ಹಳೆಗನ್ನಡವನ್ನು ಹೋಲುವುದೆಂದೂ, ಮಳೆಯು ಬರದಿರುವಂತಿರುವ ಮೋಡಕ್ಕೆ ಮುಗಿಲೆಂದೂ, ಮಳೆತರುವ ಮೋಡಕ್ಕೆ ಕಾರ್ಮುಗಿಲೆಂದೂ, ಮೂರು ಕಣ್ಣಿನವನನ್ನು 'ಮೂನ್‌ಕಣ್' ಎಂದೂ, ಮೂರು ಮೀನ್‌ಕಣ್ಣಿನವನನ್ನು 'ಮೂನ್‌ಮೀನ್‌ಕಣ್' ಎಂದೂ ಕರೆಯುತ್ತಿದ್ದರೆಂದು ಹೇಳಿದ್ದಾರೆ. ಅಲ್ಲದೆ ಕನ್ನಡವನ್ನಾಡುವ ಕಾಡುಜನ ಗಾಂಡರು ಹೆಚ್ಚು ಚಳಿಗೆ 'ಮೂರು ಕಂಬಳಿ ಚಳಿ' ಎನ್ನುವಂತೆ ಆಗಿನ ಜನರು "ಮನುದಯೂಡು" ಎಂದರೆ ಮೂರು ಹೊದಿಕೆ ಚಳಿಯೆಂದು ಹೇಳುತ್ತಿದ್ದರೆಂದು ಹೇಳಿದ್ದಾರೆ. ಹಿಂದೆ ಬಂದಿರುವ ಕೆಲವು ಪದಗಳು ಕನ್ನಡಕ್ಕೆ ಎಷ್ಟು ಸಮೀಪವಾಗಿವೆಯೆಂಬುದನ್ನು ನೋಡಬಹುದು. ಒಬ್ಬನೆ ಎಂಬ ಅರ್ಥದಲ್ಲಿ "ಒರ್ವನ್" ಎಂದೂ, ಇರುವವನು ಎಂಬ ಅರ್ಥದಲ್ಲಿ "ಇರುವನ್" ಎಂದೂ, ಬಿಡುಕಣ್ ಎಂಬ ಅರ್ಥದಲ್ಲಿ "ವಿಡುಕಣ್" ಎಂದೂ, ಎಂಟುಮೈ ಎಂಬ ಅರ್ಥದಲ್ಲಿ "ಎಣ್‌ಮೈ" ಎಂದೂ ಸಿಂಧೂನದಿಯ ತೀರದ ಜನರು ಹೇಳುತ್ತಿದ್ದುದು ಕಂಡುಬಂದಿದೆ. ನಾಲ್ಕು ಮರದಲ್ಲಿ ತಾಂಡವನು ಇರುವನು ಎಂಬ ವಾಕ್ಯವು ಅವರ ಭಾಷೆಯಲ್ಲಿ "ತಾಂಡವನ್ ಇರ್ ನಾಲ್‌ಮರಂ" ಎಂದು ಆಗಿದ್ದಿತು. ಫಾದರ್ ಹೆರಾಸರು ಹೇಳುವಂತೆ ಸಿಂಧೂನದಿಯ ತೀರದ ಜನರ ಭಾಷೆಯು ಹಳೆಯ ಕನ್ನಡಕ್ಕೂ ಹಳೆಯ ತಮಿಳಿಗೂ ಮೂಲವಾದ ಆದಿದ್ರಾವಿಡ ಭಾಷೆಯಾಗಿದ್ದಿತು.

ಜಯಕರ್ನಾಟಕದ ಹದಿಮೂರನೆಯ ಸಂಪುಟದಲ್ಲಿ ಎಂ. ಎ. ದೊರೆಸ್ವಾಮಿ ಅಯ್ಯಂಗಾರ್ಯರ "ಕನ್ನಡದ ಮೂಲಸ್ಥಾನ" ಎಂಬ ಉತ್ತಮಲೇಖನದ ಭಾಗವಿದು. "ಈಚೆಗೆ ಹರಪ್ಪ, ಮೊಹೆಂಜೊದಾರೊ, ನಳ ಎಂಬ ಸ್ಥಳಗಳಲ್ಲಿ ನಡೆದಿರುವ ಪ್ರಾಕ್ತನ ಶೋಧನೆಯಿಂದ ಸಿಂಧುತೀರವರ್ತಿಯಾದ ದೇಶವು ಕ್ರಿ.ಪೂ. ಮೂರು ಸಾವಿರ ವರ್ಷಗಳ ಹಿಂದಕ್ಕೆ ಅತಿ ಪ್ರೌಢವಾದ ದ್ರಾವಿಡ ನಾಗರಿಕತೆಗೆ ಆಶ್ರಯಸ್ಥಾನವಾಗಿದ್ದಿತೆಂದೂ, ಈ ದ್ರಾವಿಡ ಕುಲವೂ ದ್ರಾವಿಡ ನಾಗರಿಕತೆಯೂ ಅಲ್ಲಿಂದ ಪಶ್ಚಿಮ ಮುಖವಾಗಿ ಬಲೂಚಿಸ್ಥಾನ, ದಕ್ಷಿಣ ಇರಾಣ, ಮೆಸೊಪೊಟೋಮಿಯ ದೇಶಗಳಲ್ಲೆಲ್ಲ ವ್ಯಾಪಿಸಿತ್ತೆಂದೂ ಸ್ಪಷ್ಟಪಟ್ಟಿದೆ. ಸುಮೇರು, ಇಲಾಂ, ಬಲೂಚಿಸ್ಥಾನದ ಪ್ರಾಚೀನ ಜನರು ದ್ರಾವಿಡರಾಗಿದ್ದರೆಂದು ಪಂಡಿತರಲ್ಲಿ ಬಹುಮತವಿದೆ. ಗೋದಾವರಿಯ ದಕ್ಷಿಣಕ್ಕೆ ಕುಲದಲ್ಲೂ, ಭಾಷೆಯಲ್ಲೂ, ಸಂಸ್ಕೃತಿಯಲ್ಲೂ ಅಚ್ಚ ದ್ರಾವಿಡರಾಗಿರುವ ಜನರು ಇದ್ದರು. ವಾಯುವ್ಯದಲ್ಲಿ ಬಲೂಚಿಸ್ಥಾನದ ಗಡಿಯಲ್ಲಿ ಅಚ್ಚ ದ್ರಾವಿಡ ಭಾಷೆಯಾದ ಬ್ರಾಹೂಯಿಯು ಪ್ರಚಾರದಲ್ಲಿದೆ. ಈ ಎರಡು ಪ್ರದೇಶಗಳಿಗೂ ಮಧ್ಯದಲ್ಲಿರುವ ಗುಜರಾತಿನಲ್ಲೂ ಮಹಾರಾಷ್ಟ್ರದಲ್ಲೂ ದ್ರಾವಿಡ ಸಂಸ್ಕೃತಿಯೂ, ದ್ರಾವಿಡಾಚಾರ ಸಂಪ್ರದಾಯಗಳೂ, ದ್ರಾವಿಡ ಭಾಷಾ ಸಂಬಂಧವೂ, ದ್ರಾವಿಡ ಕುಲಗಳೂ ವಿಸ್ತಾರವಾಗಿ ಗೋಚರಿಸುತ್ತಿವೆ. ದ್ರಾವಿಡರು ಒಂದು ಕಾಲದಲ್ಲಿ ಭರತಖಂಡವನ್ನೆಲ್ಲ ಆವರಿಸಿದ್ದರೂ, ಈಗ ೩೦–೪೦ ಶತಮಾನಗಳಿಂದಲೂ ದಕ್ಷಿಣದೇಶವು ಅವರ ವಸತಿಯಾಗಿದೆ. ದ್ರಾವಿಡರು ಪಂಜಾಬಿನಿಂದ ಕ್ರಮವಾಗಿ ದಕ್ಷಿಣಮುಖವಾಗಿ ನೂಕಲ್ಪಡುತ್ತಾ ಬಂದುದಕ್ಕೂ, ಆರ್ಯರೂ ಅವರ ನಾಗರಿಕತೆಯೂ ಅದೇ ಮಾರ್ಗವಾಗಿ ದ್ರಾವಿಡರ ಮೇಲೆ ಉರವಣಿಸುತ್ತಾ ಬಂದುದಕ್ಕೂ ವೇದಕಾಲದಿಂದಲೂ ಆಧಾರವು ದೊರೆಯುತ್ತದೆ." ಇದರಿಂದ ಪ್ರಕೃತ ವಿಷಯದ ಮೇಲೆ ಬೀಳುವ ಬೆಳಕೇನೆಂದರೆ, ಸಿಂಧೂನದಿಯ ತೀರದಲ್ಲಿಯೂ, ಮೆಡಿಟರೇನಿಯನ್ ತೀರದಲ್ಲಿಯೂ ದ್ರಾವಿಡರಲ್ಲಿ ಪ್ರಚಾರದಲ್ಲಿದ್ದ ಲಿಂಗಧಾರಣ ಪದ್ಧತಿಯು, ಅಲ್ಲಿಂದ ದ್ರಾವಿಡರು ಹೊರ ದೂಡಲ್ಪಟ್ಟ ಮೇಲೆ ಅಲ್ಲಿ ಇಲ್ಲದೆ ಹೋಗಿ, ದ್ರಾವಿಡ ದೇಶವೆನಿಸಿದ ದಕ್ಷಿಣ ದೇಶದಲ್ಲಿ ಮಾತ್ರ ಅವರು ನೆಲಸಿರುವ ಕಾರಣದಿಂದ, ಈಗ ದಕ್ಷಿಣ ದೇಶದಲ್ಲಿ ಮಾತ್ರವೇ ಇರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

## ಇಂದಿನ ವೀರಶೈವರ ಮನೆ ಗೋಡೆಯ ಮೇಲಿನ ರೇಖಾಚಿತ್ರ ಅಂದು ಮೊಹೆಂಜೊದಾರೋ ಮುದ್ರಿಕೆಗಳಲ್ಲಿ

ಇಂದಿನ ವೀರಶೈವರಿಗೂ ಅಂದಿನ ಸಿಂಧೂನದಿಯ ತೀರದ ಜನರಿಗೂ ಇದ್ದ ಸಂಬಂಧ ವನ್ನು ಸೂಚಿಸುವ ಒಂದು ಸಂಗತಿಯನ್ನು ತಿಳಿಸಿ, ಈ ವಿಷಯವನ್ನು ಮುಗಿಸಬಹುದು. ಫಾದರ್ ಹೆರಾಸರ 'ಕರ್ನಾಟಕ ಮತ್ತು ಮೊಹೆಂಜೊದಾರೋ' ಎಂಬ ಲೇಖನದ ಅಂತ್ಯ ಭಾಗವಿದು: Before ending we must refer to another link still existing from those ancient days between Mohenjo Daro and Karnataka. The modern Lingayets of the Kannada country depict a sign on the wall of their houses, the meaning of which does not seem to be known to them.... This sign is often found in the inscriptions of Mohenjo Daro and Harappa. It reads 'Kūdu' means union.

ಮೊಹೆಂಜೊದಾರೊ ಮುದ್ರಿಕೆಗಳಲ್ಲಿ ದೊರೆಯುವ ಒಂದು ರೇಖಾಚಿತ್ರವನ್ನು ಇಂದೂ ವೀರಶೈವರು ಮನೆಗಳ ಗೋಡೆಗಳ ಮೇಲೆ ಬರೆಯುತ್ತಾರೆಂದೂ, ಇದು ಒಂದಕ್ಕೊಂದಕ್ಕೆ ಇರುವ ಸಂಬಂಧವನ್ನು ಸೂಚಿಸುವುದೆಂದೂ ಮೇಲಿನ ಇಂಗ್ಲೀಷ್ ಲೇಖನಭಾಗದ ಅಭಿಪ್ರಾಯ. ಎರಡು ತ್ರಿಕೋಣಗಳ ತುದಿಗಳು ಒಂದನ್ನೊಂದು ಸಂಧಿಸಿದಂತೆ ಬರೆದ ರೇಖಾಚಿತ್ರವಿದು. ಅದು ಆಕಾರದಲ್ಲಿ ಬುಡುಬುಡಿಕೆಯಂತಾಗುತ್ತದೆ. ಇದು ಶಿವಲಿಂಗಮುದ್ರೆ. ಎರಡು ತ್ರಿಕೋಣಗಳಿಂದ ಕೂಡಿದ ಲಿಂಗಪೀಠವು ಶಕ್ತಿಪ್ರಸಾರದಿಂದ ತ್ರಿಗುಣಾತ್ಮಕ ಜಗತ್ತಾಗುವುದನ್ನು ಸೂಚಿಸುತ್ತದೆ. ತ್ರಿಕೋಣದ ಕಲ್ಪನೆಯಲ್ಲಿ (The Divine Triad) ಜೀವ-ಶಿವ-ಶಕ್ತಿಯರು ಒಂದೆಯೆಂಬ ಭಾವನೆಯು ಸೂಚಿತವಾಗಿದೆ. ಇನ್ನು ಎರಡು ತ್ರಿಕೋಣಗಳು ಏಕೆ ಎಂದರೆ ವೀರಶೈವ ಸಿದ್ಧಾಂತದಂತೆ ಸೃಷ್ಟಿಯಲ್ಲಿ ಎರಡು ವಿಭಾಗವು ಕಂಡುಬರುವುದು. ನಿಷ್ಕಲ ಪರಶಿವ ಬ್ರಹ್ಮವು ತತ್ವಾತೀತವಾಗಿರುವುದರಿಂದ ಈ ಎರಡು ತ್ರಿಕೋಣಗಳಿಂದ ಸೂಚಿತವಾಗುವ ಸೃಷ್ಟಿಯ ಎರಡು ವಿಭಾಗಗಳಿಗೂ ಮೀರಿದುದಾಗಿ ಶೂನ್ಯವಾಗಿಯೇ ಅರಿಯಲ್ಪಡುವುದು. ನಿವೃತ್ತಿ ಮೊದಲಾದ ಐದು ಕಲೆಗಳೂ, ಕರ್ಮಸಾದಾಖ್ಯಾದಿ ಐದು ಸಾದಾಖ್ಯಗಳೂ, ಮಹಾಲಿಂಗವೂ ಸೇರಿ ಹನ್ನೊಂದು ತತ್ವಗಳನ್ನು ವೀರಶೈವರು ಲಿಂಗತತ್ವಗಳೆನ್ನುವರು. ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯಪಂಚಕ, ವಿಷಯಪಂಚಕ, ವಾಯುಪಂಚಕ, ಅಂತಃಕರಣಪಂಚಕಗಳು ಸೇರಿ ಇಪ್ಪತ್ತೈದು ತತ್ವಗಳಾಗುವುವಷ್ಟೆ. ಇವು ವೀರಶೈವ ಪರಿಭಾಷೆಯಲ್ಲಿ ಅಂಗತತ್ವವೆನಿಸುವುವು. ಲಿಂಗತತ್ವಗಳನ್ನು ಸೂಚಿಸುವುದೊಂದು ತ್ರಿಕೋಣ; ಅಂಗತತ್ವಗಳ ಪ್ರಪಂಚವನ್ನು ತೋರಿಸುವುದು ಇನ್ನೊಂದು ತ್ರಿಕೋಣ. ಸಾತ್ವಿಕ ಗುಣವು ಕಡಮೆಯಾಗುತ್ತ ಬಂದಂತೆಲ್ಲ ಮೊದಲನೆಯ ತ್ರಿಕೋಣವು ವಿಸ್ತಾರದಲ್ಲಿ ಕಡಮೆಯಾಗುತ್ತಾ ಬಂದು ತುದಿಮುಟ್ಟುವುದು. ಮತ್ತೊಂದು ತ್ರಿಕೋಣದ ತುದಿಯಿಂದ ತಮೋಗುಣವು ವೃದ್ಧಿಯಾಗುತ್ತ ಬಂದಂತೆಲ್ಲ ಅದು ವಿಸ್ತಾರವಾಗುತ್ತ ಬಂದು ಅಪರಜಗತ್ತಿಗೆ ಇಳಿದಂತಾಗುವುದು.

## ಸಾರಾಂಶ

ಈ ಅಧ್ಯಾಯದ ಸಾರಾಂಶವನ್ನು ಒಂದೆರಡು ಮಾತುಗಳಲ್ಲಿ ಮುಗಿಸಬಹುದು. ಶೈವಮತವು ಆದಿಮಾನವನ ಕಾಲದಲ್ಲಿಯೇ ಹುಟ್ಟಿ ವಿಕಾಸವಾಗುತ್ತಾ ಹೋಯಿತು. ಆಗಲೇ ಲಿಂಗಧಾರಿ ಧರ್ಮದ ಚಿಗುರು ಕಾಣಿಸಿತು. ಸಿಂಧೂನದಿಯ ತೀರದ ನಾಗರಿಕತೆಯ ಕಾಲಕ್ಕಾಗಲೇ ಅದು ಬೆಳೆದುನಿಂದು ಅದರ ಶಾಖೆಗಳು ಮೆಡಿಟರೇನಿಯನ್ ಸಮುದ್ರ ತೀರದವರೆಗೂ ಹಬ್ಬಿದ್ದವು. ಇದರ ಮುಂದಿನ ಬೆಳವಣಿಗೆಗೆ ಆರ್ಯರ ಆಕ್ರಮಣದಿಂದ ಆತಂಕ ಬಂದು, ಅದರ ಮೂಲೋತ್ಪಾಟನ ಮಾಡುವ ಪ್ರಯತ್ನ ನಡೆಯಿತು. ಆದರೆ ಈ ವೃಕ್ಷದ ಬೇರುಗಳು ಭಾರತ ಭೂಮಿಯಲ್ಲಿ ಆಳವಾಗಿ ನೆಟ್ಟಿದ್ದವು. ವಿಶಾಲವಾಗಿ ಹರಡಿದ್ದ ಪಕ್ಕದ ರೆಂಬೆಗಳನ್ನು ಕಡಿದರೂ, ಆದರ ತಾಯಿಬೇರೂ ಮಧ್ಯದ ಕಾಂಡವೂ ದ್ರಾವಿಡ ದೇಶದಲ್ಲಿದ್ದವು. ಆ ರೆಂಬೆಯು ಚಿಗುರಿ ಆಗಮಿಕ ವೃಕ್ಷವಾಗಿ ಬೆಳೆದು ಆರ್ಯಭೂಮಿಯನ್ನೇ ಆಕ್ರಮಿಸಿ ವೈದಿಕ ಲತೆಗೆ ಆಶ್ರಯವನ್ನಿತ್ತಿತು. ಇಂದೂ ವೈದಿಕ ಲತೆಯ ಹೂಗಳು, ಆಗಮಿಕ ವೃಕ್ಷದ ಆಧಾರದಿಂದಲೇ ನಿಂದು ಬೆಳಗುತ್ತಿವೆ. ಈ ವೃಕ್ಷದ ಮುಖ್ಯ ಶಾಖೆಯೇ ವೀರಶೈವವು.

### ತೃತೀಯಾಧ್ಯಾಯ

# ವೇದಾಗಮೋಪನಿಷತ್ ಪುರಾಣಗಳ ಕಾಲದಲ್ಲಿ "ವೀರಶೈವದ ಪ್ರಗತಿ"

## ಉತ್ತಮ ನಾಗರಿಕತೆಯ ಪ್ರಶಾಂತ ವಾತಾವರಣ

ಕ್ರಿಸ್ತಪೂರ್ವ ಮೂರು–ನಾಲ್ಕನೆಯ ಶತಮಾನದಲ್ಲಿ, ಎಂದರೆ ಸುಮಾರು ಐದಾರು ಸಹಸ್ರ ವರ್ಷಗಳ ಹಿಂದೆಯೇ, ಅನೇಕ ದೇಶಗಳಲ್ಲಿ ಜನರು ವಾನರ ಮಟ್ಟದಿಂದ ಮಾನವ ಮಟ್ಟಕ್ಕೆ ಏರುತ್ತಿದ್ದಾಗಲೇ, ಭಾರತೀಯರ ನಾಗರಿಕತೆಯು ಬಹಳ ಉತ್ತಮ ಮಟ್ಟದಲ್ಲಿದ್ದಿತೆಂದು, ಸಿಂಧೂ ನದಿಯ ತೀರದಲ್ಲಿ ದೊರೆತ ಅವಶೇಷಗಳಿಂದ ತಿಳಿದುಬಂದಿದೆಯೆಂಬುದನ್ನು 'ವೀರಶೈವದ ಉಗಮ' ವಿಷಯವನ್ನು ಬರೆಯುವಾಗ ಶ್ರುತಪಡಿಸಲಾಯಿತು. ಆಗಿನ ಜನರು ವಾಸಿಸುತ್ತಿದ್ದ ಪಟ್ಟಣಗಳು ನುರಿತ ಕಲಾವಿದರ ನೇತೃತ್ವದಲ್ಲಿ ನಿರ್ಮಿತವಾದುವೋ ಎಂಬಂತೆ ಆ ಅವಶೇಷ ಗಳಿಂದ ತೋರಿಬರುವುದು. ಮೊಹೆಂಜೊದಾರೊ ನಗರದ ಅವಶೇಷಗಳನ್ನು ಸಂಶೋಧಿಸಿದ ಮಾರ್ಷೆಲ್ಲರು ಅವುಗಳ ಮಧ್ಯೆ ನಿಂತಾಗ ಇಂಗ್ಲೆಂಡಿನ ಲ್ಯಾಂಕ್‌ಷೈರ್ ನಗರದ ಅವಶೇಷಗಳನ್ನು ನೋಡುತ್ತಿರುವಂತೆ ಭಾಸವಾಯಿತಂತೆ. ಆಗಿನ ಕಾಲದಲ್ಲಿಯೇ ಸುಟ್ಟ ಇಟ್ಟಿಗೆಗಳನ್ನು ಕಟ್ಟಡಗಳ ನಿರ್ಮಾಣದಲ್ಲಿ ಉಪಯೋಗಿಸುತ್ತಿರುವುದು ಕಂಡುಬಂದಿತು. ಇರ್ಕಡೆಗಳಲ್ಲಿ ಸಾಲಾದ ಮನೆಗಳ ಮಧ್ಯೆ ನೇರವಾದ ಚಂದ್ರ ಸೂರ್ಯ ವೀಧಿಗಳು ಮುಂದಿನ ಕಾಲದ ಕಾವ್ಯಗಳಲ್ಲಿ ವರ್ಣಿಸಿರುವುದನ್ನು ನೆನಪಿಗೆ ತರುವಂತಿರುವುವು. ವಿಶಾಲವೂ ಸುಸಜ್ಜಿತವೂ ಆದ ಮನಗಳಲ್ಲಿ ಬಾವಿಗಳೂ, ಪ್ರತ್ಯೇಕವಾದ ಸ್ನಾನಗೃಹಗಳೂ, ನೀರನ್ನು ಹೊರಗೆ ಸಾಗಿಸುವ ಚರಂಡಿಗಳೂ ಇದ್ದುದು ಕಂಡುಬರುವುದು. ಆ ಕಾಲದಲ್ಲಿಯೇ ಒಳಚರಂಡಿಗಳನ್ನೇರ್ಪಡಿಸಿದ್ದುದು ಆಶ್ಚರ್ಯ ವನ್ನುಂಟುಮಾಡುವುದು. ಹಡಗುಗಳನ್ನು ಕಟ್ಟಿ ಪರದೇಶಗಳಲ್ಲಿ ವ್ಯಾಪಾರ ಮಾಡುತ್ತಿದ್ದ ವೀರಮತ್ಸ್ಯಫಣಿ ಕುಲದ ಬಣಜಿಗರು ಈ ದೇಶದ ನಾಗರಿಕತೆಯನ್ನು ಹೊರದೇಶಗಳಲ್ಲಿ ಹರಡು ತ್ತಿದ್ದರು. ಹತ್ತಿಯ ಬಟ್ಟೆಯು ಆ ಕಾಲದಲ್ಲೇ ಈ ದೇಶದ ಒಂದು ವೈಶಿಷ್ಟ್ಯವಾಗಿದ್ದಿತು. ದೈವಿಕ ಕಲ್ಪನೆಯಲ್ಲಿಯೂ, ಲಲಿತಕಲೆಗಳಲ್ಲಿಯೂ ಈ ದೇಶದ ಜನರು ಮುಂದುವರೆದಿದ್ದರು. ಶಿವಶಕ್ತಿಯರನ್ನು ಪೂಜಿಸುತ್ತಿದ್ದರಲ್ಲದೆ ಜೀವಶಿವಶಕ್ತಿಯರು ಒಂದೆಯೆಂಬ ಅದ್ವೈತ ಭಾವನೆಯ ಬೀಜರೂಪವನ್ನು ಅವರಲ್ಲಿ ಕಾಣಬಹುದಾಗಿದ್ದಿತು. ಲಿಂಗಪೂಜೆ, ಲಿಂಗಧಾರಣೆ, ಶಿವಯೋಗ ಇವುಗಳ ಕಲ್ಪನೆಯು ಅವರಲ್ಲಿದ್ದುದು ಕಂಡುಬರುವುದು. ಇವೆಲ್ಲ ದೃಷ್ಟಿಯಿಂದ ಆ ಕಾಲದಲ್ಲಿಯೇ ಭಾರತದಲ್ಲಿ ನೆಲಸಿದ್ದ ಭಾರತೀಯರು ಉತ್ತಮ ನಾಗರಿಕತೆಯ ಪ್ರಶಾಂತ ವಾತಾವರಣದಲ್ಲಿ ಜೀವಿಸುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಮಾನ್ಯ ಕೆ. ಎಂ. ಮುನ್ಷಿಯವರ ವಿದ್ವತ್‌ಪೂರ್ಣವಾದ ಲೇಖನದ ಸ್ವಲ್ಪ ಭಾಗವಿದು ಸುಗ್ರಾಹ್ಯವಾಗಿದೆ:

"At the dawn of history, the foundation of the world's civilization was laid on the banks of the Sindhu and the Narmada. When other peoples were just emerging from the Stone Age, we had the city state and trade organisation, the potter's wheel and the carver's knife, artistic metallurgy and

requisite seal-cutting, baths and public tablets. We had the worship of the Mother and of Pasupati, Lord Siva. With that little icon of Pasupati, burried for six thousand years in the sands of the Indus Valley, begins the unbroken thread of our life, which at present is seen in its luxuriance at Amarnath, in Kashmir and Rameswara, at Cape Comorin, in the million temples where today Nandi kneels to his master, the God of Gods Mahadeva. We passed on the torch of civilization to Sumer; the Sumer passed it on to Babylonia and Syria; from thence it was passed on to the West"—*Quarterly Journal of the Mythic Society*, Culture and Heritage Number, 1956, page 48.

## ಆರ್ಯರ ಆಕ್ರಮಣದ ಆಘಾತ

ಉತ್ತಮ ನಾಗರಿಕತೆಯ ಈ ಪ್ರಶಾಂತ ವಾತಾವರಣವನ್ನು ಕಲಕಿ ಅಲ್ಲೋಲಕಲ್ಲೋಲ ಮಾಡಿದ ಚಂಡಮಾರುತವು, ತ್ವರಿತಗತಿಯ ಅಶ್ವದಳಗಳಿಂದ ಕೂಡಿದ ಆರ್ಯರ ಆಕ್ರಮಣವು. ಉತ್ತಮವಾದ ಕೋಟೆಗಳಿಂದ ರಕ್ಷಿತರಾದ ವೀರಮತ್ಸ್ಯಫಣಿ ಕುಲದ ಅರಸರು ಈ ಆಕ್ರಮಣ ವನ್ನು ಎದುರಿಸಿ ನಿಂತು, ಶೌರ್ಯದಿಂದ ಕಾದಾಡಿದರು. ಆದರೆ ಆರ್ಯರ ಅಶ್ವಸೇನೆಯ ರಭಸವಾದ ಕಾಳಗದ ಮುಂದೆ ಇವರ ಕಾಲಾಳುಗಳ ಶಕ್ತಿಸಾಮರ್ಥ್ಯದ ಕಾದಾಟವು ಫಲಕಾರಿ ಯಾಗಲಿಲ್ಲ. ಸೈಂಧವ ನಾಗರಿಕತೆಯ ಜನರು ಸೋಲುತ್ತ ಬಂದರು. ಆರ್ಯರು ಅವರ ಸೀಮೆಯನ್ನು ಆಕ್ರಮಿಸಿದಂತೆಲ್ಲ ಅವರು ದಕ್ಷಿಣದ ಕಡೆಗೆ ಕ್ರಮಕ್ರಮವಾಗಿ ತಳ್ಳಲ್ಪಟ್ಟರು. ಆದರೆ ಬೆಟ್ಟಗುಡ್ಡಕಾಡುಗಳ ಪ್ರದೇಶವಾಗಿದ್ದ ದಕ್ಷಿಣ ಭಾರತದಲ್ಲಿ ಇವರು ಕಾಲೂರಿ ನಿಂತು ಆರ್ಯರ ಆಕ್ರಮಣವನ್ನು ತಡೆದರು. ದ್ರಾವಿಡ ದೇಶವೆಂದು ಕರೆಯಲ್ಪಡುತ್ತಿರುವ ದಕ್ಷಿಣ ಭಾರತವೇ ಇವರ ನೆಲೆವೀಡಾಯಿತು. ಹಿಂದೆ ಫಣಿ, ಮತ್ಸ್ಯ ಮೊದಲಾದ ಯಾವ ಹೆಸರಿನಿಂದ ಇವರು ಕರೆಯಲ್ಪಡುತ್ತಿದ್ದರೂ, ಇಂದು ಇವರನ್ನು ದ್ರಾವಿಡರೆಂದೇ ಕರೆಯುವುದು ರೂಢಿಯಾಗಿ ಹೋಗಿದೆ. ಇವರ ಮುಂದುವರಿದ ದೈವಿಕಭಾವನೆಯನ್ನೂ ಸದಾಚಾರವನ್ನೂ ಮೆಚ್ಚಿ, ಆರ್ಯರಲ್ಲಿ ಬಳೆದುಬಂದ ಹಿಂಸಾತ್ಮಕವೂ ಅನೀತಿಯುತವೂ ಆದ ಅಶ್ವಮೇಧಾದಿಯಾಗಗಳಿಗೆ ಬೇಸತ್ತು ದ್ರಾವಿಡರೊಡನೆ ಸೇರಿಹೋದ ಅಸುರರೂ ವ್ರಾತ್ಯರೂ ದ್ರಾವಿಡರಲ್ಲಿ ಬೆರತುಹೋದರು. ದ್ರಾವಿಡರು ಯುದ್ಧದಲ್ಲಿ ಸೋತುಹೋದರೂ ಅವರ ಉತ್ತಮ ತರಗತಿಯ ಸಂಸ್ಕೃತಿಯು ಉಳಿದುಬಂದಿತು. ಇವರ ಆಧಿಭೌತಿಕ, ಆಧಿದೈವಿಕ ಮತ್ತು ಆಧ್ಯಾತ್ಮಿಕ ಭಾವನೆಗಳು ಇಂದೂ ಬಳೆದು ದಕ್ಷಿಣ ದೇಶದಲ್ಲಿ ಬೇರೂರಿ ನಿಂತಿವೆ. 'ವೀರಶೈವದ ಉಗಮ' ವಿಷಯ ವನ್ನು ಬರೆಯುವಾಗ ಲಿಂಗಧಾರಣೆಯು ಈ ಜನರಲ್ಲಿ ಪ್ರಚಲಿತವಾಗಿದ್ದುದು ಮೆಡಿಟರೇನಿಯನ್ ತೀರದವರೆಗೂ ವ್ಯಾಪಿಸಿದ್ದಿತೆಂದೂ, ಅದು ಮಹಾಭಾರತ, ರಾಮಾಯಣ ಕಾಲಗಳವರೆಗೂ ಉಳಿದುಬಂದು, ಮುಂದೆ ಪಾಶುಪತಶೈವಜಂಗಮರಲ್ಲಿ ಬಳೆದುನಿಂದುದೆಂದೂ ತೋರಿಸ ಲಾಯಿತಷ್ಟೆ. ಈ ಧರ್ಮದ ಅನೇಕ ಮಾಹೇಶ್ವರ ಯತಿಮುನಿಗಳು ರಾಜಾಧಿರಾಜ ಪೂಜಿತರಾಗಿ "ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪತಪಸಮಾಧಿಶೀಲಗುಣ ಸಂಪನ್ನ"ರಾಗಿ ದಕ್ಷಿಣ ದೇಶದಲ್ಲಿ ರಾರಾಜಿಸುತ್ತಿದ್ದುದು ಅನೇಕ ಶಿಲಾ ಲೇಖಗಳಿಂದ ಸುವಿದಿತವಾಗಿದೆ. ಹತ್ತು-ಹನ್ನೆರಡನೆಯ ಶತಮಾನದಲ್ಲಿ ಶುದ್ಧಿಸಂಘಟನೆಗೊಳಗಾದ ಈ ಲಿಂಗಧಾರಿಧರ್ಮವು ಇಂದು ನೆಲೆಸಿ ನಿಂದಿರುವುದು ದಕ್ಷಿಣ ಭಾರತದ ಕೇಂದ್ರವಾದ ಕರ್ನಾಟಕದೇಶದಲ್ಲಿಯೇ. ಮಹಾಭಾರತಕಾಲದಿಂದ ಇಂದಿನವರೆಗಿನ ಲಿಂಗಿಧರ್ಮದ

ಇತಿಹಾಸವನ್ನು ಹಿಂದೆ ವಿದಿತಗೊಳಿಸಲಾಯಿತು. ಆ ಹಿಂದಿನ ಭಾರತದೇಶದ ಚರಿತ್ರೆಯು ಸೈಂಧವ ನಾಗರಿಕತೆಯ ಕಾಲದಿಂದೀಚೆಗೆ, ಎಲ್ಲ ವಿಷಯಗಳಲ್ಲಿಯೂ ಅಂಧಕಾರಮಯ ವಾಗಿರುವುದರಿಂದ ಆ ಕಾಲದ ಲಿಂಗಿಧರ್ಮದ ಇತಿಹಾಸವು ಸ್ಪಷ್ಟವಾಗಿಲ್ಲ. ಆದರೆ ಸೈಂಧವ ನಾಗರಿಕತೆಯ ಕಾಲದಲ್ಲಿ ಪ್ರಚಲಿತವಾಗಿದ್ದ ಲಿಂಗಧಾರಣ ಮತ್ತು ಲಿಂಗಪೂಜೆಯ ಆಚರಣೆ ಗಳು ಮಹಾಭಾರತ ಕಾಲದಿಂದ ಇಲ್ಲಿನವರೆಗೂ ನಡೆದುಬಂದಿರುವುವೆಂದಮೇಲೆ ಆ ಮಧ್ಯ ಕಾಲದಲ್ಲಿಯೂ ಅವು ಪ್ರಚಾರದಲ್ಲಿ ಉಳಿದುಬಂದಿದ್ದವೆಂಬುದೇ ಸರಿಯಾದ ಸಿದ್ಧಾಂತ.

ಆರ್ಯರ ಆಕ್ರಮಣದಿಂದ ದಕ್ಷಿಣ ದೇಶಕ್ಕೆ ದ್ರಾವಿಡರು ಒತ್ತಲ್ಪಟ್ಟರೂ ಭಾರತದ ಉತ್ತರಭಾಗದಲ್ಲಿಯೇ ಉಳಿದು ನಿಂತ ದ್ರಾವಿಡರೂ, ದ್ರಾವಿಡರೊಡನೆ ಮಿಳಿತರಾದ ವ್ರಾತ್ಯರೂ ಅಲ್ಲಿಯೂ ಅವರ ಪ್ರಭಾವವನ್ನು ಬೀರಿದುದರಿಂದ ಆಸೇತುಹಿಮಾಚಲದವರೆಗೂ ಲಿಂಗ ಪೂಜೆಯು ಇಂದಿನವರೆಗೂ ಪ್ರಚಲಿತವಾಗಿದೆ. ಆರ್ಯರೊಡನೆ ಮಿಳಿತವಾದ ದ್ರಾವಿಡರಲ್ಲಿ ಆರ್ಯರ ನಡೆನುಡಿಗಳ ಮತ್ತು ಆಚಾರವಿಚಾರಗಳ ಪ್ರಭಾವವು ಕಂಡುಬಂದವು. ಸಂಸ್ಕೃತವು ದೇವಭಾಷೆಯಾಗಿ ಗೌರವಿಸಲ್ಪಟ್ಟಿತು. ದ್ರಾವಿಡರ ದೈವಗಳು ವೈದಿಕವಾದವು; 'ಗಂಧದ್ವಾರಾಂ' ಎಂದು ಮೊದಲಾಗುವ ಮಂತ್ರದಂತಹ ಅಸಂಬಂಧವಾದ ಅಥವಾ ಇತರ ಸುಸಂಬಂಧವಾದ ವೇದಮಂತ್ರಗಳಿಂದ ಅವುಗಳ ಪೂಜೆಯು ಪ್ರಾರಂಭವಾಯಿತು. ಇವರ ಆಚರಣೆಗಳನ್ನು ಕ್ರಮಪಡಿಸುವ ಆಗಮಗಳು ಸಂಸ್ಕೃತದಲ್ಲಿಯೇ ರಚಿತವಾದವು. ಕೆಲವು ಆಗಮಗಳು ವೈದಿಕವೆಂದೂ, ಕೆಲವು ಅವೈದಿಕವೆಂದೂ ಅಭಿಪ್ರಾಯಗಳು ಹೊರಬಿದ್ದವು. ಆಗಮಗಳೂ ವೇದಗಳೂ ಒಬ್ಬ ಪರಮಾತ್ಮನ ನಿಶ್ವಸಿತಗಳೇ ಎಂಬ ಮತ್ತು ಎರಡಕ್ಕೂ ವ್ಯತ್ಯಾಸವೇ ಇಲ್ಲವೆಂಬ ಸಮನ್ವಯ ದೃಷ್ಟಿಯು ಕೊನೆಗೆ ಕಂಡುಬರುವುದು.

## ಆರ್ಯರ ಆಕ್ರಮಣದಿಂದ ಆರ್ಯಸಂಸ್ಕೃತಿಯ ಮೇಲೆ ಪರಿಣಾಮ

ದ್ರಾವಿಡ ಸಂಸ್ಕೃತಿಯ ಮೇಲೆ ಆರ್ಯರ ಆಕ್ರಮಣದ ಆಘಾತವು ಮೊದಲು ಮೊದಲು ಅನಿಷ್ಟಕಾರಿಯಾಗಿ ಪರಿಣಮಿಸಿದರೂ, ದ್ರಾವಿಡ ಸಂಸ್ಕೃತಿಯು ಸ್ವಬಲದಿಂದ ಆ ಆಕ್ರಮಣ ವನ್ನು ಎದುರಿಸಿತಲ್ಲದೆ, ತನ್ನ ಪ್ರಭಾವವನ್ನು ಆರ್ಯಸಂಸ್ಕೃತಿಯ ಮೇಲೆಯೇ ಬೀರಲು ಪ್ರಾರಂಭಿಸಿತು. ಇದರ ಪ್ರಭಾವವು ಆರ್ಯ ಸಂಸ್ಕೃತಿಯ ಮೇಲೆ ಎಷ್ಟರಮಟ್ಟಿಗೆ ಪ್ರಭಾವಯುತ ವಾಯಿತೆಂದರೆ, ಮಹಾಮಹೋಪಾಧ್ಯಾಯ ಅರ್ಥವಿಶಾರದ ಡಾಕ್ಟರ್ ಆರ್. ಶಾಮಾಶಾಸ್ತ್ರಿಗಳು ಹೇಳುವಂತೆ—ಇಂದು ಶುದ್ಧ ವೈದಿಕ ಸಂಸ್ಕೃತಿಯು ನಾಮಾವಶೇಷವಾಗಿ ಅಳಿದುಹೋಗಿದೆ; ಆರ್ಯರ ಇಂದ್ರ, ಅಗ್ನಿ, ವರುಣ ಮೊದಲಾದ ದೇವತೆಗಳನ್ನು ಪೂಜಿಸುವುದಿರಲಿ, ಅವರ ಹೆಸರನ್ನು ನೆನೆಸಿಕೊಳ್ಳುವುದೂ ಈಗ ಇಲ್ಲವಾಗಿಹೋಗಿದೆ; ಅವುಗಳ ಬದಲು ದ್ರಾವಿಡರ ದೇವತೆಗಳು ಸಂಪೂಜ್ಯರಾಗಿದ್ದಾರೆ; ಶುದ್ಧ ವೈದಿಕ ಕರ್ಮಗಳನ್ನು ಆಚರಿಸುವುದು ತಪ್ಪಿಹೋಗಿ ಆಗಮಿಕ ಆಚರಣೆಯು ಜನಪ್ರಿಯವಾಗಿದೆ. ಈ ಬದಲಾವಣೆಗಳೆಲ್ಲ ಆಗಲು ಬಹಳ ಕಾಲ ಹಿಡಿಯಿತು. ಜಯಶೀಲರಾದ ಆರ್ಯರ ಮೇಲೆ ದ್ರಾವಿಡಸಂಸ್ಕೃತಿಯು ಒಮ್ಮೆಗೇ ಪ್ರಭಾವ ವನ್ನು ಬೀರಿರುವುದು ಸಾಧ್ಯವಲ್ಲವೆಂಬುದು ಸುಸ್ಪಷ್ಟವಾದ ವಿಷಯ; ಹಾಗೂ ಮೊದಲು ಮೊದಲು ಆರ್ಯಸಂಸ್ಕೃತಿಯು ಸೋಲುತ್ತಿದ್ದ ದ್ರಾವಿಡರ ಮೇಲೆ ತನ್ನ ಪ್ರಭಾವವನ್ನು ಹೆಚ್ಚಾಗಿ ಬೀರಿದುದು ಸ್ವಾಭಾವಿಕವೇ. ಆರ್ಯ–ದ್ರಾವಿಡ ಸಂಸ್ಕೃತಿಗಳು ಒಂದರ ಮೇಲೊಂದು ಪ್ರಭಾವ ವನ್ನು ಬೀರಿದುದರ ಸ್ಥೂಲಪರಿಚಯವಾದರೂ ಆವಶ್ಯಕವಾದುದಾಗಿದೆ.

ಆರ್ಯರ ಆಕ್ರಮಣದ ಆಘಾತವನ್ನು ತಡೆಯಲಾರದೆ ದ್ರಾವಿಡರು ಹಿಮ್ಮೆಟ್ಟುತ್ತಿದ್ದರೂ, ಆರ್ಯರು ದ್ರಾವಿಡರನ್ನು ಸಂಪೂರ್ಣವಾಗಿ ಜಯಿಸಲಾಗಲಿಲ್ಲ. ದ್ರಾವಿಡರು ಹಿಮ್ಮೆಟ್ಟುತ್ತಿದ್ದರೂ, ಬೆಟ್ಟಗುಡ್ಡಗಳನ್ನು ಸೇರಿಕೊಂಡು ಆರ್ಯರಿಗೆ ಕಿರುಕುಳವನ್ನುಂಟುಮಾಡುತ್ತಿದ್ದರು. ಆರ್ಯರ ಐಶ್ವರ್ಯವು ಮುಖ್ಯವಾಗಿ ಗೋಧನದ ರೂಪದಲ್ಲಿದ್ದಿತು. ದ್ರಾವಿಡರು ಆರ್ಯರ ಗೋವೃಂದವನ್ನು ಅವಕಾಶ ಸಿಕ್ಕಿದಾಗಲೆಲ್ಲ ಬಲವಂತದಿಂದ ಹೊಡೆದುಕೊಂಡು ಹೋಗಿಬಿಡುತ್ತಿದ್ದರು; ಹಾಗೆಂದ ಮಾತ್ರಕ್ಕೆ ದ್ರಾವಿಡರು ಕಳ್ಳರು, ದರೋಡೆಕೋರರು ಎಂದು ಅಲ್ಲ. ಅದೊಂದು ಯುದ್ಧಕಾಲದಲ್ಲಿ ಶತ್ರುಗಳಿಗೆ ಕಿರುಕುಳವನ್ನು ಉಂಟುಮಾಡುವ ಕ್ರಿಯೆ. ಮಹಾಭಾರತದ ಗೋಗ್ರಹಣದಲ್ಲಿ ಇದರ ಛಾಯೆಯನ್ನು ನೋಡಬಹುದು. ಆದರೆ ಇದು ಆರ್ಯರಿಗೆ ಕಳ್ಳತನವಾಗಿ ಕಂಡುಬಂದುದು ಸ್ವಾಭಾವಿಕವೇ. ಆದುದರಿಂದ ದ್ರಾವಿಡರನ್ನು ಕಳ್ಳರೆಂದೇ ಆರ್ಯರು ಕರೆದರು. ಕಾಡಿನೊಳಗೆ ಆಶ್ರಯಪಡೆದಿದ್ದ ಅವರನ್ನು ಕಾಡುಜನರೆಂದೇ ಕರೆದರು. ಅವರ ದೇವರನ್ನು ಕಳ್ಳರ ದೇವರೆಂಡೂ ಅರಣ್ಯ ಜನರ ದೇವರೆಂಡೂ ಹೀಯಾಳಿಸಿದರು. 'ಸ್ತೇನಾನಾಂ ಪತಿ', 'ಅರಣ್ಯಾನಾಂ ಪತಿ'—ಇವೇ ಮೊದಲಾದ ಹೆಸರುಗಳು ಆರ್ಯರ ಬಾಯಲ್ಲಿ ಬಂದವು. ಆರ್ಯರ ದೈವಿಕ ಕಲ್ಪನೆಯೇ ಬೇರೆ; ದ್ರಾವಿಡರ ದೈವಿಕ ಕಲ್ಪನೆಯೇ ಬೇರೆ. ಆರ್ಯರ ಸಂಪ್ರದಾಯ—ಸದಾಚಾರಗಳು ಒಂದು ರೀತಿಯವಾದರೆ, ದ್ರಾವಿಡರ ಸಂಪ್ರದಾಯ—ಸದಾಚಾರಗಳು ಬೇರೆ ರೀತಿಯವು. ಆದುದರಿಂದಲೂ ವೈಷಮ್ಯಕ್ಕೆ ಕಾರಣವಾಯಿತು. ಆರ್ಯರು ವಿಗ್ರಹಾರಾಧಕರಲ್ಲ; ಅವರು ಅಗ್ನಿಯನ್ನು ಪೂಜಿಸಿ ಹಾಲು, ತುಪ್ಪಗಳನ್ನು ಅದರಲ್ಲಿ ಹಾಕುತ್ತಿದ್ದರು. ಇಂದ್ರ, ವಾಯು, ವರುಣ ಮೊದಲಾದ ನಿಸರ್ಗ ದೇವತೆಗಳಿಗೆ ಅಗ್ನಿಯ ಮೂಲಕ ಹವಿಸ್ಸನ್ನು ಅರ್ಪಿಸುತ್ತಿದ್ದರು. ಯಜ್ಞಯಾಗಗಳಲ್ಲಿ ಪಶುಹಿಂಸೆಯಾಗುತ್ತಿದ್ದಿತು. ಸರ್ವಮೇಧಯಾಗದಲ್ಲಿ ಎಲ್ಲ ತರಹದ ಪ್ರಾಣಿಗಳನ್ನೂ ಕೊಲ್ಲುತ್ತಿದ್ದುದು ಆ ಯಾಗದ ಹೆಸರಿನಿಂದಲೇ ವ್ಯಕ್ತವಾಗುವುದು. ೧೯೫೮ನೆಯ ಇಸವಿಯ ಸೆಪ್ಟಂಬರ್ ತಿಂಗಳ "ಕಸ್ತೂರಿ" ಮಾಸಿಕದ ೧೧೬ನೆಯ ಪುಟದಿಂದ ಪ್ರಾರಂಭವಾಗುವ ಅಶ್ವಮೇಧ ವಿಷಯ ಲೇಖನವು ಉಲ್ಲೇಖಾರ್ಹವಾದುದಾಗಿದೆ. ಅದರ ಸ್ವಲ್ಪ ಭಾಗವನ್ನಿಲ್ಲಿ ಕೊಡುವುದರಿಂದ ಯಜ್ಞಯಾಗಗಳ ವಿಷಯವು ಪರಿಚಯವಾಗುವುದು.

"ಇನ್ನು ಕೊನೆಯ ಘಟ್ಟವು ಪ್ರಾರಂಭವಾಗುತ್ತದೆ. ಯಜ್ಞಾಶ್ವವೂ ಒಂದು ಕಾಡುಹೋರಿಯೂ ಯಜ್ಞವೇದಿಕೆಯ ಬಳಿ ಯೂಪ (ಗೂಟ) ಗಳಿಗೆ ಕಟ್ಟಲ್ಪಡುತ್ತವೆ. ಇತರ ೨೧ ಯೂಪಗಳಿಗೆ ೩೨೭ ಸಾಧುಪಶುಗಳನ್ನೂ, ಅವುಗಳ ನಡುನಡುವೆ ೨೬೨ ಕಾಡುಪಶುಗಳನ್ನೂ ಬಿಗಿಯಬೇಕು. ಸಾಧುಪಶುಗಳಲ್ಲಿ ಗೋವು, ಆಡು, ಹೋರಿ, ಒಂಟೆ ಮೊದಲಾದುವು ಇರುತ್ತಿದ್ದರೆ, ಕಾಡುಪ್ರಾಣಿಗಳಲ್ಲಿ ಆನೆ, ಸಿಂಹ, ಹುಲಿ ಮೊದಲಾದವು ಇರುತ್ತಿದ್ದವು.... ಕುದುರೆ ಪ್ರಜಾಪತಿಗೆ ಆಹುತಿಯಾಗುತ್ತದೆ. ಇತರ ದೇವತೆಗಳಿಗೆ ಇತರ ಪ್ರಾಣಿಗಳು ಆಹುತಿಯಾಗುತ್ತಿದ್ದವು····ಬಲಿ ಕೊಡುತ್ತಿದ್ದುದು, ಕುದುರೆ ಮೊದಲಾದ ಸಾಕುಪ್ರಾಣಿಗಳನ್ನು ಮಾತ್ರ. ಅರಣ್ಯದ ಪಶುಗಳನ್ನು ಯಜ್ಞಾಂತ್ಯದಲ್ಲಿ ಬಿಡುಗಡೆ ಮಾಡುತ್ತಿದ್ದರು. ರಾಣಿಯರು ಅಲಂಕರಿಸಿ ರಾಜನು ಕೊನೆಯ ಕವಳ ಕೊಟ್ಟು ಆದರಿಸಿದ ಮೇಲೆ ಕುದುರೆಯನ್ನು ವಧಿಸುತ್ತಿದ್ದರು····ಯಜುರ್ವೇದದಲ್ಲಿ ಆ ರಾತ್ರಿಯನ್ನು ಪಟ್ಟಮಹಿಷಿಯು ಈ ಸತ್ತ ಯಜ್ಞಪಶುವಿನ ಸಂಗಡ ಕಳೆಯಬೇಕೆಂದೂ, ಅದರಿಂದ ಅವಳು ಪುತ್ರವತಿಯಾಗುವಳೆಂದೂ ಹೇಳಿದ; ಆದರೆ ಮುಂದೆ ಈ ರೂಢಿ ತ್ಯಜಿಸಲ್ಪಟ್ಟಂತೆ ತೋರುತ್ತದೆ".

ಸ್ವಾಮಿ ದಯಾನಂದ ಸರಸ್ವತಿಯವರು ಅವರ 'ಸತ್ಯಾರ್ಥ ಪ್ರಕಾಶಿಕೆ'ಯ ಪುಟ ೩೦೨ರಲ್ಲಿ ಹೀಗೆ ಬರೆದಿದ್ದಾರೆ—"ಈ ದೇಶದಲ್ಲಿಯೇ ಗೋರಖಪುರದಲ್ಲಿ ಹಿಂದೆ ಒಬ್ಬ ರಾಜನಿದ್ದನೆಂದೂ, ಪೋಪರು (ಪುರೋಹಿತರು) ಆತನ ಕೈಯಿಂದ ಯಜ್ಞಮಾಡಿಸಿ ಆತನ ಪ್ರಿಯ ಪತ್ನಿಯಾದ ಮಹಾರಾಣಿಯನ್ನು ಆ ಯಜ್ಞ ಸಮಯದಲ್ಲಿ ಒಂದು ಕುದುರೆಯಿಂದ ಸಂಭೋಗಮಾಡಿಸಿದ್ದರಿಂದ ಆಕೆಯು ಸತ್ತುಹೋದಳೆಂದೂ, ಬಳಿಕ ರಾಜನು ತನ್ನ ಮಗನಿಗೆ ಪಟ್ಟಗಟ್ಟಿ ತಾನು ಸಾಧು ವೇಷವನ್ನು ಧರಿಸಿ ಈ ಪೋಪರ ಕಪಟಲೀಲೆಗಳನ್ನೆಲ್ಲ ಬಯಲುಮಾಡತೊಡಗಿದನೆಂದೂ ಕೇಳಿದ್ದೇವೆ."

ಹೀಗೆ ಹೇಳಿದ-ಕೇಳಿದ ಮಾತಿನ ನಿಜಾಂಶವು ಏನೇ ಇರಲಿ, ಯಜ್ಞಯಾಗಾದಿಗಳಲ್ಲಿ ನಡೆವ ಎದೆ ಕರಗಿಸುವ ಪ್ರಾಣಿಹಿಂಸೆಯೂ, ಜಿಗುಪ್ಸೆಯನ್ನು ಉಂಟುಮಾಡುವ ನೀತಿಬಾಹಿರವಾದ ಆಚರಣೆಗಳೂ ಬುದ್ಧಿವಂತರಾದ ಆರ್ಯರಲ್ಲಿಯೇ ಅನೇಕರ ಮನಸ್ಸನ್ನು ತಿರುಗಿಸಿತು. ಈ ರೀತಿ ಆಕ್ಷೇಪಗಳು ಕೇಳಬಂದಿರಬೇಕು:

ಪಶುಶ್ಚೇನ್ನಿಹತಸ್ಸ್ವರ್ಗಂ ಜ್ಯೋತಿಷ್ಟೋಮೇ ಗಮಿಷ್ಯತಿ ।
ಸ್ವಪಿತಾ ಯಜಮಾನೇನ ತತ್ರ ಕಸ್ಮಾನ್ನ ಹಿಂಸ್ಯತೇ ॥

ಎಂದರೆ, ಜ್ಯೋತಿಷ್ಟೋಮಾದಿಗಳಲ್ಲಿ ಪಶುಗಳನ್ನು ಕೊಂದು ಹೋಮಮಾಡಿದರೆ ಅವು ಸ್ವರ್ಗಕ್ಕೆ ಹೋಗುವುದು ನಿಶ್ಚಯವಾದರೆ, ಯಜಮಾನನು ತನ್ನ ತಂದೆಯನ್ನೇ ಕೊಂದು ಏಕೆ ಸ್ವರ್ಗಕ್ಕೆ ಕಳುಹಿಸಬಾರದು? ಪ್ರಾಜ್ಞರಾದ ಆರ್ಯರ ಮನಸ್ಸಿನಲ್ಲಿ ಈ ತರದ ಪ್ರಶ್ನೆಗಳೆದ್ದು ಭಿನ್ನಾಭಿಪ್ರಾಯಗಳಿಗೆ ಕಾರಣವಾಗಿರಬೇಕು. ಸಂಪ್ರದಾಯಶರಣರು **"ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ"** ಎಂದು ಯಜ್ಞಯಾಗಾದಿಗಳನ್ನು ಮಾಡಬೇಕೆಂಬ ವಿಧಿಯನ್ನು ಮುಂದಿಟ್ಟರೆ, ಪ್ರತಿಗಾಮಿಗಳಾದವರು **"ಮಾ ಹಿಂಸ್ಯಾತ್"** ಎಂದರೆ ಹಿಂಸೆಯನ್ನು ಮಾಡಬಾರದೆಂಬ ಶ್ರುತಿಯನ್ನು ಆಧಾರವಾಗಿ ತೆಗೆದುಕೊಂಡು ಉತ್ತರ ಹೇಳಿದರು. ಆರ್ಯರ ಯಜ್ಞಯಾಗಗಳನ್ನು ವಿರೋಧಿಸುತ್ತಲಿದ್ದ ದ್ರಾವಿಡರನ್ನು ಈ ಪ್ರಗತಿಗಾಮಿಗಳಾದ ಆರ್ಯರು ಸೇರಿಕೊಂಡರು. ಇವರೇ ಅಸುರರೆನ್ನಬಹುದು. ಯಜ್ಞವನ್ನು ಧ್ವಂಸಮಾಡಲು ಬರುತಿದ್ದ ಈ ಅಸುರರು ಆರ್ಯರಲ್ಲವೆಂಬ ಭಾವನೆ ಬರುವುದು ಸಹಜ. ಆದರೆ ಇವರು ಸಂಪ್ರದಾಯ ಶರಣರಾದವರ ಗುಂಪಿನೊಡನೆ ವಿರೋಧವನ್ನು ಬೆಳಸಿಕೊಂಡ ಆರ್ಯರಲ್ಲದೆ ಬೇರೆಯಲ್ಲ. ಇದನ್ನು ಮುಂದೆ ಹೆಚ್ಚು ವಿವರವಾಗಿ ಹೇಳಲಾಗುವುದು. ದ್ರಾವಿಡರ ದೇವರಾದ ಶಿವನೇ ಈ ಅಸುರರ ಮಹಾದೇವನೆಂಬುದು ಪುರಾಣಪ್ರಸಿದ್ಧವಾದ ವಿಷಯ. ಹೀಗೆ ಅಸುರ ಮತ್ತು ದ್ರಾವಿಡರಲ್ಲಿ ಯಜ್ಞವನ್ನು ವಿರೋಧಿಸುವ ವಿಷಯದಲ್ಲಿ ಮತ್ತು ಶಿವಮಹಾದೇವನ ಭಕ್ತರಾಗಿರುವ ವಿಷಯದಲ್ಲಿ ಒಮ್ಮತವಿದ್ದರೂ ಈ ದಾನವದಸ್ಯುಗಳು ಒಂದೇ ಜನಾಂಗದವರಲ್ಲ; ಆದರೆ ದೇವದಾನವರು ಒಂದೇ ಜನಾಂಗದವರು. ಬಾವಲ್ಕರ್ ಮತ್ತು ರಾನಡೆಯವರ 'ಇಂಡಿಯನ್ ಫಿಲಾಸಫಿ' ಚರಿತ್ರೆಯ ೨ನೆಯ ಭಾಗದ ಪುಟ ೫೪ರಲ್ಲಿ ಹೇಳಿದಂತೆ—The repeated statements of the several Brahmana texts about the Asuras leaves no doubt as to the fact that they were of the same race and religion as Devas. ದೇವದಾನವರು ಒಂದೇ ಜನಾಂಗದವರೆಂಬ ಈ ಅಭಿಪ್ರಾಯಕ್ಕೆ ಬ್ರಾಹ್ಮಣ ಗ್ರಂಥಗಳಲ್ಲಿನ ಆಧಾರಗಳಿವು:

(೧) ದೇವಾಶ್ಚ ವಾ ಅಸುರಾಶ್ಚ ಪ್ರಜಾಪತೇರ್ದ್ವಯಾಃ ಪುತ್ರಾ ಆಸನ್
(೨) ದ್ವಯಾ ವೈ ಪ್ರಾಜಾಪತ್ಯಾಃ: ದೇವಾಶ್ಚ, ಅಸುರಾಶ್ಚ

ಅಸುರ ಪದದ ಅರ್ಥದಲ್ಲಿ ಬದಲಾವಣೆಯಾಗಿರುವುದು ಗಮನಾರ್ಹವಾಗಿದೆ. ಅಸುರ ಪದವು ವೇದವಾಙ್ಮಯದಲ್ಲಿ 'ವೀರ', 'ದಿವ್ಯ' ಎಂಬ ಅರ್ಥವು ಬರುವಂತೆ ಅನೇಕ ಕಡೆ ಉಪಯೋಗಿಸಲ್ಪಟ್ಟಿದೆ. ಇಂದ್ರನನ್ನೇ 'ಅಸುರ' ಎಂದು ಕರೆಯಲಾಗಿದೆ.

ಅರ್ಚಾ ದಿವೇ ಬೃಹತೇ ಶೂಷ್ಯಂ ವಚಃ ಸ್ವಕ್ಷತ್ರಂ ಯಸ್ಯ ಧೃಷತೋ ಧೃಷನ್ಮನಃ ।
ಬೃಹಚ್ಛ್ರವಾ ಆಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ ವೃಷಭೋ ರಥೋ ಹಿ ಷಃ ॥

(ಋ. ೧-೫೪-೩)

ಇಲ್ಲಿ ಇಂದ್ರನು ಅಸುರನೆಂದರೆ ಬಲವುಳ್ಳವನು ಎಂದರ್ಥ ಮಾಡಬಹುದು. 'ಅಸುಃ ಪ್ರಾಣೋ ಬಲಂ ವಾ ತದ್ವಾನ್' ಎಂಬ ವಿವರಣೆಯಿಂದ ಈ ಅರ್ಥವು ಸರಿಹೊಂದುವುದು. ಅಗ್ನಿ, ಸವಿತೃ ಮೊದಲಾದ ದೇವತೆಗಳಿಗೂ ಈ ಅರ್ಥದಲ್ಲಿ 'ಅಸುರ' ಪದವನ್ನು ವಿಶೇಷಣವಾಗಿ ಋಗ್ವೇದದಲ್ಲಿ ಉಪಯೋಗಿಸಲಾಗಿದೆ. ಋಗ್ವೇದದಷ್ಟೇ ಹಳೆಯದಾದ 'ಅವೆಸ್ಥಾ' ಎಂಬ ಪಾರ್ಸಿಗಳ ಧರ್ಮಗ್ರಂಥದಲ್ಲಿ ಅಸುರಪದದ ರೂಪಾಂತರವು 'ಅಹುರ' ಎಂದಾಗಿದೆ. ಆದರೆ ಮುಂದೆ ಋಗ್ವೇದದಲ್ಲಿಯೇ ಇಂದ್ರನ ವಿರೋಧಿಗಳು ಅಸುರರು ಎಂಬುದು ಸ್ಪಷ್ಟವಾಗುತ್ತದೆ. ದಸ್ಯುಗಳನ್ನು ನಾಶಮಾಡುವವನು ಎಂಬರ್ಥವುಳ್ಳ "**ದಸ್ಯುಹಾ**" ಎಂಬ ಪದವನ್ನು ಋಗ್ವೇದ ೧-೧೦೦-೧೨ರಲ್ಲಿ ಉಪಯೋಗಿಸಿರುವಂತೆಯೇ ಅಸುರರನ್ನು ನಾಶಮಾಡುವವನು ಎಂಬರ್ಥವುಳ್ಳ "**ಅಸುರಹಾ**" ಎಂಬ ಪದವನ್ನು ಋ. ೬-೨೨-೪ರಲ್ಲಿ ಇಂದ್ರನ ವಿಶೇಷಣವಾಗಿ ಉಪಯೋಗಿಸಿದೆ. ಆದರೆ ಅಸುರದೇವನೆಂದು ಪ್ರಸಿದ್ಧನಾದ ಋಗ್ವೇದದ ರುದ್ರನು ಎಂದೂ ಅಸುರರೊಡನೆ ಯುದ್ಧಮಾಡಿಲ್ಲ; ಅವನನ್ನು "**ಅಸುರಹಾ**" ಎಂದು ವರ್ಣಿಸಿಲ್ಲ. 'ಅಸುರ' ಪದವು ಮೊದಲು ಶ್ರೇಷ್ಠತರವಾದ ಅರ್ಥವುಳ್ಳದ್ದಾಗಿದ್ದು, ಮುಂದೆ ರಾಕ್ಷಸ ಅಥವಾ ದೈತ್ಯ ಎಂಬ ಅರ್ಥದಲ್ಲಿ ಪರ್ಯವಸಾನವಾದುದು, ಆರ್ಯರಲ್ಲಿ ಕೆಲವರು ಮೊದಲು ಯಜ್ಞಯಾಗಾದಿಗಳನ್ನು ಒಪ್ಪಿದವರಾಗಿದ್ದು ಅನಂತರ ಯಜ್ಞಧ್ವಂಸಿಗಳಾದುದನ್ನು ತೋರಿಸುತ್ತದೆ.

## ಆರ್ಯರ ಸಂಸ್ಕಾರಗಳನ್ನು ತ್ಯಜಿಸಿದ ವ್ರಾತ್ಯರು

ಅಸುರರಂತೆ ಯಜ್ಞಧ್ವಂಸಿಗಳಲ್ಲವಾದರೂ ಯಜ್ಞವನ್ನು ಮಾಡಲು ಒಪ್ಪದೆ, ಯಜ್ಞವನ್ನು ಮಾಡಲು ಅಧಿಕಾರವನ್ನು ಕೊಡುವ ಉಪನಯನವನ್ನು ತಿರಸ್ಕರಿಸಿದ ಆರ್ಯರು ವ್ರಾತ್ಯರೆಂದು ಪ್ರಸಿದ್ಧರಾದರು. ಶ್ರೀಯುತ ಕರ್ಮರ್ಕರ್‌ರವರು ಈ ವ್ರಾತ್ಯರು ಮೊಹೆಂಜೊದಾರೊ ನಿವಾಸಿಗಳೆಂದು ಅಭಿಪ್ರಾಯಪಡುವರು. ಡಾ॥ ಭಂಡಾರ್ಕರ್ ಅವರ ಅಭಿಪ್ರಾಯವಾದರೂ ಸ್ವಲ್ಪ ಹೆಚ್ಚುಕಡಮೆ ಇದೇ ಎನ್ನಬಹುದು. ಆದರೆ ವ್ರಾತ್ಯರು ಉಪನಯನ ಸಂಸ್ಕಾರವನ್ನು ತಿರಸ್ಕರಿಸಿದ ಆರ್ಯರೇ ಹೊರತು, ಮೂಲ ಸೈಂಧವ ಸಂಸ್ಕೃತಿಯವರಲ್ಲ. ಪಂಚವಿಂಶತಿ ಬ್ರಾಹ್ಮಣದಲ್ಲಿ ಹೇಳಿದಂತೆ ಇವರು ಆರ್ಯಭಾಷೆಯನ್ನಾಡುತ್ತಿದ್ದರು ಮತ್ತು ಅಥರ್ವವೇದದಲ್ಲಿ ಹೇಳಿದಂತೆ ಇವರು ಆರ್ಯರ ಹಾಗೆ ಸೋಮಪಾನ ಮಾಡುತ್ತಿದ್ದರು. "**ವ್ರತಾತ್ ಸಮೂಹಾತ್ ಚ್ಯವತಿಯುತ್ । ಅವ್ಯವಹಾರ್ಯೇ, ಸಂಸ್ಕಾರಹೀನೇ ಜಾತಿಮಾತ್ರೋಪಜೀವಿನಿ (ವಾಚಸ್ಪತ್ಯೇ)**" ಎಂದು ವ್ರಾತ್ಯರ ವಿಷಯವಾಗಿ ಹೇಳಿರುವುದು, ಉಪನಯನ ಸಂಸ್ಕಾರವನ್ನು ತಿರಸ್ಕರಿಸಿದ ಆರ್ಯರೇ ವ್ರಾತ್ಯರೆಂಬುದನ್ನು ತಿಳಿಸುತ್ತದೆ. ಮನುಸ್ಮೃತಿ

ಯಲ್ಲಿ "ಸಾವಿತ್ರೀ ಪತಿತಾವ್ರಾತ್ಯಾ ಭವಂತ್ಯಾರ್ಯ ವಿಗರ್ಹಿತಾಃ" ಎಂದು ಹೇಳಿರುವುದು ಮೇಲಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಆಪ್ಟೆ ಡಿಕ್ಷ್ನರಿಯಲ್ಲಿ ವ್ರಾತ್ಯನೆಂದರೆ, "A man of the first three classes who has lost caste owing to the non-performance of principal samskaras or purificatory rites (especially investiture of the sacred thread)" ಎಂದು ಹೇಳಿರುವುದರಿಂದ ಇವರು ಉಪನಯನ ಸಂಸ್ಕಾರ ವನ್ನು ತ್ಯಜಿಸಿ ದ್ರಾವಿಡರೊಡನೆ ಸೇರಿಕೊಂಡ ಆರ್ಯರೇ ಎಂಬುದು ಸ್ಪಷ್ಟ. ಬ್ರಾಹ್ಮಣ, ಕ್ಷತ್ರಿಯ ಜಾತಿಗನುಸಾರವಾದ 'ಅರ್ಹಂತಾ' ಮತ್ತು 'ಯೌಧ' ಎಂಬ ಎರಡು ಜಾತಿಗಳು ವ್ರಾತ್ಯರಲ್ಲಿ ಇದ್ದುದನ್ನು ನೋಡಿದರೆ, ಉತ್ತಮ ಜಾತಿಯವರೂ ಮತ್ತು ಬುದ್ಧಿವಂತರೂ ಆದ ಬ್ರಾಹ್ಮಣರಲ್ಲಿಯೂ ಕ್ಷತ್ರಿಯರಲ್ಲಿಯೂ ಕೆಲವರು ಯಜ್ಞಯಾಗಾದಿಗಳನ್ನು ಮಾಡಲು ಅಧಿ ಕಾರವನ್ನು ಕೊಡುವ ಉಪನಯನವನ್ನು ತಿರಸ್ಕರಿಸಿ ವ್ರಾತ್ಯರಾದುದು ಕಂಡುಬರುವುದು. ವ್ರಾತ್ಯಸ್ತೋಮವೆಂಬ ಶುದ್ಧಿಕ್ರಿಯೆಯಿಂದ ಇವರನ್ನು ಆರ್ಯರ ಬಳಗಕ್ಕೆ ತಿರುಗಿ ತೆಗೆದು ಕೊಳ್ಳುವ ಪ್ರಯತ್ನವು ನಡೆಯಿತು. ಆದುದರಿಂದ ಇವರು ಪತಿತರೆಂದು ಆರ್ಯರಿಂದ ಭಾವಿಸಲ್ಪಟ್ಟ, ಉಪನಯನವನ್ನು ತಿರಸ್ಕರಿಸಿದ ಆರ್ಯರೇ ಹೊರತು ಅನಾರ್ಯರಲ್ಲವೆಂಬುದು ಸ್ಪಷ್ಟವಾಗಿದೆ. ಯಜ್ಞಯಾಗಾದಿಗಳಲ್ಲಿ ನಡೆಯುತ್ತಿದ್ದ ಪ್ರಾಣಿಹಿಂಸೆಯನ್ನೂ, ಅಸಹ್ಯ ವರ್ತನೆ ಯನ್ನೂ ಸಹಿಸಲಾರದೆ ಇವರು ಮೊಹೆಂಜೊದಾರೊ ನಾಗರಿಕರ ಶೈವಧರ್ಮವನ್ನು ಒಪ್ಪಿ ಕೊಂಡು ಶಿವನನ್ನು ಆರಾಧಿಸತೊಡಗಿದರು. ಇವರು ಅನಾರ್ಯರಾದ ಫಣಿ ಮೊದಲಾದವ ರಲ್ಲ. ಫಣಿಗಳು ವ್ರಾತ್ಯರೆಂದು ಹೇಳುವ ಕರ್ಮಕರ್ರವರ ವಾದವು ಸರಿಯಲ್ಲ. ಅವರ ಗ್ರಂಥದ ೧೭ನೆಯ ಪುಟದಲ್ಲಿ ಫಣಿದಾಸ ದಸ್ಯುಗಳು "ಮೃಧ್ರವಾಚಃ" ಎಂದರೆ ತಮಗೆ ವಿರುದ್ಧವಾದ ಭಾಷೆಯನ್ನಾಡುವ ಜನರೆಂದು ಆರ್ಯರು ಕರೆಯುತ್ತಿದ್ದರೆಂದು ಹೇಳಿದ್ದಾರೆ. ವ್ರಾತ್ಯರು ಸಂಸ್ಕೃತ ಭಾಷೆಯಲ್ಲಿ ಮಾತನಾಡುತ್ತಿದ್ದರೆಂದೂ ಅವರು ಹೇಳಿದ್ದಾರೆ. ಸಂಸ್ಕೃತ ಭಾಷೆಯನ್ನಾಡದ ಫಣಿದಾಸ ದಸ್ಯುಗಳು ಹೇಗೆ ವ್ರಾತ್ಯರಾದಾರು? ಆದರೆ ಆರ್ಯರ ಧರ್ಮ ವನ್ನು ತ್ಯಜಿಸಿ, ದ್ರಾವಿಡ ಧರ್ಮವನ್ನು ಸ್ವೀಕರಿಸಿದ ವ್ರಾತ್ಯರು ಆರ್ಯ ವಿರೋಧಿಗಳಾದರು.

### ಈ ತೆರದ ಬದಲಾವಣೆಗಳಾಗುವುದಕ್ಕೆ ಕಾರಣವಾದ ಹಿನ್ನೆಲೆ

ಆರ್ಯರಲ್ಲಿ ಅನೈಕ್ಯತೆ ಹುಟ್ಟುವುದಕ್ಕೆ ಧಾರ್ಮಿಕ ಭಿನ್ನಾಭಿಪ್ರಾಯಗಳಲ್ಲದೆ ರಾಜಕೀಯ ಭಿನ್ನಾಭಿಪ್ರಾಯಗಳೂ ಹಿನ್ನೆಲೆಯಾಗಿರುವಂತೆ ಕಾಣುವುದು. ಈ ರಾಜಕೀಯ ಭಿನ್ನಾಭಿ ಪ್ರಾಯವೇ ಸುರಾಸುರ ವಿವಾದಕ್ಕೆ ಮೊದಲ ಕಾರಣ. ಅದಿತಿಯ ಮಕ್ಕಳು ಆದಿತೇಯರೆನಿಸಿದ ಸುರರು; ದಿತಿಯ ಮಕ್ಕಳೇ ದೈತ್ಯರೆನಿಸಿದ ಅಸುರರು. ಅದಿತಿ-ದಿತಿಯರು ಅಕ್ಕತಂಗಿಯರು. ಆದಿತೇಯರಿಗೂ ದೈತ್ಯರಿಗೂ ಪಾಂಡವ-ಕೌರವರಿಗಿದ್ದ ದಾಯಾದಿ ಮತ್ಸರದಂತಹ ಮತ್ಸರ. ದೈತ್ಯರೂ ಆರ್ಯರೆಂಬ ವಿಷಯದಲ್ಲಿ ಸಂದೇಹವಿಲ್ಲ. ರಾವಣಾಸುರನು ಪೌಲಸ್ತ್ಯ ಬ್ರಹ್ಮನ ವಂಶದವನು; ಸಾಮಗಾನದಿಂದ ಶಿವನನ್ನು ಒಲಿಸಿದವನು. ವಿಭೀಷಣನು ಅಣ್ಣನನ್ನು ತ್ಯಜಿಸಿ ಶತ್ರುವಿನ ಕಡೆ ಸೇರಿದುದು ಅನಾರ್ಯಕಾರ್ಯವೆಂದು ದೈತ್ಯರ ಮುಂದಾಳುವಾದ ಇಂದ್ರ ಜಿತುವು ಹೇಳಿದನೆಂದು ರಾಮಾಯಣದಲ್ಲಿ ಹೇಳಿದೆ. ಇದು ಆರ್ಯರಲ್ಲದವರ ಬಾಯಲ್ಲಿ ಬರುವ ಮಾತಲ್ಲ. ಆರ್ಯರೇ ಆದ ದೈತ್ಯರಿಗೂ ಆರ್ಯ ಋಷಿಗಳಿಗೂ ರಕ್ತಸಂಬಂಧ ಬಳೆದುದು ಸ್ವಾಭಾವಿಕವೇ. ಆದರೆ ಇದರಿಂದ ವಿಷಬೀಜವು ಹುಟ್ಟಿ ವಿಷವೃಕ್ಷವು ಬೆಳೆಯಿತು. ಈ ವಿಷಬೀಜವನ್ನು ಬಿತ್ತಿದುದು ತ್ರಿಶಿರನೆಂದೂ ವಿಶ್ವರೂಪನೆಂದೂ ಪ್ರಸಿದ್ಧನಾದ ಋಷಿಯನ್ನು

ಇಂದ್ರನು ಕೊಂದಾಗಲೆನ್ನಬಹುದು. "ತ್ವಷ್ಟೃಪುತ್ರಸ್ತ್ರಿಶಿರಾ ನಾಮರ್ಷಿಃ" ಎಂದು ಋಗ್ವೇದದ ೧೦ ನೆಯ ಮಂಡಲದ ಒಂದನೆಯ ಅನುವಾಕದ ೮ ನೆಯ ಸೂಕ್ತದ ಸಾಯಣ ಭಾಷ್ಯದ ಪ್ರಾರಂಭದಲ್ಲಿಯೇ ಹೇಳಿದೆ. ತ್ವಷ್ಟೃಪುತ್ರನಾದ 'ತ್ರಿಶಿರಃ' ಎಂಬುವವನೇ ಈ ಸೂಕ್ತದ ಋಷಿಯೆಂದು ಸಾಯಣಾಚಾರ್ಯರು ಹೇಳಿದ್ದಾರೆ. ಈ ಋಷಿಯನ್ನು ಇಂದ್ರನು ಕೊಂದನೆಂದು ಋಗ್ವೇದದಲ್ಲಿಯೇ ಹೇಳಿದೆ (ಋ. ೧೦–೮–೯). ಮಂತ್ರದ್ರಷ್ಟನಾದ ಈ ಋಷಿಯನ್ನೇ ಕೊಂದುದಕ್ಕೆ ಪ್ರಬಲವಾದ ಕಾರಣವಿರಬೇಕಷ್ಟೆ. ಬೃಹದ್ದೇವತೆಯ ಆರನೆಯ ಅಧ್ಯಾಯದಲ್ಲಿಯೂ, ತೈತ್ತರೀಯ ಸಂಹಿತೆಯಲ್ಲಿಯೂ ಇದರ ಕಾರಣವನ್ನು ಕೊಟ್ಟಿದೆ:

ವಿಶ್ವರೂಪೋ ವೈತ್ವಾಷ್ಟ್ರಃ ಪುರೋಹಿತೋ ದೇವನಾಮಾಸೀತ್
ಸ್ವಸ್ರಿಯೋಽಸುರಾಣಾಂ. . . . ತಸ್ಮಾದಿಂದ್ರೋಽಬಿಭೇದೀದೃಜ್ಞ್ಸ್ಯ
ರಾಷ್ಟ್ರಂ ವಿಪರ್ಯಾವರ್ತಯತೀತಿ ತಸ್ಯ ವಜ್ರಮಾದಾಯ
ಶೀರ್ಷಾಣ್ಯಚ್ಛಿನತ್—ತೈ. ಸಂ. ೨–೫–೧–೧

ತ್ವಷ್ಟೃಪುತ್ರನಾದ ವಿಶ್ವರೂಪನು ದೇವತೆಗಳ ಪುರೋಹಿತನಾಗಿದ್ದನು. ಅವನು ಒಬ್ಬ ಅಸುರನ ತಂಗಿಯ ಮಗನಾದುದರಿಂದ, ರಾಜ್ಯವನ್ನು ಪರಾಧೀನ ಮಾಡಬಹುದೆಂದು ಹೆದರಿ ಇಂದ್ರನು ತನ್ನ ವಜ್ರಾಯುಧದಿಂದ ಅವನ ಶಿರಚ್ಛೇದನವನ್ನು ಮಾಡಿದನು. ತೈತ್ತರೀಯ ಸಂಹಿತೆಯಲ್ಲಿ ಹೀಗೆ ಹೇಳಿರುವುದಲ್ಲದೆ, ಇಂದ್ರನಿಗೆ ಬ್ರಹ್ಮಹತ್ಯಾ ದೋಷವು ಬಂದಿತೆಂದೂ ಅದರಲ್ಲಿ ಹೇಳಿದೆ. ಅದನ್ನು ಇಂದ್ರನು ಹೇಗೆ ಬಗೆಹರಿಸಿಕೊಂಡನೆಂಬುದು ಇಲ್ಲಿ ಅನಗತ್ಯ. ಆದರೆ ಹೀಗೆ ಬಿತ್ತಿದ ವಿಷಬೀಜವು ಹೇಗೆ ದ್ವೇಷದ ಬೆಳೆಯನ್ನು ಕೊಟ್ಟಿತೋ ನೋಡುವ. ತ್ವಷ್ಟೃವಿಗೆ ತನ್ನ ಮಗನನ್ನು ಕೊಂದ ಇಂದ್ರನ ಮೇಲೆ ಕೋಪ ಬಂದಿತು. ಇಂದ್ರನನ್ನು ಕೊಲ್ಲುವ ಮಗನು ತನಗೆ ಹುಟ್ಟಲೆಂದು ಅವನು ಯಜ್ಞಮಾಡಿದನು. ಅದಕ್ಕಾಗಿ ಅವನು "ಸ್ವಾಹೇಂದ್ರ ಶತ್ರುರ್ವರ್ಧಸ್ವ" ಎಂಬ ಮಂತ್ರದಿಂದ ಹೋಮಮಾಡಿದನು. ಆದರೆ ಇಂದ್ರಶತ್ರುಃ ಎಂಬ ಶಬ್ದವನ್ನು ಉಚ್ಚರಿಸುವಾಗ ಸ್ವರವ್ಯತ್ಯಾಸವಾದುದರಿಂದ ಮಂತ್ರದ ಅರ್ಥವು ಇಂದ್ರನಿಂದ ಕೊಲ್ಲಲ್ಪಡುವ ಮಗನು ಹುಟ್ಟಲೆಂದು ತೋರಿದಂತಾಗಿ ಅಂತಹ ಮಗನು ಹುಟ್ಟಿದನು. ಆ ಮಗನೇ ಇಂದ್ರನ ಪ್ರಬಲಶತ್ರುವಾದ ವೃತ್ರನು. ಇಂದ್ರನ ಮಹತ್ಕಾರ್ಯವೆಂದರೆ ಈ ವೃತ್ರನನ್ನು ಮರುತರ ಮತ್ತು ವಿಷ್ಣುವಿನ ಸಹಾಯದಿಂದ ಹೇಗೋ ಮಾಡಿ ಕೊಂದುದೇ. ಅನೇಕ ಋಕ್ಕುಗಳಲ್ಲಿ ಇವನ ಹೆಸರು ಬಂದಿರುವುದು. ವೃತ್ರನೊಡನೆ ಸೇರಿಕೊಂಡಿದ್ದ ಅಗ್ನಿ-ಸೋಮರನ್ನು ಉಪಾಯದಿಂದ ತಮ್ಮ ಕಡೆಗೆ ತಿರುಗಿಸಿಕೊಂಡು ಇಂದ್ರನು ವೃತ್ರನನ್ನು ಕೊಂದನೆಂದು ಋಗ್ವೇದದಲ್ಲಿಯೇ ಹೇಳಿರುವುದರಿಂದ ದೇವತೆಗಳಲ್ಲಿ ಕೆಲವರು ಆ ದೈತ್ಯನ ಕಡೆ ಸೇರಿದ್ದಂತೆ ತೋರುವುದು. ದೇವಡುಯವರ 'ಮಹಾಕ್ಷತ್ರಿಯ' ಕಾದಂಬರಿ ಈ ವಿಷಯವಾದುದೆ.

ಆರ್ಯರಲ್ಲಿ ಉಂಟಾದ ಒಡಕಿಗೆ ರಾಜಕೀಯ ಕಾರಣಗಳನ್ನು ಮೇಲೆ ಹೇಳಲಾಯಿತು. ಇನ್ನು ಧಾರ್ಮಿಕ ವಾತಾವರಣದಲ್ಲಿಯೂ ಇದ್ದ ಭಿನ್ನಾಭಿಪ್ರಾಯಗಳು ಘರ್ಷಣೆಗೆ ಹೇಗೆ ಕಾರಣಗಳಾದುವೆಂಬುದನ್ನು ಹೇಳಲಾಗುವುದು. ಯಜ್ಞಯಾಗಾದಿ ಕಾರ್ಯಗಳನ್ನು ಶುಭ ಕಾರ್ಯಗಳೆಂದು ಮಾಡುತ್ತಿದ್ದಾಗ ಬಂಧುಮಿತ್ರರು ಸೇರಬೇಕಷ್ಟೆ. ಋಷಿಗಳಲ್ಲಿ ಕೆಲವರು ದೈತ್ಯರೊಡನೆ ಬಾಂಧವ್ಯ ಮಾಡಿದ್ದರೆಂಬುದು ಮೇಲೆ ಹೇಳಿರುವುದರಿಂದ ತಿಳಿದುಬರುವುದು. ಯಜ್ಞಮಾಡುವಾಗ ಬಾಂಧವರಾದ ದೈತ್ಯರನ್ನು ಕರೆಯುತ್ತಿದ್ದುದು ಅಪರೂಪವಲ್ಲವೆಂದು

ಕಾಣುತ್ತದೆ. ದೈತ್ಯರನ್ನು ಆಹ್ವಾನ ಮಾಡುವವರನ್ನು ಮರುತ್ತುಗಳು ಅಂಧಕಾರದಲ್ಲಿ ನೂಕಲೆಂದು ಪ್ರಾರ್ಥಿಸುವ ಋಕ್ಕಿನ ಭಾಗವಿದು: **"ಯ ಓಹತೇ ರಕ್ಷಸೋ ದೇವವೀತಾವ ಚಕ್ರೇಭಿಸ್ತಂ ಮರುತೋ ನಿಯಾತ"** (ಋ. ೫–೪೨–೧೦). ರಾಕ್ಷಸರ ಕಡೆ ಸೇರಿಕೊಂಡರೆಂಬ ಅಪಖ್ಯಾತಿ ವಶಿಷ್ಠರಂತಹ ಹಿರಿಯ ಋಷಿಗಳಿಗೂ ಬಂದಿತು. ಇವರು, ಋಗ್ವೇದದಲ್ಲಿ, ಹೇಳಿರುವಂತೆ ಹತ್ತು ಜನ ಶತ್ರುರಾಜರನ್ನು ಗೆದ್ದ ಸುದಾಸನೆಂಬ ಆರ್ಯರ ರಾಜನಿಗೆ ಪುರೋಹಿತರಾಗಿದ್ದು ಆ ಯುದ್ಧದಲ್ಲಿ ಅವನಿಗೆ ಸಹಾಯಮಾಡಿದವರು. ಆದರೆ ಹೇಗೋ ಇವರಿಬ್ಬರಿಗೂ ವಿದ್ವೇಷವು ಬಳೆದು ಸುದಾಸನ ಮಕ್ಕಳು, ಇನ್ನೊಬ್ಬ ಪುರೋಹಿತರಾದ ವಿಶ್ವಾಮಿತ್ರ ಋಷಿಯ ಪ್ರಚೋದನೆಯಿಂದಲೋ ಏನೋ ವಶಿಷ್ಠರ ನೂರು ಮಂದಿ ಮಕ್ಕಳನ್ನು ಕೊಂದುಹಾಕಿದರು. ಹೀಗೆ ವಿದ್ವೇಷವು ಬೇಯುತ್ತಿದ್ದಾಗ ವಿಶ್ವಾಮಿತ್ರ ಋಷಿಯು ವಶಿಷ್ಠರನ್ನೇ "ರಾಕ್ಷಸ" ಎಂದು ಕರೆದಂತೆ ಕಾಣುತ್ತದೆ. ವಶಿಷ್ಠರು ಹಾಗೆ ಕರೆದವರೇ ರಾಕ್ಷಸರೆಂದು ಹೇಳಿ ಶಪಿಸಿದುದು ಈ ಕೆಳಗಿನ ಋಗ್ವೇದ ಮಂತ್ರದಿಂದ ಕಂಡುಬರುವುದು:

> ಯೋ ಮಾಯಾತುಂ ಯಾತುಧಾನೇತ್ಯಾಹ ಯೋ ವಾ ರಕ್ಷಾಃ ಶುಚಿರಸ್ಮೀತ್ಯಾಹ ।
> ಇಂದ್ರಸ್ತಂ ಹಂತು ಮಹತಾ ವಧೇನ ವಿಶ್ವಸ್ಯ ಜಂತೋರಧಮಸ್ಪದೀಷ್ಟ ॥
>
> (ಋ. ೭–೧೦೪–೧೬)

ವಿಶ್ವಾಮಿತ್ರನೇ ರಾಕ್ಷಸನೆಂದು ವಶಿಷ್ಠರು ಹೇಳಿದುದರಲ್ಲಿ ಸತ್ಯಾಂಶವಿರಬಹುದು. ಯಜ್ಞಯಾಗಾದಿಗಳನ್ನು ಮಾಡದೆ ಅವುಗಳಿಗೆ ವಿಘ್ನವನ್ನು ಮಾಡುತ್ತಿದ್ದವರೇ ರಾಕ್ಷಸರು. ವಿಶ್ವಾಮಿತ್ರನು ಕ್ಷತ್ರಿಯನಾಗಿ ಹುಟ್ಟಿ ಋಷಿಯಾದವನು. ಯಜ್ಞಯಾಗಾದಿಗಳನ್ನು ಕಡೆಗಣ್ಣಿನಲ್ಲಿ ನೋಡುವ ಉಪನಿಷತ್ತುಗಳಿಗೆ ಮೊದಲು ಪ್ರೋತ್ಸಾಹವಿತ್ತವರೇ ಕ್ಷತ್ರಿಯ ರಾಜರೆಂಬುದು ತಜ್ಞರು ನಿಶ್ಚಯಿಸಿದ ಮಾತು. ಕಾಶಿ, ಕೋಸಲ, ವಿದೇಹ, ಮಗಧ ರಾಜ್ಯಗಳನ್ನೊಳಗೊಂಡ ಪೂರ್ವ ದೇಶದಲ್ಲಿ ಯಜ್ಞವಿರೋಧಿಗಳಿರುವುದರಿಂದಲೂ, ಯಜ್ಞವಿರೋಧ ಧರ್ಮವನ್ನು ಅಲ್ಲಿನ ಜನರು ಆಚರಿಸುವುದರಿಂದಲೂ, ಅವರು ಬ್ರಾಹ್ಮಣ್ಯಕ್ಕೆ ಗೌರವವನ್ನು ಕೊಡದಿರುವುದರಿಂದಲೂ, ಅವರಿಗೆ ಶುದ್ಧವಾದ ಸಂಸ್ಕೃತವನ್ನು ಆಡುವುದಕ್ಕೆ ಬಾರದಿರುವುದರಿಂದಲೂ, ಆರ್ಯರು ಆ ದೇಶಗಳಲ್ಲಿ ಪ್ರಯಾಣಮಾಡಬಾರದೆಂದು ಶತಪಥ ಬ್ರಾಹ್ಮಣದಲ್ಲಿ ವಿಧಿಸಿದೆ; ಇದು ಆ ರಾಜ್ಯಗಳಲ್ಲಿ ರಾಜಾಶ್ರಯದಲ್ಲಿ ನಡೆಯುತ್ತಿದ್ದ ಸುಧಾರಣೆಯನ್ನು ಸೂಚಿಸುತ್ತದೆ. ಈ ರಾಜ್ಯಗಳನ್ನು ಆಶ್ರಯಿಸಿದ್ದ ಋಷಿ ಪುರೋಹಿತರು ಈ ಸುಧಾರಣೆಗೆ ವಿರುದ್ಧವಾಗಿರಲಿಲ್ಲ. ಬ್ರಹ್ಮಸೃಷ್ಟಿಗೆ ಪ್ರತಿಸೃಷ್ಟಿಯನ್ನು ಮಾಡುವೆನೆಂದು ಪಣ ತೊಟ್ಟನೆಂದು ಪ್ರಸಿದ್ಧನಾಗಿರುವ ವಿಶ್ವಾಮಿತ್ರನು ಸಂಪ್ರದಾಯಶರಣನಾಗಿರಲಾರನು. ಯಜ್ಞಯಾಗಾದಿಗಳಲ್ಲಿ ಪಶುಬಲಿಗೆ ಬದಲಾಗಿ ನರಬಲಿಯನ್ನು ಕೊಡುವುದನ್ನು ನೋಡಿದ ವಿಶ್ವಾಮಿತ್ರನು, ಮೊದಲು ಸಂಪ್ರದಾಯಕ್ಕನುಸರಿಸಿ ಆ ಯಾಗದಲ್ಲಿ ಭಾಗಿಯಾದರೂ, ಯಜ್ಞಪಶುವಾದ ಶುನಶ್ಶೇಫನ ಗೋಳನ್ನು ನೋಡಿದಾಗ ಮನಸ್ಸು ಕರಗಿರಬೇಕು. "ವೇದವನೋದಿದವರ ಮುಂದೆ ಅಳು ಕಂಡೆಯಾ" ಎಂದು ಶುನಶ್ಶೇಫನನ್ನು ಕುರಿತು ಉದ್ಗಾರ ತೆಗೆದಿರಬೇಕು. ಒಂದು ನೂರು ಗೋವುಗಳಿಗೆ ಒಬ್ಬ ಮಗನನ್ನು ನರಬಲಿಗಾಗಿ ಮಾರಿ, ಮತ್ತೊಂದು ನೂರು ಗೋವುಗಳನ್ನು ಪಡೆದು ಅವನನ್ನು ಯೂಪಕ್ಕೆ ಬಂಧಿಸಿ, ಮಗುದೊಂದು ನೂರು ಗೋವುಗಳನ್ನು ಗಿಟ್ಟಿಸಿಕೊಂಡು ಆ ಮಗನನ್ನು ಕೊಲ್ಲಲು ಸಿದ್ಧನಾದ ಅಜೀಗರ್ತನಂತಹ ಋಷಿಯನ್ನು ಪಡೆದ ಮತ್ತು ಅಂತಹವನನ್ನು ಪ್ರೋತ್ಸಾಹಿಸಿದ ಸಮಾಜಕ್ಕೆ ವಿಶ್ವಾಮಿತ್ರ ಋಷಿಯು ಧಿಕ್ಕಾರ

ವೆಂದಿರಬೇಕು. ರಾಮಾಯಣದಲ್ಲಿ, ಶುನಶ್ಶೇಫನನ್ನು ನರಬಲಿಯಿಂದ ಬಿಡಿಸಲು ಸಹಾಯ ಮಾಡಿದವನು ವಿಶ್ವಾಮಿತ್ರನೆಂದು ಹೇಳಿದೆ.

"The mythic rivalry of Visvamitra and Vasistha and the story of Sunassepa occurring in Rigvedic hymns similarly indicates the instance of and rivalry between the two schools of thought sanctioning the sacrifice and the other opposing it."—Article in *Cultural Heritage of India*, Vol. I, pp. 185–89.

ಈ ಆಧಾರಗಳಿಂದ ತಿಳಿದುಬರುವಂತೆ ವಿಶ್ವಾಮಿತ್ರನು ಪ್ರಗತಿಪರ ಋಷಿಯಾಗಿದ್ದು ಸಂಪ್ರದಾಯಶರಣರ ಕಣ್ಣಿನಲ್ಲಿ ಯಜ್ಞವಿರೋಧಿಯಾದ ರಾಕ್ಷಸನೇ ಆಗಿರಬೇಕು.

ಇಂದ್ರನ ಪ್ರಬಲ ವಿರೋಧಿಯಾದ ವೃತ್ರನನ್ನು ಸಂಹರಿಸಲು ಇತರರೆಲ್ಲರೂ ಓಡಿ ಹೋದರೂ ಹೆದರದೆ ಇಂದ್ರನೊಡನೆ ಸಹಕರಿಸಿದವರು ಮರುತರೆಂಬುದನ್ನು ಋಗ್ವೇದದಲ್ಲಿ ಮತ್ತೆ ಮತ್ತೆ ಹೇಳಿದೆ. ಆದರೆ ವೃತ್ರಾಸುರನ ವಧೆಯಾದಮೇಲೆ ಇಂದ್ರನು ಮರುತರನ್ನು ಧಿಕ್ಕರಿಸಲು ಹಿಂಜರಿಯಲಿಲ್ಲ.

ಕ್ವ ಸ್ಯಾ ವೋ ಮರುತಃ ಸ್ವಧಾಸೀದ್ಯನ್ಮಾಮೇಕಂ ಸಮಧತ್ತಾಹಿಹತ್ಯೇ ।
ಅಹಂ ಹ್ಯುಗ್ರಸ್ತವಿಷಸ್ತು‌ವಿಷ್ಮಾನ್ ವಿಶ್ವಸ್ಯ ಶತ್ರೋರನಮಂ ವಧಸ್ನೈಃ ॥

(ಋ. ೧–೧೬೫–೬)

ಇದರ ಹಿಂದಿನ ಮಂತ್ರದಲ್ಲಿ ಮರುತರು "**ಇಂದ್ರ, ಸ್ವಧಾಂ ಅನು ಹಿ ನಃ ಬಭೂತ**" ಎಂದು ಹೇಳಿ, ತಮ್ಮ ಬಲದಿಂದ ಇಂದ್ರನಿಗೆ ದೊರೆತ ಸಹಾಯವನ್ನು ಅವನಿಗೆ ಜ್ಞಾಪಿಸುತ್ತಾರೆ. ಅದಕ್ಕೆ ಉತ್ತರವಾದ ಈ ಮಂತ್ರದಲ್ಲಿ ಇಂದ್ರನು ಮರುತರಿಗೆ ಅಂತಹ ಬಲವೆಲ್ಲಿಂದ ಬಂದಿತು ಎಂದು ಪ್ರಶ್ನಿಸಿ, ಅತಿ ಬಲಿಷ್ಠನಾದ ತನ್ನಿಂದಲೇನೆ ವೃತ್ರಾಸುರನ ವಧೆಯಾಯಿತೆಂದು ಹೇಳಿ, ಅವರನ್ನು ನಿರಾಕರಿಸುತ್ತಾನೆ. ಮುಂದೆ ಅಗಸ್ತ್ಯ ಋಷಿಯು ಮರುತರುಗಳಿಗಾಗಿ ತೆಗೆದಿಟ್ಟಿದ್ದ ಹವಿಸ್ಸನ್ನು ದೂರವಾಗಿಟ್ಟು ಇಂದ್ರನ ಭಯದಿಂದ ನಡುಗುತ್ತ ಓಡುವುದನ್ನು ಒಂದು ಮಂತ್ರವು (ಋ. ೧–೧೭೧–೬) ತಿಳಿಸುತ್ತದೆ. ಹೀಗೆ ವಿರುದ್ಧಬರುವ ಮೊದಲು ಇಂದ್ರ-ಮರುತರ ಸಹಚರ್ಯವು ಅನೇಕ ಮಂತ್ರಗಳಲ್ಲಿ ಹೇಳಿದೆ. ಅಷ್ಟೇಕೆ, ಅವರು ಭ್ರಾತೃಗಳೆಂದೇ ಅನೇಕ ವೇಳೆ ಹೇಳಿದೆ. ಋ. ೧–೧೭೦–೨ರಲ್ಲಿ "**ಭ್ರಾತರಃ ಮರುತಃ ತವ**" ಎಂದು ಹೇಳಿರುವ ವಿಷಯದಲ್ಲಿ ಸಾಯಣಾಚಾರ್ಯರು ಭಾಷ್ಯವನ್ನು ಬರೆಯುತ್ತ "**ಮರುತಾಮಿಂದ್ರಭ್ರಾತೃತ್ವಮೇಕಸ್ಮಿನ್ನೇವಾದಿತಿ ಗರ್ಭ ಉತ್ಪನ್ನತ್ವಾತ್ । ಸಾಚೋತ್ಪತ್ತಿಃ ಪುರಾಣೇಷು ಪ್ರಸಿದ್ಧಾ ।**" ಎಂದರೆ ಅದಿತಿಯ ಹೊಟ್ಟೆಯಲ್ಲಿ ಮರುತರೂ ಇಂದ್ರನೂ ಹುಟ್ಟಿದರಾದುದರಿಂದ ಅವರು ಭ್ರಾತೃಗಳೆಂದೂ, ಇದು ಪುರಾಣಪ್ರಸಿದ್ಧವಾದ ವಿಷಯವೆಂದೂ ಹೇಳಿದ್ದಾರೆ. ಈ ವಿಷಯವನ್ನು ಬೃಹದ್ದೇವತೆಯಲ್ಲಿಯೂ ಹೇಳಿದೆ. ಮರುತರನ್ನು "**ಪೃಶ್ನಿಮಾತರಃ**" ಎಂದೂ, "**ಗೋಮಾತರಃ**" ಎಂದೂ ಋಗ್ವೇದದಲ್ಲಿ ಅನೇಕ ಸಲ ಕರೆದಿರುವುದು ಕಂಡುಬರುವುದು. ಅದಿತಿಯನ್ನು ಋಗ್ವೇದದಲ್ಲಿಯೇ (೧–೧೫೩–೩; ೮–೯೦–೧೫) ಗೋವೆಂದು ಕರೆದಿರುವುದು ಇದಕ್ಕೆ ಸರಿಹೊಂದುತ್ತದೆ. ಆದರೆ ಮರುತರು ಇಂದ್ರನನ್ನು ಜಯಿಸುವುದಕ್ಕಾಗಿಯೇ ದಿತಿಯ ಹೊಟ್ಟೆಯಲ್ಲಿ ಹುಟ್ಟಿದವರೆಂಬುದಕ್ಕೆ ಸಹಾ ಆಧಾರವು ಹುಟ್ಟಿತೆಂಬುದನ್ನು ಮುಂದೆ ತೋರಿಸಲಾಗುವುದು. ಈ ಆಧಾರವು ಇಂದ್ರನಿಗೂ

ಮರುತರಿಗೂ ಮೇಲೆ ಹೇಳಿದಂತೆ ವಿದ್ವೇಷ ಬಳೆದಮೇಲೆ ಹುಟ್ಟಿರಬೇಕು. ಏಕೆಂದರೆ, ಆ ಐತಿಹ್ಯದಲ್ಲಿ ಋಗ್ವೇದದಲ್ಲೆಲ್ಲಿಯೂ ಹೇಳಲ್ಪಡದಿರುವ ಪಾರ್ವತಿಯು ರುದ್ರದೇವನ ಪತ್ನಿಯಾಗಿದ್ದಾಳೆ. ಅಂತೂ ಒಬ್ಬ ದೈತ್ಯನನ್ನೂ ಕೊಲ್ಲದೆ ಋಗ್ವೇದದಲ್ಲಿ ಅಪ್ರಸಿದ್ಧನಾದ ರುದ್ರದೇವತೆಗೆ ದ್ರಾವಿಡಶಿವನ ಪದವಿ ಬರುವ ಹೊತ್ತಿಗೆ ಅವನ ಪುತ್ರರಾದ ಮರುತರು ಇಂದ್ರನ ಭ್ರಾತೃತ್ವವನ್ನು ಕಳೆದುಕೊಂಡು ಇಂದ್ರನನ್ನೇ ಜಯಿಸಲು ದೈತ್ಯಮಾತೆಯಾದ ದಿತಿಯ ಗರ್ಭದಲ್ಲಿ ಉದಯಿಸುವಂತಾಯಿತು. ದೈತ್ಯರು ಆರ್ಯವಿರೋಧಿಗಳಾದುದರ ಹಿನ್ನೆಲೆ ಇದು. ಹೀಗಾಗಿ, ದೈತ್ಯರೂ ದ್ರಾವಿಡರೂ ಒಂದಾಗಿ ಆರ್ಯರ ಶತ್ರುಗಳಾದರು.

## ಇಂದ್ರನು ದಸ್ಯು-ದಾನವರ ಮೇಲೆ ಯುದ್ಧಮಾಡಿ ಆರ್ಯ ರಾಜ್ಯವನ್ನು ವಿಸ್ತರಿಸಿದನು

ಆರ್ಯರು ಭರತಖಂಡದಲ್ಲಿ ರಾಜ್ಯವನ್ನು ವಿಸ್ತರಿಸಲು ಹೊರಟಾಗ ಅವರನ್ನು ದ್ರಾವಿಡರು ಪ್ರತಿಭಟಿಸಿದರು. ಯಜ್ಞಕ್ಕಾಗಿ ವಿನಿಯೋಗವಾಗದ ದಸ್ಯು-ದೈತ್ಯರ ಧನಕನಕಾದಿಗಳನ್ನೂ, ಯಜ್ಞದಲ್ಲಿ ಉಪಯೋಗಿಸಲು ದಧಿಕ್ಷೀರಘೃತಗಳಿಗಾಗಿ ಅವರ ಗೋವುಗಳನ್ನೂ ಬಲವಂತ ದಿಂದ ಪಡೆಯುವುದು ಆರ್ಯರಿಗೆ ಧರ್ಮವಾಗಿ ಕಂಡಿತು. ಇದಕ್ಕಾಗಿ ಇಂದ್ರನ ಸಹಾಯ ವನ್ನು ಕೋರಿದ ಅನೇಕ ಋಕ್ಕುಗಳಿವೆ. ದಸ್ಯುಗಳೂ ದೈತ್ಯರೂ ಆರ್ಯರ ಗೋವುಗಳನ್ನು ತೆಗೆದುಕೊಂಡುಹೋಗಿ ಪ್ರತೀಕಾರಮಾಡುತ್ತಿದ್ದರು. ಅವರು ಬೆಟ್ಟಗುಡ್ಡಗಳ ಮೇಲೆ ವಾಸ ಮಾಡುತ್ತ, ಕೆಳಗೆ ಹರಿವ ನೀರನ್ನು ತಡೆದು ಅಡ್ಡಗಟ್ಟೆಯನ್ನು ಕಟ್ಟಿ, ಉಪಯೋಗಿಸಿಕೊಳ್ಳು ತ್ತಿದ್ದುದರಿಂದ, ಅನೇಕ ವೇಳೆ ಆರ್ಯರಿಗೆ ಉಪಯೋಗವಾಗುತ್ತಿದ್ದ ನೀರು ತಡೆಯಲ್ಪಡುತ್ತಿತ್ತು. ಆರ್ಯ ಪ್ರಮುಖರು ದಸ್ಯುಗಳನ್ನೂ ದಾನವರನ್ನೂ ಜಯಿಸಿ ಅವರ ಕೋಟೆಗಳನ್ನೂ ಅಡ್ಡ ಗಟ್ಟೆಗಳನ್ನೂ ಒಡೆದು, ಅವರ ಗೋವುಗಳನ್ನೂ, ಅವರು ತಡೆದಿದ್ದ ನೀರನ್ನೂ ಬಿಡಿಸಿಕೊಂಡು ಬರುತ್ತಿದ್ದರು. ಇಂತಹ ಆರ್ಯ ಪ್ರಮುಖರಲ್ಲಿ ಅತ್ಯಂತ ಶೂರನಾದವನನ್ನು ಇಂದ್ರಪದವಿಗೆ ಬಹುಕಾಲದ ನಂತರ ಏರಿಸಿರಬೇಕು. ನೀರನ್ನು ತಡೆದ ಬೆಟ್ಟಗುಡ್ಡಗಳು ಮೋಡಗಳಾದವು; ಇಂದ್ರನಿಗೆ ಸಹಾಯಮಾಡಿದವರು ಮಳೆಯೊಡನೆ ಬರುವ ಗಾಳಿಗಳಾದರು. ಹೀಗೆ ದೇವತೆಗಳ ಆವಿರ್ಭಾವವಾಗಿರಬೇಕು. ಇದು ಹೇಗೇ ಇರಲಿ, ಇಂದ್ರದೇವನ ಕಾರ್ಯಗಳು ನಡೆದುದಂತೂ ಈ ಭೂಮಿಯಲ್ಲಿಯೇ ಬಹಳ. ಅವನು ಆರ್ಯರಾಜರ ಶತ್ರುಗಳನ್ನು ಗೆದ್ದು ಅವರಿಗೆ ಸಹಾಯ ಮಾಡಿದನು. ದಸ್ಯುಗಳನ್ನು ಗೆದ್ದಮೇಲೆ, ಇಂತಹವನೊಬ್ಬ ಆರ್ಯರಾಜನನ್ನು ಇಂದ್ರನು ತನ್ನ ಮನೆಗೆ ಕರೆದುಕೊಂಡು ಹೋದಾಗ ಇಂದ್ರಾಣಿಯು ಸಮಾನರೂಪರಾಗಿದ್ದ ಅವರಿಬ್ಬರಲ್ಲಿ ಯಾರು ತನ್ನ ಪತಿಯೆಂಬುದನ್ನು ಅರಿಯಲಾರದೆ ಹೋದಳಂತೆ (ಋ. ೪–೧೬–೯ ಮತ್ತು ೧೦). ಇದರ ಮುಂದಿನ ಹದಿಮೂರನೆಯ ಋಕ್ಕಿನಲ್ಲಿ ಹೀಗೆ ಹೇಳಿದೆ: **"ಪಂಚಾಶತ್ ಕೃಷ್ಣಾನಿ ವಪಃ ಸಹಸ್ರಾಕ್ಕಂ ನ ಪುರೋ ಜರೀಮಾವಿ ದರ್ಪಃ"** ಐದು ಸಹಸ್ರ ಕಪ್ಪು ಬಣ್ಣದ ದಸ್ಯುಗಳು ಇಂದ್ರನಿಂದ ಹತರಾದರಂತೆ; ಮುಪ್ಪು ರೂಪನ್ನು ನಾಶಮಾಡುವಂತೆ ಪಟ್ಟಣ ಗಳು ನಾಶವಾದವಂತೆ. ಋ. ೬–೧೮–೩ ರಲ್ಲಿ ಹೇಳಿದಂತೆ ಇಂದ್ರನು ದಸ್ಯುಗಳನ್ನು ಆರ್ಯರ ಅಧೀನಕ್ಕೆ ಕೊಟ್ಟನು. ಹೀಗೆ ಇಂದ್ರನ ಸಾಹಸಗಳು ಭೂಮಿಯ ಮೇಲೆ ನಡೆದವುಗಳಾಗಿವೆ.

ಇತರ ದೇವತೆಗಳ ವಿಷಯವು ಹೇಗೇ ಇರಲಿ, ಮರುತರಂತೂ ಇಹಲೋಕಕ್ಕೆ ಸಂಬಂಧ ಪಟ್ಟವರು. ಇವರು ದಿತಿಯ ಹೊಟ್ಟೆಯಲ್ಲಿ ಹುಟ್ಟಿದವರಷ್ಟೆ. ದಿತಿಯೆಂದರೆ ಭೂಮಿ

ತಾಯಿಯೇ. ಮರುತರು ರುದ್ರಪುತ್ರರೂ ಆಹುದು. ಋ. ೨-೩೪-೨ರ ಸಾಯಣ ಭಾಷ್ಯ ದಲ್ಲಿ ಇವರ ವಿವರಣೆಯು ಹೀಗಿದೆ:

ಪೃಶ್ನಿರ್ನಾನಾವರ್ಣೇಯಂ ಭೂಮಿಃ ಪುರಾ ಗೋರೂಪಧರಾಸೀತ್; ತಸ್ಯಾಂ ಮಹೇಶೋ ವೃಷೋ ಭೂತ್ವಾ ಮರುತ ಉತ್ಪಾದಯಾಮಾಸೇತ್ಯಾಚಕ್ಷತೇ.

ನಾನಾವರ್ಣವುಳ್ಳ ಭೂಮಿಯು ಗೋರೂಪವನ್ನು ಧರಿಸಿದ್ದಾಗ ಮಹೇಶನು ವೃಷಭರೂಪವಾಗಿ ಬಂದು ಮರುತ್ತುಗಳನ್ನು ಹುಟ್ಟಿಸಿದನು, ಎಂಬುದು ಇದರ ಅರ್ಥ. ಆದುದರಿಂದ ಮರುತ್ತುಗಳು ಈ ಭೂಮಿಯ ಜನರೇ. ಋ. ೫-೬೨-೮ರ ಸಾಯಣ ಭಾಷ್ಯದಲ್ಲಿ "ದಿತಿಂ ಖಂಡಿತಾಂ ಪ್ರಜಾದಿಕಾಂ" ದಿತಿಯೆಂದರೆ ಖಂಡರೂಪವಾದ ಪ್ರಜೆಗಳೆಂದು ಅರ್ಥಮಾಡಿರುವುದು, ದಿತಿಶಬ್ದವು ಭೂಮಿಗೆ ಸಂಬಂಧಪಟ್ಟುದೆಂಬುದನ್ನು ಸಮರ್ಥಿಸುತ್ತದೆ. ಆದುದರಿಂದ ಮರುತ ರೆಂದರೆ ಈ ಭೂಮಿಯ ಮೇಲಿರುವ ರುದ್ರಪುತ್ರರೆಂಬುದು ಸ್ಪಷ್ಟ. ಋ. ೧-೧೭೧-೬ರಲ್ಲಿ "ತ್ವಂ ಪಾಹೀಂದ್ರಸಹೀಯಸೋನ್ನೃನ್" ಎಂಬುದರಲ್ಲಿನ "ನೃನ್" ಎಂಬ ಪದಕ್ಕೆ "ನೇತೄನ್ ಮನುಷ್ಯಾನಸ್ಮಾನ್ ಮರುತೋ ವಾ" ಎಂದು ಸಾಯಣಾಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ಮರುತ್ತುಗಳಿಗೆ ವಿಶೇಷಣರೂಪದಲ್ಲಿ ಋಗ್ವೇದದಲ್ಲಿ "ನೃ." ಪದ ವನ್ನಲ್ಲದೆ, ಅನೇಕ ಸಲ "ನರಃ" ಎಂಬ ಪದವನ್ನು ಸಹಾ ಉಪಯೋಗಿಸಿದೆ (ಋ. ೧-೬೪-೪; ೧-೬೪-೧೦ ಇತ್ಯಾದಿ). "ಮರ್ಯಶಬ್ದೋ ಮನುಷ್ಯವಾಚೀ" ಎಂದು ಸಾಯಣರು ಹೇಳಿರುವುದು ಮರುತರು ಮನುಷ್ಯರೆಂಬುದನ್ನೇ ದೃಢಪಡಿಸುವುದು. ಮಥಿತಾರ್ಥವೇನೆಂದರೆ ಆರ್ಯರು ಭಾರತದಲ್ಲಿ ತಮ್ಮ ರಾಜ್ಯವನ್ನು ವಿಸ್ತರಿಸುವಾಗ ಹೊರಗಿನ ಶತ್ರುಗಳನ್ನಲ್ಲದೆ, ಒಳಗಿನ ಶತ್ರುಗಳನ್ನೂ ಎದುರಿಸಬೇಕಾಯಿತು. ಈ ಒಡಕಿಗೆ ರಾಜಕೀಯ ಹಾಗೂ ಧಾರ್ಮಿಕ ಕಾರಣಗಳಿದ್ದವು. ದ್ರಾವಿಡರ ನಾಗರಿಕತೆಯೂ, ಧಾರ್ಮಿಕ ಭಾವನೆಯ ಹಿರಿಮೆಯೂ ಆರ್ಯರಲ್ಲಿ ಬುದ್ಧಿವಂತರಾದವರ ಮೇಲೆ ಪರಿಣಾಮಮಾಡಿತಲ್ಲದೆ, ಅವರು ದ್ರಾವಿಡರೊಡನೆ ಸೇರಿಕೊಂಡು ಹಿಂಸಾತ್ಮಕವಾದ ಯಜ್ಞಯಾಗಾದಿಗಳನ್ನು ವಿರೋಧಿಸುವಂತೆ ಮಾಡಿತು. ಆರ್ಯರ ವಂಶದವರೇ ಆದ ದೈತ್ಯರು ದ್ರಾವಿಡರೊಡನೆ ಸೇರಿಕೊಂಡು ಯಜ್ಞಧ್ವಂಸಕರಾದರು. ಮುಂದೆ ವಾತಾವರಣವು ತಿಳಿಯಾಗುತ್ತ ಬಂದು, ದ್ರಾವಿಡರೂ ಆರ್ಯರೂ ಮಿಳಿತವಾಗುತ್ತ ಬಂದಂತೆ ಯಜ್ಞಧ್ವಂಸಾದಿ ಕಾರ್ಯಗಳು ನಿಂತುಹೋದವು. ಆರ್ಯಕರ್ಮಠರ ಪ್ರಾಬಲ್ಯವು ಕಡಮೆಯಾಯಿತು. ಮುಂದೆ, ಇವರನ್ನು ವಿರೋಧಿಸಿದವರು ಯಜ್ಞಧ್ವಂಸಿಗಳಾಗದೆಹೋದರೂ ಯಜ್ಞಮಾಡುವುದರಲ್ಲಿ ಸಹಕರಿಸದೆ ಅದಕ್ಕೆ ಅಧಿಕಾರವನ್ನು ಕೊಡುವ ಉಪನಯನವನ್ನು ತಿರಸ್ಕರಿಸಿ ವ್ರಾತ್ಯರಾದರು. ಆದುದರಿಂದಲೇ ಋ. ೬-೩೩-೩ರಲ್ಲಿ "ತ್ವಂ ತಾ ಇಂದ್ರೋಭಯಾ ಅಮಿತ್ರಾನ್ ದಾಸಾ ವೃತ್ರಾಣ್ಯಾರ್ಯಾ ಚ ಶೂರವಧೀಃ" ಎಂದು ಹೇಳಿದೆ. ಶತ್ರುಗಳಾದ ಆರ್ಯರ ಗುಂಪಿನವರನ್ನೂ ದಾಸರನ್ನೂ ಇಂದ್ರನು ವಧಿಸಿರುವನೆಂದು ಇದರ ಅರ್ಥ.

ಆರ್ಯರಲ್ಲದ ದಾಸ, ದಸ್ಯು, ಫಣಿ ಮೊದಲಾದ ಶತ್ರುಗಳೊಡನೆ ಆರ್ಯರು ಯುದ್ಧ ಮಾಡಬೇಕಾದುದನ್ನು ಋಗ್ವೇದದಲ್ಲಿ ಅನೇಕ ಕಡೆ ಹೇಳಿದೆ. "ದಾಸೋ ದಸ್ಯತೇರು ಪದಾಸಯತಿ ಕರ್ಮಾಣಿ" (ನಿ. ೨-೧೮) ಎಂಬ ಆಧಾರವಿದೆ. ದಾಸ ಮತ್ತು ದಸ್ಯು ಎಂಬ ಪದಗಳು 'ದಸ್' ಧಾತುವಿನಿಂದ ನಿಷ್ಪನ್ನವಾಗಿ ನಾಶಮಾಡುವವನು ಎಂಬ ಅರ್ಥವುಳ್ಳವುಗಳಾಗಿವೆ. ಋ. ೫-೨೯-೧೦ರಲ್ಲಿ "ಅನಾಸಃ ದಸ್ಯೂನ್ ಅಮೃಣಃ"

ಎಂದರೆ ಮೂಗಿಲ್ಲದ (ಮೊಂಡಮೂಗಿನ) ದಸ್ಯುಗಳನ್ನು ಹಿಂಸಿಸಿದುದಾಗಿ ಹೇಳಿದೆ. ಈ ಋಕ್ಕಿನಲ್ಲಿಯೇ ಅವರನ್ನು "ಮೃಧ್ರವಾಚಃ" ಎಂದರೆ ಹಿಂಸಾತ್ಮಕ ವಾಕ್ಕುಳ್ಳವ ರೆಂದು ಹೇಳಿದೆ. ಇವರನ್ನು ಕಪ್ಪುಬಣ್ಣದವರೆಂದು ಕರೆದಿರುವುದಕ್ಕೆ ಆಧಾರವಿದೆ. ಆದರೆ ಇವರು ಅನಾಗರಿಕರಲ್ಲ; ಕಬ್ಬಿಣದ (ಎಂದರೆ ಅಷ್ಟು ಬಲವಾದ) ಕೋಟೆಗಳನ್ನು ಕಟ್ಟಿಕೊಂಡು ಬಲಿಷ್ಠರಾಗಿದ್ದರು. "ಹತ್ವೀ ದಸ್ಯೂನ್ ಪುರ ಆಯಸೀರ್ನಿತಾರೀತ್" ಎಂದರೆ ದಸ್ಯುಗಳನ್ನು ಕೊಂದು, ಉಕ್ಕಿನಿಂದ ಮಾಡಿದ ಅವರ ಪಟ್ಟಣಗಳನ್ನು (ಇಂದ್ರನು) ನಾಶಮಾಡಿದುದಾಗಿ ಋ. ೨-೨೦-೮ ರಲ್ಲಿ ಹೇಳಿದೆ. ಅದರ ಹಿಂದಿನ ಋಕ್ಕಿನಲ್ಲಿ "ಸವೃತ್ರ ಹೇನ್ದ್ರಃ ಕೃಷ್ಣಯೋನೀಃ ಪುರಂದರೋ ದಾಸೀರೈರಯದ್ವಿ" ಎಂದರೆ ವೃತ್ರಹಂತಕನೂ ಪುರಂದರನೂ ಆದ ಇಂದ್ರನು ಕಪ್ಪುಜನರ ಪುತ್ರರಾದ ದಾಸರ ಸೇನೆಯನ್ನು ಓಡಿಸಿದನೆಂದು ಹೇಳಿದೆ. ಇಲ್ಲಿ ದಸ್ಯುದಾಸರನ್ನು ಕೃಷ್ಣಯೋನಿಗಳೆಂದು ಹೇಳಿರುವುದು ಗಮನಾರ್ಹ. ಈ ಕಪ್ಪು ಬಣ್ಣದವರು ಅವರ ಶತ್ರುಗಳಷ್ಟು ಕೆಂಪನೆಯ ಬಣ್ಣದವರಲ್ಲವಾದರೂ ಶುದ್ಧ ಕಪ್ಪುಬಣ್ಣ ದವರಲ್ಲ; ಶತ್ರುಗಳು ಹೇಳಿದ ಮಾತದು. ಅವರು, ಅನೇಕರು ತಿಳಿದಿರುವಂತೆ, ಅನಾಗರಿಕರೂ ಅಲ್ಲ. ಅವರು ಉಕ್ಕಿನಂತೆ ಗಟ್ಟಿಯಾದ ಕೋಟೆಗಳನ್ನು ಕಟ್ಟಿಕೊಂಡಿದ್ದರು. ಪುರಂದರನೆಂದರೆ ಕೋಟೆಗಳನ್ನು ಒಡೆಯುವನೆಂದು ಇಂದ್ರನಿಗೆ ಹೆಸರು ಬಂದಿರುವುದರಿಂದಲೇ ಸೈಂಧವ ನಾಗರಿ ಕತೆಯ ಈ ಜನರು ಎಷ್ಟು ಸುಧಾರಿಸಿದ್ದವರೆಂಬುದು ತಿಳಿದುಬರುವುದು. ಯುದ್ಧದಲ್ಲಿ ಅನೇಕ ವೇಳೆ ಇವರೇ ಗೆಲ್ಲುತ್ತಿದ್ದರೂ ಉಪಾಯದಿಂದ ಇವರು ಕೊನೆಗೆ ಗೆಲ್ಲುತ್ತಿದ್ದರೆಂಬುದೂ, ವಿಷ್ಣುವು ಮೂರುಪಾದದಷ್ಟು ಭೂಮಿಯನ್ನು ಬೇಡಿ, ಒಂದು ಪಾದದಿಂದ ಭೂಮಿಯನ್ನೆಲ್ಲ ಆವರಿಸಿದ ಕಥೆಯು ಇದಕ್ಕೆ ಉದಾಹರಣೆಯೆಂಬುದೂ ತಜ್ಞರ ಮತ.

ದಾಸ-ದಸ್ಯುಗಳು ಯಜ್ಞಯಾಗಾದಿಗಳನ್ನು ಒಪ್ಪದೇಹೋದುದರಿಂದ ಅವರನ್ನು ಋ. ೧-೩೩-೪ ರಲ್ಲಿ "ಅಯಜ್ವಾನಃ, ಯಜ್ವಭಿಃ ಸ್ಪರ್ಧಮಾನಾಃ" ಎಂದೂ "ಅವ್ರತಾನ್" ಎಂದೂ ಕರೆಯಲಾಗಿದೆ. "ಅಯಜ್ವಾನಃ ಸ್ವಯಂ ಯಾಗರಹಿತಾಃ ಪ್ರತ್ಯುತ ಯಜ್ವಭಿರ್ಯಾಗಾನುಷ್ಠಾತೃಭಿಃ ಸಹ ಸ್ಪರ್ಧಮಾನಾಃ" ಎಂಬುದಾಗಿ ಇದರ ವಿಷಯದಲ್ಲಿ ಸಾಯಣಾಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. 'ಅಯಜ್ವಾನಃ' ಎಂದರೆ ಸ್ವತಃ ಯಾಗಮಾಡದಿರುವವರು ಎಂದು ಅರ್ಥ; 'ಯಜ್ವಭಿಃ ಸ್ಪರ್ಧಮಾನಾಃ' ಎಂದರೆ ಯಜ್ಞ ಮಾಡುವವರೊಡನೆ ಹೋರಾಡುವವರು ಎಂದರ್ಥ; 'ಅವ್ರತಾನ್' ಎಂದರೆ ವೈದಿಕಾಚರಣೆ ಇಲ್ಲದವರು ಎಂದು ಅರ್ಥ. ಆದರೆ ಇವರು ಯಾವ ವ್ರತವೂ ಇಲ್ಲದವರೆಂದಲ್ಲ; ಏಕೆಂದರೆ, ಋ. ೧೦-೨೨-೮ ರಲ್ಲಿ ಇವರನ್ನು 'ಅನ್ಯವ್ರತ' ರೆಂದು ಕರೆಯಲಾಗಿದೆ. ಆರ್ಯರಿಗೆ ಆಗ ಅನ್ಯವೇ ಆಗಿದ್ದ ಶಿವನ ವ್ರತವುಳ್ಳವರು ಇವರು ಎಂದು ಅಭಿಪ್ರಾಯ ಬರುತ್ತದೆ. ಆದರೆ, ಈ ಭಿನ್ನಾಭಿಪ್ರಾಯಗಳು ಆರ್ಯ-ದ್ರಾವಿಡರು ಹೆಚ್ಚು ಮಿಳಿತವಾಗುತ್ತ ಬಂದಂತೆಲ್ಲ ಮಾಯ ವಾಗುತ್ತ ಬಂದವು.

## ಆರ್ಯ-ದ್ರಾವಿಡರ ಸಂಸ್ಕೃತಿ ಮಿಳನವು ಹಾಲು ಜೇನು ಸೇರಿದಂತೆ ಸುಸ್ವಾದವಾಯಿತು

ಆರ್ಯರು ತಮ್ಮ ಶತ್ರುಗಳಲ್ಲಿನ ಗುಣವನ್ನು ಗ್ರಹಣಮಾಡಲಾರದ ದಡ್ಡರಲ್ಲ; ಮೇಲೆ ಹೇಳಿದ ಯಜ್ಞಯಾಗಾದಿಗಳಲ್ಲಿ ದ್ರಾವಿಡರು ತೋರಿದ ಜಿಗುಪ್ಸೆಗೆ ಕಾರಣವಿದೆ. ಹಿಂದೆ

ಹೇಳಿದಂತೆ ಆ ಕರ್ಮಗಳು ಹಿಂಸಾತ್ಮಕವೂ ನೀತಿಬಾಹಿರವೂ ಆದುವಾಗಿದ್ದವು; ಅಲ್ಲದೆ ಅವುಗಳಿಂದ ಆಗುವ ಪ್ರಯೋಜನವು ನಂಬುಗೆಗೆ ಅರ್ಹವಾದುದಾಗಿರಲಿಲ್ಲ. ಇದು ಅವರಿಗೂ ತಿಳಿದ ವಿಷಯವೇ ಆಗಿದ್ದಿತು. ಅಲ್ಪಸ್ವಲ್ಪ ಕಾರಣಗಳಿಂದ ಯಜ್ಞಯಾಗಾದಿಗಳಿಂದ ಆಗುವ ಫಲವು ಆಗಲಿಲ್ಲವೆನ್ನಬಹುದಾಗಿತ್ತು. ಬ್ರಾಹ್ಮಣ ಉಪನಿಷತ್ತುಗಳಲ್ಲಿಯೇ ಇದರ ಉಲ್ಲೇಖವಿದೆ:

We have an instance of this recorded in the *Satapatha* (1.2.5.24), where omission to wash the hands before touching the altar and the oblations is said to have vitiated the entire sacrifice; and the priests ignorant of the real cause of their failure to secure the fruit of the sacrifice despairingly ask, "To what end shall we perform the sacrifice? Those performing it are in adversity; those not performing it are in prosperity". And just as in Mediæval Church a priest was believed to have been able, if he out of spite so wished it, to turn the service of God into the service of the Devil by performing portions of the holy prayer or ritual in a reverse order, even so the Aitareya Brahmana (iii. 7) tells us that by his manner of uttering the call 'Vashat', the priest can have power to bring prosperity or ruin upon the sacrificer—Should the priest desire 'Let the sacrificer be worse off', then, having recited the rik for him in a higher tone, he should utter the (concluding) Vashat in a lower tone....Should he desire 'Let him be better off', he should recite the rik for him in a lower tone and then utter the Vashat call in a more raised tone. Compare also Taittiriya Brahmana II. 1. 4—Extract from *History of Indian Philosophy*, Vol. II, Page 60, written by Belvalker, M.A., Ph.D. and R. D. Ranade, M.A.

ಮೇಲಿನ ಆಧಾರದಿಂದ ತಿಳಿದುಬರುವಂತೆ ಯಜ್ಞಯಾಗಾದಿಗಳ ಫಲವನ್ನು ಪುರೋಹಿತನು ತಪ್ಪಿಸಬಹುದೆಂಬ ನಂಬುಗೆಯಿದ್ದಿತು. ಇದು ಪುರೋಹಿತನ ಬಲವನ್ನು ಹೆಚ್ಚಿಸಿತು. ಯಜ್ಞಗಳನ್ನು ಮಾಡುವುದರಲ್ಲಿ ಸ್ವಲ್ಪ ಹೆಚ್ಚುಕಡಮೆಯೋ, ನ್ಯೂನತೆಯೋ ಉಂಟಾದರೆ ಫಲವು ದೊರೆಯುವುದಿಲ್ಲವೆಂಬುದು ಬ್ರಾಹ್ಮಣ ಗ್ರಂಥಗಳಲ್ಲಿ ಮಾತ್ರವಲ್ಲದೆ ಮುಂಡಕೋಪನಿಷತ್ತಿನಲ್ಲಿಯೂ ಇದೇ ರೀತಿ ಹೇಳಿದೆ:

ಯಸ್ಯಾಗ್ನಿಹೋತ್ರಮದರ್ಶಪೌರ್ಣಮಾಸಚಾತುರ್ಮಾಸ್ಯಮನಾಗ್ರಯಣಮತಿಥಿವರ್ಜಿತಂ ಚ ।
ಅಹುತಮವೈಶ್ವದೇವಮವಿಧಿನಾಹುತಮಾಸಪ್ತಮಾಂಸ್ತಸ್ಯ ಲೋಕಾನ್ ಹಿನಸ್ತಿ ॥

ಮೇಲೆ ಹೇಳಿದ ಬ್ರಾಹ್ಮಣಾಧಾರಗಳಿಂದ ತಿಳಿದುಬರುವಂತೆ, ಪುರೋಹಿತನಿಗೆ ಫಲವನ್ನು ತಪ್ಪಿಸುವುದು ಸುಲಭವಾಗಿದ್ದಿತು. ಮೆತ್ತಗೋ ಗಟ್ಟಿಗೋ ಕೆಲವು ಶಬ್ದಗಳನ್ನು ಉಚ್ಚಾರಮಾಡುವುದರಿಂದಲೇ ಬಹುಧನ ವ್ಯಯದಿಂದ ಯಜ್ಞಮಾಡಿದವನಿಗೆ ಶ್ರೇಯಸ್ಸೋ ಅಶ್ರೇಯಸ್ಸೋ ಉಂಟಾಗುವುದೆಂಬುದು ವಿಧಿಯಾದುದರಿಂದ ಧನದಾಸೆಯಿಂದ ಪುರೋಹಿತನು ಏನನ್ನು ಬೇಕಾದರೂ ಮಾಡಲು ಶಕ್ತನೆಂದಾಯಿತು. ನಂಬಲಾರದ ಇಂತಹ ಆಧಾರಗಳಿಂದ ಪುರೋಹಿತರು ಎಂದೋ ಯಾರೋ ಒಬ್ಬೊಬ್ಬನನ್ನು ನಂಬಿಸಬಹುದು; ಆದರೆ ಯಾವಾಗಲೂ ಎಲ್ಲರನ್ನೂ ಇಂತಹ ಮಾತಿನಿಂದ ನಂಬಿಸುವುದು ಅಸಾಧ್ಯ. ಪ್ರಾಜ್ಞರಾದ ಆರ್ಯರನ್ನಂತೂ

ನಂಬಿಸಲಾಗದ ಕಾಲವೂ ಬಂದಿತು. ಆದುದರಿಂದ ಯಜ್ಞವಿರೋಧಿಗಳೂ ಅವ್ರತರೂ ಎನಿಸಿದ ದ್ರಾವಿಡರೊಡನೆ ಅವರು ಬೆರೆತರು.

ಎರಡನೆಯದಾಗಿ "ಅನ್ಯವ್ರತರೆನಿಸಿದ ದ್ರಾವಿಡರ ಶಿವನಲ್ಲಿನ ನಿಷ್ಠೆಯು ಆರ್ಯರ ಮೇಲೆ ಪ್ರಭಾವವನ್ನು ಬೀರದೆ ಹೋಗಲಿಲ್ಲ. ಆರ್ಯರ ನಿಸರ್ಗದೇವತೆಗಳ ವರ್ಚಸ್ಸು ಬ್ರಾಹ್ಮಣ ಗ್ರಂಥಗಳ ಕಾಲದ ಹೊತ್ತಿಗೆ ಕಡಮೆಯಾಗಿಹೋಗಿದ್ದಿತು. ಯಜ್ಞಯಾಗಾದಿ ಗಳಿಂದ 'ಅದೃಷ್ಟ'ವೆಂಬ ಶಕ್ತಿಯು ಹುಟ್ಟಿ ದೇವತೆಗಳಿಗೆ ಮನಸ್ಸಿರಲಿ, ಇಲ್ಲದೇ ಹೋಗಿರಲಿ, ಫಲವನ್ನು ಅವರಿಂದ ಬಲವಂತಪಡಿಸಿ ಕೊಡಿಸುತ್ತಿದ್ದಿತಂತೆ. ಪೂರ್ವೋಕ್ತಗ್ರಂಥದ ೧೬ ನೆಯ ಪುಟದಲ್ಲಿ ಹೀಗೆ ಹೇಳಿದೆ: "The sacrifice was now elaborated and its numberless details fixed with dogmatic precision, with the result that the sacrifice itself came to be regarded as the magic fishing-net which even the gods themselves could not always elude." ಎಂದರೆ ಹವಿಸ್ಸೆಂಬ ಆಹಾರವನ್ನು ಕೊಟ್ಟು, ಅನಿಮಿಷ ದೇವತೆಗಳನ್ನು ಯಜ್ಞಯಾಗಾದಿಗಳೆಂಬ ಬಲೆಗಳಲ್ಲಿ ಪುರೋಹಿತರು ಹಿಡಿಯುವರೆಂಬ ಭಾವನೆ ಬಂದಿತು. ಕನಿಕರವಾದ ಈ ದುಃಸ್ಥಿತಿಗೆ ಬಂದ ಇಂದ್ರಾದಿ ದೇವತೆಗಳ ವಿಷಯದಲ್ಲಿ ಗೌರವವು ತಪ್ಪಿತು. ನಿಜವಾದ ದೇವರು ಯಾರು ಎಂದು ಜನ ತಲೆಯನ್ನು ಕೆರೆದು ಕೊಂಡರು. "**ಕಸ್ಮೈ ದೇವಾಯ ಹವಿಷಾ ವಿಧೇಮ?**" ಎಂಬ ಪ್ರಶ್ನೆಯು ಎದ್ದಿತು. ಮಾನ್ಯ ರಾಧಾಕೃಷ್ಣನ್‌ರವರ 'ಇಂಡಿಯನ್ ಫಿಲಾಸಫಿ' ಎಂಬ ಗ್ರಂಥದಲ್ಲಿ ಹೇಳಿದಂತೆ: "The humble origin of the gods was quite patent. The new gods grew on Indian soil and some were borrowed from native races. Scepticism was in the air. Indra's supremacy was questioned." ಮಾನ್ಯ ದಿವಾಕರರು ಕರ್ಮರ್ಕರ್ರವರ ಪೂರ್ವೋಕ್ತ ಗ್ರಂಥದ ಮುನ್ನುಡಿಯಲ್ಲಿ ಹೇಳಿದಂತೆ: "By an inherent genius for synthesis, the Aryans in India evolved a system of culture and religion after absorbing and assimilating a baffling variety of beliefs and cults and ritualistic forms." ಆರ್ಯರು ತಾವು ಜಯಿಸಿದ ದ್ರಾವಿಡರನ್ನು ನಾಶಪಡಿಸಲು ಪ್ರಯತ್ನಿಸದೆ ಅವರೊಡನೆ ಬೆರೆತು, ಅವರಲ್ಲಿರುವ ಒಳ್ಳೆಯದನ್ನು ಗ್ರಹಿಸಿ, ತಮ್ಮದನ್ನಾಗಿ ಮಾಡಿಕೊಂಡರು. ಪರಧರ್ಮಸಹಿಷ್ಣುತೆ, ಪರಧರ್ಮಗುಣಗ್ರಹಣ ಮೊದಲಾದ ಆರ್ಯರ ಕಲ್ಯಾಣಗುಣಗಳು ಇಂದೂ ಭಾರತೀಯ ಧರ್ಮದ ವೈಶಿಷ್ಟ್ಯವಾಗಿ ನಿಂತಿವೆ. ತಮ್ಮ ದೈವಗಳಲ್ಲಿ ನಂಬುಗೆ ಕಡಮೆ ಯಾದಾಗ, ಗುಣಗ್ರಾಹಿಗಳಾದ ಆರ್ಯರು ದ್ರಾವಿಡರ ದೈವೀಕಲ್ಪನೆಯಿಂದ ಪ್ರಭಾವಿತ ರಾದರು. 'ಶಿವ' ಎಂಬ ಪದವು ದ್ರಾವಿಡಭಾಷೆಯದಾಗಿರಲಿ ಅಥವಾ ಸಂಸ್ಕೃತಭಾಷೆಯ ದಾಗಿರಲಿ, ಮಂಗಳಕರವಾದುದು ಎಂಬ ಅರ್ಥದಲ್ಲಿ ಪರಾತ್ಪರ ವಸ್ತುವಿಗೆ ತಕ್ಕ ಹೆಸರಾಯಿತು. ಯಜ್ಞಯಾಗಾದಿಗಳಲ್ಲಿ ಜಿಗುಪ್ಸೆಹೊಂದಿದ ಆರ್ಯಪ್ರಾಜ್ಞರು ಯಜ್ಞಧ್ವಂಸಿಯಾದ ವೀರಭದ್ರನ ಅನುಯಾಯಿಗಳ ದೇವತೆಯಾದ ಮಹಾದೇವನ ಕಡೆ ಮನಸ್ಸುಮಾಡಿದರು. ಅನಿತ್ಯವಾದ ಫಲಗಳನ್ನು ಕೊಡುವುವೆಂಬ ಯಜ್ಞಯಾಗಾದಿಗಳಿಂದ ನಿತ್ಯವಾದ ಮೋಕ್ಷಸುಖ ವನ್ನು ಕೊಡುವ ತ್ರ್ಯಂಬಕ ಶಿವನ ಕಲ್ಪನೆಯಾಯಿತು. ಆರ್ಯ-ದ್ರಾವಿಡರ ಸಂಸ್ಕೃತಿಗಳು ಒಂದಾದವು; ಎರಡು ಸಂಸ್ಕೃತಿಗಳಲ್ಲಿಯೂ ಉತ್ತಮವಾದುದು ಉಳಿದು ನಿಂತಿತು. ದ್ರಾವಿಡ ರೊಡನಿದ್ದ ಅನಾಗರಿಕ ಪೂರ್ವನಿವಾಸಿಗಳು ಅವರ ದೈವಗಳಿಗೆ ಬಲಿ ಕೊಡುವುದೇ ಮೊದಲಾದ ಕ್ರೂರಕೃತ್ಯಗಳು ದ್ರಾವಿಡರ ಮೇಲೂ ಪ್ರಭಾವವನ್ನು ಬೀರಿದ್ದರೆ, ಯಜ್ಞಯಾಗಾದಿಗಳಲ್ಲಿನ

ಹಿಂಸೆಗೆ ಬೇಸತ್ತ ಆರ್ಯವ್ರಾತ್ಯ ಜನಾಂಗದ ಸಹವಾಸದಿಂದ ಆ ಕೆಟ್ಟ ಪದ್ಧತಿಗಳಿಗೆ ಪ್ರೋತ್ಸಾಹವು ದೊರೆಯದಂತಾಯಿತು. ಯೋಗ್ಯತೆಯು ಆರ್ಯರಲ್ಲಿರಲಿ ದ್ರಾವಿಡರಲ್ಲಿರಲಿ, ಆ ಯೋಗ್ಯತೆಗೆ ಸಮಾನವಾದ ಗೌರವವು ಬರುವಂತಾಯಿತು. ಯೋಗ್ಯರಾದ ದ್ರಾವಿಡರಿಗೆ ಆರ್ಯಪಟ್ಟ ದೊರೆಯಿತು. ಋಗ್ವೇದ ೬-೨೨-೧೦ ರಲ್ಲಿ "ದಾಸಾನ್ಯಾರ್ಯಾಣಿ. . . . ಕರಃ" ಎಂದರೆ, ಇಂದ್ರನು ದಾಸರನ್ನು ಆರ್ಯರನ್ನಾಗಿ ಮಾಡಿದುದಾಗಿ ಹೇಳಿದೆ. ಇಷ್ಟೇ ಅಲ್ಲ. ಋಗ್ವೇದದ ಹತ್ತನೆಯ ಮಂಡಲದ ಮೂವತ್ತನೆಯ ಸೂಕ್ತಕ್ಕೆ ಶೂದ್ರಜಾತಿಯ ಸ್ತ್ರೀಯಲ್ಲಿ ಹುಟ್ಟಿದ 'ಇಲೂಷ' ಎಂಬುವನೇ ಋಷಿಯಾಗಿದ್ದಾನೆ. ಹೀಗೆ ಆರ್ಯ-ದ್ರಾವಿಡರು ಒಂದಾಗಿ ಅವರ ಗುಣಗಳಲ್ಲಿ ಉತ್ತಮವಾದುವು ಉಳಿದು ನಿಂದು ಆರ್ಯ-ದ್ರಾವಿಡರ ಮಿಲನವು ಹಾಲು-ಜೇನು ಸೇರಿದಂತೆ ಸುಸ್ವಾದವಾಯಿತು.

ಕಸ್ತೂರಿಯೆಂಬ ತ್ರೈಮಾಸಿಕದಲ್ಲಿನ "**ಕ್ಷೇತ್ರರಾಜ ಕಾಶಿ, ಇಲ್ಲಿ ಭಾರತದ ಸಂಯುಕ್ತ ಸಂಸ್ಕೃತಿಯ ಬೀಜಾರೋಪವಾಯಿತು**" ಎಂಬ ಲೇಖನವು ಗಮನಾರ್ಹವಾಗಿದೆ. ಅದರಲ್ಲಿನ ಸಂಗ್ರಾಹ್ಯ ವಿಷಯವಿದು:

"ಗಂಗಾ ಕಣಿವೆಗೆ ಕಾಲಿಟ್ಟ ಆರ್ಯರಲ್ಲಿ ಕಾಶಿಗಳೆ ಮೊದಲಿಗರು. ಅದು ಭಾರತ ದೊಳಗಿನ ಭಾರತವೆಂದು ವಿದ್ವಾಂಸರಿಂದ ಕರೆಸಿಕೊಳ್ಳುತ್ತಿದ್ದಿತು. ಅಲ್ಲಿ ಪ್ರವೇಶಿಸಿದ ಕಾಶಿಗಳು ತಮಗಿಂತ ಪೂರ್ವದ ಭಾರತೀಯ ನಾಗರಿಕತೆಯ ಸಂಪರ್ಕಹೊಂದಿದಾಗ ವಿಜಿಗೀಷುಗಳಂತೆ ವರ್ತಿಸದೆ, ಸಮಾನ ನಾಗರಿಕರಂತೆ ವರ್ತಿಸತೊಡಗಿದರು. ಗಂಗಾ ಕಣಿವೆಯ ಅನುಪಮ ದೇಶವನ್ನಾಳುತ್ತಿದ್ದ ವ್ರಾತ್ಯರಾಜನ್ಯರು ಜೀವನದಲ್ಲಿಯೂ ವಿಚಾರ ದಲ್ಲಿಯೂ ಆರ್ಯರಿಗಿಂತ ಮಿಗಿಲಾಗಿದ್ದರು. ಅವರ ರಾಜ್ಯಭಾರ ಪದ್ಧತಿಯು ಬೌದ್ಧಿಕ ಹೆಚ್ಚಳಕ್ಕೆ ಸಾಕ್ಷ್ಯವಾಗಿದ್ದರೆ, ಅವರ ತಾತ್ವಿಕ ಹಾಗೂ ಪೌರಾಣಿಕ ವಿಶ್ವಕಲ್ಪನೆಗಳು ಆರ್ಯ ಬ್ರಾಹ್ಮಣರಿಗೂ ಅವರಿಗೂ ಉಂಟಾದ ಸಾಮಾಜಿಕ ಮತ್ತು ರಾಜಕೀಯ ಸಂಪರ್ಕದಲ್ಲಿ ಪ್ರದರ್ಶಿತವಾಗಿತ್ತು. ಆರ್ಯಬ್ರಾಹ್ಮಣರು ವ್ರಾತ್ಯರಾಜನ್ಯರಿಂದ ಹಲವಾರು ವಿಷಯಗಳನ್ನು ಉತ್ಸಾಹದಿಂದ ಕಲಿತುಕೊಳ್ಳುವಂತಾಯಿತು ಎಂದು ನರೇಂದ್ರನಾಥ ಘೋಷರು ಬರೆದಿದ್ದಾರೆ."

## ಅಥರ್ವವೇದದ ಕಾಲದಲ್ಲಿ ವ್ರಾತ್ಯರು ಸಂಪೂಜ್ಯರಾದರು

ಪತಿತರೆಂದು ಹೀಯಾಳಿಸಲ್ಪಡುತ್ತಿದ್ದ ವ್ರಾತ್ಯರು ತಮ್ಮ ಯೋಗ್ಯತೆಯಿಂದ ಸಂಪೂಜ್ಯ ರಾದರು. ರಾಜನು ತನ್ನ ಮತ್ತು ತನ್ನ ರಾಜ್ಯದ ಹಿತದೃಷ್ಟಿಯಿಂದ ತನ್ನ ಮನೆಗೆ ಬಂದ ವ್ರಾತ್ಯನನ್ನು ತನಗಿಂತ ಶ್ರೇಷ್ಠನೆಂಬ ಭಾವನೆಯಿಂದ ಗೌರವಿಸಬೇಕೆಂದೂ, ಅವನ ಇಷ್ಟದಂತೆ ನಡೆಯಬೇಕೆಂದೂ ಅಥರ್ವವೇದದಲ್ಲಿ ಹೇಳಿದೆ. ವ್ರಾತ್ಯರು ಅಗ್ನಿಕಾರ್ಯವನ್ನು ಮಾಡು ತ್ತಿರಲಿಲ್ಲವಷ್ಟೆ. ಆರ್ಯರ ಮನೆಗೆ ಬಂದ ವ್ರಾತ್ಯನು ಅಪ್ಪಣೆ ಕೊಟ್ಟಹೊರತು ಅವರು ಅಗ್ನಿ ಕಾರ್ಯವನ್ನು ಮಾಡಬಾರದೆಂದು ಸಹಾ ಅಥರ್ವವೇದದಲ್ಲಿ ಹೇಳಿದೆ.

"Let the king, to whose house the Vratya who possesses the knowledge comes as a guest, honour him as superior to himself so he doeth not act against the interest of his princely rank or his kingdom."—Atharva Veda, XV-X.

"Let him to whose house, who possesses this knowledge comes as a guest, rise up of his own accord to meet him and say Vratya, let it be as thou pleasest. Vratya, as thou wish let it be."—Atharva Veda, XV-XI.

"The man to whose house, when the fire has been taken up from the hearth and the oblation to Agni placed therein, the Vratya possessing knowledge comes as a guest, should of his own accord rise to meet him and say 'Vratya, give me permission, I shall sacrifice'. And if he gives permission he should sacrifice; if he does not permit him he should not sacrifice."—Atharva Veda, X-XII.

ಅಥರ್ವವೇದದಲ್ಲಿ ಹೇಳಿರುವುದನ್ನೆಲ್ಲ ಗಮನಿಸಿದಲ್ಲಿ, ಸಂಪ್ರದಾಯಶರಣರೇ ಆಗಿದ್ದ ಆರ್ಯರಿಗೂ ಅವರಲ್ಲಿ ಉಪನಯನ ಸಂಸ್ಕಾರಕ್ಕೆ ಒಪ್ಪದೆ ಇದ್ದು ವ್ರಾತ್ಯರೆನಿಸಿಕೊಂಡಿದ್ದ ವ್ರಾತ್ಯರಿಗೂ ಇದ್ದ ಮುಖ್ಯ ವ್ಯತ್ಯಾಸವೇನೆಂದರೆ ವ್ರಾತ್ಯರು ಉಳಿದ ಆರ್ಯರಂತೆ ಹಿಂಸಾತ್ಮಕ ವಾದ ಯಜ್ಞಯಾಗಾದಿಗಳನ್ನು ಮಾಡಲು ಒಪ್ಪದೇ ಹೋದುದೇ ಎಂಬುದು ಸ್ಪಷ್ಟವಾಗು ವುದು. ವ್ರಾತ್ಯರನ್ನು ಮೊದಲು ಮೊದಲು ಇತರ ಆರ್ಯರು ಹೀನಾಯವಾಗಿ ಕಂಡರೂ, ಕಾಲಕ್ರಮೇಣ ವ್ರಾತ್ಯರು ಜ್ಞಾನಿಗಳಾಗಿ ("Vratya possessing knowledge") ಉಳಿದ ಆರ್ಯರಿಂದ ಮನ್ನಣೆಯನ್ನು ಪಡೆದುದು ಗಮನಾರ್ಹವಾದುದು. ಇವರ ಪ್ರಾಮುಖ್ಯತೆಯು ಹೆಚ್ಚಿದಂತೆಲ್ಲ ಯಜ್ಞಯಾಗಾದಿಗಳಲ್ಲಿ ಜನರಿಗೆ ಅಭಿಮಾನವು ಕಡಮೆಯಾಗುತ್ತ ಬಂದಿತು ಮತ್ತು ವ್ರಾತ್ಯರ ದೈವಕಲ್ಪನೆಯು ಜನಸಾಮಾನ್ಯರಮೇಲೆ ಪ್ರಭಾವಶಾಲಿಯಾಯಿತು.

## "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೆ"

ಆರ್ಯರು ಹಿಂದೂದೇಶಕ್ಕೆ ಬಂದಾಗ ಅವರು ಪೂಜಿಸುತ್ತಿದ್ದುದು ನಿಸರ್ಗದೇವತೆಗಳ ನ್ನೆಂಬುದೂ, ಆ ದೇವತೆಗಳಲ್ಲಿ ಅಗ್ರಸ್ಥಾನವಿದ್ದುದು ಇಂದ್ರನಿಗೆ ಎಂಬುದೂ ಪ್ರಸಿದ್ಧವಾದ ವಿಷಯ. ಮುಂದೆ ಇಂದ್ರನ ಪ್ರಾಮುಖ್ಯತೆಯು ಇಳಿಮುಖವಾದಂತೆಲ್ಲ ಹೆಚ್ಚು ಹೆಚ್ಚು ಪ್ರಾಮುಖ್ಯತೆಗೆ ಬಂದ ರುದ್ರವಿಷ್ಣುಗಳಾದರೂ ನಿಸರ್ಗದೇವತೆಗಳೇ ಎಂಬುದರಲ್ಲಿ ಸಂದೇಹವಿಲ್ಲ. ಭಂಡಾರ್ಕರ್‌ರವರು 'ವೈಷ್ಣವಿಸಂ ಅಂಡ್ ಶೈವಿಸಂ' ಗ್ರಂಥದ ಎರಡನೆಯ ಭಾಗದ ಪ್ರಾರಂಭ ದಲ್ಲಿಯೇ ಹೇಳಿರುವುದನ್ನಿಲ್ಲಿ ಕೊಟ್ಟಿದೆ:

"The dreadful and distructive phenomena are usually the storms that uproot trees and even demolish houses accompanied by the thunderbolt which strikes down men and beast dead in a moment; and the epidemics that rage and carry off numbers of men. In these, the old Aryas saw Rudra who went about howling with stormy winds (Maruts, who were his sons (Rudriyas)........We will now trace the development of the idea of this god until he became the supreme creator, ruler and pervader of the universe, a knowledge of whom contributed to eternal bliss."

ಮುನಿದರೆ ಚಂಡಮಾರುತದಂತೆ ಪ್ರಲಯವನ್ನುಂಟುಮಾಡುವನಾದರೂ ಒಲಿದರೆ ಮಂಗಳವನ್ನು ಉಂಟುಮಾಡುವನೆಂದು ಋಗ್ವೇದದಲ್ಲಿ ಪ್ರಸಿದ್ಧನಾದ ರುದ್ರದೇವತೆಯು ಶಿವ

ನೆಂಬ ವಿಶೇಷಣದಿಂದ ಹೊಗಳಲ್ಪಡುತ್ತಿದ್ದನು. ದ್ರಾವಿಡರ ದೇವರ ಕಲ್ಪನೆಯಲ್ಲಿ ದೇವರು ಮಂಗಳದಾಯಕನಾದರೂ ಪ್ರಲಯಕರ್ತನೂ ಆಹುದೆಂಬ ಭಾವನೆಯಿದ್ದಿತೆಂದು ಹಿಂದೆಯೇ ಹೇಳಲಾಗಿದೆಯಷ್ಟೆ. ಆರ್ಯವ್ರಾತ್ಯರು ದ್ರಾವಿಡರೊಡನೆ ಮಿಳಿತರಾಗಿ ಅವರ ಗೌರವವು ಆರ್ಯರಲ್ಲಿ ಹೆಚ್ಚಿದಾಗ ಅನೇಕ ನಿಸರ್ಗದೇವತೆಗಳ ಉಪಾಸನೆಯ ಬದಲು ಏಕದೇವೋಪಾಸನೆಯ ಅವಶ್ಯಕತೆಯು ಕಂಡುಬಂದಿತು. ಅಲ್ಲದೆ ಯಜ್ಞಯಾಗಾದಿಗಳಲ್ಲಿ ಜಿಗುಪ್ಸೆಯುಂಟಾಗಿ, ಯಜ್ಞಕಾರ್ಯಗಳಲ್ಲಿ ಪ್ರಮುಖ ದೇವತೆಯಾದ ಇಂದ್ರನ ವರ್ಚಸ್ಸು ಕಡಮೆಯಾಯಿತು. ಆಗ ದ್ರಾವಿಡರ ದೇವನಂತೆ ಮಂಗಳಕಾರಿಯೂ ವಿಲಯಕಾರಿಯೂ ಆದ ಶಿವರುದ್ರನ ಕಲ್ಪನೆಯಾಯಿತು. ಭಕ್ತರ ಶ್ರೇಯೋಭಿವೃದ್ಧಿಯ ಏರಿಳಿತಗಳಂತೆ ಅವರ ದೇವರ ಶ್ರೇಯೋಭಿವೃದ್ಧಿಯ ಏರಿಳಿತಗಳೂ ಆಗುವುವೆಂದು ಒಬ್ಬ ಹಿರಿಯ ಪಂಡಿತನು ಹೇಳಿರುವನು. ಅಥರ್ವವೇದದ ಕಾಲಕ್ಕೆ ವ್ರಾತ್ಯರ ಸಂಪೂಜ್ಯತೆಯು ಹೆಚ್ಚಿದಂತೆಲ್ಲಾ ಶಿವರುದ್ರನ ಸಂಪೂಜ್ಯತೆಯೂ ಸಹಾ ಯಜುರ್ವೇದ, ಸಾಮವೇದ, ಅಥರ್ವವೇದಗಳಲ್ಲಿ ಕ್ರಮವಾಗಿ ಹೆಚ್ಚುತ್ತ ಹೋಗುವುದು. ಅಷ್ಟೇಕೆ? ಋಗ್ವೇದದ ಕೊನೆಯ ಭಾಗಕ್ಕೆ ಬರುವಷ್ಟರಲ್ಲಿಯೇ ತ್ರಿಮೂರ್ತಿಗಳಿಗೂ ಕಾರಣನಾದ ತ್ರ್ಯಂಬಕಶಿವನ ಕಲ್ಪನೆಯೂ, ಯಜ್ಞಯಾಗಗಳಿಂದ ಬರುವ ಕ್ಷುದ್ರಫಲಗಳಾದ ಸ್ವರ್ಗಾದಿ ಫಲಗಳಿಗೆ ಬದಲು ಜನನಮರಣಗಳಿಂದ ಬಿಡುಗಡೆಯನ್ನೀವ ಮೋಕ್ಷದ ಕಲ್ಪನೆಯೂ ಕಂಡುಬರುವುದು. ಋಗ್ವೇದದ ೭–೫೯–೧೨ರಲ್ಲಿ ಹೀಗೆ ಹೇಳಿದೆ:

> ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
> ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥

ಇಲ್ಲಿ ತ್ರ್ಯಂಬಕನೆಂದರೆ, ಈ ಮಂತ್ರದ ಸಾಯಣಭಾಷ್ಯದಲ್ಲಿ ಹೇಳಿದಂತೆ **"ತ್ರಯಾಣಾಂ ಬ್ರಹ್ಮವಿಷ್ಣುರುದ್ರಾಣಾಮಂಬಕಂ ಪಿತರಂ"** ಎಂದರೆ ತ್ರಿಮೂರ್ತಿಗಳಿಗೂ ಕಾರಣನಾದ ಪರಶಿವಮೂರ್ತಿಯೇ; ತ್ರಿಮೂರ್ತಿಗಳಲ್ಲಿ ಒಬ್ಬನಾದ ರುದ್ರನಾಗಲೀ ಅಥವಾ ನಿಸರ್ಗದೇವತೆಗಳಲ್ಲಿ ಒಬ್ಬನಾದ ರುದ್ರದೇವತೆಯಾಗಲೀ ಅಲ್ಲ. ತೊಟ್ಟಿನಿಂದ ಹಣ್ಣು ಕಳಚಿಬೀಳುವಂತೆ ಮೃತ್ಯುವಿನ ಬಂಧನದಿಂದ ಬಿಡುಗಡೆ ಹೊಂದಬೇಕೇ ಹೊರತು 'ಅಮೃತ' ಎಂದರೆ ಮೋಕ್ಷದಿಂದ ತಪ್ಪಿಸಿಕೊಳ್ಳಬಾರದೆಂದು ಈ ಮಂತ್ರದಲ್ಲಿ ಪ್ರಾರ್ಥನೆಯು ಇರುವುದೂ, ಋಗ್ವೇದದಲ್ಲಿ ಮುಂದೆ ನಾಸದೀಯ ಸೂಕ್ತವಿರುವುದೂ ಉಪನಿಷತ್ತುಗಳಿಗೆ ನಾಂದಿಯಾಗಿವೆಯೆನ್ನಬಹುದು. ಋಗ್ವೇದದಲ್ಲಿಯೇ ಹೇಳಿರುವ **"ಏಕಂ ಸದ್ವಿಪ್ರಾಃ ಬಹುಧಾ ವದಂತಿ"** ಎಂಬ ಕಲ್ಪನೆಯು ಪರಶಿವಬ್ರಹ್ಮದ ಆವಿರ್ಭಾವವನ್ನು ಋಗ್ವೇದದ ಮೇಲಿನ ಮಂತ್ರವಲ್ಲಿ ನೋಡಬಹುದು." ಋಗ್ವೇದದ ೭–೪೬–೨ರಲ್ಲಿಯ ಮಂತ್ರವಿದು:

> ಸ ಹಿ ಕ್ಷಯೇಣ ಕ್ಷಮ್ಯಸ್ಯ ಜನ್ಮನಃ ಸಾಮ್ರಾಜ್ಯೇನ ದಿವ್ಯಸ್ಯ ಚೇತತಿ ।
> ಅವನ್ನವಂತೀರುಪ ನೋ ದುರಶ್ಚರಾನಮೀವೋ ರುದ್ರ ಜಾಸು ನೋ ಭವ ॥

ಈ ಮಂತ್ರದ ವಿಷಯವಾಗಿ ಭಂಡಾರ್ಕರ್‌ರವರು ಹೀಗೆ ಹೇಳಿರುವರು — "By his power, he perceives all earthly beings and by his universal sovereignty, he perceives devine beings (R.V., VII, 46, 2). Here even in Rigveda, Rudra is raised to supreme power."

ಯಜುರ್ವೇದದಲ್ಲಿ **"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ"** ಎಂದರೆ ರುದ್ರನಲ್ಲದೆ ಮತ್ತೊಬ್ಬನಿಲ್ಲವೆಂಬ ಭಾವನೆಯು ಮತ್ತಷ್ಟು ಸ್ಪಷ್ಟವಾಗಿ ಕಂಡುಬರುವುದು.

ಯಜುರ್ವೇದದ ಐದನೆಯ ಅಧ್ಯಾಯ ಶತರುದ್ರೀಯ. ಅದರಲ್ಲಿ ಶಂಕರ, ಶಂಭು, ಈಶಾನ, ಈಶ, ಭವ, ಶರ್ವ, ಉಗ್ರ, ಸೋಮ, ಪಶುಪತಿ, ನೀಲಕಂಠ, ನೀಲಗ್ರೀವ, ಗಿರೀಶ, ಮಹಾದೇವ, ಮಹೇಶ್ವರ, ಶಿತಿಕಂಠ ಮೊದಲಾದ ಹೆಸರುಗಳು ರುದ್ರಶಿವನಿಗೆ ಕೊಡಲ್ಪಟ್ಟಿವೆ. ಋಗ್ವೇದದಲ್ಲಿ 'ಶಿವ' ಎಂಬ ಪದವನ್ನು ಮಂಗಳಕರ ಎಂಬ ಅರ್ಥದಲ್ಲಿ ರುದ್ರನಿಗೆ ವಿಶೇಷಣ ವಾಗಿ ಉಪಯೋಗಿಸಿರುವುದುಂಟು. ಆದರೆ ಯಜುರ್ವೇದದಲ್ಲಿ ಅವನನ್ನು "ಶಿವನಾಮಾಸಿ" ಎಂದರೆ ಶಿವನೆಂಬ ಹೆಸರಿನಿಂದಲೇ ಕರೆಯಲಾಗಿದೆ. ಇನ್ನು ಯಜುರ್ವೇದದ ೬ನೆಯ ಅಧ್ಯಾಯದಲ್ಲಿ ತ್ರಿಪುರಸಂಹಾರದ ವಿಷಯವು ಬಂದು ಶಿವಸರ್ವೋತ್ಕರ್ಷವು ಸ್ಥಾಪಿಸಲ್ಪಡುತ್ತದೆ. "ರುದ್ರಃ ಪಶೂನಾಮಧಿಪತಿರಿತಿ ವಯಂ ಬ್ರಹ್ಮಾದಯಃ ಸರ್ವೇ ಪಶವಃ ಅಸ್ಮಾಕಂ ತ್ವಮೇಕ ಪತಿರಿತಿ" ಎಂದು ಮೊದಲಾಗಿ ಹೇಳಿರುವುದರಲ್ಲಿ ಶಿವನೊರ್ವನೆ ಪತಿಯು, ಉಳಿದವರು ಪಶುಗಳು ಎಂದು ಹೇಳುವ ಪಾಶುಪತ ಧರ್ಮದ ಬೀಜವಿಲ್ಲಿದೆ. ಋಗ್ವೇದದಲ್ಲಿ ರುದ್ರನಿಗಿರುವ 'ಪಶುಪತಿ' ಹೆಸರಿಗೆ ಹೆಚ್ಚು ವ್ಯಾಪಕವಾದ ಅರ್ಥವನ್ನಿಲ್ಲಿ ಕಾಣಬಹುದು. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಕಂಡುಬರುವ ಪಶುಪಾಶಪದಗಳ ಮೂಲವಾದರೂ ಇಲ್ಲಿದೆ. ಶ್ವೇತಾಶ್ವತರದಲ್ಲಿಯೇ ಕಂಡುಬರುವ ಯಜುರ್ವೇದದ ಮಂತ್ರವಿದು:

> ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ ।
> ತಯಾ ನಸ್ತನುವಾ ಶಾಂತಮಯಾ ಗಿರಿಶಂತಾಭಿಚಾಕಶೀಹಿ ॥

ಇದನ್ನು ಹೀಗೆ ಕನ್ನಡಿಸಬಹುದು:

ಕಂದ॥ ಗಿರಿಶಂತನೆ ವರರುದ್ರನೆ ।
ನೆರೆಯೆಮ್ಮಂ, ಬಿಡದೆ ಪಾಪಹರಣಂಗೆಯ್ವಾ ॥
ಪರತರ ಶಾಂತ ಶುಭದ ತವ ।
ಪರಮಾಘೋರ ತನುವಿಂ ಚಕಿತಗೊಳಿಪುದು ನೀಂ ॥

ಇದರಲ್ಲಿ "ಶಿವರುದ್ರನು ಅವನ ಮಂಗಳಕರವೂ, ಅಘೋರವೂ ಆದ ತನುವಿನಿಂದ ನಮ್ಮನ್ನು ಪ್ರಕಾಶಗೊಳಿಸಲಿ" ಎಂದು ಪ್ರಾರ್ಥಿಸಿರುವುದನ್ನು ಹೇಳಿದೆ. ಶಿವನ ಪಾಪ ಹಾರಿಯೂ ಶಾಂತವೂ ಆದ ತನುವೆಂದರೆ ಲಿಂಗವು; ಆದರಿಂದ ನಮ್ಮನ್ನು ಪ್ರಕಾಶಗೊಳಿಸು ಎಂದು ಈ ಮಂತ್ರದಲ್ಲಿ ಪ್ರಾರ್ಥನೆ ಮಾಡಲಾಗಿದೆ ಎಂಬುದು ವೀರಶೈವರ ನಿಲುವು. ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಹೇಳಿದೆ:

> ಅಘೋರಾಽಪಕಾಶೀತಿ ಯಾ ತೇ ರುದ್ರ ಶಿವಾ ತನೂಃ ।
> ಯಜುಷಾ ಗೀಯತೇ ಯಸ್ಮಾತ್ತಸ್ಮಾಚ್ಛೈವೋಽಘವರ್ಜಿತಃ ॥
>
> (೬-೬೧)

ವಾಯವೀ ಸಂಹಿತೆಯಲ್ಲಿ "ಲಿಂಗಂತು ಶಿವಯೋರ್ದೇಹಃ" ಎಂಬ ಆಧಾರವಿದೆ.

ಇನ್ನು ಸಾಮವೇದವನ್ನು ತೆಗೆದುಕೊಂಡರೆ, ಹಿಮಾಲಯ ಪರ್ವತವನ್ನು ಎತ್ತಲು ಹೋಗಿ, ತನ್ನ ಕೈಗಳನ್ನು ಅದರಡಿ ಸಿಕ್ಕಿಹಾಕಿಸಿಕೊಂಡಾಗ ರಾವಣಾಸುರನು ಶಿವನನ್ನು ಸಾಮಗಾನದಿಂದ ಒಲಿಸಲು ಪ್ರಯತ್ನಪಟ್ಟನೆಂಬುದು ಜ್ಞಾಪಕಕ್ಕೆ ಬರುವುದು. ಶಿವನು ಸಾಮಗಾನಪ್ರಿಯನೆಂಬ ನಂಬಿಕೆಯಿದೆ. ಸಾಮವೇದದ ಕಾಲದಲ್ಲಾಗಲೇ ಯಜ್ಞಗಳಲ್ಲಿ

ಅಪನಂಬಿಕೆ ಹುಟ್ಟಿದುದು, ಸಂಪೂಜ್ಯರಾಗುತ್ತಿದ್ದ ವ್ರಾತ್ಯರ ಪ್ರಭಾವವನ್ನು ತೋರಿಸುತ್ತದೆ. ಮಾನ್ಯ ರಾಧಾಕೃಷ್ಣನ್‌ರವರು ಅವರ 'ಇಂಡಿಯನ್ ಫಿಲಾಸಫಿ'ಯಲ್ಲಿ ಹೇಳಿದಂತೆ:

We hear of horse-sacrifices. But against all such, there were protests even then. Sáma Veda says "O ye Gods, we use no sacrificial stakes, we slay no victims; we worship entirely by repetition of sacred verses."

ಅಥರ್ವಣವೇದದ ಕಾಲದಲ್ಲಂತು ಶಿವಮಹಾದೇವನ ಕಲ್ಪನೆಯು ಪ್ರಾಮುಖ್ಯತೆಯನ್ನು ಪಡೆಯಿತು. ಡಾಕ್ಟರ್ ಭಂಡಾರ್ಕರ್‌ರವರು ಹೇಳುವಂತೆ—"In A.V. the conception of Rudra is further developed and he is elevated to a higher platform." ಡಾಕ್ಟರ್ ಎಸ್. ಶ್ರೀಕಂಠಶಾಸ್ತ್ರಿ, ಎಂ.ಎ., ಡಿ.ಲಿಟ್. ಎಂಬ ಮಾನ್ಯರು 'ಮಿಥಿಕ್ ಸೊಸೈಟಿ ಜರ್ನಲ್', ವಾಲ್ಯೂಂ ೫೧, ನಂಬರ್ ೧ರ ೨೦ನೆಯ ಪುಟದಲ್ಲಿ ಹೇಳುವಂತೆ—"The Atharva Veda (2–34) deals with Pasupati and Pasus bound by Pasa." ಎಂದರೆ ಪಶುಪಾಶ ಪತಿಗಳ ವಿಷಯವು ಈ ವೇದದಲ್ಲಿದೆ. ವ್ರಾತ್ಯರ ಮತ್ತು ವ್ರಾತ್ಯರ ದೇವನಾದ ಏಕವ್ರಾತ್ಯ ಮಹಾದೇವನ ಹಿರಿಮೆಯನ್ನು ಕಾಣುವುದು ಈ ವೇದದಲ್ಲಿಯೇ. ಶ್ರೀಯುತ ಕರ್ಮಾರ್ಕರ್‌ರವರ "Religions of India" ಗ್ರಂಥದಲ್ಲಿ ಹೀಗೆ ಹೇಳಿದೆ:

The cult of the Vratyas indicates, that it had a unique system of its own. Further, the cult, that is represented in the Atharva Veda and later literature exhibits some connecting links with the healthy civilization of the Mohenjo Daro times. This point has been greatly stressed in the recent work by Dr. Bhandarkar.

If this be so, then it definitely indicates something of a pre-Aryan institution which was only modified and made as their own by the Aryans in later times. In the hymn on the Ekavratya, it is emphatically stated that the Ekavratya was the Supreme Being of the universe. It is described "He roused Prajapati to action. Prajapati beheld gold in himself and engendered it. That became unique......He (Ekavratya) grew, he became great, he became Mahadeva. He gained the Lordship of the gods. He became Chief Vratya (Ekavratya)........"

The above passage is important from various respects. In the early Mohenjo Daro inscriptions, the supreme being of the universe is described as Siva. He alone is the creator, preserver and destroyer of the universe. Eventually in the Ekavratya hymn also He assumes the role of the creator of the universe. The puranic tradition always designs Siva as 'Hiranyaretus (possessing golden semen).' ಹೀಗೆ ವ್ರಾತ್ಯರ ಮತ್ತು ಏಕವ್ರಾತ್ಯನೆಂದೂ ಮಹಾದೇವನೆಂದೂ ಪ್ರಸಿದ್ಧನಾದ ಅವರ ದೇವರ ಪ್ರಭಾವವು ಅಥರ್ವವೇದದ ಕಾಲದಲ್ಲಿ ಅತಿಶಯವಾಗಿದ್ದಿತು.

ಇನ್ನು ದಶೋಪನಿಷತ್ತುಗಳಲ್ಲಿ ಮೊದಲನೆಯದಾದ ಈಶಾವಾಸ್ಯೋಪನಿಷತ್ತು ರುದ್ರಶಿವನ ರೂಢಿಯ ಹೆಸರಾದ "ಈಶ" ಎಂಬುದರಿಂದಲೇ ಪ್ರಾರಂಭವಾಗುತ್ತದೆ. ಎರಡನೆಯದಾದ ಕೇನೋಪನಿಷತ್ತಿನಲ್ಲಿ ಇಂದ್ರನಿಗೆ ಪರಶಿವಬ್ರಹ್ಮದ ಜ್ಞಾನವನ್ನು ಉಂಟುಮಾಡುವವಳು ಉಮಾಹೈಮವತಿ. ಇದರ ಶಾಂಕರ ಭಾಷ್ಯದಲ್ಲಿ ಹೇಳಿದಂತೆ **"ಹಿಮವತೋದುಹಿತಾ ಹೈಮವತೀ ನಿತ್ಯಮೇವ ಸರ್ವಜ್ಞೇನ ಈಶ್ವರೇಣ ಸಹವರ್ತತ ಇತಿ ಜ್ಞಾತುಂ"** ಎಂದರೆ ಹಿಮವಂತನ ಮಗಳಾದ ಹೈಮವತಿಯು ಸರ್ವಜ್ಞನಾದ ಈಶ್ವರನೊಡನೆ ಯಾವಾಗಲೂ ಇರುವಳೆಂದು ತಿಳಿದು, ಇಂದ್ರನು ಅವಳನ್ನು ಬ್ರಹ್ಮಜ್ಞಾನಕ್ಕಾಗಿ ಸಮಿಾಪಿಸಿದನು ಎಂದು ಈ ಉಪನಿಷತ್ತಿನಲ್ಲಿ ಹೇಳಿದೆ. ಮುಂಡಕೋಪನಿಷತ್ತಿನಲ್ಲಿ ಹೀಗೆ ಹೇಳಿದೆ: **"ನಾಯಮಾತ್ಮಾ ಬಲಹೀನೇನ ಲಭ್ಯೋ ನ ಚ ಪ್ರಮಾದಾತ್ ತಪಸೋ ವಾಪ್ಯಲಿಂಗಾತ್"** ಇದರ ಶಾಂಕರ ಭಾಷ್ಯದಲ್ಲಿ **"ತಪಸೋ ವಾಪ್ಯಲಿಂಗಾಲ್ಲಿಂಗರಹಿತಾತ್"** ಎಂದು ಹೇಳಿದೆ. ಲಿಂಗರಹಿತ ನಾದವನಿಗೆ ತಪಸ್ಸಿನಿಂದಲೂ ಮೋಕ್ಷವಾಗುವುದಿಲ್ಲವೆಂದು ಈ ಉಪನಿಷತ್ತಿನಲ್ಲಿ ಹೇಳಿರುವುದು ಗಮನಾರ್ಹವಾಗಿದೆ. ದಶೋಪನಿಷತ್ತುಗಳಲ್ಲಿ ತ್ರಿಮೂರ್ತಿಗಳ ಹೆಸರು ಕಂಡುಬರುವುದು ಅಪರೂಪ. ತ್ರಿಮೂರ್ತಿಗಳಿಗೂ ಅತೀತವಾದ ಬ್ರಹ್ಮದ ಕಲ್ಪನೆಗೆ ತ್ರಿಮೂರ್ತಿಗಳಲ್ಲೊಬ್ಬನ ಹೆಸರನ್ನಿಡುವುದು ಅವರಿಗೆ ಸರಿಯಲ್ಲವೆನಿಸಿರಬೇಕು; ಅಥವಾ ಆ ಕಾಲದಲ್ಲಿ ತ್ರಿಮೂರ್ತಿಗಳ ಕಲ್ಪನೆಯು ಆಗಿರಲಿಲ್ಲವೆಂದು ಕಾಣುವುದು. ಅದು ಹೇಗೇ ಇರಲಿ, ನಿರ್ಗುಣಬ್ರಹ್ಮವು ಪೂಜೆಗೆ ನಿಲುಕದುದು. ಆದುದರಿಂದ ಪಾಶುಪತಭಕ್ತಿಯ ಉದಯವಾಯಿತು, ಪಾಶುಪತಧರ್ಮವು ರೂಪುಗೊಂಡುದು ಶ್ವೇತಾಶ್ವತರ ಉಪನಿಷತ್ತಿನಲ್ಲಿ. ಅದರಲ್ಲಿ ಅದ್ವಿತೀಯನಾದ ರುದ್ರಶಿವನ ಕಲ್ಪನೆಯಿದೆ. ಆ ಉಪನಿಷತ್ತಿನಲ್ಲಿನ ಮಂತ್ರವಿದು:

ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥುರ್ಯ ಇಮಾಲ್ಲೋಕಾನೀಶತ ಈಶನೀಭಿಃ ।
ಪ್ರತ್ಯಙ್ ಜನಾಸ್ತಿಷ್ಠತಿ ಸಂಚುಕೋಚಾಂತಕಾಲೇ ಸಂಸೃಜ್ಯ ವಿಶ್ವಾಭುವನಾನಿ ಗೋಪಾ ॥

ಈ ಮಂತ್ರವನ್ನು ಹೀಗೆ ಕನ್ನಡಿಸಬಹುದು:

ಕಂದ॥ ಒರ್ವನೆ ದಲ್ ರುದ್ರಂ ಪೆರ ।
ತೊರ್ವಂ ದೇವಂ ಸಟೆ; ಪೊರೆವಂ ಶಕ್ತಿಗಳಿಂ ॥
ಸರ್ವ ಜಗತ್ತಿದನಾಳ್ವಂ ।
ಸರ್ವಾಂತರ್ಯಾಮಿ, ಸೃಷ್ಟಿವಿಲಯದ ಕರ್ತಂ ॥

ಸೃಷ್ಟಿವಿಲಯದ ಕರ್ತನಾದ ರುದ್ರನ ಹೊರತು ಬೇರೆಯೊಬ್ಬ ದೇವನಾರೂ ಇಲ್ಲವೆಂದು ಹೇಳುವ ಈ ಉಪನಿಷತ್ತಿನಲ್ಲಿ ಪ್ರತಿಸ್ಪರ್ಧಿಯಾದ ವಿಷ್ಣು ಮೊದಲಾದ ಮತ್ತೊಬ್ಬ ದೇವನ ಕಲ್ಪನೆಯೇ ಇಲ್ಲ. ಆದುದರಿಂದಲೇ ಶ್ರೀವೈಷ್ಣವರಾದ ಶ್ರೀರಾಮಾನುಜಾಚಾರ್ಯರೂ ಈ ಉಪನಿಷತ್ತಿನ ಆಧಾರವನ್ನು ವಿಪುಲವಾಗಿ ತಗೆದುಕೊಂಡಿದ್ದಾರೆ. ಡಾ॥ ಭಂಡಾರ್ಕರ್‌ರವರ 'ವೈಷ್ಣವಿಸಂ ಅಂಡ್ ಶೈವಿಸಂ' ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ:

"The elevated notions about the nature of God and his relation to man and the world which had been reached in the time of the early Upanishads have been disentangled from their connection with the impersonal Brahman and transferred to the God who had at the time when the Upanishads were

written acquired a living and active personality in the minds of the people. This God was Rudrasiva, who as we have seen had by the time of A.V. (Atharva Veda) attained to the dignity of the supreme god." (p. 107)

"From all that we have bought forward from the post-samhita literature, it will appear that Rudra Siva was a deity whose worship was common to all the Aryas and was not at first a sectarian god. As above remarked he was in charge of the field before the Vaishnava or Vasudevic deities came in to contest his supremacy" (p. 115).

"The attributes of the supreme soul are often given in very general terms and he is referred to, by the non-sectarian general name Deva, but as often, that Deva is identified with Rudra, Siva, Ishana and Mahesvara and his powers are spoken of as Isanis; but there is no indication, whatever that these names have been given for the purpose of rising, Rudrasiva, to the supreme god head to the exclusion of another god. Names indicative of Rudrasiva appear to have been used, since he was invested with a personality perceived and acknowledged by all. The Upanishad therefore is not a sectarian treatise like others promulgated in later times and is often quoted by Sankaracharya, Ramanuja and other writers of the different schools and not by those of one school only. It must have been composed before Bhagavadgita (p. 110).

ಜಗತ್ತಿನಲ್ಲೆಲ್ಲ ಅತ್ಯಂತ ಪ್ರಾಚೀನವಾದ ಮತವು ಶೈವಮತವೆಂಬುದು ಸಿಂಧೂನದಿಯ ತೀರದ ಅವಶೇಷಗಳಿಂದ ತಿಳಿದ ವಿಷಯವೆಂದು ಹಿಂದೆಯೇ ಹೇಳಲಾಯಿತು. ನಿಸರ್ಗ ದೇವತೆಗಳನೇಕವನ್ನು ಪೂಜಿಸುತ್ತಿದ್ದ ಆರ್ಯರ ಮನಸ್ಸು ಏಕದೇವೋಪಾಸನೆಯ ಕಡೆಗೆ ತಿರುಗಿದಾಗ, ದ್ರಾವಿಡರ ಶಿವನನ್ನು ಆರ್ಯರ ರುದ್ರನೊಡನೆ ಬೆರಸಿಕೊಂಡು ಶಿವರುದ್ರನಿಗೆ ಮಹಾದೇವಪಟ್ಟವನ್ನು ಕಟ್ಟಿದರು. ಆಗ ವಿಷ್ಣುವಿನ ಅಥವಾ ವೈಷ್ಣವ ದೇವತೆಗಳ ಸ್ಪರ್ಧೆಯೇ ಇರಲಿಲ್ಲ. ವಿಷ್ಣುವು ಪರಮೇಶ್ವರನ ಸ್ಥಾನಕ್ಕೆ ಸ್ಪರ್ಧಿಸಿದುದು ಮುಂದಿನ ಮಾತೆಂಬುದು ಡಾ॥ ಭಂಡಾರ್ಕರ್‌ರವರ ಮತ.

ಇಂದು ಪೂಜಿಸಲ್ಪಡುತ್ತಿರುವ ಶಿವನಾಗಲೀ ವಿಷ್ಣುವಾಗಲೀ ಆ ಹೆಸರಿನ ಆರ್ಯ ದೇವತೆಯಲ್ಲ. ಆದುದರಿಂದ ಶೈವರಾಗಲೀ ವೈಷ್ಣವರಾಗಲೀ ಆ ಹೆಸರಿನ ದೇವತೆಗಳ ವಿಷಯದಲ್ಲಿ ಅಂದಿನ ಆರ್ಯರಿಗಿದ್ದ ಕಲ್ಪನೆಗಳಿಂದ ವಿಚಲಿತರಾಗಬೇಕಾದುದಿಲ್ಲ. ಅರ್ಥಶಾಸ್ತ್ರ ವಿಶಾರದ ಡಾ॥ ಆರ್. ಶಾಮಾಶಾಸ್ತ್ರಿಗಳ ಅಭಿಪ್ರಾಯವು ೪೮–೪೫ ನೆಯ ಪುಟಗಳಲ್ಲಿ ಮುದ್ರಿತವಾಗಿದೆ; ಅದೆಲ್ಲವೂ ಗಮನಾರ್ಹವಾಗಿದೆ. ಅವರು ಹೇಳಿರುವಂತೆ—"ಆರ್ಯರ ರುದ್ರನು ಈಗಿನ ತ್ರಿಶೂಲಧಾರಿಯಾದ ಶಿವನಲ್ಲ; ಅದ್ಭುತ ಶಕ್ತಿಯುಳ್ಳ ಪ್ರಚಂಡ ವಾಯು. ಆರ್ಯರ ವಿಷ್ಣುವು ಶಂಕಚಕ್ರಧಾರಿಯಾದ ಈಗಿನ ವಿಷ್ಣುವಲ್ಲ; ವಿಶ್ವಪೋಷಕನಾದ ಸೂರ್ಯನು." ಈ ತೆರದ ನಿಸರ್ಗ ದೇವತೆಗಳಲ್ಲಿ ವಿಶ್ವಾಸವು ಹೋಗಿ ಉಪನಿಷತ್ತಿನ ಪರಬ್ರಹ್ಮದ ಕಲ್ಪನೆಯು ಆಯಿತು. ಆದರೆ ಜ್ಞಾನಕ್ಕೆ ವಿಷಯವಾದ ಪರಬ್ರಹ್ಮವೂ ಭಕ್ತರ ಭಕ್ತಿಯ ಮಟ್ಟಕ್ಕೆ ಸಿಲುಕಲಿಲ್ಲ. ಭಕ್ತಿಗೆ

ಸಿಲುಕುವ ಪರಮಾತ್ಮನ ಕಲ್ಪನೆಯು ಮೊದಲ ಹನ್ನೆರಡು ಉಪನಿಷತ್ತುಗಳಲ್ಲೊಂದಾದ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಆಗಿ ಸರ್ವಮಾನ್ಯವಾಗಿ ಇಂದೂ ಉಳಿದಿದೆ. ಮಹೋಪ ನಿಷತ್ತಿನಲ್ಲಿ ಪರಮಾತ್ಮನೊಬ್ಬನನ್ನೇ ಶಿವ, ನಾರಾಯಣ ಮೊದಲಾದ ಹೆಸರುಗಳಿಂದ ಕರೆದಿರು ವಂತೆ ತೋರುವುದು. ಇವರನ್ನು ಬೇರೆ ಬೇರೆ ಮಾಡಿ ಯಾರು ಶ್ರೇಷ್ಠ ಎಂಬ ವಾದವನ್ನು ಹಬ್ಬಿಸಿದುದು ಇತ್ತೀಚೆಗೆ ಇರಬೇಕು. ಆ ಈಚಿನ ಮಾತು ಈಗ ಇಲ್ಲಿ ಪ್ರಸ್ತುತವಲ್ಲ. ಅಂದು ಶ್ವೇತಾಶ್ವತರೋಪನಿಷತ್ತಿನ ಕಾಲದಲ್ಲಿ ಈ ವ್ಯತ್ಯಾಸಗಳಿರಲಿಲ್ಲವೆಂದು ಹೇಳುವುದು ಅವಶ್ಯ ವಾಗಿದೆ.

## ಯಜ್ಞೋ ವೈ ವಿಷ್ಣುಃ

ಶ್ವೇತಾಶ್ವತರೋಪನಿಷತ್ತಿನ ಕಾಲದವರೆಗೂ ವಿಷ್ಣುವು ಮಹಾದೇವನ ಸ್ಥಾನಕ್ಕೆ ಸ್ಪರ್ಧಿಸಲಿಲ್ಲ ಎಂದು ಡಾಕ್ಟರ್ ಭಂಡಾರ್ಕರ್‌ರವರು ಹೇಳಿರುವರೆಂದರೆ ವಿಷ್ಣುವೆಂಬ ದೇವತೆಯೇ ಅಲ್ಲಿಯವರೆಗೆ ಇರಲಿಲ್ಲವೆಂದಲ್ಲ. ವಿಷ್ಣುವು ರುದ್ರನಂತೆ ಆರ್ಯದೇವತೆ; ಆದರೆ ಸರ್ವೋತ್ತಮ ಪಟ್ಟವನ್ನು ಆರ್ಯರು ಕಟ್ಟಿದ್ದುದು ಇಂದ್ರನಿಗೆ. ಇಂದ್ರನ ಬಲಭುಜವಾಗಿ ಅಸುರರನ್ನು ಕೊಲ್ಲಲು ನಿಂತವನು ವಿಷ್ಣುವೆಂಬುದು ಋಗ್ವೇದದ ಅನೇಕ ಮಂತ್ರಗಳಿಂದ ತಿಳಿದುಬರುವುದು. ಋ. ೮–೧೫–೧ ರಲ್ಲಿ "**ತ್ವಾಂ ವಿಷ್ಣುರ್ಬೃಹನ್ ಕ್ಷಯೋ ಮಿತ್ರೋ ಗೃಣಾತಿ**" ಎಂದರೆ ವಿಷ್ಣುವೂ ಮಿತ್ರನೂ ಇಂದ್ರನನ್ನು ಸ್ತೋತ್ರಮಾಡುತ್ತಾರೆಂದು ಹೇಳಿದೆ. ಋ. ೬–೧೭–೧೧ ರಲ್ಲಿ "**ಪಚಚ್ಛತಂ ಮಹಿಷಾ ಇಂದ್ರ ಪೂಷಾ ವಿಷ್ಣುಃ**" ಎಂದರೆ ವಿಷ್ಣುವೂ ಪೂಷನೂ ಇಂದ್ರನಿ ಗಾಗಿ ನೂರು ಕೋಣಗಳನ್ನು ಬೇಯಿಸಿ ಪಾಕಮಾಡಿಕೊಡುವುದನ್ನು ಹೇಳಿದೆ. ವಿಷ್ಣುವಿನ ಹಿರಿಮೆ ಅವನು ಮೂರು ಹೆಜ್ಜೆಗಳನ್ನಿಟ್ಟು ಪ್ರಪಂಚವನ್ನೆಲ್ಲ ಆವರಿಸಿದುದು. "ಇಂದ್ರನ ಓಜಸ್ಸಿನಿಂದ ವಿಷ್ಣುವು ಮೂರು ಹೆಜ್ಜೆಗಳಿಟ್ಟನು" ಎಂದು ಋ. ೮–೧೨–೨೭ ರಲ್ಲಿ ಹೇಳಿದೆ. "The stepping of Vishnu is emblamatic of the rising, the culminating and setting of the sun" ಎಂದು ಮಾಕ್ಸ್‌ಮುಲರ್‌ರವರು ಹೇಳಿರುವುದು ನಿರುಕ್ತದಲ್ಲಿ ಉದಾಹರಿಸಿರುವ ಔರ್ಣವಾಭ, ಶಾಕಪೂಣಿ ಮೊದಲಾದ ಪ್ರಾಚೀನರ ಅಭಿಪ್ರಾಯದಿಂದ ಬಲಗೊಳ್ಳುತ್ತದೆ. "**ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ**" (ನಿ. ೧೨–೧೯). ಉದಯ, ಮಧ್ಯಾಹ್ನ ಮತ್ತು ಅಸ್ತಮಾನ ಕಾಲಗಳಲ್ಲಿನ ಸೂರ್ಯನ ಪಾದಗಳು ವಿಷ್ಣುವಿನ ಮೂರು ಹೆಜ್ಜೆಗಳೆಂಬುದರಲ್ಲಿ ಒಮ್ಮತವಿದೆ. ಇದು ಹೇಗೇ ಇರಲಿ, ಋಗ್ವೇದದ ವಿಷ್ಣುದೇವತೆಗೂ ರುದ್ರದೇವತೆಗೂ ಗಮನಾರ್ಹವಾದ ವ್ಯತ್ಯಾಸವುಂಟು. ವಿಷ್ಣುವು ವೃತ್ರನೇ ಮೊದಲಾದ ಅಸುರರನ್ನು ಗೆಲ್ಲಲು ಇಂದ್ರನಿಗೆ ಸಹಾಯಮಾಡುವನು. ಮುಂದೆ ಇಂದ್ರನ ಅಸುರಾರಿ ಎಂಬ ಬಿರುದು ವಿಷ್ಣುವಿಗೇ ಸಲ್ಲುವುದು. ಇಂದ್ರ-ವಿಷ್ಣುಗಳ ಹೆಸರು ಒಟ್ಟಿಗೇ ಅನೇಕ ಸಲ ಬರುತ್ತದೆ. ಆದರೆ ರುದ್ರದೇವತೆಯು ಇಂದ್ರನೊಡನೆ ಸಹಕರಿಸಿದುದು ಕಂಡುಬರುವುದಿಲ್ಲ. ಋಗ್ವೇದದ ರುದ್ರನು ಯಾವ ರಾಕ್ಷಸನನ್ನೂ ಕೊಂದವನಲ್ಲ. ವಾಸ್ತವವಾಗಿ, ಅವನೇ ಸ್ವರ್ಗಲೋಕದ ಮಹಾ ಅಸುರನು (ಋ. ೨–೧–೬). ರುದ್ರನಿಗೆ ಹವಿರ್ಭಾಗವನ್ನು ಕೊಡದಿರುವುದರಿಂದ ದಕ್ಷಯಜ್ಞವು ಧ್ವಂಸವಾಯಿತಂತೆ. ಒಂದು ವೇಳೆ ರುದ್ರನಿಗೆ ಹೆದರಿ ಹವಿಸ್ಸನ್ನು ಕೊಟ್ಟರೂ "ಇತರ ದೇವತೆಗಳಿಗೆ ಕೊಟ್ಟ ಮೇಲೆ ಉಳಿದುದು ರುದ್ರನಿಗೆ ಅರ್ಪಿತವಾಗುತ್ತದೆ (ಆ. ಧ. ಸೂ. ೨–೪–೨೩)" ಎಂದು ಹೇಳಲಾಗಿದೆ. ಆದುದರಿಂದ ಯಜ್ಞವಿರೋಧಿಗಳಾದ ವ್ರಾತ್ಯರೂ ಅಸುರರೂ ರುದ್ರದೇವತೆಯೊಡನೆ ದ್ರಾವಿಡರ

ಶಿವನನ್ನು ಸೇರಿಸಿ 'ರುದ್ರಶಿವ'ನನ್ನು ಆರಾಧಿಸಿದಂತಿದೆ. ಆರ್ಯ–ದ್ರಾವಿಡರ ಸಂಘಟನೆಯಾದ ಮೇಲೂ ಹಾಗೆ ದ್ರಾವಿಡರೊಡನೆ ಸೇರದ ಸಂಪ್ರದಾಯಶರಣರು, ಇಂದ್ರನ ವರ್ಚಸ್ಸು ಕಡಿಮೆಯಾಗಿ ಹೋಗಿದ್ದುದರಿಂದ ವಿಷ್ಣುದೇವತೆಯನ್ನು ದೇವೋತ್ತಮ ಪಟ್ಟಕ್ಕೆ ಏರಿಸಬೇಕಾಯಿತು. ಇಂದ್ರನೊಡನೆ ಹವಿಸ್ಸನ್ನು ಪಡೆಯುತ್ತ ಇಂದ್ರನ ಬಲಭುಜವಾದ ವಿಷ್ಣುದೇವತೆಗೆ ಈ ಪಟ್ಟವು ದೊರೆತು "ಯಜ್ಞೋ ವೈ ವಿಷ್ಣುಃ" ಎನಿಸಿಕೊಂಡುದು ಸ್ವಾಭಾವಿಕವೇ.

ಅಮರಕೋಶದಲ್ಲಿ ವಿಷ್ಣುವಿಗೆ 'ಉಪೇಂದ್ರ'ನೆಂಬ ಪರ್ಯಾಯ ನಾಮವಿದ್ದುದನ್ನು ಗಮನಿಸಿ ಶ್ರೀ ಜೋಶಿಯವರು ಹೇಳಿದ ಮಾತಿದು:

"ವಿಷ್ಣುವು ಉಪೇಂದ್ರನು. ಹರಿ ಎಂದರೆ ಇಂದ್ರನೇ. ಆದರೆ ಇಂದ್ರನು ವೇದದ ಕಾಲದ ಮುಂದೆ ಅದೃಶ್ಯನಾದಂತೆ, ಆ ಸ್ಥಾನವು ಎಂದರೆ 'ಹರಿ' ಪದವಿಯು ಉಪೇಂದ್ರನಾದ ವಿಷ್ಣುವಿಗೆ ದೊರೆತಿತೆಂದು ಹೇಳಬಹುದಾಗಿದೆ. ವಿಷ್ಣುವಿಗೆ ಇಂದ್ರಾನುಜ, ಇಂದ್ರಾವರಜ ಎಂದು ಹೆಸರುಗಳಿವೆ. ಅಣ್ಣನು (ಇಂದ್ರನು) ಹೋದಬಳಿಕ ತಮ್ಮನಿಗೆ, ಅಧ್ಯಕ್ಷರು ಹೋದಬಳಿಕ ಉಪಾಧ್ಯಕ್ಷನಿಗೆ ಆ ಸ್ಥಾನವು ಸಲ್ಲುವುದಿಲ್ಲವೇ? ಹಾಗೆ ಉಪೇಂದ್ರನೇ ಮುಂದೆ ಈಗ 'ಹರಿ' ಎನಿಸಿದ್ದರೆ ಸೋಜಿಗವೇನು?"

## ಯಜ್ಞಧ್ವಂಸಿ ವೀರಶೈವ ವೀರಭದ್ರ

ಶ್ರೀಯುತ ಜೋಶಿಯವರು ಹೇಳುವಂತೆ "ಯಜ್ಞಕ್ಕಾಗಿ ಬರಮಾಡಿಕೊಳ್ಳುವ ಇಂದ್ರಾದಿ ಮುಖ್ಯ ದೇವತೆಗಳೊಡನೆ ರುದ್ರನಿಗೆ ಹವಿಸ್ಸು ದೊರೆಯುವುದಿಲ್ಲ. ಯಜ್ಞದ ಕೊನೆಗೆ ಅಲ್ಲಿ ಹರವಿದ ಸಮಿತ್ತು-ದರ್ಭೆಗಳನ್ನೇ ಆಹುತಿಹಾಕಿ, 'ರುದ್ರಾಯ ಪಶುಪತಯೇ ಸ್ವಾಹ' ಎಂದು ಕೈತೊಳೆದುಕೊಳ್ಳುವರು (ಅದರ ದೋಷವನ್ನು ತೊಳೆದುಬಿಡಲು)! ಶಿವ ದೇವಾಲಯದಲ್ಲಿ ಅರ್ಚಕರಾಗಿರುವುದು ಬ್ರಾಹ್ಮಣರಲ್ಲಿ ಅಷ್ಟುಪ್ರಶಸ್ತವಾದುದೆಂದು ತಿಳುವಳಿಕೆಯಿಲ್ಲ." ಒಟ್ಟಿನಲ್ಲಿ ರುದ್ರನಿಗೆ ಆಹುತಿಯನ್ನು ಕೊಡಲಿ, ಕೊಡದಿರಲಿ, ಮೇಲೆ ಹೇಳಿದಂತೆ ಕಡೆಯಲ್ಲಿ ದರ್ಭೆಗಳನ್ನು ಅಗ್ನಿಯಲ್ಲಿ ಹಾಕಿ ಕೈತೊಳೆದುಕೊಳ್ಳುವುದು ರುದ್ರನ ವಿಷಯದಲ್ಲಿ ಅಗೌರವವನ್ನು ಸೂಚಿಸಿದಂತಾಯಿತು. ಹೀಗೆ ವಿದ್ವೇಷವು ಬಳೆದು ಶಿವನ ವಿರುದ್ಧವಾಗಿ ದಕ್ಷಯಾಗದ ಏರ್ಪಾಡಾಯಿತು. ದಕ್ಷಯಾಗವನ್ನು ವೀರಭದ್ರನು ಧ್ವಂಸಮಾಡಿದನು. ವೀರಶೈವರ ಇತಿಹಾಸದಲ್ಲಿ ಇದೊಂದು ಮುಖ್ಯ ಘಟನೆ. ಲಿಂಗಧಾರಿಯಾಗಿ ಇದುವರೆಗೂ ವೀರಶೈವರಿಂದಲೇ ಪೂಜಿಸಿಕೊಳ್ಳುತ್ತ ಗೋತ್ರಪ್ರವರ್ತಕನಾದ ವೀರಭದ್ರನದು ಈ ಸ್ತುತ್ಯಕಾರ್ಯ. ಅಲುಗಾಡುತ್ತಿದ್ದ ವೀರಶೈವ ಧರ್ಮವನ್ನು ಮತ್ತೆ ಅಲುಗಾಡದಂತೆ ಸಂಸ್ಥಾಪಿಸಿದ ಹಿರಿಮೆ ಆ ವೀರಭದ್ರನದು. ಆದುದರಿಂದಲೇ ಇಂದೂ ಜಗದ್ಗುರು ರೇಣುಕಾಚಾರ್ಯರ ಪೀಠದ ಆಧಾರಸ್ತಂಭವಾಗಿ ಶ್ರೀ ವೀರಭದ್ರನನ್ನು ಗೌರವಿಸುತ್ತಿರುವುದು. ಶ್ರೀಯುತ ಮ॥ ಸು॥ ಕೃಷ್ಣಮೂರ್ತಿಯವರು ೧೯೬೦ರ 'ಪ್ರಜಾಮತ' ದೀಪಾವಳಿ ಸಂಚಿಕೆಯಲ್ಲಿ "ಭಾರತೀಯ ಸಂಸ್ಕೃತಿಗೆ ಆರ್ಯೇತರ ಜನಾಂಗಗಳ ಕೊಡುಗೆ" ಎಂಬ ಲೇಖನದಲ್ಲಿ ಹೀಗೆ ಬರೆದಿದ್ದಾರೆ:

"ಶೈವ ಧರ್ಮ ಅನಾರ್ಯ ಧರ್ಮ ಎಂಬುದನ್ನು ಸೈಂಧವ ಸಂಸ್ಕೃತಿಯ ಅವಶೇಷಗಳೇ ಸಿದ್ಧಪಡಿಸಿವೆ. ಋಗ್ವೇದದಲ್ಲಿ ಬಾಣದಂತೆ ಹೊಳೆಯುತ್ತ ಬರುವ ರುದ್ರ, ಮರುತ್ತುಗಳ ಒಡೆಯ. ಅಲ್ಲಿಯ ರುದ್ರನಿಗೂ ಇಂದಿನ ಶಿವನಿಗೂ ತುಂಬಾ ಅಂತರವಿದೆ. ಯಜುರ್ವೇದ

ಶತರುದ್ರೀಯ ಅಧ್ಯಾಯದಲ್ಲಿ ರುದ್ರನ ಜತೆಗೆ ಶಿವ ಮತ್ತು ಗಿರೀಶರ ಉಲ್ಲೇಖವಿದೆ. ಆದರೆ ಇದು ಶೈವಭಾವನೆಯ ವಿಕಾಸಪರಂಪರೆಯ ಸೋಪಾನ ಮಾತ್ರ. ಆರ್ಯ-ಅನಾರ್ಯ ಸಂಪರ್ಕದಿಂದ ಅದು ಒಂದು ನಿರ್ದಿಷ್ಟ ರೂಪವನ್ನು ತಳೆಯಿತು. ಆದರೆ ಶೈವ ಧರ್ಮ ಆರ್ಯ ರಿಂದ ಅಷ್ಟು ಸುಲಭವಾಗಿ ಸ್ವೀಕೃತವಾಗಲಿಲ್ಲ. ತುಂಬ ವಿರೋಧದ ತರುವಾಯ ಅದು ಆರ್ಯರ ಧರ್ಮವನ್ನು ಪ್ರವೇಶಿಸಿತು. ವೇದದಲ್ಲಿ ಬರುವ "ಶಿಶ್ನದೇವ" ಆರ್ಯೇತರ ಜಾತಿಯ ಲಿಂಗಪೂಜಕರಿರಬೇಕೆಂದು ಅನೇಕರು ಅಭಿಪ್ರಾಯಪಡುತ್ತಾರೆ.... ಪುರಾಣಗಳನ್ನು ಒಂದೊಂದಾಗಿ ನೋಡಹೋದರೆ, ಆರ್ಯ ಋಷಿಮುನಿಗಳು ಲಿಂಗಪೂಜೆ ಮತ್ತು ಶಿವಪೂಜೆ ಯನ್ನು ದೂರೀಕರಿಸಲು ವಿಶ್ವಪ್ರಯತ್ನವನ್ನು ಮಾಡುತ್ತಿರುವುದನ್ನು ಕಾಣಬಹುದು. ದಕ್ಷಯಜ್ಞ ಪ್ರಸಂಗದಲ್ಲಿ ಈ ಸಂಘರ್ಷಣೆ ಎದ್ದುಕಾಣುತ್ತದೆ."

## ತೆಗಳಿಕೆಯು ಹೋಗಿ ಹೊಗಳಿಕೆ

"ಶಿಶ್ನದೇವಾಃ" ಎಂಬುದು ಅಬ್ರಹ್ಮಚಾರಿಗಳನ್ನು ಕುರಿತು ಹೇಳಿದ ಮಾತೇ ಹೊರತು ಲಿಂಗಾರ್ಚಕರನ್ನೂ ಲಿಂಗಧಾರಿಗಳನ್ನೂ ಕುರಿತು ಹೇಳಿದ ಮಾತಲ್ಲವೆನ್ನುವುದು ಬಹುಮಟ್ಟಿಗೆ ಭಾರತೀಯರು ಈಗ ಹೇಳುವ ಮಾತು. ಇದು ಸರಿಯಲ್ಲ. ಈ ಮಾತುಗಳಿರುವ ಋಗ್ವೇದದ ಮಂತ್ರಗಳ ವಿಷಯವನ್ನು ನೋಡಿ:

ನ ಯಾತವ ಇಂದ್ರ ಜೂಜುವುರ್ನೋ ನ ವಂದನಾ ಶವಿಷ್ಠ ವೇದ್ಯಾಭಿಃ ।
ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರ್ಋತಂ ನಃ ॥

ಋ. ೭–೨೧–೫.

ಸ ವಾಜಂ ಯಾತಾಪದುಷ್ಪದಾ ಯನ್‌ಸ್ವರ್ಷಾತಾ ಪರಿಷದತ್ ಸನಿಷ್ಯನ್ ।
ಅನರ್ವಾಯಚ್ಛತದುರಸ್ಯ ವೇದೋಘ್ನನ್ ಶಿಶ್ನದೇವಾ ಅಭಿವರ್ಪಸಾಭೂತ್ ॥

ಋ. ೧೦–೯೯–೩.

ಮೊದಲನೆಯ ಮಂತ್ರದಲ್ಲಿ ಶಿಶ್ನವೇ ದೇವರಾಗುಳ್ಳವರು ನಮ್ಮ ಯಜ್ಞದ ಬಳಿ ಬಾರದಿರಲಿ, ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಎರಡನೆಯ ಮಂತ್ರದಲ್ಲಿ ಶಿಶ್ನವೇ ದೇವರಾಗುಳ್ಳವ ರನ್ನು ಕೊಂದು ನೂರು ಬಾಗಿಲುಗಳನ್ನು ಒಡೆದು ಇಂದ್ರನು ಧನವನ್ನು ಸೂರೆಮಾಡಿದುದನ್ನು ಹೇಳಿದೆ. ಯಜ್ಞವಿರೋಧಿಗಳು ಶಿವಭಕ್ತರಾದ ಅಸುರರು. ಅವರನ್ನು ಬಿಟ್ಟು ಅಬ್ರಹ್ಮಚಾರಿ ಗಳನ್ನು ಇಂದ್ರನು ಯುದ್ಧದಲ್ಲಿ ಕೊಂದು ಧನವನ್ನು ಸೂರೆಮಾಡುವ ಅವಶ್ಯಕತೆಯೇನು? ಏನೂ ಇರಲಾರದು. ಈ ಮಂತ್ರಗಳಲ್ಲಿ "ಶಿಶ್ನದೇವಾಃ" ಎಂಬುದು ಶಿವಭಕ್ತರೂ ವಿರೋಧಿ ಗಳೂ ಆದ ಲಿಂಗಧಾರಿ ಮೊಹೆಂಜೋದಾರೋ ನಿವಾಸಿಗಳನ್ನು ಕುರಿತು ಹೇಳಿದ ಮಾತಾಗಿರ ಬೇಕು.

ಅನಾರ್ಯರನ್ನು ಕಳ್ಳರೆಂದೂ, ಅವರ ದೇವರನ್ನು ಕಳ್ಳರ ದೇವನೆಂದೂ ಆರ್ಯರು ಮೊದಲು ಹೀಯಾಳಿಸಿದ್ದರಷ್ಟೆ. ಈ ತೆರದ ಆರ್ಯರ ಭಾವನೆಯು ಬದಲಾಯಿಸಿದ ನೋಲೂ ಈ ತೆರದ ಹೆಸರುಗಳು ಉಳಿದುಕೊಂಡವು. ಹುಚ್ಚಪ್ಪ, ಪಾಪಯ್ಯ, ಕುಳ್ಳಯ್ಯ ಮೊದಲಾದ ಹೆಸರುಗಳು ಪ್ರೀತಿಗಾಗಿಯೋ ತಿರಸ್ಕಾರಕ್ಕಾಗಿಯೋ ಪ್ರಾರಂಭವಾದರೂ, ಅವು ಹಿಂದಿನ ಭಾವನೆಯಳಿದ ಮೇಲೂ ಉಳಿಯುವಂತೆ, ರುದ್ರನ ವಿಷಯವಾಗಿ ಆರ್ಯರು ದ್ವೇಷದಿಂದ ಕರೆದ ಹೆಸರುಗಳು ನಿಂತುಹೋದವು. ಆದರೆ ತೆಗಳಿದವರು ಹೊಗಳುವ ಕಾಲ ಬಂದಿತು.

ಆಗ ಆರ್ಯರು ತಾವು ಪೂಜಿಸುತ್ತಿದ್ದ ರುದ್ರನಿಗೆ ಇದ್ದ ಇಂತಹ ಹೆಸರುಗಳಿಗೆ ಬೇರೆ ಅರ್ಥವನ್ನು ಕೊಡಬೇಕಾಯಿತು. ಉದಾಹರಣೆಗಾಗಿ "**ಸ್ತೇನಾನಾಂ ಪತಯೇ ನಮಃ**" ಎಂದು ಮೊದಲಾಗಿ ರುದ್ರಾಧ್ಯಾಯದಲ್ಲಿ ಹೇಳಿದ ಮಾತುಗಳಿಗೆ "**ರುದ್ರೋ ಹಿ ಲೀಲಯಾ ನಟ ಇವ ತತ್ ತತ್ ವೇಷಂ ಧತ್ತೇ; ಯದ್ವಾ····ರುದ್ರಸ್ಯ ಸರ್ವಾತ್ಮ್ಯಂ ಅನುಸಂಧಾತುಂ ಮಂತ್ರೈಃ ಏವಂ ಉಚ್ಯತೇ**" ಎಂದು ಭಾಷ್ಯ ಬರೆದು ಪಾರಾಗಬೇಕಾಯಿತು. ರುದ್ರನು ಎಲ್ಲರ ಆತ್ಮನಾದಮಾತ್ರಕ್ಕೆ ಅವನನ್ನು ಕಳ್ಳರ ಒಡೆಯನೆನ್ನಬೇಕಾಗಿಲ್ಲ. ಅವನು ಕಳ್ಳನಾಗಿ ನಟಿಸಲು ಕಾರಣವೂ ಇಲ್ಲ. ರುದ್ರನನ್ನು ತೆಗಳುತ್ತಿದ್ದ ಕಾಲದಲ್ಲಿ ಹೇಳುತ್ತಿದ್ದ ಮಾತುಗಳನ್ನು ಅವನನ್ನೇ ಪೂಜಿಸಿ ಸ್ತೋತ್ರಮಾಡುವವರು ಹೇಗೋ ತೇಲಿಸಿ ಅರ್ಥಮಾಡಬೇಕಾಯಿತು. ಶಿಶ್ನದೇವಾಃ ಎಂಬ ಪದಕ್ಕೆ ಅರ್ಥಮಾಡಬೇಕಾದಾಗಲೂ ಇದೇ ಸನ್ನಿವೇಶವಾಯಿತು. ನಿರುಕ್ತದ ವಿವರಣೆಯನ್ನು ಮಾಡಿರುವ ದುರ್ಗಾಚಾರ್ಯರು "**ಶಿಶ್ನೇನ ಪ್ರಕೀರ್ಣಾಭಿಃ ಪುಂಶ್ಚಲೀಭಿಃ ಸ್ತ್ರೀಭಿಃ ದೀವ್ಯಂತಿ ಕ್ರೀಡಂತಿ ಇತಿ**" ಎಂದು ವ್ಯಾಖ್ಯಾನವನ್ನು ಮಾಡಿದ್ದಾರೆ. ಸಾಯಣಾಚಾರ್ಯರೂ ಸಹಾ "**ಶಿಶ್ನೇನ ದೀವ್ಯಂತಿ ಕ್ರೀಡಂತಿ ಇತಿ**" ಎಂದೇ ವ್ಯಾಖ್ಯಾನಮಾಡಿ ವೇದದಲ್ಲಿ "ಶಿಶ್ನದೇವಾಃ" ಎಂದು ಹೇಳಿರುವಲ್ಲಿ ಲಿಂಗವನ್ನು ಶಿಶ್ನವೆಂದು ಕರೆದಿಲ್ಲವೆನ್ನುವುದನ್ನು ಸೂಚಿಸಿ "ಶಿಶ್ನದೇವಾಃ" ಎಂದು ನಿಂದಿಸಿರುವುದು ಅಬ್ರಹ್ಮಚಾರಿಗಳನ್ನು ಎಂದು ತೇಲಿಸಿ ಅರ್ಥಮಾಡಿದ್ದಾರೆ. ಶಿವರುದ್ರನ ವಿಷಯದಲ್ಲಿದ್ದ ತೆಗಳಿಕೆಯು ಹೋಗಿ ಹೊಗಳಿಕೆಯು ಪ್ರಾರಂಭವಾದುದು ಶಿವಭಕ್ತರ ಪ್ರಗತಿಯನ್ನು ತೋರಿಸುತ್ತದೆ. ವಿಷ್ಣುವು "ಶಿಪಿವಿಷ್ಟ" ನೆಂದರೆ ತೇಜಸ್ಸಿನಿಂದ ಪರಿವೃತನೆಂದು ಭಾಷ್ಯಗಳಲ್ಲಿ ಅರ್ಥಮಾಡಿರುವುದಾದರೂ ಇದೇ ರೀತಿಯದೆನ್ನಬಹುದು.

## ಆದಿ ವೀರಶೈವ–ವೃಷಭ ಮತ

ಆರ್ಯರಲ್ಲಿ ಪ್ರಗತಿಪರರು ಪಶುಯಜ್ಞದಲ್ಲಿನ ಪ್ರಾಣಿಹಿಂಸೆಯನ್ನು ನಿಷೇಧಿಸಿ ಅದನ್ನು ವಿರೋಧಿಸುತ್ತಿರುವಲ್ಲಿ, ಸಂಪ್ರದಾಯಶರಣರಾದ ಆರ್ಯರ ಗುಂಪು ಅಂಧಶ್ರದ್ಧೆಯ ಜನರಲ್ಲಿ ಯಜ್ಞವಿಧಾನದ ಕಟ್ಟುನಿಟ್ಟುಗಳನ್ನು ಬಲಪಡಿಸಿದರು. ದಿವಂಗತ ರಾನಡೆಯವರ ಉಪನಿಷತ್ ರಹಸ್ಯದಲ್ಲಿ ಹೇಳಿದಂತೆ "ಯಜ್ಞವೇ ಬ್ರಾಹ್ಮಣ ಗ್ರಂಥಗಳ ಪಲ್ಲವಿಯಾಗಿದೆ. ಋಗ್ವೇದ ಸೂಕ್ತಗಳಲ್ಲಿ ಕಂಡುಬರುವ ಆ ನಿರ್ಮಲಭಾವವು ಬ್ರಾಹ್ಮಣ ಕಾಲದಲ್ಲಿ ಅದೆಂತು ಮಲಿನವಾಯಿತೆಂಬುದು ತಿಳಿಯದ ಮಾತು. ಬ್ರಾಹ್ಮಣ ಗ್ರಂಥಗಳು ಅರ್ಥವಿಹೀನ ವಿಧಿವಿಧಾನಗಳ ಮೊಟ್ಟೆಯನ್ನು ಶುದ್ಧ ವೇದಸೂಕ್ತಗಳ ಮೇಲೆ ಹೇರಿ, ಯಜಮಾನನ ಗೌರವಹೀನ ಜೀವನ ಕ್ರಮವನ್ನು ಎತ್ತಿಹಿಡಿಯಲಿಕ್ಕೆ ವೇದಮಂತ್ರಗಳ ಉಪಯೋಗವನ್ನು ಮಾಡಿರುವುವು. ಯಜಮಾನನ ಜೀವನಕ್ರಮಕ್ಕೆ ಮಂತ್ರಗಳು ಪ್ರತ್ಯಕ್ಷ ಉಪಯುಕ್ತವಿರುವವೆಂದು ತೋರಿಸುವ ಭರದಲ್ಲಿ ಬ್ರಾಹ್ಮಣ ಗ್ರಂಥಗಳು ದಂತಕಥೆ, ವೇದವ್ಯಾಖ್ಯಾನ, ವ್ಯುತ್ಪತ್ತಿ ಶಾಸ್ತ್ರ, ತತ್ವ ಶಾಸ್ತ್ರಗಳಲ್ಲಿಯ ಕಲ್ಪನೆ ಮುಂತಾದುವುಗಳನ್ನು ಕಲೆಸಿಬಿಡುವುದನ್ನು ನೋಡಿದರೆ ಚಮತ್ಕಾರವೆನಿಸುವುದು. ನಾನಾ ಬಗೆಯ ಯಜ್ಞವಿಧಿಗಳನ್ನು ಕಲ್ಪಿಸಲಿಕ್ಕೆ ಇಷ್ಟೊಂದು ಬುದ್ಧಿ ಸಾಮರ್ಥ್ಯವನ್ನು ವೆಚ್ಚಮಾಡಿರುವುದನ್ನು ನೋಡಿದರೆ ಬ್ರಾಹ್ಮಣಕಾಲದ ಜನರ ಬಗ್ಗೆ ಕನಿಕರವುಂಟಾಗುವುದು." ಹೀಗೆ ಹೇಳಿದುದರಲ್ಲಿ ತೋರುವ ಜಿಗುಪ್ಸೆಯು ಆಗಿನ ಜನರಿಗೂ ಈ ಪುರೋಹಿತರ ವಿಷಯದಲ್ಲಿ ಆಗಿರಬೇಕು. ಫಲಿತಾಂಶವೇನೆಂದರೆ ಯಜ್ಞವಿರೋಧಿಗಳು

ಸುಸಂಘಟಿತರಾಗಿ ಬ್ರಾಹ್ಮಣ ಗ್ರಂಥಗಳನ್ನು ವಿರೋಧಿಸಿದರು. ಈ ವಿರೋಧವು ಮೊಹೆಂಜೋದಾರೋ ಕಾಲದಿಂದ ಪ್ರಬಲರಾಗಿದ್ದ ಶೈವದ್ರಾವಿಡರೊಡನೆ ಸೇರಿದ ವ್ರಾತ್ಯರಿಂದ ಪ್ರಬಲಗೊಂಡಿರಬೇಕು. ಯಜ್ಞವಿರೋಧಿಗಳ ಮತವನ್ನು ಆದಿ ವೀರಶೈವ ಅಥವಾ ವೃಷಭ ಮತವೆನ್ನಬಹುದು. ಈ ಮತದಲ್ಲಿ ಉಗ್ರಗಾಮಿಗಳಾದವರು ವೇದವೆಲ್ಲವನ್ನು ವಿರೋಧಿಸಿ ಈಗಿನ ಜೈನರಾದರು. ಇನ್ನುಳಿದ ಸೌಮ್ಯವಾದಿಗಳು ವೇದಗಳಲ್ಲಿ ಯಜ್ಞಯಾಗಾದಿಗಳನ್ನು ವಿಧಿಸುವ ಬ್ರಾಹ್ಮಣ ಭಾಗವನ್ನು ಮಾತ್ರ ವಿರೋಧಿಸಿ, ಮಂತ್ರ ಮತ್ತು ಉಪನಿಷತ್ತುಗಳನ್ನು ಗೌರವಿಸಿ ವೈದಿಕರೇ ತಾವು ಎಂದು ಹೇಳಿಕೊಳ್ಳುವ ವೀರಶೈವರಾದರು.

ಕುಂಭಕೋಣದ ಗೌರ್ನಮೆಂಟ್ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀಯುತ ಅಪ್ಪಾಸ್ವಾಮಿ ಚಕ್ರವರ್ತಿ, ಎಂ.ಎ., ಐ.ಇ.ಎಸ್., ರವರು ಜೈನಮತದ ಪ್ರಾಚೀನತೆಯ ವಿಷಯವಾಗಿ 'ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯ'ದ ಮೊದಲನೆಯ ಸಂಪುಟದ ೧೮೫–೧೮೯ ಪುಟದಲ್ಲಿ ಒಂದು ಲೇಖನವನ್ನು ಬರೆದಿರುವರು. ಅದರಲ್ಲಿ ಹೀಗೆ ಹೇಳಿದ್ದಾರೆ:

"In the Rigvedic mantras, we have clear references to Rishabha and Arishtanemi two of the Jain Tirthankaras, the former being the founder of Jaina Dharma of the present age....."Ma Himsyat Sarva Bhutani" the Vedic passage which condemns shedding of blood occurs side by side with "Sarva medhe sarvam hanyat", kill all kinds of animals in the Sarva medha sacrifice. The Mythic rivalry of Visvamitra and Vasistha and the story of Sunashepa occurring in the Rigvedic hymns similarly indicate the existence of and rivalry between the two schools of thought one sanctioning the sacrifice and the other opposing it....According to Jaina tradition itself, the Vedas at one time were based on the doctrine of Ahimsa and became perverted later on, through the personal rivalry between the two teachers at the time of king Vasu. It holds that those people who wanted meat-eating misinterpreted Vedic texts and introduced animal sacrifice as a necessary part of religion; hence the followers of Ahimsa Dharma were constrained to reject the perverted Vedas and to stick to their own Agamas resting upon Ahimsa Dharma. Curiously this story occurs in the Mahabharata also and the same king Vasu was responsible for the mischievous interpretation introducing animal sacrifices. Mention of this incident made by both the rival parties is a significant fact. It may not be far wrong to conclude that some portions of the Vedas which are not now available were probably based on the doctrines of Ahimsa."

"ಸರ್ವಮೇಧೇ ಸರ್ವಂ ಹನ್ಯಾತ್" ಎಂದರೆ ಸರ್ವಮೇಧದಲ್ಲಿ ಎಲ್ಲ ಪ್ರಾಣಿಗಳನ್ನು ಕೊಲ್ಲಬೇಕೆಂದು ಹೇಳುವರ ಹಾಡು ಒಂದಾದರೆ, "ಮಾಹನ್ಯಾತ್" ಎಂದರೆ ಕೊಲ್ಲಲೇ ಬಾರದೆನ್ನುವವರದು ಇನ್ನೊಂದು ಹಾಡು. ಇವೆರಡೂ ವೇದದ ಆಧಾರಗಳೇ. "ಆಮ್ನಾಯಸ್ಯ

7

ಕ್ರಿಯಾರ್ಥತ್ವಾತ್ '' ಎಂದರೆ ವೇದಗಳಿರುವುದು ಯಜ್ಞಯಾಗಾದಿ ಕರ್ಮಗಳಲ್ಲಿ ಉಪಯೋಗಿಸುವುದಕ್ಕಾಗಿಯೇ ಎಂದು ಹೇಳುವ ಕರ್ಮಠರಿಂದ ಸಂಗ್ರಹಿಸಲ್ಪಟ್ಟ, ಈಗ ನಮಗೆ ದೊರೆತಿರುವ ವೇದಭಾಗದಲ್ಲಿ ಪಶುವಧೆಯನ್ನು ನಿಷೇಧಿಸುವ ವೇದಭಾಗವನ್ನು ಕಾಣಲಾಗುವುದಿಲ್ಲ. ಅದು ಉಳಿದುಬರಲಿಲ್ಲವೆಂಬುದು ಜೈನರ ವಾದ. ವಸು ಎಂಬ ದೊರೆಯ ಕಾಲದಲ್ಲಿ ಮಾಂಸಾಹಾರಿಗಳು ಯಜ್ಞಯಾಗಗಳನ್ನು ಮಾಡುವುದೇ ವೇದಗಳ ಅಭಿಪ್ರಾಯವೆಂಬುದನ್ನು ಸಿದ್ಧಾಂತಮಾಡಿದರು. ಆವರೆ ಅಹಿಂಸೆಯನ್ನು ಎತ್ತಿಹಿಡಿದ ಜೈನರು ಅದಕ್ಕೆ ಒಪ್ಪದೆ ತಮ್ಮ ಆಗಮಗಳಿಗನುಸಾರವಾಗಿ ನಡೆದುಕೊಳ್ಳುತ್ತಿರುವೆವೆಂದು ಹೇಳುವರು. ಮಹಾಭಾರತದಲ್ಲಿಯೂ ಈ ವಸುವೆಂಬ ದೊರೆಯ ಕಾಲದಲ್ಲೇ ಮೇಲೆ ಹೇಳಿದಂತೆ ನಡೆಯಿತೆಂದು ಹೇಳಿರುವುದರಿಂದ ಜೈನರು ಹೇಳಿರುವುದರಲ್ಲಿ ಸತ್ಯವಿರಬೇಕೆಂದು ಶ್ರೀಯುತರ ಅಭಿಪ್ರಾಯ. ಇದು ಹೇಗೇ ಇರಲಿ, ಎರಡು ಪಕ್ಷಗಳಿಗೂ ಭಿನ್ನಾಭಿಪ್ರಾಯವು ಮುಂದುವರೆದುದರಲ್ಲಿ ಸಂದೇಹವಿಲ್ಲ. ಶತಪಥಬ್ರಾಹ್ಮಣದಲ್ಲಿಯೂ, ವಾಜಸನೇಯ ಸಂಹಿತೆಯಲ್ಲಿಯೂ ಆರ್ಯರು, ಕಾಶಿ, ಕೋಸಲ, ವಿದೇಹ, ಮಗಧ ರಾಜ್ಯಗಳನ್ನೊಳಗೊಂಡ ಪೂರ್ವದೇಶಗಳಲ್ಲಿ ಯಜ್ಞಯಾಗಗಳನ್ನು ಮಾಡದೆ ಅವುಗಳನ್ನು ಖಂಡಿಸುತ್ತ ಬ್ರಾಹ್ಮಣರಿಗೆ ಗೌರವವನ್ನು ಕೊಡದೆ ಇದ್ದುದರಿಂದಲೂ, ಸಂಸ್ಕೃತವನ್ನು ಶುದ್ಧವಾಗಿ ಮಾತನಾಡಲು ಬಾರದ ಜನರಿದ್ದುದರಿಂದಲೂ, ಆರ್ಯರು ಆ ದೇಶಗಳಲ್ಲಿ ಪ್ರಯಾಣಮಾಡಬಾರದೆಂದು ವಿಧಿಸಿದ್ದುದು ಶ್ರೀಯುತ ಅಪ್ಪಾಸ್ವಾಮಿಯವರ ನಿಲುವಿಗೆ ಆಧಾರವಾಗಿದೆ. ಜೈನರಂತೆಯೇ ಯಜ್ಞವನ್ನು ವಿರೋಧಿಸುವ ಮತವಿನ್ನೊಂದಿದೆ. ಅದು ವೀರಶೈವ ಮತ. ಅದೂ ಸಹಾ ವೃಷಭನಿಂದಲೇ ಸ್ಥಾಪಿತವಾಯಿತೆಂಬ ನಂಬುಗೆ ವೀರಶೈವರಲ್ಲಿದೆ. ಸ್ಕಾಂದಪುರಾಣಾಂತರ್ಗತ ಕೇದಾರಖಂಡದಲ್ಲಿ, ಹಿಂದೆ ಹೇಳಿದಂತೆ ಸಾಕ್ಷಾತ್ ಪರಶಿವನೇ ಶಿಲಾದನ ಮಗನಾಗಿ ನಂದಿಯೆಂಬ ಹೆಸರಿನಿಂದ ಹುಟ್ಟಿದನೆಂದು ಹೇಳುವ ಪುರಾಣದ ಕಥೆಯಿದೆ. ಮೇಲಿನ ಆಧಾರದಲ್ಲಿಯೇ ಶೈಲಾದ (ವೃಷಭ)ನಿಂದ ವೀರಶೈವ ಧರ್ಮವು ಪ್ರತಿಷ್ಠಿತವಾಯಿತೆಂದು ಹೇಳಿದೆ. ಮುಂದೆ ಈ ಮತವನ್ನು ಉದ್ಧಾರ ಮಾಡಿದ ಬಸವನು ಈ ನಂದಿ ಅಥವಾ ವೃಷಭನ ಅವತಾರವೆಂದು ನಂಬಲಾಗಿದೆ. ಆದುದರಿಂದ ವೃಷಭನಿಂದ ಪ್ರತಿಷ್ಠಿತವಾದ, ಯಜ್ಞವಿರೋಧಿಯಾದ ಮತವು ಜೈನವೆ ಅಥವಾ ವೀರಶೈವವೆ ಎಂಬ ಪ್ರಶ್ನೆಯು ಏಳುವುದು.

ಡಾ॥ ಎ. ಚಿಂತಾಮಣಿಯವರು 'ವೇದಾಂತಕೇಸರಿ'ಯಲ್ಲಿ ಬರೆದ ಲೇಖನದ ಆಧಾರದಿಂದ ಬಹಳ ಹಿಂದಿನ ಆದಿಶೈವ ಧರ್ಮವೇ ಜೈನಧರ್ಮವೆಂದು ಹೇಳುವುದಕ್ಕಿರುವ ಕಾರಣಗಳನ್ನು 'ಬಸವನಾಳ ಸ್ಮಾರಕ' ಗ್ರಂಥದ ೪೩೪ ನೆಯ ಪುಟದಲ್ಲಿ ಸಂಗ್ರಹಿಸಿದೆ:

"(೧) ಋಷಭನಾಥನು ಕೈಲಾಸಪರ್ವತದಲ್ಲಿಯೇ ನಿರ್ಯಾಣಹೊಂದಿದನು. ಅಲ್ಲಿಯೇ ಆತನ ಮಗನಾದ ಭರತನು ಋಷಭಮೂರ್ತಿಯನ್ನು ಪ್ರತಿಷ್ಠಿಸಿ, ಒಂದು ಗುಡಿಯನ್ನು ಕಟ್ಟಿಸಿದನು. ಋಷಭನಾಥನು ಪರಿನಿರ್ವಾಣಹೊಂದಿದ ಕೈಲಾಸವೇ ಶಿವನ ವಾಸಸ್ಥಾನವೆಂದು ಶೈವರಿಗೆ ಪವಿತ್ರಸ್ಥಳವಾಗಿದೆ. (೨) ಋಷಭನಾಥನು ಪರಿನಿರ್ವಾಣಹೊಂದಿದ ಶಿವರಾತ್ರಿಯ ದಿನವು ಶೈವರಿಗೂ ಅತ್ಯಂತ ಪವಿತ್ರ ದಿನವಾಗಿದೆ. (೩) ಋಷಭಮೂರ್ತಿಯ ಪೀಠದಲ್ಲಿ ಸಾಮಾನ್ಯವಾಗಿ ಕೆತ್ತಲ್ಪಡುವ ಲಾಂಛನವೇ ಶಿವನ ವಾಹನವಾಗಿದೆ. (೪) ಋಷಭನಾಥನಿಗೆ ಸಂಬಂಧಿಸಿದ ಸದ್ಯೋಜಾತ, ಅಘೋರ, ಈಶಾನ, ತತ್ಪುರುಷ ಮೊದಲಾದ ಹೆಸರುಗಳು

ಹಿಂದೂ ಪುರಾಣಗಳಲ್ಲಿ ಶಿವನಿಗೂ ಅನ್ವಯಿಸಲ್ಪಟ್ಟಿವೆ. (೫) ಋಷಭನಾಥನು ಸಂಸಾರವನ್ನು ತ್ಯಜಿಸಿ ನಗ್ನನಾಗಿ ಚರಿಸುತ್ತಿದ್ದುದರಿಂದ ಅವನಿಗೆ 'ದಿಗಂಬರ ಮುನಿ' ಎಂಬ ಹೆಸರು ಬಂದಿದ್ದಿತು. ಅದೇ ಹೆಸರು ಶಿವನಿಗೂ ಇರುವುದು ಗಮನಾರ್ಹವಾಗಿದೆ. (೬) ಮೋಕ್ಷ ಮಾರ್ಗಕ್ಕೆ ಶಿವಮಾರ್ಗವೆಂದೂ, ಮೋಕ್ಷಕ್ಕೆ ಶಿವಗತಿಯೆಂದೂ ಹೇಳುವುದುಂಟು.... ಆದುದ ರಿಂದ ಋಷಭನಾಥನೇ ಆದಿಶಿವನಾಗಿರಬೇಕು. ಮತ್ತೆ ಪುರಾತನ ಶೈವವೂ ಮೂಲ ಜೈನ ಮತವೂ ಒಂದೇ ಆಗಿರಬೇಕು."

ಶೈವರಿಗೂ ಜೈನರಿಗೂ ಬಹಳಮಟ್ಟಿಗೆ ಶಿವನ ಕಲ್ಪನೆಯಲ್ಲಿ ಒಮ್ಮತವಿದೆ. ಋಗ್ವೇದ ದಲ್ಲಿಯೇ ರುದ್ರನನ್ನು ಅನೇಕ ವೇಳೆ ವೃಷಭನೆಂದು ಕರೆಯಲಾಗಿದೆ. ಜೈನರ ಸಿದ್ಧಾಂತದ ಪ್ರಕಾರ ದೇವರೆಂಬುವನಿಲ್ಲ. ಜೀವರುಗಳು ಸಮ್ಯಕ್ ದರ್ಶನದಿಂದ ಸಮ್ಯಕ್ ಜ್ಞಾನವನ್ನು ಪಡೆದು ಸಮ್ಯಕ್ ಚಾರಿತ್ರ್ಯದಿಂದ ಮೋಕ್ಷವನ್ನು ಪಡೆವರು. ಹೀಗೆ ಮೋಕ್ಷವನ್ನು ಪಡೆದವರಲ್ಲಿ (ಶಿವ) ಋಷಭನಾಥನೊಬ್ಬನು ; ಆದರೆ ಶೈವರು ಶಿವನನ್ನು ದೇವರೆನ್ನುವರು. ಇದೊಂದ ರಿಂದಲೇ ಮೇಲೆ ಹೇಳಿದ ಸಾಮ್ಯಗಳಲ್ಲಿ ಸ್ವಲ್ಪ ವ್ಯತ್ಯಾಸವಿರುವುದು. ಶಿವನ ಕಲ್ಪನೆಯ ಉಳಿದ ವಿಷಯಗಳಲ್ಲಿ ಎರಡು ಮತಗಳಲ್ಲಿಯೂ ಒಮ್ಮತವಿದೆ. ಶೈವರಾದ ವ್ರಾತ್ಯರಲ್ಲಿ ಉತ್ತಮ ತರಗತಿ ಯವರಿಗೆ ಅರ್ಹಂತರೆಂದು ಹೆಸರು. ಜೈನರು, ಮಹಾವೀರಾದಿ ಜಿನೇಶ್ವರರನ್ನು ಅರ್ಹಂತರು ಎನ್ನುವರು. "ಅರಿವು ಆಚಾರದಲ್ಲಿ ಸಮಾವೇಶವಾದ ಲಿಂಗೈಕ್ಯನ" ಕಲ್ಪನೆಯು ಸಮ್ಯಕ್ ದರ್ಶನದಿಂದ ಪಡೆದ ಸಮ್ಯಕ್ ಜ್ಞಾನವು ಸಮ್ಯಕ್ ಚಾರಿತ್ರ್ಯದಲ್ಲಿ ಪರ್ಯವಸಾನವಾಗ ಬೇಕೆಂಬ ಜೈನತತ್ವದಂತಿದೆ.

ಯೋಗಾರೂಢನಾದ ಪಶುಪತಿಯ ವಿಗ್ರಹವು ಮತ್ತು ಶಿವಲಿಂಗಗಳು ಇರುವ ಮುದ್ರಿಕೆ ಗಳು ಸಿಂಧೂನದಿಯ ತೀರದ ಅವಶೇಷಗಳಲ್ಲಿ ದೊರೆತಿರುವುವೆಂದು ಹಿಂದೆಯೇ ಹೇಳಲಾಯಿ ತಷ್ಟೆ. ಹಿಂದೆ ಹೇಳಿದ ಶ್ರೀಯುತ ಅಪ್ಪಾಸ್ವಾಮಿಯವರ ಲೇಖನದಲ್ಲಿ ಜೈನ ತೀರ್ಥಂಕರರ ವಿಗ್ರಹವಿರುವ ಮುದ್ರಿಕೆಗಳು ಸಿಂಧೂನದಿಯ ತೀರದ ಅವಶೇಷಗಳಲ್ಲಿ ಸಿಕ್ಕಿವೆಯೆಂದು ಹೇಳಿದ್ದಾರೆ.—The recent excavations at Harappa and Mohanjo Daro brought to light still more surprising facts. On the seals and coins dug out from these places are found figures resembling Jaina Teerthankaras; perhaps a closer study of these facts may throw more light as to the religious and social organisation of ancient India. ಹೀಗೆ ಶೈವ-ಜೈನಮತಗಳ ಹಿನ್ನೆಲೆಯು ಸೈಂಧವ ನಾಗರಿಕತೆಯ ಕಾಲದಲ್ಲಿಯೇ ಇದ್ದಿರಬೇಕಾಯಿತು. 'ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯ' ಗ್ರಂಥದ ಎರಡನೆಯ ಭಾಗದಲ್ಲಿ ಮದ್ರಾಸ್ ವಿಶ್ವವಿದ್ಯಾಲಯದ ಹಿಂದೂ ಚರಿತ್ರೆಯ ಪ್ರಾಧ್ಯಾಪಕರಾದ ಶ್ರೀ ಕೆ. ಎ. ನೀಲಕಂಠಶಾಸ್ತ್ರಿಗಳು ಬರೆದಿರುವ ಶೈವಧರ್ಮದ ಚರಿತ್ರೆಯ ಲೇಖನದಲ್ಲಿ ಜೈನ-ಶೈವ ಧರ್ಮಗಳಿಗಿರುವ ಪುರಾತನ ಸಂಬಂಧವನ್ನು ಬೆಳಕಿಗೆ ತರುವ ವಿಷಯವನ್ನು ಹೇಳಿರುವುದಿದು ಗಮನಾರ್ಹವಾಗಿದೆ.—"It is interesting to note that the early Tamil lexicon 'Divakaram' mentions the names of Kamar-Kayndon (destroyer of cupid) and Tiriyambakan (three-eyed) among those of Arugan (Jaina)." ಕಾಮಾರಿಯೂ ತ್ರಿಯಂಬಕನೂ ಜಿನರಲ್ಲಿ

ಪರಿಗಣಿತರಾಗಿರುವುದಾಗಿ ಹಳೆಯ ತಮಿಳು ನಿಘಂಟುವಿನಲ್ಲಿ ಹೇಳಿದೆಯೆಂಬುದು ಶೈವ-ಜೈನರ ಹಿನ್ನೆಲೆಯ ಹೊಂದಾಣಿಕೆಯನ್ನು ತೋರಿಸುವುದು.

ವೀರಶೈವರನ್ನು ಮತ್ತು ಜೈನರನ್ನು ಒಂದುಗೂಡಿಸುವ ಮತ್ತೊಂದು ಸಂಗತಿಯು, ಇವರಿಬ್ಬರಿಗೂ ತ್ರಿಷಷ್ಟಿ ಪುರಾತನರು ಪೂಜ್ಯರಾಗಿರುವುದು. ತ್ರಿಷಷ್ಟಿ ಪುರಾತನರೆಂದ ಕೂಡಲೆ ಋಗ್ವೇದದಲ್ಲಿ **ತ್ರಿಷಷ್ಟಿಸ್ತ್ವಾ ಮರುತಃ** ಎಂದು ಹೇಳಿರುವುದು ಗಮನಕ್ಕೆ ಬರುವುದು. ಈ ಮರುತರನ್ನು ಋಗ್ವೇದದಲ್ಲಿ **ವೀರಾಃ** ಎಂದೂ, **ಸಿಂಧುಪುತ್ರಾಃ** ಎಂದೂ ಕರೆದಿರುವುದು ಕಂಡುಬರುವುದು. ಈ ವೀರಮರುತರು ಸಿಂಧುಪುತ್ರರು; ಅವರು ಸಿಂಧೂನದಿಯ ತೀರದ ಓಷಧಿಗಳನ್ನು ಬಲ್ಲರಂತೆ:

ಯತ್‌ಸಿಂಧೌ ಯದಸಿಕ್ನ್ಯಾಂ ಯತ್ ಸಮುದ್ರೇಷು ಮರುತಃ ಸ ಬರ್ಹಿಷಃ ।
ಯತ್ ಪರ್ವತೇಷು ಭೇಷಜಂ ॥ (ಋಗ್ವೇದ ೮–೨೦–೨೫)

ಮರುತರನ್ನು ರುದ್ರಪುತ್ರರೆಂದೂ ರುದ್ರೀಯರೆಂದೂ ಋಗ್ವೇದದಲ್ಲಿ ಹೇಳಿದೆ. ಇಂದ್ರನಿಗೆ ಆಪ್ತರಾಗಿದ್ದ ಮರುತರು ಇಂದ್ರನಿಂದ ತ್ಯಜಿಸಲ್ಪಟ್ಟು ವಿದ್ವೇಷ ಹುಟ್ಟಿದುದನ್ನು ಹಿಂದೆ ಹೇಳಲಾಯಿತು. ಇಂದ್ರನೂ ಇವರೂ ಅದಿತಿಯ ಮಕ್ಕಳಾದುದರಿಂದ ಸಹೋದರರೆಂದು ಕರೆಯಲ್ಪಡುತ್ತಿದ್ದುದು ಹೋಗಿ, ಅವರು ದಿತಿಯ ಮಕ್ಕಳೆಂದೂ, ಯಜ್ಞವಿರೋಧಿಯಾದ ರುದ್ರನ ಪುತ್ರರೆಂದೂ ಕರೆಯಲ್ಪಡಲು ಅವರ ಯಜ್ಞವಿರೋಧವೇ ಕಾರಣವಾಗಿರಬಹುದು. ಅವರು ಹೇಗೆ ರುದ್ರಪುತ್ರರಾದರೆಂಬುದಕ್ಕೆ ಸಾಯಣಭಾಷ್ಯದಲ್ಲಿ ಹೀಗೆ ಕಾರಣವನ್ನು ಕೊಟ್ಟಿದೆ: **"ದಿತಿಃ ಅಸುರಮಾತಾ ಇಂದ್ರಹನನ ಸಮರ್ಥಂ ಪುತ್ರಂ ಕಾಮಾಯಮಾನಾ ತಪಸಾ ಭರ್ತುಃ ಸಕಾಶಾತ್ ಗರ್ಭಂ ಲೇಭೇ····ಇಂದ್ರೋ ವಜ್ರಹಸ್ತಃ ಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿಭೇದ"** ಇಂದ್ರನನ್ನು ಕೊಲ್ಲಲು ಸಮರ್ಥನಾದ ಮಗನನ್ನು ಪಡೆಯಲು ದಿತಿಯು ತಪಸ್ಸುಮಾಡಿ ಗರ್ಭವತಿಯಾದಳಂತೆ. ಇದನ್ನು ತಿಳಿದು ಇಂದ್ರನು ಅವಳ ಗರ್ಭವನ್ನು ಪ್ರವೇಶಿಸಿ ಪಿಂಡವನ್ನು ತುಂಡು ತುಂಡು ಮಾಡಿದನಂತೆ. ಮುಂದಿನ ಕಥೆಯ ಪ್ರಕಾರ, ಪಾರ್ವತಿಯ ಪ್ರಾರ್ಥನೆಯ ಮೇರೆಗೆ ರುದ್ರನು ಈ ತುಂಡುಗಳಿಂದ ಸಮಾನರೂಪರಾದ ಮಕ್ಕಳನ್ನಾಗಿ ಮಾಡಿದನಂತೆ. ಇವರೇ ಮರುತರು. ರುದ್ರನು ಅವರಿಗೆ ಜೀವದಾನಮಾಡಿದುದರಿಂದ ಅವರು ರುದ್ರಪುತ್ರರೆಂದು ಕರೆಯಲ್ಪಡುತ್ತಾರೆಂದು ಸಾಯಣಭಾಷ್ಯದಲ್ಲಿ ಹೇಳಿದೆ.

ಋಗ್ವೇದದ ಒಂದು ಋಚೆಯಲ್ಲಿ **"ರುದ್ರಸ್ಯ ಮರ್ಯಾಃ ಅಸುರಃ"** ಎಂದು ಮರುತರ ವಿಷಯವಾಗಿ ಹೇಳಿದೆ. ಸಾಯಣಭಾಷ್ಯದಲ್ಲಿ **"ಮರ್ಯ ತಬ್ದೋ ಮನುಷ್ಯವಾಚೀ"** ಎಂದು ಅರ್ಥಮಾಡಿ, ರುದ್ರಪುತ್ರರೆಂಬ ಅಭಿಪ್ರಾಯವು **"ರುದ್ರಸ್ಯ ಮರ್ಯಾಃ"** ಎಂಬ ಪದಗಳಿಗಿರುವುದಾಗಿ ಹೇಳಿದ್ದಾರೆ. ಈ ಪದಗಳಿಗೆ ರುದ್ರನ ಮಾನವಾನುಯಾಯಿಗಳೆಂಬ ಅಭಿಪ್ರಾಯವು ಸರಿಹೊಂದುವುದು; ಏಕೆಂದರೆ ಹಿಂದೆ ಹೇಳಿದಂತೆ 'ನೃ' ಮತ್ತು 'ನರಃ' ಪದಗಳನ್ನು ಸಹಾ ಮರುತರಿಗೆ ಋಗ್ವೇದದಲ್ಲಿ ಅಲ್ಲಲ್ಲಿ ಉಪಯೋಗಿಸಿದೆ. ಆದುದರಿಂದ ಮರುತರು ಮನುಷ್ಯರೆಂಬುದರಲ್ಲಿ ಸಂದೇಹವಿಲ್ಲ. ಇಂದ್ರ ಮೊದಲಾದವರು ಸಹಾ ಭೂಲೋಕದಲ್ಲಿ ಯುದ್ಧಮಾಡಿದ ಆರ್ಯಮುಖಂಡರಿರಬೇಕೆಂಬುದು ತಜ್ಞರ ಮತ. ರುದ್ರಾನುಯಾಯಿಗಳಾದ ಈ ಮಾನವ ಮರುತರನ್ನು ಮೇಲೆ ಹೇಳಿದಂತೆ **"ಸಿಂಧುಪುತ್ರಾಃ"**

 

ಎಂದಿರುವುದು ಗಮನಾರ್ಹ. ಸಿಂಧುವಿನ ತೀರದಲ್ಲಿ ವಾಸಮಾಡುವ ಜನರೆಂದೇ ಇದರ ಅರ್ಥ. "ಗಂಗಾಯಾಂ ಘೋಷಃ" ಎಂದರೆ ಗಂಗೆಯಲ್ಲಿರುವ ಗೊಲ್ಲರಹಳ್ಳಿ. ಜಹಲ್ಲಕ್ಷಣ ದಿಂದ ಇದಕ್ಕೆ ಗಂಗೆಯ ತೀರದಲ್ಲಿರುವ ಹಳ್ಳಿಯೆಂದು ಅರ್ಥಮಾಡಬೇಕಾಗುವುದು; ಏಕೆಂದರೆ ಗಂಗಾನದಿಯೊಳಗೆ ಹಳ್ಳಿಯಿರಲಾಗುವುದಿಲ್ಲ. ಹಾಗೆಯೇ 'ಸಿಂಧುಪುತ್ರಾಃ' ಎಂದರೆ ಸಿಂಧೂ ನದಿಯ ತೀರದ ಜನರೆಂದು ಅರ್ಥಮಾಡಬೇಕಾಗುವುದು. ಮರುತರನ್ನು ಇಂದ್ರಮಾತೆಯಾದ ಅದಿತಿಯ ಮಕ್ಕಳೆಂದು ಕರೆಯುತ್ತಿದ್ದುದನ್ನು ಬಿಟ್ಟು ಅವರನ್ನು ದೈತ್ಯಮಾತೆಯಾದ ದಿತಿಯ ಮಕ್ಕಳೆಂದು ಕರೆದಿರುವುದರೊಡನೆ, ಮೇಲೆ ಕಂಡಂತೆ "ಅಸುರಃ" ಎಂದು ಕರೆದಿರುವುದನ್ನು ನೋಡಿದರೆ, ಯಜ್ಞಪ್ರೇಮಿಯಾದ ಇಂದ್ರನ ಅನುಯಾಯಿಗಳಾದ ಮರುತರು ಯಜ್ಞ ವಿರೋಧಿಯಾದ ರುದ್ರನ ಅನುಯಾಯಿಗಳಾದುದು ಸ್ಪಷ್ಟವಾಗುವುದು. ಮರುತರನ್ನು ಗಣ ವೆಂಬ ಪದದಿಂದ ಋಗ್ವೇದದಲ್ಲಿ ಕರೆಯುತ್ತಿರುವುದು ಈ ವಿಷಯದಲ್ಲಿ ಗಮನಾರ್ಹವಾಗಿದೆ. ದಕ್ಷಯಾಗವು ರುದ್ರನ ವಿರುದ್ಧವಾದುದಾಗಿದ್ದು, ಯಜ್ಞಪರವಾದ ಆರ್ಯರ ಸಂಗಡಕ್ಕೂ, ಯಜ್ಞವಿರೋಧಿಗಳೂ ರುದ್ರಾನುಯಾಯಿಗಳೂ ಆದ ಆರ್ಯರ ಸಂಗಡಕ್ಕೂ ಆದ ಯುದ್ಧಕ್ಕೆ ಕಾರಣವಾದುದಾಗಿದೆ. ಈ ಯುದ್ಧದಲ್ಲಿ ರುದ್ರಗಣಗಳೊಡೆಯ ವೀರಭದ್ರನು ಭಯಂಕರವಾಗಿ ಕಾದಾಡಿ ಯಜ್ಞಧ್ವಂಸಮಾಡಿದುದು ಪ್ರಸಿದ್ಧವಾದ ವಿಷಯವಾಗಿದೆ. ಇಂದೂ ವೀರಭದ್ರನ ದೇವಸ್ಥಾನಗಳಿರುವ ಕಡೆಗಳಲ್ಲೆಲ್ಲ ಆ ವಿಜಯದ ಸ್ಮಾರಕವಾಗಿ ನಂದಿಧ್ವಜವನ್ನು ಹೊತ್ತು, ಕರಡಿ ಸಂಮೇಳದ ಉಗ್ಗಡಣೆಯೊಡನೆ ಅಗ್ನಿಕುಂಡಗಳನ್ನು ವೀರಶೈವರು ತುಳಿಯುವರು. ಮದುವೆ ಮೊದಲಾದ ಮಂಗಳಕಾರ್ಯಗಳಲ್ಲಿ ನಡೆವ ಗುಗ್ಗುಳ ಕಾರ್ಯವೂ ಸಹಾ ವೀರಭದ್ರ ವಿಜಯದ ಸ್ಮಾರಕವೇ. ವೀರಭದ್ರನ ಸೇನೆಯಲ್ಲಿದ್ದ ರುದ್ರಗಣಗಳು ಸಿಂಧೂನದಿಯ ತೀರದಲ್ಲಿದ್ದ ದ್ರಾವಿಡರೊಡನೆ ಮಿಳಿತರಾಗಿದ್ದ ಯಜ್ಞವಿರೋಧಿ ವ್ರಾತ್ಯರೇ ಆಗಿರಬೇಕು. ವೃಷಭ ಮತವು ರುದ್ರಗಣದ ಮುಖಂಡನಾದ ವೃಷಭನಿಂದ ಸ್ಥಾಪಿತವಾದುದು; ಸಿಂಧೂನದಿಯ ತೀರದ ಈ ಮರುದ್ಗಣದಲ್ಲಿಯೇ ಈ ವೀರಶೈವ–ಜೈನ–ವೃಷಭಮತವು ಪ್ರಚಾರದಲ್ಲಿದ್ದಿರಬೇಕು. ಆದುದರಿಂದಲೇ ವೀರಶೈವರಿಗೂ ಜೈನರಿಗೂ ಸಹಾ ಅರವತ್ತುಮೂರು ಸಂಖ್ಯೆಯಲ್ಲಿ ಗೌರವವಿದೆ. ಪುರಾತನರನ್ನು ಗೌರವಿಸಲು ಆರಿಸಿಕೊಳ್ಳುವಾಗ ವೀರಶೈವರೂ, ಶಲಾಕಾ ಪುರುಷರನ್ನು ಗೌರವಿಸಲು ಆರಿಸಿಕೊಳ್ಳುವಾಗ ಜೈನರೂ ಅರವತ್ತುಮೂರಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ.

ಮಥಿತಾರ್ಥವಿದು—'ಅಹಿಂಸಾ ಪರಮೋ ಧರ್ಮಃ' ಎಂಬುದೇ ಮುಖ್ಯ ಧರ್ಮವಾಗಿ ಉಳ್ಳ ಜೈನಧರ್ಮಕ್ಕೂ 'ದಯವಿಲ್ಲದ ಧರ್ಮವಾವುದಯ್ಯಾ?' ಎನ್ನುವ ವೀರಶೈವ ಧರ್ಮಕ್ಕೂ ವೃಷಭನೇ ಸಂಸ್ಥಾಪಕನಾದುದರಿಂದಲೂ, ಅನೇಕ ವಿಷಯಗಳಲ್ಲಿ ಎರಡು ಮತಗಳಲ್ಲಿಯೂ ಸಾಮ್ಯವಿರುವುದರಿಂದಲೂ ಎರಡಕ್ಕೂ ಮೂಲವಾದ ವೃಷಭಮತವೊಂದು ಇದ್ದಿತೆಂಬುದರಲ್ಲಿ ಸಂದೇಹವಿಲ್ಲ. ಯಜ್ಞಯಾಗಾದಿಗಳನ್ನು ಹಳಿಯದ ಜೈನಕಾವ್ಯಗಳಿಲ್ಲ. ವೀರಶೈವರ ಹಾಡಿನಲ್ಲೂ ಇದೇ ಪಲ್ಲವಿಯಾಗಿದೆ. ಹಿಂಸಾತ್ಮಕವೂ ನೀತಿಬಾಹಿರವೂ ಆದ ಯಜ್ಞಯಾಗ ಗಳನ್ನು ಮಾಡುವ ವಿಷಯದಲ್ಲಿ ಆರ್ಯರಲ್ಲಿಯೇ ಭಿನ್ನಾಭಿಪ್ರಾಯ ಬಂದು, ಯಜ್ಞಯಾಗಾದಿ ಗಳನ್ನು ವಿರೋಧಿಸಿದವರು ಸಿಂಧೂನದಿಯ ತೀರದ ದ್ರಾವಿಡರೊಡನೆ ಸೇರಿ, ಉಪನಯನವನ್ನು ತಿರಸ್ಕರಿಸಿದ ವ್ರಾತ್ಯರೆನಿಸಿಕೊಂಡರು. ಇವರಲ್ಲಿ ಶೈವಧರ್ಮವು ಅಭಿವೃದ್ಧಿಗೆ ಬಂದಿತು. ಯಜ್ಞ ಯಾಗಾದಿಗಳನ್ನು ಹೇಳುವ ವೇದಗಳನ್ನು ಪೂರ್ತಿಯಾಗಿ ಒಪ್ಪದ ಉಗ್ರಗಾಮಿಗಳು ಜೈನ ರಾದರು. ಯಜ್ಞಯಾಗಾದಿಗಳನ್ನು ಹೇಳುವ ವೇದದ ಬ್ರಾಹ್ಮಣ ಭಾಗವನ್ನು ಮಾತ್ರ ಒಪ್ಪದೆ

ಉಳಿದ ಭಾಗವನ್ನು ಗೌರವಿಸಿದ ಸೌಮ್ಯಮಾರ್ಗದವರು ವೀರಶೈವರಾಗಿ ಹಿಂದು ಧರ್ಮದಲ್ಲಿಯೇ ಉಳಿದರು. ಆದರೆ 'ಶ್ರೀಮದ್ವೀರಶೈವ ಸದಾಚಾರ ಸಂಗ್ರಹ' ದಲ್ಲಿ ವಿಶೇಷ ವೀರಶೈವ ಲಕ್ಷಣ ವನ್ನು **"ಅಹಿಂಸಾ ಪರಮೋ ಧರ್ಮ ಇತ್ಯಂಗೀಕೃತಮಾನಸಃ"** ಎಂದು ಹೇಳಿರುವಂತೆ, **"ಅಹಿಂಸಾ ಪರಮೋ ಧರ್ಮಃ"** ಎಂಬುದು ಜೈನರಿಗೆ ಹೇಗೋ ವೀರಶೈವರಿಗೂ ಹಾಗೆಯೇ ಮುಖ್ಯ ಧರ್ಮವಾಗಿಯೇ ಉಳಿಯಿತು.

ಬಸವೇಶ್ವರರಿಗೂ ಬಿಜ್ಜಳರಾಯನಿಗೂ ಇದ್ದ ವೈಮನಸ್ಸನ್ನು ಗಮನಿಸಿದರೆ ವೀರಶೈವರಿಗೂ ಜೈನರಿಗೂ ಎಂದಾದರೂ ಹೊಂದಿಕೆ ಇದ್ದಿತೆ ಎಂದು ಅನುಮಾನ ಬರಬಹುದು. ಆದರೆ ಬಿಜ್ಜಳ ರಾಯನು ಜೈನನೇ ಅಲ್ಲವೆಂಬುದು ಇಂದು ತಜ್ಞರಿಂದ ಸಿದ್ಧಾಂತವಾದ ವಿಷಯ. ಶಾಸನಾ ನ್ವೇಷಣದಲ್ಲಿ ನಿಷ್ಣಾತರಾದ ಶ್ರೀಯುತ ದೇಸಾಯಿ ಪಾಂಡುರಂಗರಾಯರು "ಕರ್ನಾಟಕದ ಕಲಚುರಿಗಳು" ಎಂಬ ಉತ್ಕೃಷ್ಟ ಲೇಖನವನ್ನು ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟ ಸಿದ್ದಾರೆ. ಅವರು ಅದರಲ್ಲಿ ಹೇಳಿರುವುದಿದು ಗಮನಾರ್ಹವಾಗಿದೆ—"ಬಿಜ್ಜಳ ಬಸವೇಶ್ವರರ ಈ ದ್ವಂದ್ವ ಯುದ್ಧದಲ್ಲಿ ಜೈನರಿಗೆ ಯಾವುದೊಂದು ಬಗೆಯ ಸ್ಥಾನವೂ ಇರಲಿಲ್ಲ. ಬಿಜ್ಜಳ ನಾದರೋ ಪುರಾತನ ಮಾರ್ಗದ ಶಿವಭಕ್ತ; ಆತನು ಜೈನನಲ್ಲವೇ ಅಲ್ಲ." ಶ್ರೀ ಗೋವಿಂದ ಪೈ ರವರೂ, ಶ್ರೀ ಎಸ್. ಶ್ರೀಕಂಠಶಾಸ್ತ್ರಿಗಳೂ "ದೇವರ ದಾಸಿಮಯ್ಯ ಪ್ರಶಸ್ತಿ ಗ್ರಂಥ"ದಲ್ಲಿ (ಪುಟ ೧೯೬ ಮತ್ತು ೫೨) ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಶಾಸನಾಧಾರ ಗಳಿಂದ ಈ ಅಭಿಪ್ರಾಯವು ಅನುಮಾನವಿಲ್ಲದಂತಾಗಿದೆ. ಇನ್ನು ಸರ್ವಜ್ಞನಂತಹ ಹದಿನಾರಾಣೆ ವೀರಶೈವನ ಅಭಿಪ್ರಾಯವಿದರಿಂದ ಜೈನರ ವಿಷಯದಲ್ಲಿ ವೀರಶೈವರ ನಿಲುವು ತಿಳಿಯುವುದು.

ಕೊಲುವ ಧರ್ಮವನೊಯ್ದು । ಒಲೆಯೊಳಗೆಯಿಕ್ಕು; ಆ
ಕೊಲಲಾಗದೆಂಬ ಜೈನನಾ ಮತವೆನ್ನ । ತಲೆಯ ಮೇಲಿಕ್ಕು ಸರ್ವಜ್ಞ ।

ಜೈನರೂ ವೀರಶೈವರೂ ಒಂದೇ ರೀತಿಯ ಸೌಮ್ಯ ಜನಾಂಗವೆನ್ನಬಹುದು. ಬಹು ಮಟ್ಟಿಗೆ ಇವರಿಬ್ಬರೂ ಬಣಜಿಗರು. ಶ್ರೀಯುತ ಶಂ. ಬಾ. ಜೋಶಿಯವರ 'ಶಿವರಹಸ್ಯ'ದ ಅಂತ್ಯಭಾಗದಲ್ಲಿ ಹೇಳಿರುವಂತೆ—"ವೀರಬಣಂಜುಗಳು ಎಂಬ ಹೆಸರು ಹಲವು ಪ್ರಾಚೀನ ಶಾಸನಗಳಲ್ಲಿ ಹಲವು ಕಡೆಗೆ ದೊರೆಯುತ್ತದೆ. ಇವರು ಜೈನರೆಂದೂ ತಿಳಿದುಬರುತ್ತದೆ. ಆದರೆ ಮೂಲದಲ್ಲಿ ಶೈವರಾಗಿದ್ದು ಜೈನಧರ್ಮದ ಏರಿಕೆಯ ಕಾಲದಲ್ಲಿ ಆ ಮತವನ್ನು ಸ್ವೀಕರಿಸಿರಬೇಕು. ಅನೇಕ ಜೈನರು ಮೈಲಾರನ ಭಕ್ತರಾಗಿರುವುದು ಇದಕ್ಕೆ ನಿದರ್ಶನ. ಅಲ್ಲದೆ ಬಣಂಜುಗಳು ವೇದಕಾಲದ 'ಫಣಿ'ಗಳ ಪೀಳಿಗೆಯವರಾಗಿರಬೇಕೆಂದು ನನಗೆ ಇತ್ತೀಚಿನ ವಿಚಾರದಲ್ಲಿ ಹೆಚ್ಚು ದೃಢವಾಗುತ್ತಲಿದೆ." ಜೈನರು ವೀರಶೈವರಾದುದೂ ವೀರಶೈವರಾದವರು ಜೈನರಾದುದೂ ಅಪರೂಪವೇನಲ್ಲ. ಪ್ರಸಿದ್ಧ ಕವಿಗಳಾದ ರತ್ನಾಕರನ ಮತ್ತು ಬ್ರಹ್ಮಶಿವನ ಉದಾಹರಣೆಗಳನ್ನು ಕೊಡಬಹುದು. ವೀರಶೈವ ಇತಿಹಾಸದಲ್ಲಿ ವೀರಶೈವರಿಗೂ ಜೈನರಿಗೂ ವಿವಾಹ ಸಂಬಂಧವು ಅಪರೂಪವಾಗಿಯಾದರೂ ಇದ್ದಂತೆ ಕಂಡುಬರುತ್ತದೆ.

ಬಣಂಜುಪದವು ವೃತ್ತಿವಾಚಕ, ಜಾತಿವಾಚಕವಲ್ಲ. ಶಂ. ಬಾ. ಜೋಶಿಯವರು ತಿಳಿದಿರು ವಂತೆ ವೀರಬಣಂಜುಗಳೆಲ್ಲರೂ ಜೈನರಲ್ಲ; ಅವರಲ್ಲಿ ಲಿಂಗಧಾರಿಗಳೂ ಉಂಟು. ಇದನ್ನು ತೋರಿಸಲು, ರೈಸರ ಶಿಲಾಲೇಖನ ಗ್ರಂಥದಲ್ಲಿ ಬೆಳಗಾವಿ ಶಿಲಾಲೇಖನಗಳ ವಿಷಯವಾಗಿ ಬರೆದಿರುವುದು ಹರ್ಡೇಕರ್ ಮಂಜಪ್ಪನವರಿಂದ ಭಾಷಾಂತರಿಸಲ್ಪಟ್ಟಿರುವುದನ್ನು ಇಲ್ಲಿ ಕೊಟ್ಟಿದೆ:

" ಬಳ್ಳಿಗಾವಿಯಲ್ಲಿ ಹಿರೇಮಠ, ಪಂಚಲಿಂಗನ ಮಠ, ತ್ರಿಪುರಾಂತಕ ಮಠ, ವಾಮಶಕ್ತಿ ಮಠ ಮತ್ತು ಕೋಡಿಯ ಮಠ ಎಂಬ ಐದು ಮಠಗಳಿದ್ದವು.....ಶ್ರೀಕಂಠ ಶಿವಯೋಗಿ ಎಂಬವರು ತರ್ಕಶಾಸ್ತ್ರದಲ್ಲಿ ಬಹು ಪ್ರಸಿದ್ಧರಾಗಿದ್ದರು. ಇವರು ವೇದವಾಕ್ಯಭರಿತರಾಗಿದ್ದರು. ಅಂತೆಯೇ ಇವರಿಗೆ ಈ ಹೆಸರು ಬಂದಿದ್ದಿತು. ಇವರು ಎದೆಯಮೇಲೆ ಲಿಂಗವನ್ನು ಧರಿಸಿದ್ದರು. ಇವರ ಶಿಷ್ಯರಾದ ಸೋಮೇಶ್ವರಯ್ಯ ಮತ್ತು ಮಲ್ಲಿಕಾರ್ಜುನಾಚಾರ್ಯ ಎಂಬುವರು ಪ್ರಸಿದ್ಧ ಕವಿಗಳಾಗಿದ್ದರು. ಇವರು ತಮ್ಮ ಗುರುಗಳ ಸ್ಮರಣಾರ್ಥವಾಗಿ ಕ್ರಿ.ಶ. ೧೦೬೩ ರಲ್ಲಿ ಶಿಲಾ ಲೇಖನವನ್ನು ಬರೆದರು. ಬಳ್ಳಿಗಾವಿಯಲ್ಲಿ ಮಾಚಿಶೆಟ್ಟಿ, ಮಾಣಿಕ್ಯಶೆಟ್ಟಿ, ಮಹದೇವಶೆಟ್ಟಿ, ಸೇವಿಶೆಟ್ಟಿ ಎಂಬ ಪ್ರಮುಖ ವೀರಬಣಜಿಗರಿದ್ದರು. ಇವರು ನೇಪಾಳ, ಕುರುಂಬ, ಕಂಭೋಜ, ಗೊಲ್ಲ, ಲಾಳ ಮತ್ತು ಬರ್ಬರ ಮೊದಲಾದ ದೇಶಗಳಿಗೆ ಜಲ ಮತ್ತು ಸ್ಥಳ ಮಾರ್ಗದಿಂದ ವ್ಯಾಪಾರಕ್ಕೋಸ್ಕರ ಹೋಗುತ್ತಿದ್ದರು. ಇವರು ಕೈಲಾಸ ನಿಶಾನೆಯನ್ನೂ, ಶ್ವೇತ ಛತ್ರಿಯನ್ನೂ ಉಪಯೋಗಿಸುತ್ತಿದ್ದರು. ಮತ್ತು ಮಸ್ತಕದಲ್ಲಿ ಲಿಂಗವನ್ನು ಧರಿಸುತ್ತಿದ್ದರು."

ಶ್ರೀಯುತ ಕೃಷ್ಣರಾವ್ ಕಪಟರಾಳ್‌ರವರು ಶರಣ ಸಾಹಿತ್ಯದಲ್ಲಿ ರೇವಣಸಿದ್ಧರ ವಿಷಯವಾಗಿ ಬರೆದ ಲೇಖನದಲ್ಲಿ (ಪುಟ ೧೨೫)—" ಬೇಲೂರು, ದೋರಸಮುದ್ರ, ವಿಷ್ಣುಸಮುದ್ರಗಳಲ್ಲಿ ರತ್ನವ್ಯಾಪಾರಿಗಳಾದ ಬಣಜಿಗರಿದ್ದರು......ಬೇಲೂರಿನ ನಾನಾ ದೇಶಿಗಳು ಲಾಕುಳಶೈವದ ಅನುಯಾಯಿಗಳಾಗಿರುವರು. ತಮಗೆ ಸಹವಾಸಿ ಸಂತೋಷಿಗಳೆಂದು ಹೇಳಿಕೊಂಡಿರುವರು, ಈ ಸಹವಾಸಿ ಬಣಜಿಗರು ಮಾತ್ರ ಶೈವರಾಗಿರುವರು" ಎಂದು ಹೇಳಿದ್ದಾರೆ. ಆದುದರಿಂದ ವೀರಬಣಂಜುಗಳಲ್ಲಿ ಜೈನರು ಮಾತ್ರವೇ ಅಲ್ಲ, ಲಿಂಗಧಾರಿ ವೀರಬಣಂಜುಗಳೂ ಇದ್ದರು ಎಂಬುದು ಸ್ಪಷ್ಟ. ಮರುದ್ಗಣವು ವ್ರಾತ್ಯರೆಂದು ಮೇಲೆ ಹೇಳಲಾಯಿತಷ್ಟೆ. ಈ ವ್ರಾತ್ಯರಲ್ಲಿಯೇ ಜಿನ ಮತ್ತು ಬುದ್ಧನು ಜನಿಸಿದರೆಂದು ಇತಿಹಾಸ ಸಂಶೋದಕ ರಾಜವಾಡೆಯವರು ಬರೆದಿರುತ್ತಾರೆ. ಇದೆಲ್ಲವೂ ಜೈನ ಮತ್ತು ವೀರಶೈವರ ಹಿನ್ನೆಲೆಯು ಒಂದೇ ಎಂಬುದನ್ನು ತೋರಿಸುತ್ತದೆ. ಈ ಎರಡು ಮತದವರೂ ವೃಷಭನಿಂದಲೇ ತಮ್ಮ ಮತದ ಸ್ಥಾಪನೆಯಾಯಿತೆನ್ನುವುದರಿಂದಲೂ, ಈ ಎರಡು ಮತಗಳಲ್ಲಿಯೂ ಬಹಳ ಸಾಮ್ಯವಿರುವುದರಿಂದಲೂ, ಮೂಲಮತವು ಯಜ್ಞ ವಿರೋಧದಿಂದಲೇ ಪ್ರಾರಂಭವಾಗಿರುವುದರಿಂದಲೂ ಈ ಮೂಲಮತಕ್ಕೆ ವೃಷಭಮತವೆನ್ನಲಾಯಿತು. ವೀರಶೈವರಿಗೂ ಜೈನರಿಗೂ ಮೂಲವಾದ ಈ ವೃಷಭ ಮತವು ವೇದಾಗಮೋಪನಿಷತ್ ಪುರಾಣಾದಿಗಳ ಮೇಲೆ ಬಹಳ ಪ್ರಭಾವವನ್ನು ಬೀರಿತು. ಅದು ಆರ್ಯ ದ್ರಾವಿಡರ ಮಿಲನಕ್ಕೆ ಸಹಾಯಕಾರಿಯಾಗಿ ಇಂದು ಭಾರತದಲ್ಲಿರುವ ಹಿಂದೂ ಧರ್ಮದ ಸ್ವರೂಪಕ್ಕೆ ಬಹಳಮಟ್ಟಿಗೆ ಕಾರಣವಾಯಿತೆನ್ನಬಹುದು.

## ವೇದಗಳ ಮೇಲೆ ಆದಿ ವೀರಶೈವ–ವೃಷಭಮತದ ಪ್ರಭಾವ

ವೇದವೆಂದರೆ, " ಮಂತ್ರಬ್ರಾಹ್ಮಣಯೋರ್ವೇದ ನಾಮಧೇಯಂ " ಎಂಬ ಆಧಾರದಂತೆ ಯಜ್ಞಯಾಗಾದಿಗಳಿಗೆ ಉಪಯೋಗವಾಗುವ ಮಂತ್ರಬ್ರಾಹ್ಮಣಗಳು ಮಾತ್ರವೇ ಎಂದು ಹೇಳುವ ಕಾಲವು ಹೋಯಿತು. ವೃಷಭ ಮತದ ಪ್ರಭಾವದಿಂದ ಹಿಂಸಾತ್ಮಕ ಯಜ್ಞಯಾಗಗಳಲ್ಲಿ ವಿಶ್ವಾಸವು ತಪ್ಪಿತು. ಹಿಂಸಾತ್ಮಕವಲ್ಲದ ಯಜ್ಞವಿಶೇಷವನ್ನು ಎತ್ತಿ ಹಿಡಿಯುವವರು ಹುಟ್ಟಿಕೊಂಡರು. ಇವರನ್ನು ಆತ್ಮಯಾಜಿಗಳು ಎನ್ನಬಹುದು. ಅಧ್ವರವೆಂದರೆ ಯಜ್ಞ; ಆದರೆ ಇದು ಪಶುಯಜ್ಞವಲ್ಲವೆಂಬ ಅಭಿಪ್ರಾಯವು ಹುಟ್ಟಿತು. " ಅಧ್ವರ ಇತಿ

ಯಜ್ಞನಾಮಧ್ವರತಿರ್ಹಿಂಸಾಕರ್ಮ ತತ್ ಪ್ರತಿಷೇಧೋ ನಿಪಾತ ಇತ್ಯೇಕೇ" ಎಂದು ನಿರುಕ್ತದ ಪ್ರಥಮಾಧ್ಯಾಯದ ಅಷ್ಟವು ಖಂಡದಲ್ಲಿ ಹೇಳಿದೆ. ಅಧ್ವರವೆಂಬ ಪದವು ಕೆಲವರ ಅಭಿಪ್ರಾಯದಂತೆ ಹಿಂಸಾಕರ್ಮವನ್ನು ಪ್ರತಿಷೇಧಿಸುವ ನಿಪಾತವೆಂದು ಇದರ ಅಭಿಪ್ರಾಯ. ಇದರ ಟೀಕೆಯಲ್ಲಿ ದುರ್ಗಾಚಾರ್ಯರು ಅಧ್ವರವೆಂಬುದರಲ್ಲಿ ಪ್ರಾಣಿಹಿಂಸೆಯ ನಿಷೇಧವಿರು ವುದನ್ನು ಚೆನ್ನಾಗಿ ವಿವರಿಸಿದ್ದಾರೆ— ಅಧ್ವರ ಇತ್ಯಧುನಾನಿರ್ವಕ್ತವ್ಯಃ ಧ್ವರತಿ ಹಿಂಸಾ ಕರ್ಮಧ್ವರತಿ ಧೂರ್ವತೀತಿ ಹಿಂಸಾರ್ಥೇಷು ಪಠಿತೌ (ನಿಘ. ೨-೧೯) ತತ್ಪ್ರತಿಷೇಧಃ ಅಧ್ವರಃ ಅಹಿಂಸ್ರ ಇತ್ಯರ್ಥ. ಹೀಗಾಗಿ "ಅಹಿಂಸಾ ಪರಮೋ ಧರ್ಮಃ" ಎಂಬುದನ್ನು ಸಾರುವ ಜನರುಂಟಾದರು. ಸಾಮವೇದದ ಕಾಲದಲ್ಲಿ ಯಜ್ಞಯಾಗಗಳಿಂದ ದೇವತೆಗಳನ್ನು ತೃಪ್ತಿಪಡಿಸಲು ಪ್ರಯತ್ನಮಾಡದೆ ಬರಿಯ ಮಂತ್ರಗಳಿಂದ ಸ್ತೋತ್ರಮಾಡುವುವೆಂಬ ಮಾತು ಕೇಳಬಂದಿತು. ಅಧ್ಯಾತ್ಮ ಕಲ್ಪನೆಗಳೂ, ಶಿವನ ಸರ್ವೋತ್ಕರ್ಷವೂ, ಮೋಕ್ಷದ ಕಲ್ಪನೆಯೂ ಋಗ್ವೇದದಲ್ಲಿಯೂ ಕಾಣಬಂದವು. ಅಥರ್ವವೇದದ ಹೊತ್ತಿಗೆ ಪಶು-ಪಾಶ-ಪತಿಯ ಕಲ್ಪನೆಗಳಾಗಿ ಪಾಶುಪತ ಧರ್ಮವು ಆರ್ಯರಲ್ಲಿ ಪ್ರಚಲಿತವಾಯಿತಲ್ಲದೆ, ಪಶುಪತಿಯ ಭಕ್ತರಾದ ವ್ರಾತ್ಯರು ಸಂಪೂಜ್ಯರಾದರು.

## ಉಪನಿಷತ್ತುಗಳ ಮೇಲೆ ವೀರಶೈವ-ವೃಷಭ ಮತದ ಪ್ರಭಾವ

ಭವಸಾಗರವನ್ನು ದಾಟಲು ಯಜ್ಞಯಾಗಾದಿಗಳೆಂಬ ದೋಣಿಗಳನ್ನು ನಂಬಬಾರದು; ಏಕೆಂದರೆ ಅವು ಒಡಕು ದೋಣಿಗಳು ಎಂದು, "ಪ್ಲವಾಹ್ಯೇತೇಽದೃಢಾ ಯಜ್ಞರೂಪಾಃ" ಎಂಬ ಮುಂಡಕ ಉಪನಿಷತ್ತಿನ ಮಂತ್ರದಲ್ಲಿ ಹೇಳಿದೆ. "ನಾಸ್ತ್ಯಕೃತಃ ಕೃತೇನ" ಎಂದರೆ ಕರ್ಮಮಾಡುವುದರಿಂದ ಅಕರ್ಮರೂಪವಾದ ಮೋಕ್ಷವು ದೊರೆಯುವುದಿಲ್ಲವೆಂದು ಅದೇ ಉಪನಿಷತ್ತಿನಲ್ಲಿ ಹೇಳಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವ "ಶೌವ ಉದ್ಗೀತ" ದಲ್ಲಿ ಯಜ್ಞಮಾಡುವವರನ್ನು ನಾಯಿಗಳಿಗೆ ಹೋಲಿಸಿದೆ. ಇಂದ್ರಾದಿ ದೇವತೆಗಳ ಬದಲು ಪರಬ್ರಹ್ಮನ ಕಲ್ಪನೆಯಾಗಿ ಜ್ಞಾನಮಾರ್ಗದ ಹಾದಿಯನ್ನು ಉಪನಿಷತ್ತುಗಳು ಹಿಡಿದಿರುವುವು. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಪರಬ್ರಹ್ಮವು ಪರಶಿವಬ್ರಹ್ಮವೇ ಎಂಬ ಕಲ್ಪನೆಯು ಉಂಟಾಗಿದೆ. ವ್ರಾತ್ಯದ್ರಾವಿಡರ ಅರ್ಧನಾರೀಶ್ವರ ಕಲ್ಪನೆಯು ಬಳೆದುಬಂದು 'ಮಾಯಿಮಾಹೇಶ್ವರ'ನ ಕಲ್ಪನೆಗೆ ಎಡೆಗೊಟ್ಟಿದೆ. ಈ ಪರಾತ್ಪರಾನುದರ್ಶನವು ಧ್ಯಾನಯೋಗದಿಂದ ಸಾಧ್ಯವೆಂದು ಹೇಳಿರುವುದರಿಂದ ಶಿವಯೋಗವು ಪ್ರಚುರವಾಗಿ ಯಜ್ಞಯಾಗಾದಿಗಳು ಹಿಂದೆ ಬಿದ್ದಿವೆ. ಇದೆಲ್ಲವು ಯಜ್ಞವಿರೋಧಿಗಳಾದ ವೀರಶೈವ-ವ್ರಾತ್ಯವೃಷಭ ಮತದವರ ಪ್ರಭಾವವಲ್ಲದೆ ಮತ್ತೇನು? "ನಾಯಮಾತ್ಮಾ....ತಪಸೋವಾಪ್ಯಲಿಂಗಾತ್" ಎಂದರೆ ಲಿಂಗರಹಿತ ನಾದರೆ ತಪಸ್ಸಿನಿಂದಲಾದರೂ ಮೋಕ್ಷವಾಗುವುದಿಲ್ಲವೆಂದು ಮುಂಡಕೋಪನಿಷತ್ತಿನಲ್ಲಿ ಹೇಳಿರು ವುದಾದರೂ ಆದಿ ವೀರಶೈವ-ವೃಷಭ ಮತದ ಪ್ರಭಾವವೆ.

## ಬ್ರಹ್ಮಸೂತ್ರಗಳ ಮೇಲೆ ಆದಿ ವೀರಶೈವ-ವೃಷಭ ಮತದ ಪ್ರಭಾವ

ಯಾವಜ್ಜೀವವೂ ಯಜ್ಞಯಾಗಾದಿ ಕರ್ಮಗಳನ್ನು ಮಾಡುತ್ತಿರಬೇಕೆಂದು ಈಶಾವಾಸ್ಯ ಉಪನಿಷತ್ತು ಹೇಳುವುದೆಂಬುದು ವೈದಿಕ ಕರ್ಮಠರ ನಿಲುವು. ಈ ಪೂರ್ವಪಕ್ಷವು ಬ್ರಹ್ಮ ಸೂತ್ರದ "ನಿಯಮಾಚ್ಚ" ಎಂಬ ಸೂತ್ರದಲ್ಲಿ ಹೇಳಿದೆ. ಇದಕ್ಕೆ ಉತ್ತರವಾಗಿ

"ನಾಽವಿಶೇಷಾತ್, ಸ್ತುತಯೇಽನುಮತಿರ್ವಾ" ಮೊದಲಾದ ಸೂತ್ರಗಳನ್ನು ಹೇಳಿ, ಮೋಕ್ಷಾಪೇಕ್ಷಿಯು ಯಜ್ಞಯಾಗಾದಿ ಕರ್ಮಗಳನ್ನು ಮಾಡಬೇಕಾಗಿಲ್ಲವೆಂದು ಬ್ರಹ್ಮಸೂತ್ರದಲ್ಲಿ ನಿರ್ಧರಿಸಲಾಗಿದೆ. ಈ ವಿಷಯಗಳನ್ನು ನನ್ನ 'ಈಶಾವಾಸ್ಯೋಪನಿಷತ್ಪ್ರಕಾಶ'ದಲ್ಲಿ ವಿಸ್ತಾರವಾಗಿ ವಿವರಿಸಿರುತ್ತಾಗಿ ಮತ್ತೆ ಇಲ್ಲಿ ವಿವರಿಸುವುದು ಅನಾವಶ್ಯಕ. ಬ್ರಹ್ಮಸೂತ್ರಗಳ ಈ ನಿಲುವು ವೀರಶೈವ–ವೃಷಭ ಮತದ ತತ್ವಕ್ಕನುಸಾರವಾಗಿದೆಯೆಂದು ಹೇಳಿದರೆ ಸಾಕು.

## ಭಗವದ್ಗೀತೆಯ ಮೇಲೆ ಆದಿ ವೀರಶೈವ–ವೃಷಭ ಮತದ ಪ್ರಭಾವ

ಯಜ್ಞಯಾಗಾದಿಗಳು ಮೋಕ್ಷದಾಯಕವಲ್ಲವೆಂದೂ, ಯಜ್ಞಯಾಗಗಳಿಂದಾಗುವ ಸ್ವರ್ಗ ಫಲಗಳು ಅಶಾಶ್ವತವೆಂದೂ, ಅವುಗಳ ಭೋಗ ಮುಗಿದಕೂಡಲೆ ಅವುಗಳನ್ನು ಮಾಡುವವರು ಮರ್ತ್ಯಲೋಕವನ್ನು ಸೇರಿ ಮತ್ತೆ ಮತ್ತೆ ಹುಟ್ಟಿ ಸಾಯುವರೆಂದೂ ಹೇಳಿ, ಅವುಗಳನ್ನು ಭಗವದ್ಗೀತೆಯಲ್ಲಿ ಖಂಡಿಸಿದೆ:

ತೇತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥ ೯–೨೧ ॥

ಯಜ್ಞಯಾಗಾದಿಗಳನ್ನು ಮಾಡುವ ವೈದಿಕ ಕರ್ಮಠರನ್ನು ಭಗವದ್ಗೀತೆಯು 'ಅವಿಪಶ್ಚಿತಃ' ಎಂದರೆ ದಡ್ಡರೆಂದೂ, 'ವೇದವಾದರತ'ರೆಂದೂ, 'ಕಾಮಾತ್ಮಾನ'ರೆಂದೂ ಹೀಯಾಳಿಸಿದೆ. "ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ" ಎಂದರೆ ವೇದವು ತ್ರಿಗುಣಾತ್ಮಕ ವಿಷಯವುಳ್ಳುದಾದುದರಿಂದ ನೀನು ಅದರಂತೆ ಆಗದೆ, ತ್ರಿಗುಣರಹಿತನಾಗೆಂದು ಅರ್ಜುನನಿಗೆ ಶ್ರೀಕೃಷ್ಣನು ಉಪದೇಶ ಮಾಡಿದ್ದಾನೆ. ಯಜ್ಞಯಾಗಾದಿಗಳನ್ನು ವಿಧಿಸುವ ಋಗ್ಯಜುಸ್ಸಾಮವೇದಗಳೇ ವೇದಗಳೆಂದೂ ಅಥರ್ವವೇದವೂ ಉಪನಿಷತ್ತುಗಳೂ ವೇದವಲ್ಲವೆಂದು ಹೇಳುವ ತ್ರಯೀಧರ್ಮದವರ ನಿಂದೆಯು ಈ ಮಂತ್ರಗಳಲ್ಲಿದೆ. 'ತ್ರೈಗುಣ್ಯವಿಷಯಾ ವೇದ,' 'ವೇದವಾದರತಾಃ' ಎಂಬಲ್ಲಿ ವೇದಶಬ್ದವು ಈ ಸಂಕುಚಿತಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. "ಯಜ್ಞ" ಪದವನ್ನಾದರೂ ಒಂದು ವಿಶಿಷ್ಟ ಅರ್ಥದಲ್ಲಿ ಗೀತೆಯು ಪ್ರಯೋಗಿಸಿದೆ:

"ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶ್ರಿತವ್ರತಾಃ ॥"

(ಗೀ. ೪–೨೮)

ಈ ಶ್ಲೋಕದ ಮೇಲಿನ ಲೋಕಮಾನ್ಯತಿಲಕರ ಟಿಪ್ಪಣಿಯಿದು: "ಇತಿಹಾಸದೃಷ್ಟಿಯಿಂದ ನೋಡಲಾಗಿ ಇಂದ್ರ, ವರುಣಾದಿ ದೇವತಾ ಉದ್ದೇಶವಾಗಿ ದ್ರವ್ಯಮಯವಾದ ಯಜ್ಞವನ್ನು ಮಾಡಬೇಕೆಂದು ಶ್ರೌತಗ್ರಂಥಗಳಲ್ಲಿ ಹೇಳಿದ್ದೆಲ್ಲ ಹಿಂದುಳಿದುಹೋಗಿ ಪಾತಂಜಲಯೋಗದಿಂದಲಾಗಲೀ ಸನ್ಯಾಸದಿಂದಾಗಲೀ ಆಧ್ಯಾತ್ಮಿಕ ಜ್ಞಾನದಿಂದಲಾಗಲೀ ಪರಮಾತ್ಮನ ಪ್ರೀತಿಯನ್ನು ಮಾಡಿಕೊಳ್ಳುವ ಸಾಧನಗಳು ಹೆಚ್ಚುಹೆಚ್ಚಾಗಿ ಬಂದಹಾಗೆ 'ಯಜ್ಞ' ಶಬ್ದದ ಅರ್ಥವನ್ನು ವಿಸ್ತಾರಗೊಳಿಸಿ, ಅದರಲ್ಲಿ ಲಕ್ಷಣೆಯಿಂದ ಮೋಕ್ಷೋಪಾಯಾದಿಗಳ ಸಮಾವೇಶವನ್ನು ಮಾಡಲಾರಂಭಿಸಿದರೆಂದು ಕಂಡುಬರುತ್ತದೆ." ಹಿಂಸಾತ್ಮಕ ಯಜ್ಞಗಳ ಬದಲು ಆತ್ಮಜ್ಞಾನಿಗಳ ಜ್ಞಾನಯಜ್ಞದ ಹಿರಿಮೆಯು ಗೀತೆಯಲ್ಲಿ ಉಕ್ತವಾಗಿದೆ. ಇದು ಮುಂಡಕೋಪನಿಷತ್ತಿನಲ್ಲಿ ಹಿಂಸಾತ್ಮಕ ಯಜ್ಞಗಳನ್ನು ಒಡಕು ದೋಣಿಗಳಿಗೆ ಹೋಲಿಸಿ, "ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ" ಎಂದು ಹೇಳಿ ಆತ್ಮಜ್ಞಾನದಲ್ಲಿ ರತರಾದವರನ್ನು

ಹೊಗಳಿರುವುದಕ್ಕೆ ಅನುಸಾರವಾಗಿದೆ. ಶತಪಥಬ್ರಾಹ್ಮಣದಲ್ಲಿ ಸಹಾ ಇದಕ್ಕೆ ಅನುಸಾರವಾಗಿ (೧೧-೨-೨-೧೩) "ತದಾಹುಃ ಆತ ಯಾಜೀ ಶ್ರೇಯಾನ್" ಎಂದು ಆತ್ಮಯಾಜಿಗಳನ್ನು ಹೊಗಳಲಾಗಿದೆ.

ಭಗವದ್ಗೀತೆಯ ಹೊತ್ತಿಗೆ, ಯಜ್ಞಯಾಗಾದಿಗಳ ಪ್ರಭಾವವು ಕಡಮೆಯಾದಂತೆಲ್ಲ, ಹಿಂಸಾತ್ಮಕ ಯಜ್ಞಯಾಗಾದಿಗಳನ್ನು ಮಾಡಬೇಕೆಂಬ ಪುರೋಹಿತವರ್ಗದ ಹಿರಿಮೆಯು ಕಡಮೆಯಾಯಿತು. ಯಜ್ಞಯಾಗಾದಿಗಳನ್ನು ವಿರೋಧಿಸುವ ವ್ರಾತ್ಯ-ವೃಷಭ ಮತದ ಪ್ರಭಾವವು ಪರಿಣಾಮಕಾರಿಯಾಯಿತು. ಗುಣಕರ್ಮವಿಭಾಗದಿಂದ ವರ್ಣಗಳನ್ನು ವಿಂಗಡಿಸಿರುವುದೂ, ಸ್ತ್ರೀ ಶೂದ್ರರಿಗೂ ಪಾಪಯೋನಿಗಳಿಗೂ ಮೋಕ್ಷವು ಉಂಟೆನ್ನುವುದೂ ಮೊದಲಾದ ಸುಧಾರಣೆಗಳು ಗೀತೆಯಲ್ಲೂ, ಮಹಾಭಾರತದ ಇತರ ಭಾಗಗಳಲ್ಲೂ ಕಂಡುಬರುವುವು.

## ಸಾರಾಂಶ

ಸಾರಾಂಶವಿಷ್ಟು—ಆರ್ಯರೂ ದ್ರಾವಿಡರೂ ಭಾರತಾಂಬೆಯ ವಿವಿಧ ಸಂಸ್ಕೃತಿಯ ಜನರ ಉದರದಲ್ಲಿ ಹುಟ್ಟಿ, ಅವಳ ವಿಶಾಲವಾದ ಮಡಿಲಲ್ಲಿ ಬಳೆದ ಎರಡು ಜನಾಂಗಗಳು. ನಿಸರ್ಗ ದೇವತೆಗಳಿಗೆ ಹವಿಸ್ಸನ್ನು ಕೊಡುವ ಆರ್ಯರ ಸಂಸ್ಕೃತಿಯಲ್ಲಿ ಯಜ್ಞಯಾಗಾದಿ ಕರ್ಮಗಳ ಅವಾಂತರವು ಬಳೆಯಿತು. ದ್ರಾವಿಡರು ಮೊದಲು ಸೂರ್ಯನನ್ನೂ ಅನಂತರ ಸೂರ್ಯಾಂತರ್ಯಾಮಿ ಶಿವನನ್ನೂ ಲಿಂಗರೂಪದಲ್ಲಿ ಪೂಜಿಸುತ್ತಿದ್ದರು. ಆರ್ಯರಲ್ಲಿ ಕೆಲವರಿಗೆ ಹಿಂಸಾತ್ಮಕ ಯಜ್ಞಯಾಗಾದಿಗಳು ಸರಿಬೀಳದೆ ಶಿವಾರಾಧಕರಾದ ದ್ರಾವಿಡರೊಡನೆ ಸೇರಿಕೊಂಡು ವ್ರಾತ್ಯರೆನಿಸಿಕೊಂಡು ವೃಷಭಮತಪ್ರವರ್ತಕರಾದರು. ಆರ್ಯರ ಆಕ್ರಮಣದಿಂದ ದ್ರಾವಿಡರು ದಕ್ಷಿಣ ದೇಶಕ್ಕೆ ಒತ್ತರಿಸಲ್ಪಡಲು ಅಲ್ಲಿಯೇ ಅವರ ಪ್ರಭಾವವು ಹೆಚ್ಚಿತು. ಆದರೆ ಉತ್ತರದಲ್ಲಿಯೇ "ವ್ರಾತ್ಯ"ರ ಪ್ರಾಬಲ್ಯವು ಹೆಚ್ಚಿ ಕಾಶಿ, ಮಗಧ ಮೊದಲಾದ ಪೂರ್ವರಾಜ್ಯಗಳಲ್ಲಿ ದ್ರಾವಿಡ ಸಂಸ್ಕೃತಿಯು ಬಳೆಯಿತು. ಆರ್ಯರ ದೈಹಿಕ ಬಲವು ದ್ರಾವಿಡರನ್ನು ಯುದ್ಧದಲ್ಲಿ ಸೋಲಿಸಿದರೂ, ದ್ರಾವಿಡರ ಸಂಸ್ಕೃತಿಯು ಆರ್ಯ ಸಂಸ್ಕೃತಿಯನ್ನು ಹಿಮ್ಮೆಟ್ಟಿಸಿತು. ಗುಣಗ್ರಾಹಿಗಳಾದ ಆರ್ಯರು ದ್ರಾವಿಡಸಂಸ್ಕೃತಿಯನ್ನು ಅಪ್ಪಿಕೊಂಡರು. ವೇದಮಂತ್ರಗಳನ್ನು ಯಜ್ಞಯಾಗಾದಿಗಳಲ್ಲಿ ಉಪಯೋಗಿಸಿಕೊಳ್ಳುತ್ತಿದ್ದ ಬ್ರಾಹ್ಮಣ ಗ್ರಂಥಗಳ ಪ್ರಭಾವವು ಕಡಮೆಯಾಯಿತು. ಮಾಂಸಾಹಾರವು ವಿಧ್ಯುಕ್ತವಾದರೂ ಉತ್ತಮಕುಲದವರಲ್ಲಿ ಅಗ್ರಾಹ್ಯವಾಯಿತು. ಋಗ್ವೇದದಲ್ಲಿ ಅಲ್ಪಸ್ವಲ್ಪವಾಗಿ ಕಾಣಿಸಿಕೊಳ್ಳುತ್ತಿದ್ದ "ರುದ್ರ"ನೊಡನೆ ದ್ರಾವಿಡರ "ಶಿವ"ನ ಕಲ್ಪನೆಯು ಬೆರತು, ಯಜುರ್ವೇದಾದಿ ಆರ್ಯರ ವೈದಿಕ ವಾಙ್ಮಯದಲ್ಲಿಯೇ "ರುದ್ರ ಶಿವನ" ಅದ್ವಿತೀಯ ಕಲ್ಪನೆಯು ಅಮೋಘವಾಗಿ ಬಳೆಯಿತು. ಉಪನಿಷದ್ವಾಙ್ಮಯದಲ್ಲಿ, ಭಗವದ್ಗೀತೆಯಲ್ಲಿ, ಬ್ರಹ್ಮಸೂತ್ರಗಳಲ್ಲಿ, ನಿಷ್ಕಲ ಸಕಲ "ಪರಬ್ರಹ್ಮ"ದ ಕಲ್ಪನೆಗಳು ಬಳೆದು ಯಜ್ಞಯಾಗಗಳ ವಿರುದ್ಧವಾದ ಪ್ರಚಾರವು ಪ್ರಾರಂಭವಾಯಿತು. ವರ್ಣವ್ಯತ್ಯಾಸವು ಕಡಮೆಯಾಯಿತು. ಯಜ್ಞಯಾಗಗಳ ವಿರೋಧಿ "ರುದ್ರ ಶಿವನ" ಕಲ್ಪನೆಗೆ ವಿರುದ್ಧವಾಗಿ "ವಿಷ್ಣು"ವನ್ನು ಪ್ರತಿದೈವವಾಗಿ ಕಲ್ಪಿಸಿಕೊಂಡು ಹಿಮ್ಮೆಟ್ಟುತ್ತಿದ್ದ ಮೀಮಾಂಸಕರು ಸೇಶ್ವರ ಮೀಮಾಂಸಕರಾದರು. ಆದರೂ, ಭಾಗವತ ಮತವು ಪ್ರಬಲಿಸಿದಂತೆಲ್ಲ, ಯಜ್ಞಯಾಗಗಳು, ವೈಷ್ಣವರಲ್ಲಿಯೂ ಪ್ರಬಲಿಸದೆ ನಾಮಾವಶೇಷವಾದವು. ವೈದಿಕ ವಿಧಿಗಳನ್ನು ಬಿಡಲಾರದ ಧರ್ಮಸಂಕಟಕ್ಕಾಗಿ ಕೆಲವರು ಪಿಷ್ಟಪಶುಯಜ್ಞವನ್ನು ಮಾಡುವರಾದರು.

ಬರಬರುತ ಅದೂ ನಿಂತುಹೋಗಿ, ಶೈವರು "ಶಿವ"ನನ್ನೂ, ವೈಷ್ಣವರು "ವಿಷ್ಣು"ವನ್ನೂ ಗುಡಿಗಳಲ್ಲಿ ಪೂಜಿಸತೊಡಗಿದರು. ಈ ದಾರಿಗೆ ಜನರು ತಿರುಗುತ್ತಿದ್ದಂತೆಯೇ "ಶಿವ"ನ ಮತ್ತು "ವಿಷ್ಣು"ವಿನ ಪೂಜೆಗಳೇ ಮೊದಲಾದುವನ್ನು ನಿಯಮಿಸುವ ಆಗಮಗಳು ರಚಿತವಾದವು. ಮೊದಲುಮೊದಲು ಆಗಮಗಳು ವೇದಗಳಿಗೆ ವಿರುದ್ಧ ಸಂಸ್ಕೃತಿಯವು ಎಂಬ ಭಾವನೆಗಳಿದ್ದರೂ, ಇವುಗಳೆಲ್ಲವೂ ಪರಮಾತ್ಮನ ಉಸಿರೇ ಎಂಬ ಭಾವನೆ ಬಳೆದು, ಆರ್ಯ ದ್ರಾವಿಡರ ಸಂಸ್ಕೃತಿಗಳು ಬೆರಸಿಹೋಗಿ, ಹಿಂದೆ ಹೇಳಿದಂತೆ ಹಾಲುಜೇನು ಸೇರಿದಂತಾಗಿ ಸುಸ್ವಾದವುಂಟಾಯಿತು.

ಇಂದೂ ಯಜ್ಞಯಾಗಾದಿಗಳ ವಿರೋಧವು ಉಳಿದುಕೊಂಡಿರುವ ವೀರಶೈವ ಮತ್ತು ಜೈನ ಜನಾಂಗದವರಲ್ಲಿನ ಮೂಲ ಕಲ್ಪನೆಗಳನ್ನು ನೋಡಿದರೆ, ಅವರು ಆದಿ ವೀರಶೈವ ವೃಷಭ ಜನಾಂಗವೆಂದು ಕರೆಯಬಹುದಾದ ಒಂದೇ ಪಂಗಡಕ್ಕೆ ಸೇರಿದವರು ಎನಿಸುವುದು. ಇವರು ಯಜ್ಞಯಾಗಗಳ ವಿಷಯದಲ್ಲಿ ತೋರಿದ ಅತೀವ ವಿರೋಧವು ಆರ್ಯರಲ್ಲಿದ್ದ ಯಜ್ಞ ಯಾಗಗಳ ಪ್ರೇಮವನ್ನು ಕಡಮೆಮಾಡಿತು; ಅಲ್ಲದೆ ಮೇಲೆ ಹೇಳಿದಂತೆ ವೇದ, ಉಪನಿಷತ್ತು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳ ಮೇಲೆ ಅದೇ ತರದ ಪರಿಣಾಮವನ್ನುಂಟುಮಾಡಿತು. ವೇದಗಳಲ್ಲಿ ಹೇಳಿರುವ ವೀರರುದ್ರೀಯರಾದ ಸಿಂಧುಪುತ್ರರೇ ಸಿಂಧೂನದಿಯ ತೀರದ ನಾಗರಿಕತೆಯ ದ್ರಾವಿಡರೊಡನೆ ಬೆರತು ಒಂದು ಜನಾಂಗವಾದರು. ಇವರಲ್ಲಿದ್ದ ಲಿಂಗಧಾರಣೆ, ಲಿಂಗಪೂಜೆಗಳು ಮಹಾಭಾರತದ ಕಾಲದವರೆಗೂ ಉಳಿದು ಬಂದ ವಿಷಯವು ಮಹಾಭಾರತ ದಿಂದಲೇ ತಿಳಿದುಬರುವುದು. ಅಲ್ಲಿಂದೀಚೆಗೆ ಇದು ಪಾಶುಪತ ಶೈವ ಜಂಗಮರಲ್ಲಿ ಉಳಿದು ಬಂದು, ಹನ್ನೊಂದು–ಹನ್ನೆರಡನೆಯ ಶತಮಾನದಲ್ಲಿ ಶುದ್ಧಿ ಸಂಘಟನೆಗೊಳಗಾಗಿ ಇಂದಿನ ವೀರಶೈವವಾಗಿ ಉಳಿದಿದೆ.

## ಮೊಹೆಂಜೊದಾರೊ ಕಾಲದ ಶಾಕ್ತೇಯರು

ಇಂದೂ ಸ್ತ್ರೀಪುರುಷ ಜನಕಾಂಗಗಳನ್ನು ಪೂಜಿಸುವ ಶಾಕ್ತರು ವಂಗದೇಶವೇ ಮೊದಲಾದ ಉತ್ತರ ಭಾರತದಲ್ಲಿ ಇರುವರು. ಶಾಕ್ತರಲ್ಲಿ ಶೈವ, ವೈಷ್ಣವ, ಬೌದ್ಧ ಪ್ರಭೇದಗಳಿದ್ದವು. ಈ ಶಾಕ್ತಮತದ ಹಿನ್ನೆಲೆಯಾದರೂ ಮೊಹೆಂಜೊದಾರೊ ಕಾಲದ ಜನರಲ್ಲಿ ಕಂಡುಬಂದಿದೆ. ಆ ಕಾಲದಲ್ಲಿ ಜನರು ಪೂಜಿಸುತ್ತಿದ್ದ ಶಿಲೆಗಳು ಎರಡು ತೆರನಾದವು. ಸ್ತ್ರೀಪುರುಷ ಜನಕಾಂಗ ಗಳನ್ನು ಚೆನ್ನಾಗಿಯೇ ಹೋಲುವ ಶಿಲೆಗಳನ್ನು ಶಾಕ್ತರು ಪೂಜಿಸುತ್ತಿದ್ದರು. ಇನ್ನೊಂದು ತೆರನಾದವು ಶಿವಲಿಂಗದಂತೆ ದುಂಡಾದ ಶಿಲೆಗಳು; ಇವುಗಳನ್ನು ಶೈವರು ಪೂಜಿಸುತ್ತಿದ್ದರು. ಶೈವರಿಗೂ ಶೈವಶಾಕ್ತರಿಗೂ ಭೇದವನ್ನರಿಯದ ಶತ್ರುಗಳು ಶೈವರನ್ನು ಸಹಾ "ಶಿಶ್ನದೇವಾಃ" ಎಂದು ಕರೆದರು. ಹಾಗೆಯೇ ವೈಷ್ಣವರಿಗೂ ವೈಷ್ಣವಶಾಕ್ತರಿಗೂ ಭೇದವನ್ನರಿಯದ ಶತ್ರುಗಳು ವಿಷ್ಣುವನ್ನು "ಶಿಪಿವಿಷ್ಟ" ಎಂದು ಕರೆದರು. Dr. S. Sreekanta Sastry, M.A., D.Litt., ಮಿಥಿಕ್ ಸೊಸೈಟಿಯ ಜರ್ನಲ್, ವಾಲ್ಯುಂ ೫೧, ನಂಬರ್ ೨ರ ೯೦ನೆಯ ಪುಟದಲ್ಲಿ ಹೇಳಿರುವಂತೆ: The Vedic Vishnu had also some tantric features as proved by the names Sipivista, Vamana, Trivikrama and from such passages as "Vishnur-yonim Kalpayatu". ಇದರಿಂದ ಶಾಕ್ತರು ವಿಷ್ಣುವನ್ನೂ ಬಳಸಿಕೊಂಡಂತಿದೆ. 'ಶಿಶ್ನದೇವ' ಎಂಬ ಪದದಲ್ಲಿ ಅಶ್ಲೀಲಾರ್ಥವಿರುವುದು ಸ್ಪಷ್ಟ. ವಿಷ್ಣುವನ್ನು ಶಿಪಿವಿಷ್ಟವೆನ್ನುವಾಗಲೂ,

"ತದಶ್ಲೀಲಾರ್ಥತ್ವಾದಿದಂ ನಾಮನಪ್ರಶಸ್ತಮಿತ್ಯರ್ಥಃ" ಎಂದು ಋಗ್ವೇದದ ಸಾಯಣ ಭಾಷ್ಯದಲ್ಲಿ ಹೇಳಿದಂತೆ ಅಶ್ಲೀಲಾರ್ಥವೇ ಇದೆ. ಆರ್ಯರೂ ದ್ರಾವಿಡರೂ ಬೆರೆತುಹೋಗಿ ಶಿವನನ್ನೂ ವಿಷ್ಣುವನ್ನೂ ಪೂಜಿಸತೊಡಗಿದಾಗ ಈ ಪದಗಳಿಗೆ ಅವರ ಪಂಡಿತರು, ಅಶ್ಲೀಲವಾದ ಅರ್ಥವಿರುವುದನ್ನು ಒಪ್ಪದೆ, ಬೇರೆ ಅರ್ಥಗಳನ್ನು ಕೊಡಬೇಕಾಗಿ ಬಂದಿತು. ಹಿಂದೆ ಹೇಳಿದಂತೆ "ಶಿಶ್ನದೇವಾಃ" ಎಂದರೆ ಅಬ್ರಹ್ಮಚಾರಿಗಳೆಂದು ಅರ್ಥಮಾಡಿದರು; ಶಿಪಿವಿಷ್ಟನೆಂದರೆ "ರಶ್ಮಿಭಿರಾವಿಷ್ಟ", ಎಂದು ಅರ್ಥಮಾಡಿ ವಿಷ್ಣುವು ತೇಜಃಪುಂಜನೆಂಬ ಅಭಿಪ್ರಾಯವನ್ನು ಹೊರಗೆಡವಿದರು: "But this seems as Wilson remarks a refinement and it is probably to be understood as usual. The Shabdakalpadruma makes Sepha mean Purusha Sisna, the male generative organ....How the linga came to be identified with Siva and how Vishnu the Vedic deity came to be disassociated from it are problems still awaiting consideration." ಎಂದು ಹೇಳಿರುವ ಶ್ರೀಯುತ ಹಯವದನರಾಯರಿಗೆ ಇದೆಲ್ಲವೂ ಶಾಕ್ತರಿಂದ ಶೈವ ವೈಷ್ಣವ ಮತಗಳ ಮೇಲೆ ಆದ ಪ್ರಭಾವವೆಂದು ಉತ್ತರ ಹೇಳಬಹುದು. ಇದಕ್ಕೆ ಶಾಕ್ತರ ಗ್ರಂಥಗಳಿಂದ ಸಮರ್ಥನೆ ದೊರೆಯುವುದು. ಲಲಿತಾ ಸಹಸ್ರನಾಮದಲ್ಲಿ ದೇವಿಯನ್ನು "ವೈಷ್ಣವೀ" ಎಂದೂ, "ವಿಷ್ಣುರೂಪಿಣೀ" ಎಂದೂ ಸ್ತೋತ್ರಮಾಡಲಾಗಿದೆ. ದೇವೀಪುರಾಣದಲ್ಲಿ "ವೈಷ್ಣವೀ ತೇನ ಗೀಯತೇ" ಎಂದು ಹೇಳಿದೆ. ಆನಂದಲಹರಿಯಲ್ಲಿ "ಹರಿಃ ನಾರೀ ಭೂತ್ವಾ ಪುರರಿಪುಮಪಿ ಕ್ಷೋಭಮನಯತ್" ಎಂದರೆ ಹರಿಯು ನಾರಿಯ ರೂಪವನ್ನು ತಾಳಿ ಶಿವನನ್ನು ಮೋಹಗೊಳಿಸಿದುದಾಗಿ ಹೇಳಿದೆ. ಇದರಿಂದ ಮೇಲೆ ಹೇಳಿದ ಅಶ್ಲೀಲಾರ್ಥವುಳ್ಳ ವಿಶೇಷಣಗಳಿಗೆ ಶಾಕ್ತೇಯರೇ ಕಾರಣವೆಂಬುದು ಸ್ಪಷ್ಟವಾಗುತ್ತದೆ.

## ಶೈವರ ಲಿಂಗದಲ್ಲಿ ಪುರುಷ ಜನಕಾಂಗದ ಕಲ್ಪನೆಯ ಸುಳಿವೇ ಇಲ್ಲ

ಮೊಹೆಂಜೊದಾರೊ-ಹರಪ್ಪಗಳಲ್ಲಿ, ಸ್ಪಷ್ಟವಾದ ಸ್ತ್ರೀಜನಕಾಂಗದ ರೂಪಿನ ಶಿಲೆಗಳಲ್ಲದೆ ಸ್ಪಷ್ಟವಾದ ಪುರುಷ ಜನಕಾಂಗದ ರೂಪಿನ ಶಿಲೆಗಳಿವೆ. ಪುರುಷ ಜನಕಾಂಗದ ರೂಪದ ಶಿಲೆಗಳ ಚಿತ್ರವನ್ನು ಮಾರ್ಷೆಲ್ಲರ ಗ್ರಂಥದ ಪುಟ XIV ರ ೨-೪-೫ ನೆಯ ಚಿತ್ರಗಳಲ್ಲಿ ಕಾಣಬಹುದು. ಇವುಗಳು ಮೊದಲು ದುಂಡಾಗಿ ನೀಳವಾಗಿದ್ದು, ಕೊನೆಗೆ ಕತ್ತಿನಂತೆ ಸಣ್ಣದಾಗಿ, ಮುಂದೆ ದಪ್ಪನಾಗಿ ಚೂಪಾಗುವ ಗೊಣಸಿನಿಂದ ಕೂಡಿವೆ. ಆದರೆ ಅವರೇ ಹೇಳುವಂತೆ, ೩ ಮತ್ತು ೭ ನೆಯ ಚಿತ್ರಗಳು ಆ ರೀತಿಯಾಗಿರದೆ, ಈಗಿನ ಕಾಲದಲ್ಲಿ ದೇವಸ್ಥಾನಗಳಲ್ಲಿರುವ ಲಿಂಗಗಳಂತಿವೆ. ದೇವಸ್ಥಾನಗಳಲ್ಲಿರುವ ಲಿಂಗಗಳಿಗೂ ಪುರುಷ ಶಿಶ್ನಕ್ಕೂ ಹೋಲಿಕೆ ಕಂಡುಬರುವುದೇ ಇಲ್ಲ. ಹಾಗೆಂದು ಮಾರ್ಷೆಲ್ಲರೂ ಹೇಳಿದ್ದಾರೆ: "Ninty-nine per cent. of them are so conventionalized that most people would find a difficulty in recognizing their phallic character." ಹೀಗೆ ಹೇಳಿ, ಮೊಹೆಂಜೊದಾರೊ-ಹರಪ್ಪಾದಲ್ಲಿ ಶಿಶ್ನಾಕಾರದಲ್ಲಿಲ್ಲದ ಎರಡನೆಯ ತರದ ಲಿಂಗಗಳಲ್ಲಿ ಶಿಶ್ನದ ಕಲ್ಪನೆಯ ಇತ್ತೆನ್ನಲು ಮಾರ್ಷೆಲ್ಲರು ಹಿಂಜರಿದಿದ್ದಾರೆ.

The stones of the second class (Pl. XIII, 4–6 and Pl. XIV, 3–7) are even more varied in size than those of the first, some of the larger specimens being as much as 2 to 3 feet in height. In shape they are like many of the Lingas

seen in Siva temples today and have been taken to be such by most of the Hindus who have seen them.... *Prima facie* it is unlikely that the phallic emblem would have been conventionalized in two different forms in the Indus Valley and if a choice has to be made between the first and the second class of these objects, the shape of the former clearly gives them more title to be regarded as phallic than the latter. Moreover, though they resemble the Indian Lingas, they equally resemble the bætylic stones of Western Asia such as the semitic massebah to which there is no reason to attach any phallic meaning. In India itself bætylic stones such as those which guard the fields and cross ways are just as numerous as phallic ones and are common objects of worship with the primitive tribes, among whom they are especially associated with the Mother Goddess. The only reason, therefore, for interpreting the Mohenjo Daro examples as phallic rather than bætylic is that their conical shape is now commonly associated with that of the Linga. In reality, however, this point is a negligible one; for nothing is more likely than that, as Saivism developed, it largely absorbed the older bætylic worship and appropriated its symbols to phallic worship. This would explain why the vast majority of mediæval and modern lingas are fashioned more like bætylic cones than phalli.

ಸರ್ ಜಾನ್ ಮಾರ್ಷೆಲ್ಲರು ಬರೆದಿರುವ ಲೇಖನದಲ್ಲಿ ಇಷ್ಟೊಂದನ್ನು ಉದ್ಧರಿಸಲು ಕಾರಣವಿದೆ. ಶಿವಲಿಂಗಕ್ಕೂ ಶಿಶ್ನಕ್ಕೂ ಸಂಬಂಧವನ್ನು ಕಟ್ಟುವ ಚಟವು ಸುಲಭವಾಗಿ ಹೋಗತಕ್ಕುದಲ್ಲ. ಕ್ರೈಸ್ತರ ಶಿಲುಬೆಯಲ್ಲೂ ಸ್ತ್ರೀಪುರುಷರ ಸಂಬಂಧವನ್ನು ಕಾಣುವ ಜನರಿಗೆ ದುಂಡಾಗಿರುವುದರಲ್ಲೆಲ್ಲ ಶಿಶ್ನವೇ ಕಾಣಿಸುವುದು! ಆದರೂ ಸರ್ ಜಾನ್ ಮಾರ್ಷೆಲ್ಲರು ದುಂಡಾಗಿರುವ ಮೊಹೆಂಜೊದಾರೋ ಕಲ್ಲುಗಳಲ್ಲಿ ಶಿಶ್ನರೂಪವನ್ನು ಕಾಣಲು ಹಿಂಜರಿದಿರುವರು. ಶಿಲೆಗಳಲ್ಲಿ ಕೆಲವು ಶಿಶ್ನಾಕಾರದಲ್ಲೇ ಇವೆ. ಆ ಕಾಲದ ಜನರು ಅವನ್ನು ಶಿಶ್ನವೆಂಬ ಭಾವನೆಯಿಂದ ಪೂಜಿಸುತ್ತಿರಬೇಕು, ನಿಜ. ಆದರೆ ಇವರು ಹಿಂದೆ ಹೇಳಿದಂತೆ ಶಾಕ್ತರು. ಶಿಲೆಗಳಲ್ಲಿ ಕೆಲವು ದುಂಡಾಗಿ ಮಾತ್ರವೇ ಇವೆ. ಮೊಹೆಂಜೊದಾರೋ ಜನರು ಪೂಜಿಸುವುಗಳಲ್ಲೆಲ್ಲ ಶಿಶ್ನಾಕಾರದ ಭಾವನೆಯನ್ನಿಟ್ಟಿದ್ದರೆ, ಎಲ್ಲವನ್ನೂ ಶಿಶ್ನಾಕಾರವಾಗಿಯೇ ತಯಾರಿಸುತ್ತಿದ್ದರು. ಎರಡು ರೀತಿಯ ಆಕಾರದಲ್ಲಿ ಶಿಶ್ನವನ್ನು ಪೂಜಿಸುತ್ತಿದ್ದುದು ಅಸಂಭವವೆಂದೇ ಮಾರ್ಷೆಲ್ಲರು ಭಾವಿಸಿದ್ದಾರೆ. ಅಷ್ಟೇ ಅಲ್ಲ, ಇಂದೂ ಹೊಲಗದ್ದೆಗಳಲ್ಲಿ ಊರುಬಾಗಿಲುಗಳಲ್ಲಿ ದೇವತೆಗಳನ್ನು ದುಂಡಾದ ಕಲ್ಲುಗಳಲ್ಲಿ ಭಾವಿಸಿ ಪೂಜಿಸುವರಷ್ಟೆ. ಇದರಲ್ಲಿ ಶಿಶ್ನದ ಭಾವನೆಯೇ ಇಲ್ಲವೆಂದಮೇಲೆ ಮೊಹೆಂಜೊದಾರೋದ ದುಂಡಾದ ಕಲ್ಲುಗಳಲ್ಲಿ ಶಿಶ್ನದ ಭಾವನೆಯಿತ್ತೆಂದು ಏಕೆ ಹೇಳಬೇಕೆಂಬ ಮಾರ್ಷೆಲ್ಲರ ವಾದವು ಪರಿಗ್ರಾಹ್ಯವಾಗಿದೆ. ಮೊಹೆಂಜೊದಾರೋದ ದುಂಡುಗಲ್ಲುಗಳಲ್ಲಿ ಶಿಶ್ನರೂಪವನ್ನು ಕಾಣುವುದಕ್ಕೆ ಈಗ ದೇವಸ್ಥಾನದ ಲಿಂಗಗಳಲ್ಲಿ ಶಿಶ್ನದ ಭಾವನೆಯಿರುವುದೇ ಕಾರಣವಿರಬೇಕೆಂದು ಅವರು ಊಹಿಸಿರುವರು. ಆದರೆ ಇದೂ ಕೂಡ ಮುಖ್ಯವಲ್ಲವೆಂದು ಪರಿಹಾರ ಹೇಳಿರುವರು. ಹಿಂದೆ ಶಿಶ್ನಭಾವನೆಯೇ ಇಲ್ಲದೆ ದುಂಡುಗಲ್ಲುಗಳನ್ನು ಪೂಜಿಸುತ್ತಿದ್ದರೂ, ಶೈವಮತವು ಬಳೆದು ಶಿಶ್ನಾಕಾರವನ್ನು ಪೂಜಿಸಲು ಪ್ರಾರಂಭಿಸಿದ

ಮೇಲೆ, ಹಿಂದೆ ಆ ಭಾವನೆಯಿಲ್ಲದೆ ಪೂಜಿಸುತ್ತಿದ್ದ ದುಂಡುಗಲ್ಲಿನ ಆಕಾರವನ್ನು ಶಿಶ್ನಭಾವನೆಯಿಂದ ಈಗ ಪೂಜಿಸುತ್ತಿರುವುದು ಹೆಚ್ಚು ಸಂಭವನೀಯವೆಂದು ಹೇಳಿದ್ದಾರೆ. ಆದರೆ ಈ ಊಹೆಯೂ, ಅದಕ್ಕೆ ಪರಿಹಾರವೂ ಅನಗತ್ಯವಾಗಿದೆ. ಏಕೆಂದರೆ ದೇವಸ್ಥಾನದ ಶಿವಲಿಂಗಗಳಲ್ಲಿ ಶಿಶ್ನದ ಭಾವನೆಯನ್ನಿಟ್ಟು ಪೂಜಿಸುವವರನ್ನು ಯಾರೂ ಕೇಳಿಯೂ ಇಲ್ಲ, ನೋಡಿಯೂ ಇಲ್ಲ. ಯಾವ ಶಿವದೇವಸ್ಥಾನದಲ್ಲಾಗಲೀ ಸ್ತ್ರೀಪುರುಷ ಸಂಯೋಗದ ಕುರುಹಿನ ಆಚರಣೆಯು ಕಂಡುಬರುವುದಿಲ್ಲ. ಶಂಕರಾನಂದರು ಅವರ "Rigvedic Culture of the Prehistoric Indus" ಎಂಬ ಗ್ರಂಥದಲ್ಲಿ ಹೇಳಿದಂತೆ: 'Dr. Fraser, the upholder of the theory of phallic association of the cones and pillars, had to revise his conclusions when in search of proof of his theory, he met with some cones in Western Asia, the ceremony connected therewith did not reveal phallic significance of those cones. ದುಂಡುಗಲ್ಲುಗಳಲ್ಲಿ ಶಿಶ್ನಾಕಾರವನ್ನು ಕಾಣಲು ಪ್ರಯತ್ನಿಸಿದ ಡಾ॥ ಫ್ರೇಸರು ಆ ದುಂಡುಗಲ್ಲುಗಳ ಪೂಜೆಯಲ್ಲಿ ಲೈಂಗಿಕಾಚರಣೆಯೇನನ್ನೂ ಕಾಣದಿರುವುದರಿಂದ ಆ ದುಂಡುಗಲ್ಲುಗಳಲ್ಲಿ ಶಿಶ್ನಾಕಾರವಿದೆಯೆನ್ನಲಾಗುವುದಿಲ್ಲವೆಂದರೆಂದು ಶಂಕರಾನಂದರು ತಮ್ಮ ಗ್ರಂಥದಲ್ಲಿ ಹೇಳಿರುವರು. ಇದು ಸರಿಯಾದ ವಾದ. ಈ ವಾದವು ಶಿವದೇವಸ್ಥಾನದ ಲಿಂಗಗಳಿಗೂ ಅನ್ವಯಿಸುವುದು. ಈ ಲಿಂಗಗಳಲ್ಲಿ ಶಿಶ್ನಾಕಾರವಿದೆಯೆನ್ನುವುದು ಶುದ್ಧ ತಪ್ಪು. ಲೈಂಗಿಕಾಚರಣೆಯಂತೂ ಈ ದೇವಸ್ಥಾನಗಳಲ್ಲಿ ಕಂಡುಬರುವುದೇ ಇಲ್ಲ.

## ಲಿಂಗವು ಸೂರ್ಯನ ಕುರುಹೆಂದು ಮೊದಲೂ, ಪರಶಿವನ ಕುರುಹೆಂದು ತದನಂತರವೂ ಭಾವಿಸಲ್ಪಟ್ಟಿದ್ದಿತು

ಸರ್ ಜಾನ್ ಮಾರ್ಷೆಲ್ಲರ ಕಾಲದಿಂದೀಚೆಗೆ ಅಲ್ಲಿನ ಶಿಲಾಲೇಖಗಳನ್ನು ಫಾದರ್ ಹೆರಾಸರು ಓದಿರುವರು. ಆ ಕಾಲದ ಜನರು ಲಿಂಗಗಳಲ್ಲಿ ಶಿಶ್ನದ ಭಾವನೆಯನ್ನು ಇಟ್ಟಿದ್ದರೆ ಅದರ ಸುಳಿವಾದರೂ ಲಿಂಗಪೂಜೆಯ ವಿಷಯವನ್ನು ಹೇಳುವ ಲೇಖಗಳಲ್ಲಿ ಕಂಡುಬರುತ್ತಿದ್ದಿತು; ಅಂತಹುದೇನೂ ಆ ಲೇಖಗಳಲ್ಲಿ ಕಂಡುಬಂದಿಲ್ಲ; ಆ ಶಿಲಾಲೇಖಗಳಲ್ಲಿ ತದ್ವಿರುದ್ಧವಾದ ವಿಷಯವು ಕಂಡುಬಂದಿದೆ; ಸೂರ್ಯನನ್ನು ಮೊದಲು ಲಿಂಗರೂಪದಲ್ಲಿ ಪೂಜಿಸುತ್ತಿದ್ದರು; ಅನಂತರ ಶಿವನೂ ಸೂರ್ಯನೂ ಒಂದೇ ಎಂಬ ಭಾವನೆಯು ಬಂದಿತು; ಅನಂತರ ಶಿವನನ್ನು ಲಿಂಗರೂಪದಲ್ಲಿ ಮೊಹೆಂಜೊದಾರೋ ಜನರು ಪೂಜಿಸುತ್ತಿದ್ದರು—ಎಂಬುದನ್ನು ಫಾದರ್ ಹೆರಾಸರು ಶಿಲಾಲೇಖದಲ್ಲಿನ ವಿಷಯಗಳಿಂದ ಸಿದ್ಧಾಂತಮಾಡಿದ್ದಾರೆ. "The Linga of the eight villages of Velvel Bilvas is the high Sun of the harvest (Marshall, H., No. 99). The lustrous Linga of the high Sun (Marshall, H., No. 451)." ಇವೇ ಮೊದಲಾದ ಲೇಖಗಳು ಸೂರ್ಯನನ್ನು ಲಿಂಗರೂಪದಲ್ಲಿ ಪೂಜಿಸುತ್ತಿದ್ದರೆಂಬುದನ್ನು ಸೂಚಿಸುತ್ತವೆ. ಡಾ॥ ಕರ್ಮರ್‌ಕರ್ರವರ "ರಿಲಿಜನ್ಸ್ ಆಫ್ ಇಂಡಿಯ" ಗ್ರಂಥದ ೮೧ನೆಯ ಪುಟದಲ್ಲಿ ಹೇಳಿದಂತೆ—"In the opinion of Father Herras it was during this period alone that the Linga was identified with Siva. Siva was supposed to be the creator of the world. And when once the Linga was given the sublime position by its identification with the Sun, it was but natural that it should be identified with Siva also."

## ವೇದಗಳಲ್ಲಿ ಶಿವಸೂರ್ಯರು ಒಂದೆಯೆಂಬ ಭಾವನೆಯ ಪ್ರಗತಿ

ಶೀತವಲಯಗಳಲ್ಲಿ ಸೂರ್ಯಪ್ರಕಾಶವು ಕಡಮೆ. ಭಾರತ ದೇಶದಲ್ಲಿ ಸೂರ್ಯನು ಜಾಜ್ವಲ್ಯಮಾನನಾಗಿರುವನು. ಭಾರತದ ಆದಿಮಾನವನಿಗೆ ಅತ್ಯಂತ ತೇಜೋಮೂರ್ತಿಯೂ, ಸರ್ವಜೀವಾಧಾರವೂ ಆದ ಸೂರ್ಯನಲ್ಲಿ ಪೂಜ್ಯಭಾವವು ಬಳೆದು ಅವನನ್ನು ಪರಮೇಶ್ವರನೆಂದು ಭಾವಿಸಿ ದುಂಡಾಗಿ ಕಂಡುಬರುವ ಅವನ ಕುರುಹಾಗಿ ಲಿಂಗವನ್ನು ಪೂಜಿಸಿದುದು ಸ್ವಾಭಾವಿಕವೇ. ನಿಯಮಿತ ಕಾಲಕ್ಕೆ ಹುಟ್ಟಿ ಮುಳುಗುವ ಸೂರ್ಯನನ್ನು ನಿಯಮಿಸುವ ಅವನ ಅಂತರ್ಯಾಮಿಯೊಬ್ಬನು ಇರಬೇಕೆಂದು ಭಾವನೆಯಾದಾಗ ಆ ಅಂತರ್ಯಾಮಿ ಶಿವನನ್ನು ಲಿಂಗರೂಪದಲ್ಲಿಯೇ ಪೂಜಿಸಿದುದು ಮುಂದಿನ ಹೆಜ್ಜೆಯಾಯಿತು. ಆರ್ಯದ್ರಾವಿಡರ ಸಮ್ಮಿಲನವಾಗಿ ಸೌಹಾರ್ದವೇರ್ಪಟ್ಟಮೇಲೆ ಸೂರ್ಯಶಿವರ ಸಂಬಂಧದ ಪ್ರಗತಿಯನ್ನು ವೇದೋಪನಿಷತ್ ಪುರಾಣಗಳಲ್ಲಿ ಕಂಡುಬಂದಿರುವುದರಲ್ಲಿ ಆಶ್ಚರ್ಯವಿಲ್ಲ. ಋಗ್ವೇದದಲ್ಲಿ (I–115) ಸೂರ್ಯನು ಚರಾಚರ ಪ್ರಪಂಚದ ಆತ್ಮವೆಂದು ಹೇಳಿದೆ. "**ಈಶಾವಾಸ್ಯಮಿದಂ ಸರ್ವಂ**" ಎಂದರೆ ಶಂಕರಭಾಷ್ಯದಲ್ಲಿ ಹೇಳಿದಂತೆ "**ಈಶಿತಾ ಪರಮೇಶ್ವರಃ ಪರಮಾತ್ಮಾ ಸರ್ವಸ್ಯ, ಸ ಹಿ ಸರ್ವಮೀಷ್ಟೇ ಸರ್ವಜಂತೂನಾಮಾತ್ಮಾ ಸನ್ ಪ್ರತ್ಯಗಾತ್ಮತಯಾ**" ಎಂದರೆ, ಆಳುವವನು ಪರಮೇಶ್ವರನು, ಆತನೇ ಪ್ರತ್ಯಗಾತ್ಮರೂಪದಿಂದ ಎಲ್ಲ ಪ್ರಾಣಿಗಳಿಗೂ ಆತ್ಮನಾಗಿದ್ದುಕೊಂಡು ಎಲ್ಲವನ್ನೂ ಆಳುತ್ತಿರುವನು ಎಂದರ್ಥ. ಋಗ್ವೇದದಲ್ಲಿ ಸೂರ್ಯನು ಎಲ್ಲದರ ಆತ್ಮನು ಎಂದು ಹೇಳಿರುವುದರಿಂದ ಅವನೇ ಪರಮೇಶ್ವರನೆಂದು ಭಾವ. ಋಗ್ವೇದದಲ್ಲಿ "**ಯಃ ಶುಕ್ರ ಇವ ಸೂರ್ಯೋ ಹಿರಣ್ಯಮಿವ ರೋಚತೇ**" (೧–೪೩–೫) ಎಂದು ರುದ್ರನ ವಿಷಯವಾಗಿ ಹೇಳಿದೆ. ಈಶಾವಾಸ್ಯೋಪನಿಷತ್ತಿನಲ್ಲಿ "**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ**" ಎಂದು ಹೇಳಿರುವುದರಲ್ಲಿ ಸೂರ್ಯಾಂತರ್ಯಾಮಿಯಾದ ಪರಶಿವಬ್ರಹ್ಮದ ಕಲ್ಪನೆಯಿದೆ.

ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮನಿಷ್ಕಲಂ ।
ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದಾತ್ಮವಿದೋ ವಿದುಃ ॥

ಎಂಬ ಮುಂಡಕ ಶ್ರುತಿಯಲ್ಲಿಯೂ ಇದೇ ಭಾವನೆಯಿದೆ. ಛಾಂದೋಗ್ಯೋಪನಿಷತ್ತಿನಲ್ಲಿ "**ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ**" ಎಂದರೆ ಪರಮೇಶ್ವರನು ಸೂರ್ಯಮಂಡಲದ ಆತ್ಮರಾತ್ಮನೆಂದು ಹೇಳಿದೆ. ಈ ವಿಷಯವು ಬ್ರಹ್ಮಸೂತ್ರದ ಅಂತರಧಿಕರಣದಲ್ಲಿ ೧–೧–೨೦ ಮತ್ತು ೨೧ನೆಯ ಸೂತ್ರಗಳಲ್ಲಿ ವಿವೇಚಿಸಲ್ಪಟ್ಟಿದೆ. ೧–೧–೨೧ರ ಶಾಂಕರಭಾಷ್ಯಾಂತ್ಯದಲ್ಲಿ ಹೇಳಿದಂತೆ "**ಪರಮೇಶ್ವರ ಏವೇಹೋಪಾದಿಶ್ಯತ ಇತಿ ಸಿದ್ಧಂ**" ಎಂದರೆ ಪರಮೇಶ್ವರನೇ ಸೂರ್ಯಾಂತರ್ಗತನಾಗಿರುವನೆಂಬುದು ಛಾಂದೋಗ್ಯ ಮಂತ್ರದ ಅಭಿಪ್ರಾಯವೆಂದು ಬ್ರಹ್ಮಸೂತ್ರದಲ್ಲಿ ಹೇಳಿದೆಯೆಂದಾಯಿತು. ಮೈತ್ರ್ಯುಪನಿಷತ್ತಿನಲ್ಲಿ "**ಅಥ ಭರ್ಗ ಇತಿ। ಯೋ ಹ ವಾ ಅಸ್ಮಿನ್ನಾದಿತ್ಯೇ ನಿಹಿತಸ್ತಾರಕೇಽಕ್ಷಿಣಿ ವೈಷ ಭರ್ಗಾಖ್ಯೋ ಭಾಭಿರ್ಗತಿರಸ್ಯ ಹೀತಿ ಭರ್ಗೋ ಭರ್ಜತಿ ವೈಷ ಭರ್ಗ ಇತಿ ರುದ್ರೋ ಬ್ರಹ್ಮವಾದಿನೋಽಥ ಭರ್ಗ ಇತಿ ಭಾಸಯತೀಮಾಂಲ್ಲೋಕಾನೀತಿ ರಂಜಯತೀಮಾನಿ ಭೂತಾನಿ ಗಚ್ಛತ ಇತಿ ಗಚ್ಛತ್ಯಸ್ಮಿನ್ನಾಗಚ್ಛತ್ಯಸ್ಮಾ ಇಮಾಃ ಪ್ರಜಾಸ್ತಸ್ಮಾದ್ ಭಾರಕದ್ವಾದ್ ಭರ್ಗಃ**" ಎಂದು ಹೇಳಿ, ಗಾಯತ್ರೀ ಮಂತ್ರದಲ್ಲಿ ಭರ್ಗ ಪದವು ರುದ್ರಪರವಾಗಿ ಉಪಯೋಗಿಸಲ್ಪಟ್ಟಿದೆಯೆಂಬುದನ್ನು ಸಿದ್ಧಾಂತ ಮಾಡಿದೆ. ಗಾಯತ್ರೀ ಮಂತ್ರ

ವನ್ನು ಜಪಿಸಿ ಸೂರ್ಯನಿಗೆ ಮೂರು ಬಾರಿ ಅರ್ಘ್ಯವನ್ನು ಕೊಟ್ಟು "**ಅಸೌ ಆದಿತ್ಯೋ ಬ್ರಹ್ಮ**" ಎಂಬ ಮಂತ್ರವನ್ನು ಉಚ್ಚರಿಸಬೇಕೆಂಬ ವಿಧಿಯಿದೆ.

ಶಿವಾಭಿನ್ನಳಾದ ಶಿವೆಯು ಶ್ರೀ ಲಲಿತಾಸಹಸ್ರನಾಮದಲ್ಲಿ "**ಭಾನುಮಂಡಲ ಮಧ್ಯಸ್ಥಾ**" ಎಂದು ಸ್ತೋತ್ರಮಾಡಲ್ಪಟ್ಟಿದ್ದಾಳೆ. ಹಾಗೆಯೇ ಕೂರ್ಮ ಪುರಾಣದ ದೇವೀಸ್ತವನದಲ್ಲಿ "**ಪರಮೇಷ್ಠಿ ಸಂಜ್ಞಂ ನಮಾಮಿ ರವಿಮಂಡಲಸ್ಥಂ**" ಎಂದು ಹೇಳಿದೆ.

ಇದು ಆದಿತ್ಯಪುರಾಣದ ವಚನ:

"ಆದಿತ್ಯೋ ಭಗವಾನ್ ಸೂರ್ಯೋ ನೀಲಗ್ರೀವಸ್ತ್ರಿಲೋಚನಃ ।
ಅದಿತೇಯೋ ಸಹಸ್ರಾಂಶು ಸಾಮಗಾಧ್ವರ್ಯ ಹೋತೃಭಿಃ ॥"

ಶ್ರೀಕರಭಾಷ್ಯದಲ್ಲಿ ಗೌತಮಾದಿ ಸ್ಮೃತಿಗಳ ಆಧಾರವನ್ನು ಕೊಟ್ಟು ಶಿವನೇ ಸೂರ್ಯ ಮಂಡಲಾಂತರ್ಯಾಮಿಯೆಂದು ನಿರ್ಧರಿಸಿದೆ:

"ಸೌರಮಂಡಲಮಧ್ಯಸ್ಥಂ ಸಾಂಬಂ ಸಂಸಾರ ಭೇಷಜಂ ।
ನೀಲಗ್ರೀವಂ ವಿರೂಪಾಕ್ಷಂ ನಮಾಮಿ ಶಿವಮವ್ಯಯಂ ॥

ಸೂರ್ಯೋ ಮುಖ್ಯಶರೀರಂ ಸ್ಯಾಚ್ಛಿವಸ್ಯ ಪರಮಾತ್ಮನಃ ।
ತಸ್ಮಾತ್ ತದಂತರೇ ನಿತ್ಯಂ ಧ್ಯಾಯೇದ್ ಯೋಗೀ ಸದಾಶಿವಂ ॥

ಸೂರ್ಯಾಕ್ಷಿ ದಹರೇಷ್ವೇವ ಸಾಂಬಂ ಚಂದ್ರಕಳಾಧರಂ ।
ಫುಲ್ಲಾಬ್ಜನಯನದ್ವಂದ್ವಂ ಧ್ಯಾಯೇದ್ ಯೋಗೀ ನಿರಂತರಂ ॥

ಇತ್ಯಾದಿ ಗೌತಮಬೃಹಚ್ಛಾತಾತಪಾದಿಷು ಸೂರ್ಯಮಂಡಲಾಂತರ್ವರ್ತಿತ್ವ
ಸ್ಯಪರಮೇಶ್ವರಸ್ಯೈವ ನಿರ್ದೇಶಾನ್ನಾನ್ಯಾರ್ಥೋಯುಕ್ತಃ"

ಈ ಆಧಾರಗಳಲ್ಲದೆ, "**ಭ್ರಾಜಮಾನ ವಪುಷಂ ಶುಚಿಸ್ಮಿತಂ**" ಮತ್ತು "**ಮಂಡಲಾಂತರ್ಗತ ಹಿರಣ್ಮಯಂ**" ಎಂಬ ವಚನಗಳೂ ಉಂಟು. "**ಯ ಏಷೋಂತ ರಾದಿತ್ಯಃ ಹಿರಣ್ಮಯಃ ಪುರುಷೋ ದೃಶ್ಯತೇ**" ಎಂದು ಪ್ರಾರಂಭವಾಗಿ, "**ಅಂಬಿಕಾ ಪತಯೇ ಉಮಾಪತಯೇ ಪಶುಪತಯೇ ನಮೋ ನಮಃ**" ಎಂದು ಅಂತ್ಯವಾಗುವ ತೈತ್ತರೀಯ ವಚನವಿದೆ. "**ಶಿವಸೂರ್ಯಾಯ ನಮಃ**" ಎಂಬ ಶಿವಾರ್ಚನ ಮಂತ್ರವು ಗರುಡಪುರಾಣದ ಆಚಾರಖಂಡದಲ್ಲಿ ಹೇಳಲ್ಪಟ್ಟಿದೆ. ಪದ್ಮಪುರಾಣದಲ್ಲಿ ಸೂರ್ಯನನ್ನು "**ರುದ್ರವಪುಷ**" ಎಂದು ವರ್ಣಿಸಿದೆಯಲ್ಲದೆ ಉಮಾಮಹೇಶ್ವರನನ್ನು ಸೂರ್ಯನಾಮೋಚ್ಚರಣೆಯಿಂದ ಪೂಜಿಸಬೇಕೆಂದು ಸೂರ್ಯನಿಗೂ ಶಿವನಿಗೂ ವ್ಯತ್ಯಾಸವಿಲ್ಲವೆಂದು ಹೇಳಿದೆ.

ಹೀಗೆ ಶಿವನು ಸೂರ್ಯನಲ್ಲಿ ಅಂತರ್ಯಾಮಿಯಾಗಿ ಇರುವನೆಂಬ ಭಾವವು ಆರ್ಯ ದ್ರಾವಿಡರ ಸಂಮಿಲನವಾದ ಬಹು ಕಾಲಾನಂತರವೂ ಉಳಿದುಬಂದಿದೆಯೆಂದರೆ ದ್ರಾವಿಡರಲ್ಲಿ ಈ ಭಾವನೆ ಪ್ರಗಾಢವಾಗಿ ನೆಲಸಿತ್ತೆಂಬುದರಲ್ಲಿ ಸಂದೇಹವಿಲ್ಲ. ಪ್ರಸಿದ್ಧವಾದ ಲಿಂಗಗಳೆಲ್ಲವೂ ಜ್ಯೋತಿರ್ಲಿಂಗಗಳೆಂದು ಪ್ರಸಿದ್ಧವಾಗಿವೆ. ವಿಷ್ಣು ಬ್ರಹ್ಮರ ನಡುವೆ ನೆಗೆದ ಜ್ಯೋತಿರ್ಲಿಂಗದ ಕಲ್ಪನೆಯಾದರೂ ಪ್ರಸಿದ್ಧವಾಗಿದೆ. ಇದೆಲ್ಲಕ್ಕೂ ಮೂಲವಾಗಿ ಜಗಜ್ಯೋತಿ ಸೂರ್ಯನ ಕುರುಹಾಗಿಯೂ ತದನಂತರ ತದಂತರ್ಯಾಮಿ ಶಿವನ ಕುರುಹಾಗಿಯೂ ಲಿಂಗಪೂಜೆ ಪ್ರಾರಂಭವಾಯಿತೇ ಹೊರತು ಅದರಲ್ಲಿ ಶಿಶ್ನಭಾವನೆಯಿರಲಿಲ್ಲವೆಂಬುದೇ ಸಿದ್ಧಾಂತ.

## ಶಿವಲಿಂಗದಲ್ಲಿ ಶಿಶ್ನದ ಭಾವನೆಯು ಇಲ್ಲದಿದ್ದರೂ ಇದೆಯೆಂಬ ಭಾವನೆ ಹೇಗೆ ಬಂದಿತು?

ಲಿಂಗಕ್ಕೂ ಶಿಶ್ನಕ್ಕೂ ಇಲ್ಲದಿದ್ದ ಸಂಬಂಧವನ್ನು ಕಲ್ಪಿಸಿದುದು ಹೇಗಾಯಿತು ಎಂಬ ಪ್ರಶ್ನೆಯು ಏಳುವುದು. ಭಾರತದ ಪೂರ್ವನಿವಾಸಿಗಳಲ್ಲಿ ಲಿಂಗಪೂಜಕರಲ್ಲದೆ ಶಿಶ್ನಪೂಜಕರೂ ಇದ್ದರಷ್ಟೆ. ಶಾಕ್ತರು ಆಗ ಇದ್ದರೆಂದು ಫಾದರ್ ಹೆರಾಸರು ಅಭಿಪ್ರಾಯಪಟ್ಟಿರುವುದನ್ನು ಕುರಿತು ಹಿಂದೆ ಹೇಳಿದೆ. ಶಾಕ್ತರು ಶಿಶ್ನರೂಪದಲ್ಲಿ ಮಾಡಿದ ಶಿಲೆಗಳನ್ನೂ ರಂಧ್ರಗಳುಳ್ಳ ಶಿಲೆಗಳನ್ನೂ ಪೂಜಿಸುತ್ತಿದ್ದರು. ಅವರ ಸಿದ್ಧಾಂತದ ಪ್ರಕಾರ ಆದಿಶಕ್ತಿಯೇ ಜಗತ್ತಿನ ಮೂಲತತ್ವ. ಅವಳಲ್ಲಿ ಹುಟ್ಟಿದ ಪುರುಷದೈವದೊಡನೆ ಅವಳು ಸೇರಲು, ಅವರ ಸಂಪರ್ಕದಿಂದ ದೇವಾದಿ ದೇವತೆಗಳೂ ಚರಾಚರ ಪ್ರಪಂಚವೆಲ್ಲವೂ ಹುಟ್ಟಿತೆಂಬುದು ಅವರ ಕಲ್ಪನೆಯಾಗಿದೆ. ಮಾರ್ಷೆಲ್ಲರ ಗ್ರಂಥದ ೫೭ ನೆಯ ಪುಟದಲ್ಲಿ ಏಷಿಯಾಮೈನರ್ ಮತ್ತು ಮೆಡಿಟರೇನಿಯನ್ ತೀರಪ್ರದೇಶಗಳಲ್ಲಿ ಸಹಾ ಇಂಡಿಯಾ ದೇಶದಲ್ಲಿದ್ದಂತೆ ಮೇಲಿನ ತರದ ಶಾಕ್ತಮತವಿದ್ದಿತೆಂದು ಹೇಳಿದೆ. ಭಾರತದಲ್ಲಿ ಶಾಕ್ತಮತವು ಬೌದ್ಧರಲ್ಲಿಯೂ ವೈಷ್ಣವರಲ್ಲಿಯೂ ಪ್ರಸಿದ್ಧವಾಗಿದ್ದರೂ, ಶೈವ ಶಾಕ್ತೇಯರೇ ಹೆಚ್ಚು ಪ್ರಸಿದ್ಧರು. ಜಗನ್ಮಾತೆಯೇ ಅವಳ ಮಗನೊಡನೆ ಸಂಪರ್ಕಮಾಡಿ ಕೊಂಡು ಸೃಷ್ಟಿಕಾರ್ಯವನ್ನು ಪ್ರಾರಂಭಮಾಡಿದಳೆಂದು ನಂಬುವ ಶಾಕ್ತರು ಅವರ ಕಲ್ಪನೆಯ ಜಗದಂಬೆಯನ್ನು ಆಚರಣೆಯಲ್ಲಿ ಮೀರಿಸಿದರು. ಇವರು ಸ್ತ್ರೀಪುರುಷ ಚಿಹ್ನವನ್ನು ಪ್ರತ್ಯಕ್ಷವಾಗಿ ಸಹಾ ಪೂಜಿಸುವರು. ಇವರ ಗ್ರಂಥಗಳಿಂದಲೂ ಆಚರಣೆಯಿಂದಲೂ ಇದು ಸಿದ್ಧವಾಗುವುದು. ಆದರೆ ಶೈವರ ಸಿದ್ಧಾಂತದಂತೆ ಮಹಾದೇವನು ಜಗದಾದಿ ಕರ್ತೃವು. ಅವರ ಆಚರಣೆಯಲ್ಲಿ ಸ್ತ್ರೀಪುರುಷ ಸಂಪರ್ಕದ ಭಾವನೆಯೇ ಇಲ್ಲ. ಲಿಂಗಪೂಜೆಯಲ್ಲಿ ಶಿಶ್ನಭಾವನೆಯು ಬರುವುದು ಪಾಪವೆಂದು ದಕ್ಷಿಣದೇಶದ ಶೈವರೂ ವೀರಶೈವರೂ ಭಾವಿಸುವರು. ದ್ರಾವಿಡರೇ ಪ್ರಬಲವಾಗಿರುವ ದಕ್ಷಿಣ ದೇಶದಲ್ಲಿ ಶಾಕ್ತಮತದ ಸುಳಿವೇ ಇಲ್ಲ. ಬಂಗಾಳದಲ್ಲಿ ಇದರ ಪ್ರಭಾವ ಹೆಚ್ಚು. ದಕ್ಷಿಣ ದೇಶದ ವೈಷ್ಣವರಲ್ಲೂ ಶಾಕ್ತರಿಲ್ಲ. ಮಾರ್ಷೆಲ್ಲರ ಗ್ರಂಥದ ೫೯ ನೆಯ ಪುಟದ ಅಡಿಟಪ್ಪಣಿಯಲ್ಲಿ ಹೀಗೆ ಹೇಳಿದೆ:—
For the Saligrama stone see Oppert who opines that long before it was identified with Vishnu it had been an object of worship with the aboriginies and regarded as an emblem of female energy. ೫೭ನೆಯ ಪುಟದ ಅಡಿಟಪ್ಪಣಿಯಲ್ಲಿ ಹೇಳಿದಂತೆ Oppert....takes the view that veneration of female energy is of pre-Aryan origin but **independent of Siva cult**. ಸ್ತ್ರೀಚಿಹ್ನವನ್ನಾರಾಧಿಸುವ ಮತವು ಅನಾರ್ಯರಲ್ಲಿತ್ತೆಂದೂ, ಶೈವಮತಕ್ಕೆ ಇದರ ಸಂಬಂಧವಿಲ್ಲವೆಂದೂ ಹೇಳುವ ಮೇಲಿನ ಆಧಾರವನ್ನು ಒಪ್ಪಬೇಕು. ಏಕೆಂದರೆ ಶಿಶ್ನರೂಪದ ಶಿಲೆಯನ್ನೂ, ಸ್ತ್ರೀಚಿಹ್ನದ ಭಾವನೆಯಿಂದ ಸಾಲಿಗ್ರಾಮವನ್ನೂ ಭಾರತದ ಆದಿನಿವಾಸಿಗಳಲ್ಲಿ ಕೆಲವರು ಪೂಜಿಸುತ್ತಿದ್ದುದಕ್ಕೆ ಆಧಾರವಿರುವುದಾದರೂ, ಇದು ಶಾಕ್ತೇಯರ ಸಂಪ್ರದಾಯವೇ ಹೊರತು ದಕ್ಷಿಣ ದೇಶದ ಶೈವವೈಷ್ಣವರ ಸಂಪ್ರದಾಯವಲ್ಲ. "The absence of Saktism among the Tamils is noteworthy"—(R. Chanda, *Indo-Aryan Races*, page 156) ಎಂಬ ಆಧಾರವೂ ಗಮನಾರ್ಹವಾಗಿದೆ. ಅನಾರ್ಯಶಾಕ್ತರ ಪ್ರಭಾವವು ಆರ್ಯರ ಮೇಲೆ ಬಿದ್ದು ಶಿವನು ಶಿಶ್ನವನ್ನು ಕಿತ್ತೊಗೆದನೆಂದೂ, ಅದು ಲಿಂಗವಾಗಿ ಪೂಜಿಸಲ್ಪಡುವುದೆಂದೂ ಬರೆದಿರುವ ಪುರಾಣ

ಗಳಿಗೂ, ಗುಡಿ ಮಲ್ಲಾರದಂತಹ ಅಪರೂಪವಾದ ಒಂದೆರಡು ಶಿಶ್ನರೂಪದ ಲಿಂಗಗಳಿಗೂ ಆ ಪ್ರಭಾವವು ಕಾರಣವಾಯಿತು.

## ತ್ರಿಮೂರ್ತಿಗಳಿಗೆ ಅತೀತವಾದ ಪರಶಿವಬ್ರಹ್ಮದ ಕುರುಹೇ ವೀರಶೈವರ ಇಷ್ಟಲಿಂಗ

ಬ್ರಹ್ಮ-ವಿಷ್ಣು-ರುದ್ರರೆಂಬ ತ್ರಿಮೂರ್ತಿಗಳಿಗಿಂತ ಅತೀತವಾದ ಪರಶಿವಬ್ರಹ್ಮವನ್ನು ಲಿಂಗ ರೂಪದಲ್ಲಿ ಉಪಾಸನೆಮಾಡುವುದೇ ವೀರಶೈವರ ಯೋಜನೆಯು. ಬ್ರಹ್ಮ ವಿಷ್ಣು ರುದ್ರರಿಗೆ ಕಾರಣವಾದ ಪರಶಿವಬ್ರಹ್ಮದ ಕಲ್ಪನೆಯು ಲಿಂಗದಲ್ಲಿದೆ. ಶಾಕ್ತರ ಭಗವತಿಯ ಪುತ್ರ ಸದಾಶಿವನು ತ್ರಿಮೂರ್ತಿಗಳಲ್ಲೊಬ್ಬನಾದ ರುದ್ರನು; ಅವನು ಪರಶಿವಬ್ರಹ್ಮನಲ್ಲ. ಈ ಭಾವನೆಯು ಶಾಕ್ತರಲ್ಲಿ ಕೆಲವರಲ್ಲೂ ಇರುವಂತಿದೆ. ಸ್ವಾಮಿ ಶಂಕರಾನಂದರು *Rigvedic Culture of the Prehistoric Indus* ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ: "The dancing goddess over the dead god is the Kali with the earth code and the dead god is the sun. In this respect Sakti becomes the dead god upon whom dances the mother Kali. Moreover the dead god is not the Siva, it is Sadasiva the Mahakala Vairava, the Vedic Rudra. The Vedic Rudra who plays the role of the Sakti in the Tantric literatures is actually the son of the mother Kali, the earth from whose womb the said god comes out in the morning. The Sakti the sun plays in the ocean of the sky which is called the Siva....The Siva is conceived as an abstract existence. The Siva, being beyond all names and forms and attributes, cannot be worshipped. The human mind cannot reach that abstract conception. The Tantric sages therefore conceived Sadasiva the Mahakala Bhairava a God with the solar code Hrim (ಹ್ರಿಂ) and Pa (ಪ). He is confounded with the Siva and wrongly called the Siva by a great majority of people. But in fact he is the Rudra of Vedas....The Pranatoshini says:

> ಮೂಲೇ ಬ್ರಹ್ಮಾ ವಸತಿ ಭಗವಾನ್ ಮಧ್ಯಭಾಗೇ ಚ ವಿಷ್ಣುಃ ।
> ಅಗ್ರೇ ಶಂಭುಃ ಪಶುಪತಿ.... ।
> ತಸ್ಮಾತ್ ಲಿಂಗಂ ಸುರಶರುಂ ಸ್ಥಾಪಯೇತ್ ॥

ತ್ರಿಮೂರ್ತಿಗಳಿಗೂ ಆಧಾರವಾದ ಪರಶಿವಬ್ರಹ್ಮದ ಕುರುಹೇ ವೀರಶೈವರ ಇಷ್ಟಲಿಂಗವು. ದೇವಸ್ಥಾನಗಳಲ್ಲಿರುವ ಲಿಂಗಗಳ ವಿಷಯವಾಗಿ ಕೆಲವು ಪಾಶ್ಚಾತ್ಯ ಪಂಡಿತರು ಶಿಶ್ನಭಾವನೆಯುಂಟೆಂದು ವಾದಿಸುವುದೂ ತಪ್ಪೆಂದು ಹಿಂದೆಯೇ ಹೇಳಿದೆ. ಇಷ್ಟಲಿಂಗ ವಿಷಯದಲ್ಲೂ ಆ ಭಾವನೆಯು ಇದ್ದರೆ ಅದನ್ನು ತಜ್ಞರು ಖಂಡಿಸಿದ್ದಾರೆ. ಶಿವಸೂರ್ಯರ ಸಂಬಂಧವೂ ಮೇಲೆ ಹೇಳಲ್ಪಟ್ಟಿದೆ. ಶ್ರೀಯುತ ಎಸ್. ಕೆ. ದಾಸರ *Sakti or Divine Power* ಎಂಬ ಗ್ರಂಥದ ೨೧೩ನೆಯ ಪುಟದಲ್ಲಿ ಹೇಳಿದಂತೆ:

"After a close examination of twenty or twenty-five important Lingayata texts we have not been able to find out a single trace of phallic sense of the Lingam. On the other hand we believe that a

careful study of Lingayata literature will convince the reader that the Veerasaiva assigned the foremost rank in their system to a thoroughly purified concept of the Lingam taking good care to remove all immoral implications." Mr. C. P. Brown, one of the most reliable writers on the Lingayat cult, makes the following emphatic statement: "....Obscenities with Linga-worship......are wholly unknown to the Jangamas who look upon this idol just as the catholics do upon a reliquary with deep veneration."

'Hanging a golden stamp about their necks put on with holy prayers.'
—*Macbeth*, IV, 3.

ವೀರಶೈವ ಗ್ರಂಥಗಳಲ್ಲಿ ಹಂಜುಹಿಡಿದು ಹುಡುಕಿದರೂ ಲಿಂಗ ವಿಷಯದಲ್ಲಿ ಶಿಶ್ನದ ಭಾವನೆಯಿರುವುದು ಕಂಡುಬರುವುದಿಲ್ಲ; ಅವರ ಲಿಂಗದ ಭಾವನೆಯಿದು:

'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದೆನಿಸುವ ಲಿಂಗವು,
'ಅತ್ಯತಿಷ್ಠದ್ದಶಾಂಗುಲಂ' ಎಂದೆನಿಸುವ ಲಿಂಗವು,
'ಚಕಿತಮಭಿದತ್ತೇ' ಎಂದೆನಿಸುವ ಲಿಂಗವು,
'ಅಣೋರಣೀಯಾನ್ ಮಹತೋಮಹೀಯಾನ್' ಎಂದೆನಿಸುವ ಲಿಂಗವು,
'ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ' ಎಂದೆನಿಸುವ ಲಿಂಗವು
ಎನ್ನ ಕರಸ್ಥಲಕ್ಕೆ ಬಂದು ಕರತಲಾಮಲಕದಂತೆ ತೋರುತ್ತಿದ್ದಾನೆ—ಉರಿಲಿಂಗಿಪೆದ್ದಿಪ್ರಿಯ ವಿಶ್ವೇಶ್ವರಾ.

"ಲಿಂಗವೆಂಬುದು ಪರಶಿವಯುಕ್ತ; ಲಿಂಗವೆಂಬುದು ಪರಶಿವನ ನಿಜದೇಹ, ಲಿಂಗವೆಂಬುದು ಪರಶಿವನ ಘನತೇಜ; ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖ; ಲಿಂಗವೆಂಬುದು ಪರಶಿವನ ಜ್ಞಾನ; ಲಿಂಗವೆಂಬುದು ಪರಶಿವನು ತಾನು; ಲಿಂಗವೆಂಬುದು ಷಡಧ್ವಮಯ ಜಗಜ್ಜನ್ಮಭೂಮಿ ತಾನು; ಲಿಂಗವೆಂಬುದು ಅಖಂಡಿತ ಅಭೇದ್ಯ ಪಂಚಸಂಜ್ಞೆ ತಾನು; ಲಿಂಗವೆಂಬುದು ಹರಿಹರಬ್ರಹ್ಮರ ನಡುವೆ ನೆಗಳ್ದ ಜ್ಯೋತಿರ್ಮಯ ಲಿಂಗ."

ಒಂದು ಬಸವೇಶ್ವರ ವಚನದಿಂದ ಇಷ್ಟಲಿಂಗದ ಕಲ್ಪನೆಯನ್ನು ಸ್ಪಷ್ಟಮಾಡಿಕೊಡುವುದು ಸುಲಭ:

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ, ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ! ಅಗಮ್ಯ ಅಗೋಚರ ಅಪ್ರತಿಮಲಿಂಗವೆ,
ಕೂಡಲಸಂಗಮದೇವಯ್ಯ, ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ!!

ಪರಾತ್ಪರವು "ಅತ್ಯತಿಷ್ಠದ್ದಶಾಂಗುಲಂ" ಎಂದು ಪುರುಷಸೂಕ್ತದಲ್ಲಿ ಹೇಳಿದಂತೆ ಜಗದಗಲವಾಗಿ, ಮುಗಿಲಗಲವಾಗಿ, ಇನ್ನೂ ಹೆಚ್ಚಿನಗಲವಾಗಿ ವಿಶ್ವವೆಲ್ಲವನ್ನೂ ಆವರಿಸಿ ಅದರಾಚೆಯಿದೆ. ಹೀಗೆ ಅನಂತವಾದ ಪರಬ್ರಹ್ಮವು, ಭಕ್ತನ ಉದ್ಧಾರಕ್ಕಾಗಿ ಅವನ ಕರಸ್ಥಲಕ್ಕೆ ಬಂದು ಚುಳುಕಾಗಿದೆ. ಚುಳುಕಾಗಿದೆಯೆಂದರೆ ಚಿಕ್ಕದಾಗಿದೆ ಎಂದು ಅರ್ಥಮಾಡುವುದುಂಟು. 'ಚುಳುಕ' ಎಂಬ ಪದವು 'ಕ್ಷುಲ್ಲಕ' ಎಂಬ ಸಂಸ್ಕೃತ ಪದದ ತದ್ಭವವೆಂದು ಭಾವಿಸಿ ಹೀಗೆ ಅರ್ಥಮಾಡುತ್ತಾರೆ. ಹಾಗೆ ಅರ್ಥಮಾಡುವುದು ಸರಿಯಲ್ಲ. "ಕ್ಷುಲ್ಲಕ" ಎಂದರೆ ನೀಚ

ವೆಂದು ಅರ್ಥವಾಗುವುದು. ಇದು ನೀಚೋಪಮೆಗಳಂತೆ ಅಗ್ರಾಹ್ಯವಾದುದು; 'ಚುಳುಕ' ಪದವು "ಚುಲುಕ" ಅಥವಾ "ಚುಲಕ" ಎಂಬ ಪದದ ತದ್ಭವ. ಅಂಗೈಯೊಳಗೆ ಹಿಡಿಯುವಷ್ಟು ನೀರು ಅಥವಾ ಇತರ ಪದಾರ್ಥ ಎಂದು ಈ ಪದದ ಅರ್ಥ. ಪರಾತ್ಪರವು "ಮಹತೋಮಹೀಯಾನ್" ಎನಿಸಿರುವಂತೆಯೇ "ಅಣೋರಣೀಯಾನ್" ಎನಿಸಿರುವುದೂ ಸರಿಯಷ್ಟೆ. ಅನಂತವಾದುದು ಭಕ್ತನ ಉದ್ಧಾರಕ್ಕಾಗಿ ಅಂಗೈಕುಡಿಕೆಯೊಳಗೆ ನಿಲ್ಲುನಂತಾಯಿತು. ಇದು ಹೇಗಾಗುವುದು ನೋಡುವ.

ಜ್ವಲತ್ಕಾಲಾನಲಾಭಾಭಾ ತಟಿತ್ಕೋಟಿಸಮಪ್ರಭಾ
ತಸ್ಯೋರ್ಧ್ವಂ ಚ ಶಿಖಾ ಸೂಕ್ಷ್ಮಾ ಚಿದ್ರೂಪಾ ಪರಮಾಕಲಾ

ಕಾಲಾಗ್ನಿಯಂತಹ ಕಾಂತಿಯುಳ್ಳ ಕೋಟಿಮಿಂಚುಗಳ ಪ್ರಭೆಯುಳ್ಳ ಚಿದ್ರೂಪವಾದ ಪರಮಕಲೆಯು ಶಿಖಾಗ್ರದಲ್ಲಿರುವುದು.

ಏವಂ ಭೇದಕಲಾ ದೇವಿ ಸದ್ಗುರೋಃ ಶಿಷ್ಯಮಸ್ತಕೇ
ಹಸ್ತಾಬ್ಜಮಥನಾದ್ ಗ್ರಾಹ್ಯಾ ತಸ್ಯ ಭಾವಕರೋದಿತಾ

ಸದ್ಗುರುವಿನ ಹಸ್ತಮಸ್ತಕ ಸಂಯೋಗದಿಂದ ಆ ಪರಮ ಕಳೆಯು ಗ್ರಹಿಸಲ್ಪಟ್ಟು ಆ ಶ್ರೀಗುರುವಿನಿಂದ, ಶಿಷ್ಯನ ಇಷ್ಟಲಿಂಗರೂಪದಲ್ಲಿ ಪ್ರತಿಷ್ಠಿಸಲ್ಪಡುವುದು.

ಶಿಷ್ಯನ ಶಿಖಾಗ್ರದಲ್ಲಿರುವ ಪರಮ ಕಲೆಯನ್ನೇ ಅವನು ಉಪಾಸನೆಯನ್ನು ಮಾಡುವುದನ್ನು ಬಿಟ್ಟು, ಅದನ್ನು ಗುರುವು ಹೊರಹೊಮ್ಮಿಸಿ ಲಿಂಗರೂಪದಲ್ಲಿ ಕೊಟ್ಟನಂತರವೇ ಅದನ್ನು ಉಪಾಸನೆ ಮಾಡುವುದೇಕೆ ಎಂದು ಕೇಳಬಹುದು. ಅದಕ್ಕೆ ಉತ್ತರ ಈ ವಚನದಲ್ಲಿದೆ:

> ಗೋವಿನ ಹೊಟ್ಟೆಯಲ್ಲಿ ಘೃತವಿದ್ದೊಡೇನೋ, ಆ ಗೋವು ದಿನ ದಿನಕ್ಕೆ ಪುಷ್ಟಿಯಾಗ ಬಲ್ಲುದೆ? ಅದು ಕಾರಣ ಆ ಗೋವ ಪೋಷಿಸಿ ಕರೆದು, ಕಾಸಿ, ಘೃತವಮಾಡಿ ಆ ಗೋವಿಂಗೆ ಕುಡಿಯಲೆರೆದರೆ ಆ ಗೋವು ದಿನ ದಿನಕ್ಕೆ ಪುಷ್ಟಿಯಪ್ಪುದು. ಅದು ಹೇಂಗೆ ಹಾಂಗೆ ತನ್ನಲ್ಲಿ ವಸ್ತುವಿದ್ದೊಡೇನೋ? ಆ ವಸ್ತುವ ಗುರುಮುಖದಿಂದ ಕರಸ್ಥಲಕ್ಕೆ ಪಡೆದು ಸತ್‌ಕ್ರಿಯೆಯಿಂದ ಪ್ರಾಣಕ್ಕೆ ವೇಧಿಸಿದಲ್ಲದೆ ಪ್ರಾಣಲಿಂಗವಾಗದು. ಕೂಡಲ ಚೆನ್ನಸಂಗಯ್ಯನಲ್ಲಿ ಇಷ್ಟಲಿಂಗವ ಸತ್ಕ್ರಿಯೆಯಿಂದ ಪ್ರಾಣಕ್ಕೆ ವೇಧಿಸಿ,.... ತಾನೆಂಬ ಅನಿಷ್ಟವ ತೊಲಗಿಸಿದಲ್ಲದೆ, ಪ್ರಾಣಲಿಂಗ ಸಂಬಂಧವಾಗಬಾರದು.

ಬಡವಾದ ಹಸುವಿಗೆ ಪುಷ್ಟಿಬರಲು ತುಪ್ಪದಿಂದ ಮಾಡಿದ ಔಷಧವನ್ನು ಹಾಕುವರು. ಆದರ ಹೊಟ್ಟೆಯಲ್ಲಿಯೇ ತುಪ್ಪವಿದ್ದರೂ ಅದರಿಂದ ಅದಕ್ಕೆ ಪುಷ್ಟಿಯಾಗದು. ಆ ಹಸುವಿನಿಂದ ಹಾಲು ಕರೆದು ತುಪ್ಪವನ್ನು ಮಾಡಿ ಅದನ್ನು ಅದಕ್ಕೆ ಕುಡಿಸಿದರೆ ಪುಷ್ಟಿಯಾಗುವುದು. ಹಾಗೆಯೇ ಶಿಷ್ಯನ ಶಿಖಾಗ್ರದಲ್ಲಿರುವ ಚಿತ್ಕಳೆಯು ಉಪಾಸನೆಗೆ ಬಾರದು. ಸದ್ಗುರುವು ಅದನ್ನು ಹೊರಹೊಮ್ಮಿಸಿ ಇಷ್ಟಲಿಂಗರೂಪದಲ್ಲಿ ಕೊಟ್ಟರೆ ಅದು ಪೂಜೆಗೆ ಅನುಕೂಲವಾಗುವುದು. ಇದರಿಂದ ಪ್ರಾಣಲಿಂಗಾನುಸಂಧಾನವೂ ಭಾವಲಿಂಗಾನುಸಂಧಾನವೂ ಸಾಧ್ಯವಾಗುವುದು. ಶ್ರೀಗುರುವಿನ ಹಸ್ತಮಸ್ತಕ ಸಂಯೋಗದಿಂದ ಚಿತ್ಕಳೆಯನ್ನು ಹೊರಹೊಮ್ಮಿಸಿ ಶಿಷ್ಯನ ಇಷ್ಟಪ್ರಾಣಭಾವಲಿಂಗರೂಪವಾಗಿ ವೇಧಿಸಲಾಗುವುದು. ಶ್ರೀರಾಮಕೃಷ್ಣ ಪರಮಹಂಸರು ವಿವೇಕಾನಂದರನ್ನು ಮುಟ್ಟಿದಾಗ ಆದ ಶಕ್ತಿಪ್ರಸರಣದ ಅನುಭವವನ್ನು ಅವರ ವಿಷಯವಾದ ಗ್ರಂಥಗಳಿಂದ ತಿಳಿದರೆ ಇದು ಸಾಧ್ಯವೆಂಬುದು ವಿದಿತವಾಗುವುದು. ತಾನುಸ

ಗುರುವಿನಿಂದ ತಾಮಸ ಶಿಷ್ಯನಿಗೆ ಯಾವ ಮತದಲ್ಲಿಯೂ ಯಾವತರದ ದೈವೀಶಕ್ತಿಯು ದೊರೆಯುವುದಿಲ್ಲವೆಂದ ಮಾತ್ರಕ್ಕೆ ಸದ್ಗುರುವಿಗೆ ಇದು ಸಾಧ್ಯವಾಗುವುದಿಲ್ಲವೆನ್ನಲಾಗದು.

ಬಾಹ್ಯದೃಷ್ಟಿಯಿಂದ ನೋಡಿದರೂ ಇಷ್ಟಲಿಂಗದ ಧಾರಣೆಯಿಂದಲೂ ಪೂಜೆಯಿಂದಲೂ ಉತ್ಕೃಷ್ಟವಾದ ಫಲವಿದೆ ಎನಿಸುವುದು. ದೇವಸ್ಥಾನಗಳಲ್ಲಿ ದೈವಭಕ್ತರು ದೇವರ ಸನ್ನಿಧಿಯಲ್ಲಿಯಾದರೂ ಸತ್ಕ್ರಿಯಾಚರಣೆಯುಳ್ಳವರಾಗಿರುವರು. ದೇವರನ್ನು ದೇಹದ ಮೇಲೆಯೇ ಧರಿಸುವುದರಿಂದ ಸತ್ಕ್ರಿಯಾಚರಣೆಯಲ್ಲಿ ನಿರತನಾಗಿರುವುದಕ್ಕೆ ಸದ್ಭಕ್ತನಿಗೆ ಸಹಾಯವಾಗುವುದು. ಲಿಂಗಪೂಜೆಯಲ್ಲಿ ಮತ್ತೊಂದು ವಿಶೇಷವುಂಟು. ಪ್ರತಿಮೆ ಅಥವಾ ಪ್ರತೀಕಗಳನ್ನು ಪೂಜಿಸುವುದರಿಂದ ಮನಸ್ಸು ಬೇರೆ ಕಡೆಗೆ ಚಲಿಸದೆ ಪೂಜಿಸಲ್ಪಡುವುದರಲ್ಲಿ ಏಕಾಗ್ರತೆಯುಂಟಾಗುವುದು ನಿಜ. ಆದರೆ ವಿವಿಧ ಆಕಾರಗಳೂ ಆಯುಧಗಳೂ ಮನಸ್ಸನ್ನು ಕೂಡಲೆ ಏಕಾಗ್ರತೆಗೆ ತರಲು ಅಡ್ಡಿಯೆನ್ನಬಹುದು. ಅಲ್ಲದೆ ಪರಬ್ರಹ್ಮವು ನಿರಾಕಾರವೆಂದು ಭಾವಿಸುವ ಉತ್ತಮ ಅಧಿಕಾರಿಗೆ ಲಿಂಗರೂಪವು ಮನಸ್ಸನ್ನು ನಿಲ್ಲಿಸಲು ಹೆಚ್ಚು ಉಪಯೋಗವಾಗುವುದು. ನಿರಾಕಾರವಸ್ತುವಿನ ಪ್ರತೀಕವಾಗಿ ಲಿಂಗಗಳನ್ನು ದೇವಸ್ಥಾನಗಳಲ್ಲಿ ಸ್ಥಾಪಿಸಿರುವರಾದರೂ ಅದಕ್ಕೆ ಅನೇಕ ವೇಳೆ ಬೆಳ್ಳಿಯ ಕಣ್ಣುಗಳನ್ನೋ, ಕೋರೆ ಮಿಾಸೆಗಳನ್ನೋ, ಮುಖದ ಆಕಾರದ ಲೋಹದ ಗವುಸಣಿಗೆಗಳನ್ನೋ ಹಾಕುವುದು ತಿಳಿಯದವರ ಕೆಲಸ. ಹೀಗೆ ಮಾಡದಿರುವ ಲಿಂಗಗಳು ಮನಸ್ಸನ್ನು ಕೇಂದ್ರೀಕರಿಸಲು ಸಹಾಯ ಮಾಡುವುವು. "ಮೆಸ್ಮರಿಸಂ" ವಿದ್ಯೆಯನ್ನು ಅಭ್ಯಾಸಮಾಡುವವರು ಬಿಳಿಯಗೋಡೆಯ ಮೇಲೆ ಗುಂಡು ಕರಿಯ ಚುಕ್ಕೆಯನ್ನಿಟ್ಟು ಮನಸ್ಸನ್ನು ಅದರಮೇಲೆ ಕೇಂದ್ರೀಕರಿಸಿ ಮನೋನಿಗ್ರಹವನ್ನು ಪಡೆಯಲು ಅಭ್ಯಾಸ ಮಾಡುವರು. ಕಪ್ಪುಬಣ್ಣದ ಗುಂಡಾದ ಲಿಂಗವು ಏಕಾಗ್ರಚಿತ್ತವನ್ನುಂಟುಮಾಡಲು ಹೆಚ್ಚು ಸಹಾಯಮಾಡುವುದು. ಏಕೆಂದರೆ ಅದರಲ್ಲಿ ದೈವೀಭಾವನೆಯು ಹೊಂದಿಕೊಂಡಿರುವುದರಿಂದ ಮನಸ್ಸಿನ ಏಕಾಗ್ರತೆಯು ಬಹಳ ಸುಲಭವಾಗಿ ಬರುವುದು. ಇದು ಹೇಗೇ ಇರಲಿ ಎಲ್ಲಿಯೋ ಇರುವ ಲಿಂಗವನ್ನು ನೆನೆಸಿಕೊಳ್ಳುವುದಕ್ಕಿಂತ, ಅದರ ಬಳಿ ಹೋಗಿ ನೋಡುವುದಕ್ಕಿಂತ, ಹಾಗೂ ಪೂಜಿಸುವುದಕ್ಕಿಂತ, ಇಷ್ಟಲಿಂಗವನ್ನು ಸುಮ್ಮನೆ ಧರಿಸಿರುವುದು ಉತ್ತಮ.

ನೆನೆವುದರಿಂ ನಿರೀಕ್ಷಿಸುವುದತ್ಯಧಿಕಂ, ನೆನಹಿಂ ನಿರೀಕ್ಷೆಯಿಂ ।
ದನುದಿವಸಂ ಸಮರ್ಚಿಸುವುದತ್ಯಧಿಕಂ, ನೆನಹಿಂ ನಿರೀಕ್ಷೆಯಿಂ ॥
ದನುದಿವಸಂ ಸಮರ್ಚಿಪುದರಿಂ ಶಿವಲಿಂಗಮನಂಗದಲ್ಲಿ ಸು ।
ಮ್ಮನೆ ಧರಿಸಿರ್ಪುದತ್ಯಧಿಕಮತ್ಯಧಿಕಂ ನಿರುತಂ ಶಿವಾಧವಾ ॥

ಆದರೆ ಇಷ್ಟಲಿಂಗ ಪೂಜೆಯು ಇಂತಹ ಸಾಮಾನ್ಯ ಫಲಗಳಿಗಿಂತಲೂ ಹೆಚ್ಚಿನ ಫಲಗಳಿಗಾಗಿ ಮಾಡತಕ್ಕುದಾಗಿದೆ. ಮೊದಲನೆಯದಾಗಿ ಇದು ಗುಡಿಗಳ ಲಿಂಗದಂತೆ ಒಂದು ಪ್ರತಿಮೆ ಅಥವಾ ಪ್ರತೀಕವಲ್ಲ. ದೇವಸ್ಥಾನದ ಲಿಂಗಗಳನ್ನಾಗಲೀ, ಪ್ರತಿಮೆಗಳನ್ನಾಗಲೀ ಪೂಜಿಸುವಾಗ ದೇವರನ್ನು ಅದರಲ್ಲಿ ನೆಲಸಬೇಕೆಂದು ಮಂತ್ರದಿಂದ ಆವಾಹನ ಮಾಡುವರು; ಪೂಜೆಯಾದ ನಂತರ ವಿಸರ್ಜನೆ ಮಾಡುವರು. ಇಷ್ಟಲಿಂಗ ಪೂಜೆಯಲ್ಲಿ ಹೀಗೆ ಮಾಡುವುದಿಲ್ಲ; ಕಾರಣವೇನೆಂದರೆ ಶಿಷ್ಯನ ಬ್ರಹ್ಮರಂಧ್ರದಲ್ಲಿರುವ ಚಿತ್ಕಲೆಯನ್ನು ಗುರುವು ಹಸ್ತಮಸ್ತಕಸಂಯೋಗದಿಂದ ತೆಗೆದು ಲಿಂಗದಲ್ಲಿ ಪ್ರತಿಷ್ಠಿಸಿರುವನಾಗಿ ಅದು ಅದರಲ್ಲಿ ಯಾವಾಗಲೂ ಇದ್ದೇ ಇರುವುದು. ಶಿಷ್ಯನು ಮಾಡುವ ಪ್ರತಿಯೊಂದು ಕಾರ್ಯವೂ ಲಿಂಗಪೂಜೆಯೇ ಆಗಿರುವುದು;

ಅವನು ಸರ್ವಾಂಗಲಿಂಗಿ ಹೇಗೆಂಬುದನ್ನು ಮುಂದೆ ವಿವರಿಸಲಾಗುವುದು. ಹೀಗೆ ಇಷ್ಟಲಿಂಗಕ್ಕೂ ಗುಡಿಯ ಲಿಂಗಕ್ಕೂ ಮಹತ್ತರ ವ್ಯತ್ಯಾಸವಿದೆ:

> ಆಹ್ವಾನವಿಲ್ಲ ಪ್ರಾಣಲಿಂಗವಾಗಿ; ವಿಸರ್ಜನವಿಲ್ಲ ಲಿಂಗ ನೆಲೆಗೊಂಡಿಪ್ಪುದಾಗಿ; ಇದು ಕಾರಣ ಆಹ್ವಾನ ವಿಸರ್ಜನವಿಲ್ಲ. ಶರಣನ ಪರಿ ಬೇರೆ. ಅಂಗಸಂಗವೇ ಲಿಂಗಸಂಗ; ಲಿಂಗ ಸಂಗವೇ ಮನ, ಕೂಡಲ ಸಂಗನ ಶರಣ ಸುಯಿಧಾನಿ.

ದೇವಸ್ಥಾನದಲ್ಲಿ ಪ್ರತಿಮೆ ಅಥವಾ ಪ್ರತೀಕವನ್ನು ಪೂಜಿಸುವುದರಲ್ಲಿ ತನಗಿಂತಲೂ ಅನ್ಯವೂ ಶ್ರೇಷ್ಠವೂ ಆದ ಮತ್ತೊಂದರ ಪೂಜೆಯ ದ್ವೈತಭಾವನೆಯಿದೆ. ಇಷ್ಟಲಿಂಗ ಪೂಜೆಯಲ್ಲಿ ಈ ದ್ವೈತಭಾವನೆಯಿಲ್ಲ. ಅದರಲ್ಲಿರುವುದು **ಅಹಂಗ್ರಹೋಪಾಸನೆ**. ತಾನು ಶಿವನಾಗಿ ಶಿವನನ್ನು ಪೂಜಿಸುವುದು ಇಷ್ಟಲಿಂಗ ಪೂಜೆಯ ವೈಶಿಷ್ಟ್ಯ. ಆದುದರಿಂದಲೇ ಗುಡಿಯಲ್ಲಿ ಪೂಜಿಸುವ ಲಿಂಗದ ಪಾಣಿಬಟ್ಟಲು ನಮ್ಮ ಬಲಗಡೆಗೆ ಇರುವುದು. ಲಿಂಗದ ಬಲವು ನಮ್ಮ ಎಡಕ್ಕೂ, ಅದರ ಎಡವು ನಮ್ಮ ಬಲಕ್ಕೂ ಇರುವುದು. ಇಷ್ಟಲಿಂಗದ ಪಾಣಿಬಟ್ಟಲನ್ನು ನಮ್ಮ ಎಡಕ್ಕೆ ನಾವು ಇಟ್ಟುಕೊಳ್ಳುವುದರಿಂದ, ಲಿಂಗದ ಎಡಬಲಗಳು ನಮ್ಮ ಎಡಬಲಗಳಿಗನುಸಾರವಾಗಿಯೇ ಇರುವುವು. ನಮ್ಮನ್ನು ನಾವು ಲಿಂಗಪೂಜೆಯಲ್ಲಿ ಕಾಣಲು ಹೀಗೆ ಮಾಡುವುದು ಅವಶ್ಯ. ಗುಡಿಯ ಲಿಂಗದ ಉಪಾಸನೆಯು ಅದರ ಉಪಾಸನೆಯಲ್ಲೇ ಮುಕ್ತಾಯವಾಗುವುದು. ಆದರೆ ಇಷ್ಟಲಿಂಗ ಪೂಜೆಯು ಪ್ರಾಣಲಿಂಗ ಮತ್ತು ಭಾವಲಿಂಗಗಳ ಅನುಸಂಧಾನಕ್ಕಾಗಿ ಮಾಡುವ ಕ್ರಿಯೆ. ಇಷ್ಟಲಿಂಗವೊಂದು ದರ್ಪಣವಿದ್ದಂತೆ; ಸಾಧಕನಿಗೆ ತಾನು ತನ್ನನ್ನು ಕಾಣುವ ಸಲುವಾಗಿರುವ ಕನ್ನಡಿಯಂತಹ ಅದೊಂದು ಸಾಧನ. ಅದನ್ನು ಭಕ್ತಿಯಿಂದ ಪೂಜಿಸುವುದು ಕನ್ನಡಿಯನ್ನು ಬೆಳಗುವಂತಹ ಕ್ರಿಯೆ.

> ಇಷ್ಟಲಿಂಗ ಪ್ರಾಣಲಿಂಗವೆಂಬುದನಾರು ಬಲ್ಲರು? ಇಷ್ಟಲಿಂಗವೀಗ ದರ್ಪಣ; ಪ್ರಾಣಲಿಂಗ ಪ್ರತಿಬಿಂಬ. ದರ್ಪಣ ಮುಸುಳಿಸಿದರೆ ಪ್ರಾಣಲಿಂಗವ ಕಾಣಬಹುದೆ? ಇಷ್ಟಪ್ರಾಣ ತೃಪ್ತಿಯೆಂಬರು ನೋಡಾ! ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರ ಮುಸುಳಿಸಿದರೆ ಪ್ರಾಣಲಿಂಗವ ಕಾಣಬಹುದೆ?
>
> ಸಾಕ್ಷಿ:—ಇಷ್ಟಲಿಂಗಮವಿಶ್ವಸ್ಯ ಪ್ರಾಣಲಿಂಗಂ ನ ಪಶ್ಯತಿ ।
> ದರ್ಪಣ ಪ್ರತಿಬಿಂಬಾನಾಂ ಯಥಾ ರೂಪಂ ತಥಾ ಭವೇತ್ ॥

ಇಷ್ಟಲಿಂಗ ಪೂಜೆಯಲ್ಲಿ ಇಷ್ಟಲಿಂಗವನ್ನೇ ನೋಡುತ್ತಲಿರುವುದು ಸಾಧ್ಯವಲ್ಲದೆ ಅದರ ಮೂಲಕ ಪ್ರಾಣಲಿಂಗಭಾವಲಿಂಗಾನುಸಂಧಾನಗಳು ಹೇಗಾಗುವುವೆನ್ನಬಹುದು. ಕನ್ನಡಿಯನ್ನು ಹಾವಭಾವದಿಂದ ನೋಡುವ ಸ್ತ್ರೀಗೆ ಅದರಲ್ಲಿ ತನ್ನನ್ನು ತಾನು ನೋಡುವ ಮೊದಲು ಕಾಣುವುದು ಕನ್ನಡಿಯೇ ಆದರೂ, ಆಮೇಲೆ ಕಾಣುವುದು ಅವಳ ಮಂಗಳ ಮೂರ್ತಿಯಲ್ಲದೆ ಕನ್ನಡಿಯಲ್ಲ.

> ನೋಡದ ಮುನ್ನ ದರ್ಪಣದ ಭಾವಮುದುಂಟು ವಿಭ್ರಮಂ ।
> ಗೂಡಿ ವಿರಾಜಿಸುತ್ತಭಿಮುಖಾಸ್ಪದಮಾದ ನಿಜಸ್ವರೂಪಮಂ ॥
> ನೋಡಿದ ನಂತರಂ ಮರಳಿ ದರ್ಪಣದ ಭಾವಮುದುಂಟೆ? ತತ್ವಮುಂ ।
> ನೋಡದ ಮುನ್ನ ಮಾಯೆ; ಬಳಿಕೆಲ್ಲಿಯ ಮಾಯೆ ಬಿಡಾ ಶಿವಾಧವಾ ॥

ಮೊದಲು ಮೊದಲು ಇಷ್ಟಲಿಂಗದಲ್ಲಿಯೇ ಆಸಕ್ತನಾಗಿ ಅದನ್ನು ಪೂಜಿಸುತ್ತಿದ್ದರೂ, ಅದರಿಂದ ಪ್ರಾಣಲಿಂಗಾನುಸಂಧಾನವನ್ನೂ, ಭಾವಲಿಂಗಾನುಸಂಧಾನವನ್ನೂ ಮಾಡಿ, "ತನ್ನನೆ

ನೋಳ್ಪನೈಸೆ, ಲೈಂಗಿಕ ನಿಯಮಾರ್ಚನಾನುಭವ ದರ್ಪಣದೊಳ್ ಶರಣಂ?'' ಎಂಬಂತೆ ಸೋಹಂಭಾವನೆಯನ್ನು ಪಡೆವುದಕ್ಕಾಗಿಯೇ ಇಷ್ಟಲಿಂಗವನ್ನು ಪೂಜಿಸುವುದು.

## ಇಷ್ಟಪ್ರಾಣ ಭಾವಲಿಂಗಗಳ ಸಂಬಂಧ

ಇನ್ನು ಇಷ್ಟಪ್ರಾಣ ಭಾವಲಿಂಗಗಳ ಸಂಬಂಧವೇನೆಂಬುದನ್ನು ನೋಡುವ. ಮನುಷ್ಯನಿಗೆ ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ತನುಗಳಿರುವುದು ಪ್ರಸಿದ್ಧವಾಗಿದೆ. ಋಗ್ವೇದದ (೧-೧೬೪-೪೮)ಲ್ಲಿ "ಭೂಮ್ಯಾ ಅಸುರ ಸೃಗಾತ್ಮಾ'' ಎಂಬ ಮಂತ್ರಭಾಗಕ್ಕೆ ಸಾಯಣ ಭಾಷ್ಯವಿದು. "ಭೂಮ್ಯಾಃ ಸಂಬಂಧಿ ಪಾರ್ಥಿವಂ ಸ್ಥೂಲಶರೀರಂ, ಅಸುಃ ಪ್ರಾಣಃ ತದುಪಲಕ್ಷಿತಂ ಸೂಕ್ಷ್ಮಶರೀರಂ····ಆತ್ಮಾ, ತೈಃ''—ಪ್ರಾಣದಿಂದ ಉಪಲಕ್ಷಿತವಾದ ಸೂಕ್ಷ್ಮಶರೀರವೂ, ರಕ್ತಮಾಂಸಗಳಿಂದ ಉಪಲಕ್ಷಿತವಾದ ಸ್ಥೂಲಶರೀರವೂ, ಆತ್ಮವೂ ಈ ಮಂತ್ರದಲ್ಲಿ ವಿವಕ್ಷಿತವಾಗಿವೆ. ಸ್ಥೂಲತನುವಿಗೆ ಸಂಬಂಧಪಟ್ಟುದು ಇಷ್ಟಲಿಂಗ; 'ಪ್ರಾಣ' ದಿಂದ ಉಪಲಕ್ಷಿತವಾದ ಸೂಕ್ಷ್ಮತನುವಿಗೆ ಸಂಬಂಧಪಟ್ಟುದೇ ಪ್ರಾಣಲಿಂಗ; ಕಾರಣ ತನುವಿಗೆ ಸಂಬಂಧಪಟ್ಟುದೇ ಭಾವಲಿಂಗ. "ತಸ್ಯ ಭಾಸಾ ಸರ್ವಮಿದಂ ವಿಭಾತಿ'' ಎಂಬ ಉಪನಿಷದ್ವಾಣಿಯಲ್ಲಿ ಹೇಳಿದಂತೆ ಯಾವ ಮೂಲಚೈತನ್ಯದ ಬೆಳಗಿನಿಂದ ಎಲ್ಲವೂ ಬೆಳಗುವುದೋ ಆ ಮೂಲಚೈತನ್ಯವೇ ಭಾವಲಿಂಗ. ಅದರ ಪ್ರಭೆಯಿಂದ ಉರಿಯುವ ದೀಪವೇ ಪ್ರಾಣಲಿಂಗ. ಈ ದೀಪದ ಕಿರಣಂಗಳಿಂದಲೇ ಎಲ್ಲ ಕರಣಂಗಳೂ ಚೈತನ್ಯವನ್ನು ಪಡೆಯುವುವು. ಇನ್ನೊಂದು ಉಪಮಾನವನ್ನು ಕೊಡಬಹುದು. ಮೂಲ ವಿದ್ಯುತ್ ಕೇಂದ್ರದಿಂದ ಹೊರಡುವ ವಿದ್ಯುತ್ ಪ್ರವಾಹದಿಂದ ದೀಪಗಳು ಉರಿಯುವುವು, ಬೀಸಣಿಗೆ ಬೀಸುವುದು, ಚಕ್ರಗಳು ತಿರುಗುವುವು, ಕುಟ್ಟುವ ಯಂತ್ರ ಕುಟ್ಟುವುದು, ಬೀಸುವ ಯಂತ್ರ ಬೀಸುವುದು, ಹಾಡುವ ಯಂತ್ರ ಹಾಡುವುದು. ವಿದ್ಯುತ್ ಕೇಂದ್ರದಂತೆ ಭಾವಲಿಂಗ, ವಿದ್ಯುತ್ ಪ್ರವಾಹವನ್ನು ಪ್ರಾಣಲಿಂಗಕ್ಕೆ ಹೋಲಿಸಬಹುದು. ಇದರ ಶಕ್ತಿಯಿಂದ ಯಂತ್ರಗಳಂತೆ ಹಸ್ತಾದಿ ಅಂಗಗಳು ಅವುಗಳ ಕಾರ್ಯಗಳನ್ನು ಮಾಡುವುವು. ವಿದ್ಯುತ್ ಪ್ರವಾಹದಿಂದಲೇ ಅಯಸ್ಕಾಂತ (Magnet) ವನ್ನು ಮಾಡಬಹುದು. ಇದು ಇಷ್ಟಲಿಂಗದಂತೆ; ಈ ಅಯಸ್ಕಾಂತದಿಂದ ವಿದ್ಯುತ್ ಪ್ರವಾಹವನ್ನು ಹೊರಡಿಸಬಹುದು. ಗುರುವು ಮೂಲಚೈತನ್ಯವನ್ನು ಹಸ್ತಮಸ್ತಕಸಂಯೋಗದಿಂದ ಗ್ರಹಿಸಿ ಇಷ್ಟಲಿಂಗದಲ್ಲಿ ಪ್ರತಿಷ್ಠಿಸುವನು. ಪ್ರಾಣಲಿಂಗದಲ್ಲಿರುವುದಾದರೂ ಇದೇ ಚೈತನ್ಯವೇ.

ಅಂತರಂಗದೊಳಗಿರ್ದ ನಿರವಯ ಲಿಂಗವನು ಸಾವಯವ ಲಿಂಗವ ಮಾಡಿ ಶ್ರೀ ಗುರುಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟ ಲಿಂಗವು ಅಂತರಂಗವನಾವರಿಸಿ, ಅಂತರಂಗದ ಕರಣಂಗಳೇ ಕಿರಣಂಗಳಾಗಿ, ಆ ಬೆಳಗುವ ಚಿದಂಶಿಕವೆ ಪ್ರಾಣಲಿಂಗವು; ಆ ಮೂಲ ಚೈತನ್ಯವೇ ಭಾವಲಿಂಗವು—(ಲಿಂಗಲೀಲಾ ವಿಲಾಸ, ಪುಟ ೨೯೫).

ಪ್ರಾಣಲಿಂಗವಿದನು····ಜಾಣಿಸಿದನೆ ಕೃತಾರ್ಥನು।····ಪಲವು ವಿವರವಾಂತ ಕುಂಭದೊಳಗಣಚಲದೀಪದೊಂದು। ಬೆಳಗು ಮಸುಗುವಂತೆ ದೇಹಕರಣ ನಿಕರಮುಖದೊಳು॥ ಪೊಳೆದು ವಿಶ್ವದೃಶ್ಯವೀಧಿಗಳನು ಬೇರೆ ಬೇರೆ ತೋರ್ಕೆ। ಗೊಳಿಪ ಚಾರು ಚಿತ್ಕಲ ಪ್ರಪೂರ್ಣ ಶಂಭುಲಿಂಗವೆ॥ ಭಾವಲಿಂಗವಿದನೆ ಬಿಡದೆ ನೀನು ಪರಿಭಾವಿಸು····। ದೀಪವ ದೀಪದ ಕಿರಣವತಾನೆ। ವ್ಯಾಪಿಸಿ ತೋರುವ ಪ್ರಭೆಯಂತೆ। ದೂಪಿಸಿ ಬೆಳಗುವಿಷ್ಟಪ್ರಾಣ। ಲಿಂಗಾರೋಹವಿಲ್ಲದ ನಿರುಪಾಧಿಯ॥—(ನಿಜಗುಣರ ಕೈವಲ್ಯ ಪದ್ಧತಿ).

ನವದ್ವಾರಗಳು ದೇಹವೆಂಬ ಘಟದೊಳಗಿರುವ ದೀಪದ ಕಿರಣವು, ಕಣ್ಣು ಕಿವಿ ಮೊದಲಾದ ದ್ವಾರಗಳಲ್ಲಿ ಹೊರಸೂಸುವುದು. ಇಲ್ಲಿ ದೀಪವನ್ನು ಪ್ರಾಣಲಿಂಗಕ್ಕೆ ಹೋಲಿಸಿದೆ. ದೀಪಕ್ಕೂ ಅದರ ಕಿರಣಕ್ಕೂ ದೀಪ್ತಿಯನ್ನು ಕೊಡುವ ಮೂಲತೇಜಃಪುಂಜವೇ ಭಾವಲಿಂಗ.

ಕೇನೋಪನಿಷತ್ತಿನ ಸಹಾಯದಿಂದ ಈ ವಿಷಯವನ್ನು ಹೆಚ್ಚು ಸ್ಪಷ್ಟಪಡಿಸಬಹುದು. ಆ ಉಪನಿಷತ್ತು ಹೀಗೆ ಪ್ರಾರಂಭವಾಗುವುದು :

"ಕೇನೇಷಿತಂ ಪತತಿ ಪ್ರೇಷಿತಂ ಮನಃ । ಕೇನ ಪ್ರಾಣಃ ಪ್ರಥಮಃ ಪ್ರೈತಿಯುಕ್ತಃ ।
ಕೇನೇಷಿತಾಂ ವಾಚಮಿಮಾಂ ವದಂತಿ । ಕ ಉದೇವೋ ಯುನಕ್ತಿ

ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋಯದ್ । ವಾಚೋಹವಾಚಂ ಸ
ಉಪ್ರಾಣಸ್ಯ ಪ್ರಾಣಃ ।"

ಇದರ ಕನ್ನಡ ಅನುವಾದವಿದು :

ಯಾರಿಚ್ಛೆಯಿಂ ಮನಮೆರುಗುವುದು ವಿಷಯಗಳೊಳ್ ।
ಯಾರಿಂದಲೊಡಗೂಡಿ ಮೊದಲುಸಿರು ಚಲಿಸುವುದು ।
ಯಾರಿಚ್ಛೆಯಿಂ ವಾಕ್ಕುಮಾತುಗಳನಾಡುವುದು ।
ಯಾರೊ ಕಣ್ಣುಕಿವಿಗಳಂ ನಿಯಮಿಸುವ ದೇವನವಂ ॥
ಅದು ಕಿವಿಯ ಒಳಕಿವಿಯು, ಅದು ಮನದ ಒಳಮನವು ।
ಅದು ವಾಕ್ಕಿನೊಳ ವಾಕ್ಕದು ಪ್ರಾಣದೊಳ ಪ್ರಾಣ ॥

ಕಣ್ಣು ಕಿವಿ ವಾಕ್ಕು ಮನಸ್ಸು ಪ್ರಾಣ ಮೊದಲಾದವುಗಳು ಸ್ವಶಕ್ತಿಯಿಂದ ಕೆಲಸ ಮಾಡುವುವೋ ಅಥವಾ ಅವುಗಳಿಗಿಂತಲೂ ಮಿಗಿಲಾದ ಪರತರ ಶಕ್ತಿಯಿಂದ ಅವುಗಳ ಕೆಲಸ ವನ್ನು ಮಾಡುವುವೋ ಎಂಬ ಪ್ರಶ್ನೆಯಿಂದ ಪ್ರಾರಂಭವಾಗುವುದು ಕೇನೋಪನಿಷತ್ತು. ಕಣ್ಣಿಗೆ ಕಣ್ಣು ಕಿವಿಗೆ ಕಿವಿ ಮನಕ್ಕೆ ಮನಸ್ಸು ಪ್ರಾಣಕ್ಕೆ ಪ್ರಾಣವಾಗಿರುವ ಪರಮ ಚೈತನ್ಯವೇ ಕಣ್ಣು, ಕಿವಿ, ಮನಸ್ಸು, ಪ್ರಾಣಗಳೇ ಮೊದಲಾದವುಗಳಿಗೆ ಅವವುಗಳ ಶಕ್ತಿಯನ್ನು ಕೊಡು ವುದು; ಆದರೆ ಕಣ್ಣು ಕಿವಿ, ಮನಸ್ಸು ಮೊದಲಾದವು ತಮಗೆ ಶಕ್ತಿಯನ್ನು ಕೊಡುವ ಪರಾತ್ಪರವನ್ನು ಅರಿಯವು, "ನ ತತ್ರ ಚಕ್ಷುರ್ಗಚ್ಛತಿ; ನಾ ವಾಗ್ಗಚ್ಛತಿ ನೋ ಮನಃ", —ಎಂಬುದೇ ಮೇಲಿನ ಪ್ರಶ್ನೆಗೆ ಉತ್ತರ. ಇದೇ ವಿಷಯವನ್ನು ಸೊಗಸಾಗಿ ವಚನವೊಂದು ವಿವರಿಸುವುದು :

ಕಣ್ಣೊಳಗೆ ಕಣ್ಣಿದ್ದು ಕಾಣಲರಿಯರಯ್ಯಾ! ಕಿವಿಯೊಳಗೆ ಕಿವಿಯಿದ್ದು ಕೇಳಲರಿಯ ರಯ್ಯಾ! ಘ್ರಾಣದೊಳಗೆ ಘ್ರಾಣವಿದ್ದು ಆಘ್ರಾಣಿಸಲರಿಯರಯ್ಯಾ! ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲರಿಯರಯ್ಯಾ! ತ್ವಕ್ಕಿನೊಳಗೆ ತ್ವಕ್ಕಿದ್ದು ಸ್ಪರ್ಶಿಸಲರಿಯರಯ್ಯಾ! ಪ್ರಾಣದೊಳಗೆ ಪ್ರಾಣವಿದ್ದು ಪ್ರಾಣದ ಪರಿಯನರಿಯರಯ್ಯಾ! ಕಾಯದೊಳಗೆ ಕಾಯ ವಿದ್ದು ಬಿಡದು ಬೇರಾಗದು, ಕೂಡಲ ಸಂಗಮದೇವಾ, ಸೀವಿಕ್ಕಿದ ಅಣಕದ ತೊಡಕಿನ ಭೇದವ ಭೇದಿಸ ಬಾರದಯ್ಯಾ!

ಕಣ್ಣಿಗೆ ಕಣ್ಣಾಗಿ ಮನಕ್ಕೆ ಮನವಾಗಿ ಪ್ರಾಣಕ್ಕೆ ಪ್ರಾಣವಾಗಿ ಇರುವ ಪರಮ ಚೈತನ್ಯವೇ ಭಾವಲಿಂಗ. ಈ ಕಣ್ಣು ಕಿವಿ ಮೊದಲಾದ ಅಂಗಗಳಿಗೆ ಆ ಮೂಲ ಚೈತನ್ಯವು ಕೊಡುವ ಚೇತನವೇ ಪ್ರಾಣಲಿಂಗ. ವಿದ್ಯುತ್ ಕೇಂದ್ರದಿಂದ ಹರಿದು ಬಂದು ನಾನಾ ಯಂತ್ರಗಳನ್ನು ಸಂಚಲನಗೊಳಿಸುವ ವಿದ್ಯುತ್ ಪ್ರವಾಹದಂತೆ ಮೂಲ ಚೈತನ್ಯದ ಚೈತನ್ಯಪ್ರವಾಹವು

ದೇಹಾದ್ಯಂತ ಪ್ರಾಣರೂಪವಾಗಿ ಹರಿದು ಚೇತನಗೊಳಿಸುವುದು. ಇದೇ ಚೈತನ್ಯವು ಶಿಖಾಗ್ರದಲ್ಲಿ ಕೇಂದ್ರೀಕರಿಸಿರುವುದು, ಅದನ್ನು ಗುರುವು ಹಸ್ತ ಮಸ್ತಕಸಂಯೋಗದಿಂದ ಗ್ರಹಿಸಿ ಇಷ್ಟಲಿಂಗದಲ್ಲಿ ಪ್ರತಿಷ್ಠಿಸುವುದು.

ಇನ್ನು ಆಚರಣೆಯ ದೃಷ್ಟಿಯಿಂದ ನೋಡಿದರೆ ಲಿಂಗಾಂಗಿಯು ಮಾಡುವ ಕೆಲಸವೆಲ್ಲವೂ ಲಿಂಗಾರ್ಪಿತವೇ ಆಗಬೇಕು. **"ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ"** ಎನ್ನುವಂತಾಗಬೇಕು. ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿದಂತೆ **"ತೇನ ತ್ಯಕ್ತೇನ ಭುಂಜೀಥಾಃ"** ಎಂಬಂತೆ ಎಲ್ಲವನ್ನೂ ಪರಮಾತ್ಮನ ಪ್ರಸಾದರೂಪವಾಗಿ ಅನುಭವಿಸಬೇಕು. ನಾವು ಅನುಭವಿಸುವುದೆಲ್ಲ ಪಂಚೇಂದ್ರಿಯಗಳಿಂದ ತಾನೆ; ಕಣ್ಣಿನಿಂದ ನೋಡುತ್ತೇವೆ, ಕಿವಿಯಿಂದ ಕೇಳುತ್ತೇವೆ, ಮೂಗಿನಿಂದ ವಾಸನೆ ನೋಡುತ್ತೇವೆ, ನಾಲಿಗೆಯಿಂದ ರುಚಿ ನೋಡುತ್ತೇವೆ, ಚರ್ಮದಿಂದ ಸ್ಪರ್ಶಿಸುತ್ತೇವೆ. ಇವೆಲ್ಲವೂ ಲಿಂಗಾರ್ಪಿತವಾಗಬೇಕಾಯಿತು. ಕಣ್ಣು ಮೊದಲಾದ ಇಂದ್ರಿಯಗಳಿಗಾದರೂ ನೋಡುವುದೇ ಮೊದಲಾದ ಕೆಲಸ ಮಾಡಲು ಚೈತನ್ಯವು ಪರಾತ್ಪರದಿಂದ ಬಂದಿರುವುದಷ್ಟೆ. ಆ ಚೈತನ್ಯಗಳಿಗೆ ವೀರಶೈವ ಪಾರಿಭಾಷಿಕ ಹೆಸರುಗಳುಂಟು. ಕಣ್ಣು ನೋಡುವ ಚೈತನ್ಯಕ್ಕೆ ಶಿವಲಿಂಗವೆಂದೂ, ಕಿವಿಯು ಕೇಳುವ ಚೈತನ್ಯಕ್ಕೆ ಪ್ರಸಾದಲಿಂಗವೆಂದೂ, ನಾಲಿಗೆ ರುಚಿ ನೋಡುವ ಚೈತನ್ಯಕ್ಕೆ ಗುರುಲಿಂಗವೆಂದೂ, ತ್ವಕ್ಕು ಸ್ಪರ್ಶಿಸುವ ಚೈತನ್ಯಕ್ಕೆ ಜಂಗಮಲಿಂಗವೆಂದೂ, ನಾಸಿಕವು ಆಘ್ರಾಣಿಸುವ ಚೈತನ್ಯಕ್ಕೆ ಆಚಾರಲಿಂಗವೆಂದೂ ಹೆಸರು. ಮನಸ್ಸು ಮನನ ಮಾಡುವುದಷ್ಟೆ. ಆ ಚೈತನ್ಯಕ್ಕೆ ಮಹಾಲಿಂಗವೆಂದು ಹೆಸರು. ಹೀಗೆ ಭಕ್ತನು ಸರ್ವಾಂಗ ಲಿಂಗಿ. ಅವನು ನೋಡುವುದೆಲ್ಲವೂ ಶಿವಲಿಂಗಕ್ಕೆ ಅರ್ಪಿತವಾಗಬೇಕಾದುದರಿಂದ ಅವನು ಕೆಟ್ಟದ್ದನ್ನು ನೋಡನು. ಕೇಳುವುದೆಲ್ಲವೂ ಪ್ರಸಾದ ಲಿಂಗಕ್ಕೆ ಅರ್ಪಿತವಾಗಬೇಕಾದುದರಿಂದ ಕೆಟ್ಟದ್ದನ್ನು ಕೇಳನು. **"ಭದ್ರಂ ಕರ್ಣೇಭಿಃ ಶೃಣು····ಭದ್ರಂ ಪಶ್ಯೇಮಾಕ್ಷಿಭಿಃ"** ಎನ್ನುವಂತೆ ಆಗಬೇಕು. ಹಾಗೆಯೇ ವಾಸನೆ ನೋಡುವುದು ತಿನ್ನುವುದು ಸ್ಪರ್ಶಿಸುವುದು ಅಷ್ಟೇ ಅಲ್ಲದೆ ಮನಸ್ಸಿನಲ್ಲಿ ಸಂಕಲ್ಪ ಮಾಡುವುದೂ ಸಹಾ ಆಯಾ ಲಿಂಗಗಳಿಗೆ ಅರ್ಪಿತವಾಗಿಯೇ ಆಗಬೇಕು. ಎಲ್ಲವೂ ಪ್ರಸಾದರೂಪದಲ್ಲಿಯೇ ಗ್ರಹಿಸತಕ್ಕುದಾಗಬೇಕು. ನೆಲವೇ ಪೋಲೀಸಿನವನಾದರೆ ಕಳ್ಳನಿರಲು ಜಾಗವಿಲ್ಲವಷ್ಟೆ. ಹಾಗೆ ಅಂಗಾಂಗವೆಲ್ಲವೂ ಲಿಂಗವಾದ ಸರ್ವಾಂಗಲಿಂಗಿಗೆ ಅನರ್ಪಿತದ ಭಯವೇ ಇಲ್ಲ.

> "ನೆಲ ತಳವಾರನಾದಡೆ ಕಳ್ಳಂಗೆ ಹೋಗಲೆಡೆಯುಂಟೆ? ಸರ್ವಾಂಗಲಿಂಗಿಗೆ ಅನರ್ಪಿತ ಉಂಟೇ ನಿಷ್ಕಳಂಕ ಮಲ್ಲಿಕಾರ್ಜುನಾ."

> "ನಾಸಿಕವಾಚಾರ, ಜಿಹ್ವೆ ಗುರು, ಕಂಗಳು (ಶಿವ) ಲಿಂಗ, ತ್ವಕ್ಕು ಜಂಗಮಲಿಂಗ, ಕರ್ಣ ಪ್ರಸಾದ, ಭಾವ ಮಹಾಲಿಂಗ, ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ ಇಂತು ಸರ್ವಾಂಗ ಪ್ರಸಾದಿ.

> "ಶಬ್ದ, ಸ್ಪರ್ಶ, ರೂಪು, ರಸ, ಗಂಧ ಪಂಚೇಂದ್ರಿಯಗಳು ಮೊದಲಾಗಿ ನಡೆದವು ಲಿಂಗದತ್ತತ್ತಲೆ, ತಮತಮಗೆ ಬಂದ ಭೋಗಸುಖ ಲಿಂಗಾರ್ಪಿತವೆಂದು ನಡೆದವು ಲಿಂಗದತ್ತತ್ತಲೆ, ಕೂಡಲ ಚೆನ್ನಸಂಗಯ್ಯಾ ಲಿಂಗನಿವಾಸಿ ಶರಣಂಗೆ.

ಮೇಲೆ ಹೇಳಿದ ವಿವರಗಳಿಂದ ವೀರಶೈವರಲ್ಲಿನ ಲಿಂಗದ ಕಲ್ಪನೆಯ ಪರಿಚಯವಾಗಿರಬೇಕು. ಈಗ ವೀರಶೈವರು ಇಷ್ಟಲಿಂಗವನ್ನು ಹೆಬ್ಬೆರಳಿನಷ್ಟು ಸಣ್ಣಗೆ ಏಕೆ ಇಟ್ಟುಕೊಂಡಿರುವರು

ನೋಡುವ. ಛಾಂದೋಗ್ಯೋಪನಿಷತ್ತಿನಲ್ಲಿ ಆತ್ಮನು ಹೃದಯದಲ್ಲಿರುವುದರಿಂದಲೇ ಅದಕ್ಕೆ ಹೃದಯವೆಂದು ಹೆಸರಿದೆಯೆಂದು ಹೇಳಿದೆ. **"ಸ ಏವ ಏಷ ಆತ್ಮಾ ಹೃದಿ ತಸ್ಯೈ ತದೇವ ನಿರುಕ್ತಗ್ಂ ಹೃದ್ಯಯಮಿತಿ"** (ಛಾಂ. ೮-೩-೩). ಇದರ ಶಾಂಕರ ಭಾಷ್ಯದಲ್ಲಿ ಹೇಳಿದಂತೆ **"ಹೃದಿ ಅಯಮಾತ್ಮಾ ವರ್ತತ ಇತಿ ಯಸ್ಮಾತ್ ತಸ್ಮಾತ್ ಹೃದಯಂ"** ಎಂದರೆ ಈ ಆತ್ಮನು ಹೃದಯದಲ್ಲಿರುವನಾಗಿ ಆದಕ್ಕೆ ಹೃದಯವೆಂದು ಹೆಸರಾಯಿತು. ಹೃದಯ ಕಮಲದಲ್ಲಿ ಹೆಬ್ಬೆಟ್ಟಿನಷ್ಟು ಹೃದಯಾಕಾಶವಿರುವುದೆಂದು ಶ್ವೇತಾಶ್ವತರದಲ್ಲೂ ಕಠೋಪನಿಷತ್ತಿನಲ್ಲಿಯೂ ಹೇಳಿದೆ (ಕಠ. ೨-೩-೧೭; ೨-೧-೧೩; ೨-೧-೧೨).

> ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
> ಹೃದಾ ಮನಿಷಾ ಮನಸಾಭಿಕ್ಲೃಪ್ತೋ ಯ ಏತದ್ ವಿದುರಮೃತಾಸ್ತೇ ಭವಂತಿ ॥ (ಶ್ವೇ. ೩-೧೩)

ಪ್ರತಿಯೊಬ್ಬ ಮನುಷ್ಯನ ಹೃದಯದೊಳಗಿನ ಆಕಾಶವು ಹೆಬ್ಬೆರಳಿನಷ್ಟು ಇರುವುದು. ಇದರಲ್ಲಿ ಆತ್ಮನಿರುವನು. ಅವನು ಹೊಗೆಯಿಲ್ಲದ ಜ್ಯೋತಿಯಂತೆ ಅಲ್ಲಿ ಬೆಳಗುವನು ಎಂಬುದು **ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ** (ಕಠ. ೨-೧-೧೩) ಎಂಬುದರ ಅಭಿಪ್ರಾಯವು. ಹೃದಯಾಕಾಶದಲ್ಲಿರುವ ಪರಂಜ್ಯೋತಿಯು ಹೆಬ್ಬೆರಳಿನ ಪರಿಮಿತಿಯಲ್ಲಿರುವುದಷ್ಟೆ. ಆದಕ್ಕೆ ದರ್ಪಣದಂತಿರುವ ಇಷ್ಟಲಿಂಗವೂ ಸಹಾ ಅಂಗುಷ್ಠ ಪ್ರಮಾಣದಲ್ಲೇ ಇರುವುದು. **"ಹೃದಿ ಮನಿಷಾ ಮನಸಾಭಿಕ್ಲೃಪ್ತಃ"** ಎಂಬುದರ ಅರ್ಥವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಆದರೆ ಶ್ವೇತಾಶ್ವತರದಲ್ಲೇ **"ತಸ್ಯಾಭಿಧ್ಯಾನಾತ್, ಯೋಜನಾತ್, ತತ್ವಭಾವಾತ್ ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ"** (೧-೧೦) ಎಂದು ಹೇಳಿದೆ. ಧ್ಯಾನದಿಂದಲೂ ಯೋಗದಿಂದಲೂ ತತ್ವಭಾವನೆಯಿಂದಲೂ ಮಾಯಾ ನಿವೃತ್ತಿಯಾಗುವುದು ಎಂದರೆ ಮೋಕ್ಷವಾಗುವುದು ಎಂದು ಇದರ ಅರ್ಥ. 'ಅಭಿಧ್ಯಾನವು' ಅವ್ಯಭಿಚರಿತ ಭಕ್ತಿಯಿಂದ ಇಷ್ಟಲಿಂಗವನ್ನು ಧ್ಯಾನಿಸುವುದರಿಂದ ಆಗುವುದು. 'ಯೋಗ'ವು ಪ್ರಾಣಲಿಂಗಾನುಸಂಧಾನ ಮಾಡುವುದರಿಂದಲಾಗುವುದು. **"ತತ್ವಭಾವೋ ಯಥಾರ್ಥ ಸ್ವರೂಪಭಾವನಂ, ಸ ಏವಾಹಮಿತಿ ಭಾವನಂ ವಾ"** ಎಂಬ ಭಾಷ್ಯದಂತೆ 'ತತ್ವಭಾವ' ಎಂದರೆ ಯಥಾರ್ಥ ಸ್ವರೂಪ ಭಾವನೆ; ಅಹಂಗ್ರಹೋಪಾಸನೆಯೇ 'ತತ್ವಭಾವಾತ್' ಎಂಬುದರ ಅಭಿಪ್ರಾಯವೆನ್ನಬಹುದು. ಭಾವಲಿಂಗಾನುಸಂಧಾನವು "ತತ್ವಭಾವನೆಯು". ಇದರಲ್ಲಿ ಭಕ್ತಿಯೂ ಯೋಗವೂ ಜ್ಞಾನವೂ ಮುಪ್ಪುರಿಯಾಗಿ ಸೇರಿವೆ. ಹೃದಯದಲ್ಲಿ ಪರಮಾತ್ಮನು ಅಭಿವ್ಯಕ್ತವಾಗುವುದು ಹೀಗೆಯೇ ಎಂಬುದು **"ಹೃದಾ ಮನಿಷಾ ಮನಸಾಭಿಕ್ಲೃಪ್ತಃ"** ಎಂಬುದರ ಅರ್ಥ.

## ಶಿವಯೋಗ

ಇಷ್ಟಲಿಂಗವನ್ನು ಅರ್ಚಿಸಿ ನೆಟ್ಟ ನೋಟದಿಂದ ಧ್ಯಾನಾಸಕ್ತನಾಗಿ "ಹರಿವ ಮನವ ವಾಯುವನೊಂದು ಹುರಿಯಮಾಡಿ, ಮನವ ಸ್ಥಿರಗೊಳಿಸಿ, ಸಗುಣಧ್ಯಾನದಲ್ಲಿ ಮನವ ಸವಿದು" ಪ್ರಾಣಲಿಂಗಾನುಸಂಧಾನಕ್ಕೆ ಅಣಿಯಾಗಬೇಕು. ಆಗ ಶ್ರೀ ನಿಜಗುಣರು ಹೇಳುವಂತೆ:

> "ಪ್ರಾಣಲಿಂಗವಿದನು ಗುರುವಿ । ನಾಣತಿಯೊಳು ಕೇಳಿ ನೋಡಿ । ಮಾಣದೇಕಚಿತ್ತದಿಂದ ಜಾಣಿಪನೆ ಕೃತಾರ್ಥನು ॥ ಪ ॥.... ಮೂಲಲಿಂಗ ನಾಭಿಹೃದಯ ಕಂಠಕೂರ್ಚ ಗೋತ್ರ ಪೊತ್ತ । ಜಾಲಜಂಬುಜಾಕ್ಷರಾದಿ ದೈವಮಂತ್ರಶಕ್ತಿಯ ॥ ಮೇಳನೊಡನೆ ಕೆಂಪು ಮಿಂಚು ಶವ್ಣ ಚಿನ್ನ ಸೊಡರು ಚಂಚ । ಅಲತಾಗ್ನಿ ದೀಪ್ತರೂಪುದೋರ್ಪ ದಿವ್ಯ ಬಿಂದುವ"।

ಇದನ್ನು ಅರ್ಥಮಾಡಿಕೊಳ್ಳಲು ಯೋಗದ, ಅದರಲ್ಲಿಯೂ ಶಿವಯೋಗದ ವಿಷಯವನ್ನು ತಿಳಿದುಕೊಂಡಿರಬೇಕು. ಪಾಯುಮೇಢ್ರಗಳ ಮಧ್ಯದಲ್ಲಿ ಮೂಲಾಧಾರವೆಂಬ ಚಕ್ರವಿದೆ. ಈ ಚಕ್ರದಿಂದ ಬ್ರಹ್ಮರಂಧ್ರದವರೆಗೆ ಹೋಗುವ ಸುಷುಮ್ನನಾಡಿಯ ಮಧ್ಯದಲ್ಲಿರುವ ಆರು ಚಕ್ರಗಳಲ್ಲಿ ಮೂಲಾಧಾರವೇ ಮೊದಲನೆಯದು. ಇದು ನಾಲ್ಕು ದಳದ ಪದ್ಮ. ಪೃಥ್ವಿ ತತ್ವವೂ ಆಚಾರಲಿಂಗವೂ ಇದಕ್ಕೆ ಸಂಬಂಧಪಟ್ಟಿವೆ. ಸ್ವಾಧಿಷ್ಠಾನವು, ಲಿಂಗಮೂಲ ದಲ್ಲಿರುವ ಆರು ದಳದ ಪದ್ಮ; ಜಲತತ್ವವೂ ಗುರುಲಿಂಗವೂ ಇದಕ್ಕೆ ಸಂಬಂಧಪಟ್ಟಿವೆ. ಮಣಿಪೂರವು ನಾಭಿಮೂಲದಲ್ಲಿರುವ ಹತ್ತು ದಳದ ಪದ್ಮ; ಅಗ್ನಿತತ್ವವೂ ಶಿವಲಿಂಗವೂ ಇದಕ್ಕೆ ಸಂಬಂಧಪಟ್ಟಿವೆ. ಅನಾಹತ ಚಕ್ರವು ಹೃದಯದೇಶದಲ್ಲಿರುವ ಹನ್ನೆರಡು ದಳದ ಪದ್ಮ; ಇದಕ್ಕೆ ವಾಯುತತ್ವವೂ ಜಂಗಮಲಿಂಗವೂ ಸಂಬಂಧಪಟ್ಟವು. ವಿಶುದ್ಧಿ ಚಕ್ರವೂ ತಾಲು ಮೂಲದಲ್ಲಿರುವ ಹದಿನಾರು ದಳದ ಪದ್ಮವು; ಇದಕ್ಕೆ ಆಕಾಶತತ್ವವೂ ಪ್ರಸಾದಲಿಂಗವೂ ಸಂಬಂಧಪಟ್ಟವು. ಆಜ್ಞಾಚಕ್ರವು ಹುಬ್ಬುಗಳ ಮಧ್ಯೆಯಿರುವ ಎರಡು ದಳದ ಪದ್ಮವು; ಇದಕ್ಕೆ ಮನಸ್ತತ್ವವೂ ಮಹಾಲಿಂಗವೂ ಸಂಬಂಧಪಟ್ಟವು. ಇವುಗಳಲ್ಲಿ ಪ್ರತಿಯೊಂದಕ್ಕೂ ಬೇರೆಬೇರೆ ಶಕ್ತಿಗಳೂ ಮಂತ್ರಗಳೂ ಇವೆ. ಇದನ್ನೇ ಶ್ರೀ ನಿಜಗುಣಶಿವಯೋಗಿಯು "ಮೂಲ ಲಿಂಗ....ಮಂತ್ರಶಕ್ತಿಯ" ಎಂದು ಹೇಳಿರುವುದು. ಈ ಆರು ಚಕ್ರಗಳನ್ನು ಜೀವನು ಕುಂಡಲಿನೀಶಕ್ತಿಯೊಡನೆ ಏರಿದಾಗ ಕಾಣುವ ಕೆಂಪು ಚಿನ್ನ ರನ್ನ ಮೊದಲಾದ ವರ್ಣಗಳನ್ನು ಮುಂದೆ ಹೇಳಿದ್ದಾರೆ. ಪರಶಿವಬ್ರಹ್ಮವು ಪಶ್ಚಿಮ ಚಕ್ರದಲ್ಲಿ ನಿರಂಜನ ಲಿಂಗವಾಗಿಯೂ, ಶಿಖಾಚಕ್ರದಲ್ಲಿ ನಿಶ್ಶೂನ್ಯ ಲಿಂಗವಾಗಿಯೂ, ಬ್ರಹ್ಮರಂಧ್ರಸ್ಥಾನದಲ್ಲಿ ನಿಃಕಲ ಲಿಂಗವಾಗಿಯೂ ಇದೆ. ಹೃದಯಸ್ಥಾನದಲ್ಲಿ ಅಷ್ಟದಳ ಕಮಲವೊಂದು ಬಾಳೆಯ ಹೂವಿನಂತೆ ಬಗ್ಗಿ ಅಧೋ ಮುಖಿಯಾಗಿದೆ. ಅದರ ಮಧ್ಯದಲ್ಲಿ ಜೀವನು ಪ್ರಾಣವಾಯುವಿನೊಡನೆ ಜಾಗ್ರತ್ ಸ್ವಪ್ನ ಸುಷುಪ್ತಿಗಳನ್ನು ಅನುಭವಿಸುತ್ತಿರುತ್ತಾನೆ. ಆಗ ಮೂಲಾಧಾರದ ರಂಧ್ರವನ್ನು ತನ್ನ ಹೆಡೆಯಿಂದ ಮುಚ್ಚಿರುವ ಕುಂಡಲಿನೀಶಕ್ತಿಯು ನಿದ್ರಿಸುತ್ತಿರುತ್ತಾಳೆ. ಆದರೆ ಹರಿವ ಮನವಾಯುಗಳನ್ನೊಂದುಮಾಡಿ ನಿಲಿಸಿದಾಗ, ಕುಂಡಲಿನೀಶಕ್ತಿಯು ಎಚ್ಚೆತ್ತು ಹೆಡೆಯನ್ನು ಎತ್ತಲು ಸುಷುಮ್ನೆಯ ರಂಧ್ರದ ಬಾಯಿ ತೆರೆಯುತ್ತದೆ. ಜೀವನು ಕುಂಡಲಿನೀಶಕ್ತಿಯೊಡನೆ ಒಂದೊಂದಾಗಿ ಪದ್ಮಗಳನ್ನೇರುತ್ತಿದ್ದಂತೆ ಆಯಾ ಪದ್ಮಗಳಲ್ಲಿರುವ ತತ್ವವೇ ಮೊದಲಾದುವುಗಳು ಲಯವಾಗುತ್ತಹೋಗುತ್ತವೆ. ಕೊನೆಯಲ್ಲಿ ಬ್ರಹ್ಮರಂಧ್ರದಲ್ಲಿರುವ ನಿಃಕಲ ಲಿಂಗದೊಡನೆ ಜೀವನು ಅಮೃತಪಾನಮಾಡಿ ಸುಖಿಸುವನು. ಅದನ್ನೇ ಕೈವಲ್ಯ ಕಲ್ಪವಲ್ಲರಿಯಲ್ಲಿ ಸರ್ಪಭೂಷಣ ಶಿವಯೋಗಿಗಳು ಹೀಗೆ ಹಾಡಿರುವುದು:

> ಸೌಷುಮ್ನರಂಧ್ರದಿ ತೂರಿ, ಧರೆಗಡಿಯೂರಿ, ಸಲಿಲವ ಹಾರಿ, ದಹನನಿಗೇರಿ, ಮರುತನ ಮೀರಿ, ಗಗನದಿ ತೋರಿ, ಬ್ರಹ್ಮದಿ ಸೇರಿ ಅಮೃತವ ಹೀರಿ ಸುಖಿಸುವ ಯೋಗಮಾರ್ಗ ನಿರ್ಯೋಗದೊಳಿಹ ಶಿವಯೋಗಿಗೆ ನಮಿಸುವೆನು.

ಇಲ್ಲಿ ಧರೆ, ಸಲಿಲ, ದಹನ, ಮರುತ, ಗಗನ ಎಂದರೆ ಇವುಗಳಲ್ಲಿ ಒಂದೊಂದು ತತ್ವವು ಇರುವ ಮೂಲಾಧಾರ ಸ್ವಾಧಿಷ್ಠಾನ, ಮಣಿಪೂರ, ಅನಾಹತ, ಹೃದಯವಿಶುದ್ಧಿ ಚಕ್ರಗಳು —ಇವುಗಳನ್ನು ಜೀವನು ಕುಂಡಲಿನೀಶಕ್ತಿಯೊಡನೆ ಏರುವುದನ್ನು ಇಲ್ಲಿ ಹೇಳಿದೆ.

ಶಿವಯೋಗದ ವಿಷಯವು ಸುಲಭದಲ್ಲಿ ಹೇಳುವಂತಹುದಾಗಲೀ, ಕೇಳುವಂತಹುದಾಗಲೀ ಅಲ್ಲ. ಷಟ್ಚಕ್ರದೀಪಿಕೆಯನ್ನೂ ಶ್ರೀ ಶಂಕರಾಚಾರ್ಯಕೃತ ಸೌಂದರ್ಯಲಹರಿಯನ್ನೂ ಕರಗತ

ಮಾಡಿಕೊಂಡಮೇಲೆ ಶಿವಯೋಗಪ್ರದೀಪಿಕೆಯನ್ನು ಶ್ರೀ ನಿಜಗುಣಶಿವಯೋಗಿಗಳ ಪರಮಾರ್ಥ ಪ್ರಕಾಶಿಕೆಯನ್ನೂ ಮನನ ಮಾಡಿಕೊಂಡರೆ ಶಿವಯೋಗದ ಬಾಹ್ಯಜ್ಞಾನವಾಗುವುದು. ಹೆಚ್ಚು ವಿಷಯವನ್ನು ಗುರುಮುಖದಿಂದಲೇ ತಿಳಿಯಬೇಕು. ಶಿವಯೋಗದ ದಿಗ್ದರ್ಶನವಾಗಿ ವೀರಶೈವರ ಲಿಂಗ ಕಲ್ಪನೆಯು ಎಷ್ಟು ಉದಾತ್ತವಾದುದು ಎಂಬುದು ಮನಸ್ಸಿಗೆ ಹಿಡಿಯಲೆಂದು ಇಲ್ಲಿ ಶಿವಯೋಗದ ಸೂಕ್ಷ್ಮಪರಿಚಯವನ್ನು ಮಾಡಿಕೊಡಲಾಯಿತು.

ಹೀಗೆ ವೀರಶೈವರ ಪರಿಭಾವನೆಯಲ್ಲಿ ಲಿಂಗವೆಂದರೆ ಪರಬ್ರಹ್ಮದ ಕುರುಹೆಂಬ ಭಾವನೆ ಯಿದೆಯೇ ಹೊರತು ಮತ್ತಾವ ಭಾವನೆಯೂ ಇಲ್ಲ. ಶಾಕ್ತರ ಯಾವ ಅಶ್ಲೀಲ ಆಚರಣೆ ಗಳಾಗಲೀ, ಅಶ್ಲೀಲ ಭಾವನೆಗಳಾಗಲೀ ವೀರಶೈವರಲ್ಲಿರುವುದಿಲ್ಲ. ಪರಬ್ರಹ್ಮವು ಜ್ಞಾನ ಸ್ವರೂಪವು; ಜ್ಞಾನಸ್ವರೂಪವಾದ ಪರಬ್ರಹ್ಮದ ಅರಿವನ್ನು ಅದರ ಕುರುಹಾದ ಶಿವಲಿಂಗದ ಮೂಲಕ ಶಿವಯೋಗದಲ್ಲಿ ಪಡೆದು ಲಿಂಗಾಂಗ ಸಾಮರಸ್ಯವಾಗಿ ಆ ಅರಿವಿನಲ್ಲಿ ಲೀನವಾಗುವುದೇ ವೀರಶೈವರ ಗುರಿ.

## ಲಿಂಗದ ಪೂಜೆಯಲ್ಲಿ ಆಧಿಭೌತಿಕ, ಆಧಿದೈವಿಕ, ಆಧ್ಯಾತ್ಮಿಕ ಕಲ್ಪನೆ

ವೀರಶೈವರ ಲಿಂಗಕಲ್ಪನೆಯ ಮೂಲವನ್ನು ಅನಾದಿಕಾಲದ ಮೂಲಭಾರತೀಯರಲ್ಲೇ ಕಾಣಬಹುದು. ಹಿಂದೆ ವಿವರಿಸಿದಂತೆ ಭಾರತದ ಪೂರ್ವ ನಿವಾಸಿಗಳು ಸಿಂಧೂನದಿಯ ತೀರದ ನಾಗರಿಕತೆಯ ಕಾಲದಲ್ಲಿ ತೇಜಃಪುಂಜವಾದ ಸೂರ್ಯನನ್ನು ಪರಮಾತ್ಮನೆಂದು ಭಾವಿಸಿದರು. ದೂರದಲ್ಲಿರುವ ಸೂರ್ಯದೇವನನ್ನು ಪೂಜಿಸುವುದು ಸಾಧ್ಯವಿಲ್ಲವಾಗಿ ಸೂರ್ಯನಂತೆ ದುಂಡಾ ಗಿರುವ ಲಿಂಗರೂಪದಲ್ಲಿ ಅವನನ್ನು ಪೂಜಿಸಿದರು. ಇದು ಆಧಿಭೌತಿಕ ಕಲ್ಪನೆ. ಸೂರ್ಯನು ನಿಯಮಿತ ಕಾಲಕ್ಕೆ ಹುಟ್ಟಿ ನಿಯಮಿತ ರೀತಿಯಲ್ಲಿ ನಿಯಮಿತ ಪಥದಲ್ಲಿ ಗಮಿಸುತ್ತ ನಿಯಮಿತ ಕಾಲದಲ್ಲಿ ಮುಳುಗುವುದರಿಂದ, ಅವನನ್ನು ನಿಯಮನಗೊಳಿಸುವ ಪರಾತ್ಪರ ಶಕ್ತಿಯೊಂದು ಇರಬೇಕೆಂಬ ಭಾವನೆಯು ಬಳೆಯಿತು. ಈ ಅಂತರ್ಯಾಮಿಯನ್ನು ಶಿವನೆಂಬ ಶುಭವಾದ ಹೆಸರಿನಿಂದ ಲಿಂಗರೂಪದಲ್ಲಿಯೇ ಪೂಜಿಸಿದರು. ಇದು ಆಧಿದೈವಿಕ ಕಲ್ಪನೆ. ಮುಂದೆ ಶಿವನೂ ಸೂರ್ಯಾಂತರ್ಯಾಮಿ ದೇವತೆಯೂ ಒಂದೆ ಎಂಬ ಭಾವನೆಯು ವೇದೋಪನಿಷತ್ ಪುರಾಣಗಳ ಕಾಲದವರೆಗೂ ಮುಂದುವರೆದುದಕ್ಕೆ ವಿಪುಲವಾಗಿ ಆಧಾರಗಳನ್ನು ಕೊಡಲಾಯಿತು. ಆದರೆ ವೀರಶೈವರ ಲಿಂಗದ ಕಲ್ಪನೆಯು ಇದಕ್ಕೂ ಮುಂದುವರೆದುದಾಗಿದೆ. ಸರ್ವಾಂತರ್ಯಾಮಿಯಾದ ಪರಶಿವಬ್ರಹ್ಮವು ನಿರ್ಗುಣವೂ ನಿಷ್ಕಲವೂ ನಿರಂಜನವೂ ನಿರುಪಾಧಿಯೂ ಆಗಿ "ಶೂನ್ಯ" ಎಂಬ ಭಾವನೆಗೊಳಗಾಗಿರುವುದರಿಂದ ಅರಿವಿನ ರೂಪವಾದ ಆ ಪರಾತ್ಪರದ ಕುರುಹೇ ಲಿಂಗ ವೆಂಬ ಆಧ್ಯಾತ್ಮಿಕ ಕಲ್ಪನೆಯು ವೀರಶೈವರದು.

## ಋಗ್ವೇದದಲ್ಲಿ ಸೈಂಧವ ನಾಗರಿಕರ ಅರ್ಧನಾರೀಶ್ವರ ಕಲ್ಪನೆಯ ಪ್ರತಿಕ್ರಿಯೆ

ಇದುವರೆವಿಗೂ ವೀರಶೈವದ ಆಧಿಭೌತಿಕ ಮತ್ತು ಆಧಿದೈವಿಕ ಕಲ್ಪನೆಗಳ ಮೂಲವನ್ನೂ ವೇದೋಪನಿಷತ್ ಪುರಾಣಗಳ ಕಾಲದಲ್ಲಿ ಅವುಗಳ ಪ್ರಗತಿಯನ್ನೂ ನಿಷ್ಕರ್ಷಿಸಲಾಯಿತು. ಈಗ ವೀರಶೈವದ ಆಧ್ಯಾತ್ಮಿಕ ಕಲ್ಪನೆಗಳ ಮೂಲವನ್ನೂ ವೇದೋಪನಿಷತ್ ಕಾಲದಿಂದ ಅದರ

ಪ್ರಗತಿಯನ್ನೂ ವಿವೇಚಿಸುವ ಮೊದಲು ಸೈಂಧವ ನಾಗರಿಕರಲ್ಲಿದ್ದ ಅರ್ಧನಾರೀಶ್ವರ ಕಲ್ಪನೆಯು ಯಾವ ರೀತಿಯ ಪ್ರತಿಕ್ರಿಯೆಯನ್ನು ಋಗ್ವೇದದಲ್ಲಿ ಉಂಟುಮಾಡಿತೆಂಬುದು ವಿಚಾರಾರ್ಹ ವಾಗಿದೆ. ಸಿಂಧೂನದಿಯ ತೀರದ ಜನರಲ್ಲಿ ಅರ್ಧನಾರೀಶ್ವರನ ಕಲ್ಪನೆಯು ಇದ್ದಿತೆಂದು ೫೧ ನೆಯ ಪುಟದಲ್ಲಿ ತಿಳಿಯಪಡಿಸಲಾಗಿದೆಯಷ್ಟೆ. ಶಿವ ಶಕ್ತಿಯರು ಒಂದೆಯೆಂಬ ಭಾವನೆಯು ಇದ್ದಿತಲ್ಲದೆ ಅವರಲ್ಲಿ ಜೀವ ಶಿವ ಶಕ್ತಿಯರು ಒಂದೆ (Divine triad) ಎಂಬ ಕಲ್ಪನೆಯು ಇದ್ದುದನ್ನು ೫೭ ನೆಯ ಪುಟದಲ್ಲಿ ವಿವರಿಸಲಾಗಿದೆ. ಇದರ ವಿರುದ್ಧವಾದ ಪ್ರತಿಕ್ರಿಯೆಯನ್ನು ಮೊದಲು ಋಗ್ವೇದದಲ್ಲಿ ಕಾಣಬಹುದು.

ಈ ವಿಷಯವನ್ನು ವಿವೇಚಿಸುವ ಮೊದಲು ಆರ್ಯರಿಗೂ ದ್ರಾವಿಡರಿಗೂ ವಿದ್ವೇಷ ವಿದ್ದಿತೆಂಬುದನ್ನು ಜ್ಞಾಪಿಸಿಕೊಳ್ಳಬೇಕು. ಆರ್ಯರು ದ್ರಾವಿಡರ ಮೇಲಿನ ಯುದ್ಧಗಳಲ್ಲಿ ಗೆಲ್ಲುತ್ತಿದ್ದರೂ ದ್ರಾವಿಡರು ಅವರ ಯಜ್ಞಯಾಗಾದಿಗಳನ್ನು ಕೆಡಿಸುವುದೇ ಮೊದಲಾದ ಅನೇಕ ಕಿರುಕುಳಗಳನ್ನು ಕೊಡುತ್ತಿದ್ದರು. ಈ ದ್ರಾವಿಡರನ್ನೂ ಅವರ ದೇವರುಗಳನ್ನೂ ಆರ್ಯರು ಹೀಯಾಳಿಸುತ್ತಿದ್ದರಲ್ಲದೆ ಅವರನ್ನು ನಾಶಪಡಿಸುವಂತೆ ಇಂದ್ರನನ್ನು ಪ್ರಾರ್ಥಿಸುತ್ತಿದ್ದರು. ಡಾ॥ ಕರ್ಮರ್‌ಕರ್‌ರವರು ಇಂತಹ ಋಗ್ವೇದದ ಮಂತ್ರವೊಂದರಲ್ಲಿ (ಋ. ೭–೧೦೪–೨೪) ಪುರುಷ ಮತ್ತು ಸ್ತ್ರೀ ಯಾತುಧಾನರ ವಿಷಯವಾಗಿ ಹೇಳಿರುವುದನ್ನು ಕುರಿತು ಹೀಗೆ ಟೀಕಿಸಿದ್ದಾರೆ :

"Slay the male demon (*Yatudhana*), Indra,
Slay the female joying and triumphing in arts of magic,
Let the Muradevas with bent necks fall and perish and see no more the sun when he rises—(*Rig Veda*, VII–104–24).

As seen above, the Triad of Mohenjo Daro consisted of a male, a female and a son respectively. Eventually all these three are mentioned here, the last expression Murudevah being a corrupted form of a Dravidian word Murughan an early name of Kartikeya. Moreover, it is of great importance that the word 'Stri' used in this passage seems to be the same as Pumscali used in connection with the Eka Vratya or Siva in *Atharva Veda*."

—Dr. Karmarkar's *Religions of India*, p. 21.

" ಇಂದ್ರ ಜಹಿ ಪುಮಾಂಸಂ ಯಾತುಧಾನಮುತ ಸ್ತ್ರಿಯಂ ಮಾಯಯಾ ಶಾಶದಾನಾಂ
ವಿಗ್ರೀವಾಸೋ ಮೂರದೇವಾ ಋದಂತು ಮಾ ತೇ ದೃಶನ್ತ್ಸೂರ್ಯಮುಚ್ಚರಂತಂ "

ಇದು ಶ್ರೀಯುತ ಕರ್ಮರ್‌ಕರ್‌ರವರು ತೆಗೆದುಕೊಂಡಿರುವ ಋಗ್ವೇದ ಮಂತ್ರವು. ಇದರ ಸಾಯಣಭಾಷ್ಯವಿದು :

" ಹೇ ಇಂದ್ರ ಪುಮಾಂಸಂ ಪುಂರೂಪಧಾರಿಣಂ ಯಾತುಧಾನಂ ರಾಕ್ಷಸಂ ಜಹಿ ಮಾರಯ । ಉತಾಪಿಚ ಮಾಯಯಾ ವಂಚನಯಾ ಶಾಶದಾನಾಂ ಹಿಂಸಂತೀಂ ಸ್ತ್ರಿಯಂ ರಾಕ್ಷಸೀಂ ಚ ಜಹಿ । ಅಪಿಚ ಮೂರದೇವಾ ಮಾರಣಕ್ರೀಡಾ ರಾಕ್ಷಸಾ ವಿಗ್ರೀವಾಸೋ ವಿಚ್ಛಿನ್ನಗ್ರೀವಾಃ ಸಂತ ಋದಂತು ನಶ್ಯಂತು । ತೇ ತಥಾ ವಿಧಾ ರಾಕ್ಷಸಾ ಉಚ್ಚರಂತಮುದ್ಯಂತಂ ಸೂರ್ಯ ಮಾದಿತ್ಯಂ ಮಾ ದೃಶನ್ ಮಾದ್ರಾಕ್ಷುಃ ॥ "

ಸಾಯಣಭಾಷ್ಯವಿದರ ಅರ್ಥವಿದು—ಎಲೈ ಇಂದ್ರನೇ ಪುರುಷರೂಪಧಾರಿಯಾದ ಯಾತುಧಾನಂ ಎಂದರೆ ರಾಕ್ಷಸನನ್ನು ಕೊಲ್ಲು; ಮಾಯೆಯಿಂದ ಹಿಂಸಿಸುವ ಸ್ತ್ರೀರಾಕ್ಷಸಿಯನ್ನೂ ಕೊಲ್ಲು. ಹಾಗೆಯೇ ಮರಣಕ್ರೀಡಾರತರಾದ ರಾಕ್ಷಸರು ಕತ್ತರಿಸಲ್ಪಟ್ಟ ಕತ್ತುಳ್ಳವರಾಗಿ, ಸೂರ್ಯೋದಯವನ್ನು ನೋಡದಂತಾಗಲಿ.

ಅಥರ್ವ ವೇದದಲ್ಲಿ ಏಕವ್ರಾತ್ಯ (ಶಿವ) ನೊಡನೆ ಹೇಳಲ್ಪಟ್ಟಿರುವ ಪುಂಶ್ಚಲಿಯೂ ಇಲ್ಲಿ ಹೇಳಿರುವ ಸ್ತ್ರೀಯೂ ಒಂದೇ ಇರಬೇಕೆಂದೂ, ಇಲ್ಲಿ ಹೇಳಿರುವ ಸ್ತ್ರೀಪುರುಷ ರಾಕ್ಷಸರು, ರಾಕ್ಷಸರ ದೇವರುಗಳಾದ ಶಿವ ಶಿವೆ (ಆನ್, ಅಮ್ಮ) ಆಗಿರಬೇಕೆಂದೂ ಶ್ರೀ ಕರ್ಮರ್‌ಕರ್‌ರವರು ಊಹಿಸಿದ್ದಾರೆ. ಈ ಊಹೆಗಳು ಸರಿಯೆಂದು ಹೇಳಬಹುದು; ಅಲ್ಲದೆ ಇತರ ಕಾರಣಗಳಿಂದ ಅದನ್ನು ಪುಷ್ಟೀಕರಿಸಬಹುದು. ಜೋಡಿ ಜೋಡಿಯಾಗಿ ಬಂದು ಹಿಂಸಿಸುವ ರಾಕ್ಷಸರನ್ನು ಕೊಲ್ಲಲಿ ಎಂದು ಹಿಂದಿನ ಮಂತ್ರದಲ್ಲಿ ಹೇಳಿದೆ. "ಯಾತುಮಾವತಾಂ ಅಪೋಚ್ಛತು ಮಿಥುನಾ" ಎಂಬುದು ಹಿಂದಿನ ಮಂತ್ರಭಾಗ. "ಯಾತುಮಾವತಾಂ ಯಾತನಾವತಾಂ ರಾಕ್ಷಸಾನಾಂ ಮಿಥುನಾ ಮಿಥುನಾನಿ ಸ್ತ್ರೀಪುಂರೂಪಾಣಿ ಯುಗಲಾನ್ಯಪೋಚ್ಛತು" ಎಂಬುದು ಇದರ ಸಾಯಣಭಾಷ್ಯ. ರಾಕ್ಷಸರ ಪುರುಷಸ್ತ್ರೀ ಜೋಡಿಗಳನ್ನು ಉಷಾದೇವಿಯು ಹೊಡೆದೋಡಿಸಲಿ ಎಂದು ಇದರ ಅರ್ಥ. ಸ್ತ್ರೀಪುರುಷ ಜೋಡಿಗಳು ಎಂದು ಹೇಳುವಾಗ ಮಿಥುನಾ ಎಂಬ ಪದದ ಪ್ರಯೋಗವಿದೆ. ಆದುದರಿಂದ ಈ ಮಂತ್ರದಲ್ಲಿ ಹೇಳಿರುವ ಜೋಡಿಗಳು ದಂಪತಿಗಳೆಂಬುದು ಸ್ಪಷ್ಟ. ಮೇಲಿನ ಮಂತ್ರದಲ್ಲಿ ಮತ್ತೆ ವಿಶಿಷ್ಟರೀತಿಯಿಂದ ವಿವರಿಸಲ್ಪಟ್ಟ ಪುರುಷನನ್ನೂ ಸ್ತ್ರೀಯನ್ನೂ ಕೊಲ್ಲಲಿ ಎಂದು ಹೇಳುವುದರಲ್ಲಿ ದಂಪತಿಗಳೆಂಬ ಭಾವವು ಆ ಮಂತ್ರದಲ್ಲಿಯೂ ಮುಂದುವರಿದಿದೆಯೆಂದು ಭಾವಿಸಬೇಕಾಗುವುದು. ಈ ದಂಪತಿಗಳಲ್ಲಿ ಸ್ತ್ರೀಯು ಮಾಯೆಯುಳ್ಳವಳೆಂದೂ, ಪುರುಷನು ಪುರುಷವೇಷಧಾರಿಯೆಂದೂ ಹೇಳಿರುವುದರಲ್ಲಿ ಸಹಾ ವಿಶೇಷವಿದೆಯೆನ್ನಬಹುದು. ಸಿಂಧೂನದಿಯ ತೀರದ ಜನರು ಯಜ್ಞವಿರೋಧಿಗಳಾಗಿದ್ದುದರಿಂದ ರಾಕ್ಷಸರೆಂದು ಹೀಯಾಳಿಸಲ್ಪಡುತ್ತಿದ್ದರಷ್ಟೆ. ಅವರ ದೇವನಾದ ಆನ್ (ಶಿವನು) ಅವನ ಸ್ತ್ರೀ (ಅಮ್ಮಾ) ಯೊಡನೆ ಅರ್ಧನಾರೀಶ್ವರನಾಗಿ ಭಾವಿಸಲ್ಪಟ್ಟಿದ್ದನೆಂಬುದನ್ನು ಹಿಂದೆಯೇ ತೋರಿಸಲಾಗಿದೆ. ಅರ್ಧ ಸ್ತ್ರೀರೂಪ ಶರೀರವುಳ್ಳ ರಾಕ್ಷಸ ದೇವತೆಯನ್ನು ಅವರ ವೈರಿಗಳಾದ ಆರ್ಯರು ಪುರುಷವೇಷಧಾರಿಯೆಂದು ಈ ಮಂತ್ರದಲ್ಲಿ ಕರೆದಿರುವುದು ಸ್ವಾಭಾವಿಕವೆ. ಶಿವಲಿಂಗಧಾರಿಗಳಾದ ಶಿವಲಿಂಗಪೂಜಕರನ್ನು "ಶಿಶ್ನದೇವಾಃ" ಎಂದು ತೆಗಳಿದವರು ಅರ್ಧನಾರೀಶ್ವರನೆಂದು ಭಾವಿಸಲ್ಪಟ್ಟ ಶಿವನನ್ನು ಪುರುಷವೇಷಧಾರಿಯೆಂದು ಈ ಮಂತ್ರದಲ್ಲಿ ಕರೆದಿರುವುದರಲ್ಲಿ ಹೆಚ್ಚೇನಿದೆ? ಅಮ್ಮಾ ಎನಿಸಿಕೊಂಡಿದ್ದ ಶಿವೆಯು ಮಾಯೆಯುಳ್ಳವಳೆಂದು ಹೇಳಿರುವ ಮಾತೇ ಮುಂದೆ ಅವಳು ಪೂಜ್ಯಳಾದಾಗ "ಮಾಯಾಂ ತು ಪ್ರಕೃತಿಂ ವಿದ್ಯಾತ್, ಮಾಯಿನಂ ಚ ಮಹೇಶ್ವರಂ" ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಈ ಶಿವ ಶಿವೆಯರ ಜೋಡಿಯನ್ನು ವರ್ಣಿಸಿರುವಂತೆ ಇಲ್ಲಿಯೂ ವರ್ಣಿಸಿರುವುದು ಕಂಡುಬರುತ್ತದೆ. ಕೊನೆಯದಾಗಿ ಮತ್ತೊಂದು ಕಾರಣವೂ ಗಮನಾರ್ಹವಾಗಿದೆ. ಹಿಂದಿನ ಮಂತ್ರದಲ್ಲಿಯೂ ಈ ಮಂತ್ರದಲ್ಲಿಯೂ ಎಲ್ಲ ರಾಕ್ಷಸರೂ ಕೊಲ್ಲಲ್ಪಡಲಿ ಎಂಬ ಪ್ರಾರ್ಥನೆಯಿದೆ. ಹಿಂದಿನ ಮಂತ್ರದಲ್ಲಿ ಜೋಡಿಜೋಡಿಯಾಗಿ ಬರುವ ರಾಕ್ಷಸರೂ ಕೊಲ್ಲಲ್ಪಡಲಿ ಎಂಬ ಪ್ರಾರ್ಥನೆಯಿದೆ. ಮತ್ತೆ ಮುಂದಿನ ಮಂತ್ರದಲ್ಲಿ ವಿಶಿಷ್ಟರೂಪದಿಂದ ವರ್ಣಿಸಲ್ಪಟ್ಟಿರುವ ಒಂದು ಜೋಡಿ ರಾಕ್ಷಸರ ವಧೆಯನ್ನು ಪ್ರಾರ್ಥಿಸಿರುವುದರಿಂದ ಈ ಜೋಡಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಂತಾಯಿತು.

ರಾಕ್ಷಸರೆಲ್ಲರೂ ಕೊಲ್ಲಲ್ಪಡಲಿ ಎಂಬ ಪ್ರಾರ್ಥನೆಯ ಜತೆಗೆ, ಯಜ್ಞಧ್ವಂಸಿಗಳಾದ ರಾಕ್ಷಸರ ದೇವರುಗಳಾದ ಯಜ್ಞಧ್ವಂಸಕಾರಣರಾದ ಆನ್ ಮತ್ತು ಅಮ್ಮಾ ಎಂದರೆ ಶಿವ ಶಿವೆಯರೂ ಆರ್ಯರ ಪರಮದೈವವಾದ ಇಂದ್ರನಿಂದ ಕೊಲ್ಲಲ್ಪಡಲಿ ಎಂಬ ಪ್ರಾರ್ಥನೆಯೂ ಮಾಡಲ್ಪಟ್ಟಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಈ ಕಾರಣಗಳಿಂದ ಶ್ರೀಯುತ ಕರ್ಮಾರ್‌ಕರ್ ಅವರು ಈ ವಿಷಯದಲ್ಲಿ ಸೂಚಿಸಿರುವ ಅಭಿಪ್ರಾಯವು ಸಮರ್ಥನೀಯವಾಗಿದೆ.

ಆದರೆ ಈ ಮಂತ್ರದಲ್ಲಿ ಅವರು 'ಮೂರದೇವಾಃ' ಎಂಬ ಪದವನ್ನು ಮುರುಘನೊಡನೆ ಸಂಬಂಧಿಸಿರುವುದಕ್ಕೆ ಸರಿಯಾದ ಕಾರಣವಿಲ್ಲ. ಮುರುಘನೆಂಬ ಪದದ ರೂಪಾಂತರವೇ 'ಮೂರುದೇವಾಃ' ಎಂದು ಹೇಳುವುದು ಸರಿಯಲ್ಲ. ಅಲ್ಲದೆ 'ಮೂರದೇವಾಃ' ಎಂದು ಬಹುವಚನ ಪ್ರಯೋಗವಿರುವುದರಿಂದ ಈ ಪದಕ್ಕೂ ಒಬ್ಬನೆಯಾದ ಮುರುಘನಿಗೂ ಸಂಬಂಧ ವಿರಲಾರದು. ಸಿಂಧೂನದಿಯ ತೀರದ ನಾಗರಿಕರ ಕಲ್ಪನೆಯ "The Divine Triad" ಎಂಬುದರ ವಿಷಯವನ್ನು ಹಿಂದೆ ಹೇಳಲಾಗಿದೆ. ಆನ್, ಅನಿಲ್ ಎಂದರೆ ಶಿವಶಿವೆಯರು. ಇವರ ಪುತ್ರನಾದ ಅನಿಲ್ ಸೇರಿ "The Divine Triad" ಎಂದು ಹೇಳಲ್ಪಟ್ಟಿರುವ ಅದ್ವೈತದ ಕಲ್ಪನೆಯಿದೆ. ಇಲ್ಲಿ ಶಿವಪುತ್ರನೆಂದರೆ ಜೀವವೆಂಬ ಸಂಕೇತವೇ ಇರಬೇಕು. ಹಿಂದೆಯೇ ಹೇಳಿದಂತೆ, ಶಿವ ಶಿವೆಯರೂ ಮುರುಘನೂ ಒಂದೆಯೆಂಬ ಭಾವ ಹಿಂದೂ ಇಲ್ಲ, ಇಂದೂ ಇಲ್ಲ, ಎಂದೂ ಇದ್ದಂತೆ ಕಾಣುವುದಿಲ್ಲ. ಮೂರದೇವಾಃ ಎಂದರೆ ರುದ್ರಪುತ್ರರೆನಿಸಿಕೊಂಡಿದ್ದ ಅಸುರರು ಎಂದು ಕರೆಯಲ್ಪಡುತ್ತಿದ್ದ ಯಜ್ಞಧ್ವಂಸಿಗಳಾದ ಸಿಂಧೂದೇಶದ ನಾಗರಿಕತೆಯ ಕಾಲದ ಆರ್ಯವಿರೋಧಿಗಳಾದ ಜನರಿರಬೇಕು.

ಆರ್ಯ-ದ್ರಾವಿಡರು ಬೆರತು ಒಂದೇ ಜನಾಂಗವಾದ ಮೇಲೆ ದ್ರಾವಿಡರ ಅರ್ಧನಾರೀಶ್ವರ ಕಲ್ಪನೆಯಲ್ಲಿ ಅಡಗಿರುವ ಅದ್ವೈತ ಸಿದ್ಧಾಂತವು ಆರ್ಯ ಋಷಿಗಳ ಮೇಲೆ ಪ್ರಭಾವ ಬೀರದೆ ಹೋಗಲಿಲ್ಲ. ಪ್ರಾಜ್ಞರಾದ ಈ ಋಷಿಗಳು ಇದಕ್ಕೊಂದು ಸ್ಪಷ್ಟವಾದ ರೂಪವನ್ನು ಕೊಟ್ಟಿದ್ದು ಅವರ ಹಿರಿಮೆಗೆ ತಕ್ಕುದಾಗಿದೆ. ಏನೇನೂ ಇಲ್ಲದಂದು ಇದ್ದುದೊಂದು ಪರತತ್ವವೇ ಸೃಷ್ಟಿಗೆ ಮೂಲ; ಇದು ಶಕ್ತಿವಿಶಿಷ್ಟವಾದುದು. ಈ ಶಕ್ತಿಗೂ ಶಕ್ತನಿಗೂ ಅವಿನಾಭಾವಸಂಬಂಧವಿರುವುದರಿಂದ ಅವರು ಬೇರೆ ಬೇರೆಯಲ್ಲ. ಈ ಪರತತ್ವದ ಇಚ್ಛೆಯೇ ಸೃಷ್ಟಿಗೆ ಬೀಜರೂಪ. ಇನ್ನು ಅದರ ಜ್ಞಾನಮಯ ತಪಸ್ಸು ಸೃಷ್ಟಿಗೆ ಅಂಕುರರೂಪವಾಯಿತು. ಈ ತಪವನ್ನಾಚರಿಸಿತೆಂಬ ಕ್ರಿಯಾಶಕ್ತಿಯ ಆವಿರ್ಭಾವದಿಂದ ಜಗತ್ತೆಂಬ ಅಶ್ವತ್ಥವು ರೂಪುಗೊಂಡಿತು. ಈ ಸಿದ್ಧಾಂತವನ್ನು ನಾಸದೀಯ ಸೂಕ್ತದಲ್ಲಿ ಮಂತ್ರದ್ರಷ್ಟರಾದ ಮಹರ್ಷಿಗಳು ಬಹು ಸುಂದರವಾಗಿ ನಮ್ಮ ಮುಂದೆ ಇಟ್ಟಿರುವರು.

## ವೀರಶೈವ ಆಧ್ಯಾತ್ಮದರ್ಶನದ ಪ್ರಗತಿ

ಶೈವಧರ್ಮವು ಪ್ರಪಂಚದ ಧರ್ಮಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದ ಧರ್ಮವೆಂಬುದನ್ನೂ, ಈಗಿನಿಂದ ಸುಮಾರು ಐದು ಸಹಸ್ರ ವರ್ಷಗಳ ಹಿಂದೆಯೇ ಸಿಂಧೂನದಿಯ ತೀರದ ನಾಗರಿಕರಲ್ಲಿ ಈ ಧರ್ಮವು ಬೆಳೆದುನಿಂದು ಲಿಂಗಧಾರಣೆಯೂ ಲಿಂಗಪೂಜೆಯೂ ಆಸೇತು ಹಿಮಾಚಲದವರೆಗೂ ಅದರಾಚೆಗೂ ಪ್ರಚಲಿತವಾಗಿದ್ದುದನ್ನೂ, ಸೈಂಧವ ನಾಗರಿಕರಿಗೆ ಸೃಷ್ಟಿಸ್ಥಿತಿಲಯಕಾರಣನಾದ ಶಿವನೂ, ಶಕ್ತಿಯೂ, ಜೀವನೂ ಒಂದೆಯೆಂಬ (Divine triad)

ಶಕ್ತಿವಿಶಿಷ್ಟಾದ್ವೈತ ಕಲ್ಪನೆಯೂ, ಶಿವಯೋಗದಿಂದ ಮೋಕ್ಷಸಾಧನೆಯ ಕಲ್ಪನೆಯೂ ಇದ್ದು ವೆಂಬುದನ್ನೂ ಹಿಂದೆಯೇ ತಿಳಿಸಲಾಯಿತು. ಈ ಕಲ್ಪನೆಯು ವೇದಾಗಮೋಪನಿಷತ್ ಕಾಲ ದಿಂದ ಇಂದಿನವರೆಗೆ ಹೇಗೆ ಮುಂದುವರಿಯಿತೆಂಬುದು ವಿಚಾರಾರ್ಹ ಸಂಗತಿಯಾಗಿದೆ.

ಮಾನ್ಯ ದಿವಾಕರರ 'ವಚನಶಾಸ್ತ್ರ ರಹಸ್ಯ'ದಲ್ಲಿ ಹೇಳಿದಂತೆ "ಅಥರ್ವವು ಯಂತ್ರ, ತಂತ್ರ, ಮಂತ್ರ, ಜಾರಣ, ಮಾರಣ, ಅಭಿಚಾರ ಮುಂತಾದ ಸಂಗತಿಗಳಿಂದ ತುಂಬಿದೆ. ಮೊದಲಿನ ಮೂರು ವೇದಗಳಿಗೆ ತ್ರಯಿೀವಿದ್ಯೆ, ವೇದತ್ರಯೀ ಅಥವಾ ಬರಿಯ ತ್ರಯೀ ಎಂದೆನ್ನುವ ಪರಿಪಾಠವೂ ಉಂಟು. ವಿವಿಧ ದೇವತೆಗಳ ಸ್ತುತಿಸ್ತೋತ್ರ, ಯಜ್ಞಯಾಗಾದಿ ಕರ್ಮಗಳು ಮತ್ತು ಅವುಗಳ ವಿಧಿವಿಧಾನ, ಯಜ್ಞಮಂತ್ರಗಳು ಇವೇ ಈ ಮೂರು ವೇದಗಳ ಮುಖ್ಯ ವಿಷಯಗಳು. ವೇದಗಳಲ್ಲಿ ಚಿನ್ನದ ರಾಶಿಯಲ್ಲಿ ಮಿಂಚುವ ವಜ್ರಗೋಲಕಗಳಂತೆ ಮಾತ್ರ ಅಲ್ಲಲ್ಲಿ ಆಧ್ಯಾತ್ಮವಿಷಯಕ ಮಂತ್ರಗಳು ಕಂಡುಬರುವುವು. ನಿಜವಾದ ಅಧ್ಯಾತ್ಮ ಶಾಸ್ತ್ರವು ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದು." ವೇದಗಳಲ್ಲಿ ಅಲ್ಲೊಂದು ಇಲ್ಲೊಂದು ಕಂಡುಬರುವ ವಜ್ರಗೋಲಕಗಳಲ್ಲಿ ಅತಿ ಪ್ರಕಾಶಮಾನವಾದುದು ನಾಸದೀಯ ಸೂಕ್ತ. ಈ ಸೂಕ್ತವು ಋಗ್ವೇದದ ಕೊನೆಯಲ್ಲಿ ದಶಮಮಂಡಲದಲ್ಲಿದೆ. ಆ ಕಾಲದ ಆ ಪರಮ ಋಷಿಯ ಪರಾತ್ಪರದ ಪರಾನುಭವವೂ ಎರಡು ಮೂರು ಸಹಸ್ರ ವರ್ಷಗಳ ನಂತರ, ಪರಮಾನುಭವಿಯಾಗಿದ್ದ ಅಲ್ಲಮಪ್ರಭುವಿನ ಪರಾನುಭವವೂ ಒಂದೆಯಾಗಿರುವುದು ಸೋಜಿಗವೇ ಸರಿ. ಆದರೂ ಇದು ಮಾನ್ಯ ದಿವಾಕರರು 'ವಚನಶಾಸ್ತ್ರ ರಹಸ್ಯ'ದಲ್ಲಿ ಹೇಳಿದಂತೆ ಸಹಜ ವಾದುದೇ—"ವಿವಿಧ ದೇಶಕಾಲಗಳಲ್ಲಿಯ ಸಾಧುಗಳ ಆಚಾರ ವಿಚಾರಗಳನ್ನು ಹೋಲಿಸಿ, ಅವು ಅಲ್ಲಮಾದಿ ವಚನಕಾರರೊಡನೆ ಹೇಗೆ ಸರಿಯಾಗುವುವು ಇದನ್ನು ನೋಡಬಹುದು.... ಪರಮಾರ್ಥಿಗಳ ಬಳಗವು ಎಲ್ಲೆಲ್ಲಿಯೂ ಒಂದೆ ಎಂದು ಹೇಳಬಲ್ಲೆವು. ಅವರು ಉತ್ತರ ಧ್ರುವದಷ್ಟು ದಕ್ಷಿಣ ಧ್ರುವದಷ್ಟು ದೂರವಿರಲಿ ಅಥವಾ ಅವರು ಅತ್ಯಂತ ಸುಸಂಸ್ಕೃತ ಭಾಷೆ ಯನ್ನು ಇಲ್ಲವೇ ಗ್ರಂಥಸ್ಥವಾಗದ ಯಾವುದೊಂದು ನುಡಿಯನ್ನು ಮಾತಾಡುತ್ತಿರಲಿ, ಅವರು ಜಗದಾದಿಯಲ್ಲಿ ಹುಟ್ಟಿರಲಿ, ಇಲ್ಲವೆ ಜಗತ್ತಿನ ಪ್ರಳಯದ ಸಮಯಕ್ಕೆ ಹುಟ್ಟಲಿ...., ಅವರೆಲ್ಲರೂ ಒಂದೇ ಮಹಾಸಂಗೀತದಲ್ಲಿ ತಮ್ಮ ಸ್ವರಗೂಡಿಸುತ್ತಿರುವರು, ಒಂದೇ ನಲ್ನುಡಿ ಯನ್ನಾಡುತ್ತಿರುವರು, ಒಂದೇ ತಾಳಕ್ಕೆ ಹೆಜ್ಜೆಯನ್ನಿಕ್ಕುತ್ತಿರುವರು, ಅವರೆಲ್ಲರೂ ವಿಶ್ವಾತ್ಮ ರೊಡನೆ ಏಕರಸವಾಗಲು ಹಗಲಿರುಳು ಹೆಣಗುವರು." ಅಲ್ಲಮಪ್ರಭುವಿನ ಎರಡು ವಚನಗಳಿವು:

> ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮ ನೇಮ ಜಪತಪ ವಿಲ್ಲದಂದು, ನಿಮ್ಮನಾರು ಬಲ್ಲರು....ಗಗನ ಕಮಳ ಕುಸುಮ ಪರಿಮಳದಿಂದತ್ತಲು ಗುಹೇಶ್ವರಾ, ನಿಮ್ಮ ನಿಲವನಾರು ಬಲ್ಲರು?

> ಆದಿ ಅನಾದಿ ಇಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು, ಗುಹೇಶ್ವರ ನೊಬ್ಬನೇ ಇದ್ದೆಯಲ್ಲ ಇಲ್ಲದಂತೆ.

ಸೃಷ್ಟಿಗೆ ಮೊದಲು ಧರೆ, ಆಕಾಶ, ತ್ರೈಮಂಡಲ ಮೊದಲಾದುವೆಲ್ಲ ಸೃಷ್ಟಿಯಾಗದ ಮೊದಲು,—ಮೊದಲು ಎಂದು ಹೇಳಲು ಸಹ ಆಗದಿರುವಾಗ, ಏಕೆಂದರೆ ಆದಿ ಅನಾದಿ, ಇಂದು ನಾಳೆ, ಹಗಲು ರಾತ್ರಿ ಮೊದಲಾದ ಕಾಲನಿರ್ಣಯವಾದುದಾದರೂ ಸೃಷ್ಟಿಯಾದ ಮೇಲೆ ತಾನೆ—ಆದುದರಿಂದ ಆದಿ ಅನಾದಿ ಇಲ್ಲದಂದು ಇದ್ದುದು ಆ ಪರಾತ್ಪರ ಬ್ರಹ್ಮವು. ಇದ್ದುದು

ಎಂಬುದು ತಾನೆ ಹೇಗೆ ಹೇಳುವುದು? ಇದ್ದುದೆಂದರೆ ಸತ್ ಆಯಿತು. ಇಲ್ಲದುದೆಂದರೆ ಅಸತ್ ಆಯಿತು. ಆದುದರಿಂದ ಸದಸತ್ತುಗಳ ಕಲ್ಪನೆಗೆ ಮೊದಲೇ ಆ ಪರಾತ್ಪರವನ್ನು "ಇದ್ದಿಯಲ್ಲಾ ಇಲ್ಲದಂತೆ" ಎಂದು ಹೇಳಬೇಕಾಯಿತು. "ಒಬ್ಬನೇ" ಎಂದು ಹೇಳಿರುವುದು ಅದ್ವೈತ ಕಲ್ಪನೆಯ ಮಾತು. ಪರಾತ್ಪರವು "ಇದ್ದಿತು ಇಲ್ಲದಂತೆ" ಎಂದು ಹೇಳುವ ಮಾತಾದರೂ ಕಲ್ಪನೆಗೆ ಬರದ ವಿಷಯದ ಮಾತು; ಆದುದರಿಂದ ಅದರ ಇರುವು "ಗಗನ ಕಮಲ ಕುಸುಮ ಪರಿಮಳದಿಂದತ್ತಲು" ಎನ್ನಬೇಕಾಯಿತು. ಗಗನವೆಂಬುದು ಎಲ್ಲೋ ಇರುವುದು; ನಮ್ಮ ಕೈಗೆ ನಿಲುಕುವುದಲ್ಲ. ಅದರಲ್ಲಿ ಕಮಲಕುಸುಮವೆನ್ನುವುದು ಕಲ್ಪನೆಗೆ ಬಾರದು, ಎಂದಮೇಲೆ ಅದರ ಪರಿಮಳದ ಕಲ್ಪನೆಯೂ ಆಗುವುದೆಂತು? ಇನ್ನು ಆ ಪರಮಾತ್ಮನ ಇರುವಿನ ಕಲ್ಪನೆಯು ಆ ಪರಿಮಳಕ್ಕಿಂತಲೂ ಆಚಿನ ಮಾತೆಂದು ವಚನವು ಹೇಳಿದೆ. ಋಗ್ವೇದದಲ್ಲಿನ ನಾಸದೀಯ ಸೂಕ್ತವಿಷಯವಾದರೂ ಇದೆಯೆ:

> ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾ ಪರೋಯತ್..
> ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ ।
> ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾऽऽಸ ॥

**ಅರ್ಥ:** ತದಾನೀಂ–ಆಗ ಎಂದರೆ ಸೃಷ್ಟಿಗೆ ಮೊದಲು, ಅಸತ್ ನ ಆಸೀತ್–ಅಸತ್ ಇರಲಿಲ್ಲ, ಸತ್ ನೋಆಸೀತ್–ಸತ್ ಇರಲಿಲ್ಲ. ರಜಃ–ಲೋಕಗಳು, ನ ಆಸೀತ್–ಇರಲಿಲ್ಲ. ವ್ಯೋಮ–ಅಂತರಿಕ್ಷವೂ, ನೋ–ಇರಲಿಲ್ಲ. ಪರಃ ಯತ್ ನೋ–ಅದರಾಚೆಗೆ ಇರುವ (ಸ್ವರ್ಗಾದಿ) ಲೋಕಗಳೂ ಇರಲಿಲ್ಲ. ಮೃತ್ಯುಃ ನ ಆಸೀತ್–ಮರಣವು ಇರಲಿಲ್ಲ. ತರ್ಹಿ–ಹಾಗಾದರೆ, ಅಮೃತಂ ನ–ಮರಣವಿಲ್ಲದಿರುವುದೂ ಇರಲಿಲ್ಲ. ರಾತ್ರ್ಯಾ, ಅಹ್ನಃ ಪ್ರಕೇತಃ–ರಾತ್ರಿಯ ಹಗಲಿನ ಪರಿಜ್ಞಾನವನ್ನುಂಟುಮಾಡುವ ಸಾಧನವಾದರೂ, ನ ಆಸೀತ್–ಇರಲಿಲ್ಲ. ತತ್ ಏಕಂ–ಪರಾತ್ಪರವು ಅದ್ವಿತೀಯವಾಗಿ, ಸ್ವಧಯಾ–ಸ್ವಶಕ್ತಿಯಿಂದ, ಅವಾತಂ–ವಾಯು ವಿಲ್ಲದೆ, ಆನೀತ್–ಸ್ಫುರಣೆಗೊಂಡಿತ್ತು. ಅನ್ಯತ್ ಕಿಂಚನ–ಇನ್ನು ಬೇರೆ ಯಾವುದೂ, ನ ಆಸ–ಇರಲಿಲ್ಲ. ಪರಃ–ಅದರಾಚೆಗೆ ಏನೂ, ನ ಆಸ–ಇರಲಿಲ್ಲ.

**ಸಾರಾಂಶ:** ಸೃಷ್ಟಿಗೆ ಮೊದಲು ಸತ್ ಆಗಲೀ ಅಸತ್ ಆಗಲೀ, ಲೋಕಗಳಾಗಲೀ ಅಂತರಿಕ್ಷಗಳಾಗಲೀ, ಮರಣವಾಗಲೀ, ಅಮರತ್ವವಾಗಲೀ, ರಾತ್ರಿ ಹಗಲುಗಳನ್ನು ತೋರಿಸುವ ಸಾಧನವಾದ ಸೂರ್ಯನಾಗಲೀ ಇರಲಿಲ್ಲ. ಅದ್ವೈತವಾದ ಪರಬ್ರಹ್ಮವೊಂದೇ ವಾಯುವಿಲ್ಲದೆ ಇದ್ದರೂ ಶಕ್ತಿವಿಶಿಷ್ಟವಾಗಿದ್ದುದರಿಂದ ಚೈತನ್ಯಯುತವಾಗಿದ್ದಿತು. ಅದು ಹೊರತು ಬೇರೆ ಏನೂ ಇರಲಿಲ್ಲವೆಂದು ಭಾವ. ಆನೀತ್ ಎಂಬ ಪದವು **ಅನು = ಪ್ರಾಣನೇ** ಎಂಬ ಧಾತುವಿನಿಂದ ಹುಟ್ಟಿದ ಭೂತಕಾಲದ ಪದ. ಪ್ರಾಣವಿರುವ ಪ್ರಾಣಿಗಳಿಗೆ ವಾಯುವಿನ ಸಹಾಯದಿಂದ ಉಸಿರಾಡುವ ಮೂಲಕ ಚೈತನ್ಯ ಸ್ಫುರಣೆಯಾಗುವುದು. ವಾಯುವೇ ಪರಬ್ರಹ್ಮನಿಂದ ಮುಂದೆ ಸೃಷ್ಟಿಸಲ್ಪಡುವುದು. ಆದುದರಿಂದ ಆ ಪರಾತ್ಪರಕ್ಕೆ ಚೈತನ್ಯ ಸ್ಫುರಣೆಯಾಗುವುದು ವಾಯುವಿನಿಂದಲ್ಲ; '**ಸ್ವಧಯಾ**' ಎಂದರೆ ಅದು ಶಕ್ತಿವಿಶಿಷ್ಟವಾಗಿರುವುದರಿಂದ ಅದರ ಚೈತನ್ಯಸ್ಫುರಣೆಯಾಗುವುದು. ಸಾಯಣಭಾಷ್ಯದಲ್ಲಿ **ಸ್ವಧಯಾ-ಸ್ವಸ್ಮಿನ್ ಧೀಯತೇ ಧ್ರಿಯತ ಆಶ್ರಿತ್ಯ ವರ್ತತ ಇತಿ ಸ್ವಧಾ ಮಾಯಾ । ತಯಾ ತದ್ಬ್ರಹ್ಮೈಕಮವಿಭಾಗಾಪನ್ನಮಾಸೀತ್** ಎಂದು ಹೇಳಿದೆ. ತನ್ನಲ್ಲಿರುವ ಶಕ್ತಿ ಸಾಮರ್ಥ್ಯಕ್ಕೆ ಸ್ವಧಾ ಎಂದು ಹೆಸರು. ಇದನ್ನೇ ಶ್ವೇತಾಶ್ವತರದಲ್ಲಿ ಮಾಯೆಯೆಂದು ಕರೆದಿರುವಂತೆ, ನಾಸದೀಯಸೂಕ್ತದ

ಸಾಯಣಭಾಷ್ಯದಲ್ಲಿ ಮಾಯೆಯೆಂದು ಕರೆದಿದೆ. ಆ ಶಕ್ತಿಯು ಬ್ರಹ್ಮದಲ್ಲಿ ಅವಿಭಾಗವಾಗಿದೆ. "**ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ಚ ಮಹೇಶ್ವರಂ**" ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿರುವುದಾದರೂ ಶಕ್ತಿವಿಶಿಷ್ಟ ಪರಶಿವಬ್ರಹ್ಮದ ವಿಷಯವೆ. ಹಗಲು ರಾತ್ರಿಗಳೂ ಸತ್ ಅಸತ್‌ಗಳೂ ಇಲ್ಲದಾಗ ಇದ್ದುದು ಏನೆಂಬುದನ್ನು ಮತ್ತೊಂದು ಶ್ವೇತಾಶ್ವತರ ಶ್ರುತಿಯು ನಾಸದೀಯಸೂಕ್ತದ ಮಾತಿನಲ್ಲಿಯೇ ವಿವರಿಸಿ, ಆಗಲಿದ್ದುದು ಪರಶಿವಬ್ರಹ್ಮವೇ ಎಂದು ಹೇಳುತ್ತದೆ.

ಯದಾಽತಮಸ್ತನ್ನದಿವಾ ನ ರಾತ್ರಿಃ ನ ಸನ್ನಚಾಸಚ್ಛಿವ ಏವ ಕೇವಲಃ ।
ತದಕ್ಷರಂ ತತ್ ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ ॥

ಈ ಮಂತ್ರದ ವಿಜ್ಞಾನ ಭಗವತ್ಕೃತ ವಿವರಣದಲ್ಲಿ "**ನ ಸದಾಸೀನ್ನೋಽಸದಾಸೀತ್ತಮ ಆಸೀದಿತಿ ಶ್ರುತ್ಯಂತರೇಣ**" ಎಂದು ಹೇಳಿ ಶ್ವೇತಾಶ್ವತರ ಶ್ರುತಿಗೆ ನಾಸದೀಯಸೂಕ್ತವೇ ಆಧಾರವೆಂಬುದನ್ನು ಸ್ಪಷ್ಟಮಾಡಿದೆ. ಆದುದರಿಂದ, ನಾಸದೀಯಸೂಕ್ತದಲ್ಲಿ ಹೇಳಿರುವ ಆದಿಕಾರಣವು ಪರಶಿವಬ್ರಹ್ಮವೆಂಬುದನ್ನು ಶ್ವೇತಾಶ್ವತರ ಉಪನಿಷತ್ತು ಸ್ಪಷ್ಟಮಾಡುತ್ತದೆ. ಅಲ್ಲದೆ ಕೇವಲ ಎಂದರೆ ಅದ್ವಿತೀಯವಾಗಿದ್ದ ಪರಶಿವಬ್ರಹ್ಮವು "**ತತ್ ಸವಿತುರ್ವರೇಣ್ಯಂ**" ಎಂದು ಹೇಳಿ, ಗಾಯತ್ರೀ ಮಂತ್ರದಲ್ಲಿ ಸ್ತುತಿಸಲ್ಪಟ್ಟಿರುವುದೂ ಪರಶಿವಬ್ರಹ್ಮವೇ ಎಂಬುದನ್ನೂ ಸ್ಪಷ್ಟಮಾಡಿದೆ. "**ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ**" ಎಂದು ಹೇಳಿರುವುದರಲ್ಲಿ ಜ್ಞಾನಶಕ್ತಿಯ ಆವಿರ್ಭಾವವು ಹೇಳಲ್ಪಟ್ಟಿದೆ. ನಾಸದೀಯಸೂಕ್ತದಲ್ಲಿ "**ತಪಸಸ್ತನ್ಮಹಿನಾಽಜಾಯತೈಕಂ**" ಎಂದೂ, "**ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮ ಯದಾಸೀತ್**" ಎಂದೂ ಹೇಳಿರುವುದರಲ್ಲಿ, ಜ್ಞಾನಶಕ್ತಿಯ ಮತ್ತು ಇಚ್ಛಾ ಶಕ್ತಿಯ ಆವಿರ್ಭಾವವು ಆ ಅದ್ವಯವಾದ ಪರಬ್ರಹ್ಮದಲ್ಲಿ ಪ್ರಕಟವಾಗಿ, ಜಗದುತ್ಪತ್ತಿಗೆ ಆರಂಭವಾದುದು ಕಂಡುಬರುವುದು. ಇದರ ಸಾಯಣಭಾಷ್ಯದಲ್ಲಿ "**ತಪಸಃ ಸ್ರಷ್ಟವ್ಯಪರ್ಯಾಲೋಚನರೂಪತ್ವಂ ಚಾನ್ಯತ್ರಾಮ್ನಾಯತೇ। ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ। ಮುಂ. ಉ. ೧-೧-೯ ಇತಿ॥**" ಎಂದು ಹೇಳಿರುವುದು ಮೇಲೆ ಹೇಳಿರುವಂತೆ ಜ್ಞಾನಶಕ್ತಿಯ ಆವಿರ್ಭಾವವಾಗುವುದನ್ನು ಸಮರ್ಥಿಸುತ್ತದೆ. ಸಾಯಣಭಾಷ್ಯದಲ್ಲಿ "**ಮನಸೋಽಂತಃಕರಣಸ್ಯ ಸಂಬಂಧಿ ವಾಸನಾಶೇಷೇಣ ಮಾಯಾಯಾಂ ವಿಲೀನೇಽಂತಃಕರಣೇ ಸಮವೇತಂ**" ಎಂದು ಹೇಳಿರುವುದು ಕ್ರಿಯಾಶಕ್ತಿಯ ಆವಿರ್ಭಾವವಾಗುವುದೆಂಬುದನ್ನು ಸಮರ್ಥಿಸುತ್ತದೆ. ನಾಸದೀಯಸೂಕ್ತಕ್ಕೆ ಆಧಾರವಾಗಿ ತೆಗೆದುಕೊಂಡಿರುವ ಮುಂಡಕಶ್ರುತಿಯಲ್ಲಿ ತಪಸ್ಸು ಜ್ಞಾನಮಯವಾದುದೆಂದು ಹೇಳಿದೆಯಷ್ಟೆ. ಅದರ ಹಿಂದಿನ ಮಂತ್ರದಲ್ಲಿ ಸೃಷ್ಟ್ಯುನ್ಮುಖವಾದಾಗ ಪರಬ್ರಹ್ಮವು ಅಂಕುರಾಯಮಾಣವಾದ ಬೀಜದಂತೆ ಉಬ್ಬುವುದೆಂದು ಹೇಳಿದೆಯೆಂದು ಅದರ ಶಾಂಕರ ಭಾಷ್ಯವು ಹೇಳುತ್ತದೆ. "**ತಪಸಾ ಚೀಯತೇ ಬ್ರಹ್ಮ**" ಎಂದು ಮೊದಲಾಗುವ ಈ ಮಂತ್ರದ ಶಂಕರಭಾಷ್ಯದಲ್ಲಿ ಜಗತ್ತು ಸೃಷ್ಟಿಯಾಗುವ ಮೊದಲ ಸ್ಥಿತಿಯು "**ಜ್ಞಾನಕ್ರಿಯಾ ಶಕ್ತ್ಯಾಧಿಷ್ಠಿತ**"ವೆಂದು ಹೇಳಿದೆ. ಇದರ ಅರ್ಥವನ್ನು ಆನಂದಗಿರಿಯು ಟೀಕೆಯಲ್ಲಿ ಹೀಗೆ ಸ್ಪಷ್ಟಮಾಡಿದ್ದಾನೆ—"**ಜ್ಞಾನಶಕ್ತಿಭಿಃ ಕ್ರಿಯಾಶಕ್ತಿಭಿಶ್ಚಾಧಿಷ್ಠಿತಂ ವಿಶಿಷ್ಟಂ**". ಹೀಗೆ ಜ್ಞಾನಶಕ್ತಿ ಕ್ರಿಯಾಶಕ್ತಿಗಳಿಂದ ವಿಶಿಷ್ಟವಾದುದು ಜಗತ್ತಿನ ಸೃಷ್ಟಿಗೆ ಕಾರಣವಾಯಿತೆನ್ನುವುದು, ನಿಷ್ಕಲ ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾದಮೇಲೆ ಸಕಲನಿಷ್ಕಲವಾಗಿ, ಸಕಲವಾಗಿ, ಸೃಷ್ಟಿಗೆ

ಕಾರಣವಾಗುವುದೆನ್ನುವ ವೀರಶೈವ ಸಿದ್ಧಾಂತಕ್ಕೆ ಸರಿಹೋಗುವುದು. **"ಲೋಕಾದಿ ಲೋಕಂಗಳೇನೂ ಇಲ್ಲದಂದು, ನೆನಹು ನಿಷ್ಪತ್ತಿಯಾಗಿತ್ತು ನೋಡಾ; ನೆನಹಿಲ್ಲದ ಘನವನ್ನು ನೆನದ ನೆನಹೇ ಸವಯಪವಾಗಿ ಚಿತ್ತನಿಸಿಕೊಂಡಿತ್ತು."** ಎಂದು ಮೊದಲಾಗುವ ತೋಂಟದ ಸಿದ್ಧಲಿಂಗೇಶನ ವಚನದಲ್ಲಿ ಹೇಳಿರುವ ನೆನಹಿಲ್ಲದ ಘನವೇ ನಿರ್ವಿಶೇಷ ಪರಶಿವಬ್ರಹ್ಮ. ಅದು ನೆನದ ನೆನಹೇ ಇಚ್ಛಾಶಕ್ತಿಯಾಗುವುದು.

> ಏನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂದ ತಾನೆ ಸ್ವಯಂಭು ಲಿಂಗವಾಯಿತ್ತು; ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ; ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ; ಆತ್ಮನಿಂದಾದುದು ಆಕಾಶ; ಆಕಾಶದಿಂದಾದುದು ವಾಯು; ವಾಯುವಿನಿಂದಾದುದು ಅಗ್ನಿ; ಅಗ್ನಿಯಿಂದಾದುದು ಅಪ್ಪು; ಅಪ್ಪುವಿನಿಂದಾದುದು ಪೃಥ್ವಿ; ಪೃಥ್ವಿಯಿಂದಾದುದು ಸಕಲ ಜೀವವೆಲ್ಲ; ಇವೆಲ್ಲ ನಿಮ್ಮ ನೆನಹುಮಾತ್ರದಿಂದಾದವು, ಸಿಮ್ಮಲಿಗೆಯ ಚೆನ್ನರಾಮಾ.

ನಿರವಯ ನಿಷ್ಕಲ ನಿರಂಜನ ಪರಶಿವಬ್ರಹ್ಮವು, ಶಿವಶಕ್ತ್ಯಾತ್ಮಕ ಅರ್ಥಾತ್ ಶಕ್ತಿವಿಶಿಷ್ಟ ಶಿವನೆನಿಸುವುದಕ್ಕಿಂತ ಮೊದಲು ಶಿವಾದ್ವೈತಸ್ಥಿತಿಯಲ್ಲಿರುವುದು, ಅನಂತರ, ಅದು ಶಕ್ತಿವಿಶಿಷ್ಟವಾಗಿ ಆತ್ಮವಾಗಿ ಪಂಚಭೂತಗಳಾಗಿ ಸೃಷ್ಟಿಯು ಆವಿರ್ಭಾವವಾಗುವುದು, ಎಂಬ ವಚನಕಾರರ ನಿಲುವು ಉಪನಿಷತ್ ನಿಲುವಿಗೆ ಸರಿಹೊಂದುತ್ತದೆ. ತೈತ್ತರೀಯದಲ್ಲಿಯೂ ಪಂಚಭೂತಗಳ ಆವಿರ್ಭಾವವು ಹೀಗೆಯೇ ಹೇಳಿದೆ.

> ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ । (ತೈ. ವ. ೨. ಮ. ೧)

ಇದೇ ತೈತ್ತರೀಯ ಉಪನಿಷತ್ತಿನಲ್ಲಿ (ತೈ. ಅನು ೬) **"ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ"** ಎಂದರೆ ಪರಬ್ರಹ್ಮನು ತಾನು ಅನೇಕವಾಗಿ ಬೆಳೆಯುವೆನು ಎಂದು ಇಚ್ಛಿಸಿದನೆಂದು ಹೇಳಿರುವುದರಲ್ಲಿ ಇಚ್ಛಾಶಕ್ತಿಯ ಆವಿರ್ಭಾವವನ್ನು ಹೇಳಿದಂತಾಯಿತು. **"ಸತಪೋಽತಪ್ಯತ"** ಎಂದರೆ ಅವನು ತಪಸ್ಸನ್ನು ಆಚರಿಸಿದನೆಂದು ಹೇಳಿರುವುದರಲ್ಲಿ ಜ್ಞಾನಶಕ್ತಿಯ ಆವಿರ್ಭಾವವನ್ನು ಹೇಳಿದಂತಾಯಿತು. ಏಕೆಂದರೆ ತಪಸ್ಸೆಂಬುದು ಜ್ಞಾನಮಯತಪಸ್ಸೆಂದೂ ಮುಂಡಕೋಪನಿಷತ್ತಿನಲ್ಲಿ ಹೇಳಿರುವುದನ್ನು ಹಿಂದೆಯೇ ಹೇಳಿದೆ. **"ಸತಪಸ್ತಪ್ತ್ವಾ ಇದಂ ಸರ್ವಂ ಅಸೃಜತ"** ಎಂದರೆ ಅವನು ತಪಸ್ಸನ್ನು ಮಾಡಿ ಎಲ್ಲವನ್ನು ಸೃಷ್ಟಿಸಿದನು ಎಂದು ಹೇಳುವಲ್ಲಿ ಕ್ರಿಯಾಶಕ್ತಿಯ ಆವಿರ್ಭಾವವನ್ನು ಹೇಳಿದಂತಾಯಿತು. **"ತತ್ ಸೃಷ್ಟ್ವಾ ತದೇವಾನುಪ್ರಾವಿಶತ್"** ಎಂದರೆ ಸೃಷ್ಟಿಸಿದುದರಲ್ಲಿ ಅವನು ಅನುಪ್ರವೇಶ ಮಾಡಿದನು ಎಂದು ಹೇಳಿರುವುದು ಸಹಾ ಶರಣರ ಅನುಭಾವ ವಚನಗಳಿಗೆ ಸರಿಹೊಂದುವುದು. **"ಶಿವ····ವಿಶ್ವವ ರಚಿಸಿ ಏನು ವಿಶ್ವಕ್ಕೆ ಹೊರಗಾಗಿದ್ದನೆ? ಇಲ್ಲ; ವಿಶ್ವಮಯ ತಾನಾದನು"** ಎಂದು ವಚನಸಾಹಿತ್ಯದಲ್ಲಿ ಹೇಳಿರುವುದು ಶಿವನು ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಅನುಪ್ರವೇಶ ಮಾಡಿದನೆಂಬುದನ್ನೇ ಹೇಳುವುದು.

ಮೇಲಿನ ವಿವೇಚನೆಯಿಂದ, ಪರಶಿವಬ್ರಹ್ಮವು ಶಕ್ತಿವಿಶಿಷ್ಟವಾಗುವುದರಿಂದ ಜೀವಜಗತ್ತುಗಳ ಉದಯವಾಗುವುದೆಂಬ ವೀರಶೈವದ ನಿಲುವಿಗೆ ಋಗ್ವೇದದ ನಾಸದೀಯಸೂಕ್ತದ ಆಧಾರವಿರುವುದೆಂಬುದೂ, ನಾಸದೀಯಸೂಕ್ತವೇ ಉಪನಿಷತ್‌ಸಾಹಿತ್ಯಕ್ಕೆ ಮುನ್ನುಡಿಯಂತಿರುವುದರಿಂದ ಉಪನಿಷತ್‌ಸಾಹಿತ್ಯಕ್ಕೆ ಅನುಸಾರವಾಗಿಯೇ ವೀರಶೈವರ ನಿಲುವು

ಇರುವುದೆಂಬುದೂ ವ್ಯಕ್ತವಾಯಿತು. ಅಷ್ಟೇಕೆ? ಶ್ರೀ ಶಂಕರಾಚಾರ್ಯರ ಭಾಷ್ಯದ ಪ್ರಕಾರವೂ ಪರಬ್ರಹ್ಮವು ಶಕ್ತಿವಿಶಿಷ್ಟವಾಗುವುದರಿಂದಲೇ ಸೃಷ್ಟಿಯಾಗುವುದೆಂಬುದನ್ನೂ ತೋರಿಸಲಾಯಿತು. ಆದರೆ ಶಾಂಕರಸಿದ್ಧಾಂತದ ಪ್ರಕಾರ, ಶ್ರೀಯುತ ವೈ. ಸುಬ್ಬರಾಯರ 'ಸಭಾಷ್ಯಮುಂಡಕೋಪನಿಷತ್ತಿ'ನಲ್ಲಿ ಹೇಳಿರುವಂತೆ "ನಿಜವಾಗಿ ನೋಡಿದರೆ ಸೃಷ್ಟಿಯೇ ಸುಳ್ಳಾದ್ದರಿಂದ ಅದಕ್ಕೆ ಕ್ರಮವೇ ಇಲ್ಲ. ಸೃಷ್ಟಿಯಲ್ಲಿ ತೋರುವ ವಸ್ತುಗಳು...... ನಿಜವೆಂದು ತೋರುವವರೆಗೂ ಅವು ಹುಟ್ಟುವುದಕ್ಕೆ ಒಂದು ಕ್ರಮವು ಬೇಕೆಂದು ತೋರುವುದು. ಇದಕ್ಕಾಗಿ ಉಪನಿಷತ್ತುಗಳಲ್ಲಿ ಕ್ರಮವನ್ನು ಅಲ್ಲಲ್ಲಿ ತಿಳಿಸಿರುತ್ತದೆ" ಎಂಬುದು ಶಾಂಕರ ಸಿದ್ಧಾಂತದ ನಿಲುವು. ಈ ವಿಷಯದಲ್ಲಿ, ಸ್ವಭಾವಿಕವಾಗಿಯೇ ಭಿನ್ನಾಭಿಪ್ರಾಯವಿದೆ. ಕನಸಿನಲ್ಲಿ ತಿಂದ ಬೆಣ್ಣೆಯನ್ನು ತೆಗೆಯಲು ಕಡೆದವರಾರು, ಕಾಸಿದವರಾರು, ಹೆಪ್ಪು ಹಾಕಿದವರಾರು ಎಂಬುದನ್ನು ವಿಚಾರಿಸುವಂತೆ ಇಲ್ಲದ ಜಗತ್ತಿನ ಸೃಷ್ಟಿಗೆ ಕ್ರಮವನ್ನು ಹುಡುಕುವುದು— ಎಂದು ಮೂಗುಮುರಿಯುವುದುಂಟು; ಆದರೆ ಶ್ರೀ ಶಂಕರಾಚಾರ್ಯರಂತಹ ಮೇಧಾವಿಗಳ ನಿಲುವನ್ನು ಇಷ್ಟು ಸುಲಭವಾಗಿ ತೆಗಳಲಾಗುವುದಿಲ್ಲ. ಅದು ಹೇಗೇ ಇರಲಿ ವಚನಕಾರರ ನಿಲುವಂತೂ ಬೇರೆ. ಈ ಜಗತ್ತು ಸುಳ್ಳಲ್ಲ, ಜೀವಜಗತ್ತುಗಳು ಶಿವಾಂಶವಾದುವೆನ್ನುವುದು ವೀರಶೈವ ಶರಣರ ಸಿದ್ಧಾಂತ. ಮಹದೇವಿಯಕ್ಕನ ಸೃಷ್ಟಿವಚನದಲ್ಲಿಯೇ "ದೇಹಸಂಬಂಧವಂ ಶಿವ ತನ್ನ ಚಿದಂಶಿಕನಪ್ಪ ಆತ್ಮಂಗೆ ಸಂಬಂಧಿಸಿದ"ನೆಂದು ಹೇಳಿದೆ.

ಸ್ವಶಕ್ತಿ ಕ್ಷೋಭಮಾತ್ರೇಣ ಸ್ಥಲಂ ತದ್ವಿವಿಧಂ ಭವೇತ್ ।
ಏಕಂ ಲಿಂಗ ಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ ॥—ಅನುಭವಸೂತ್ರ

ಅನಾದ್ಯವಿದ್ಯಾ ಸಂಬಂಧಾತ್ ತದಂಶೋ ಜೀವನಾಮಕಃ ।—ಸಿದ್ಧಾಂತ ಶಿಖಾಮಣಿ
ಶರೀರಾತ್ ಪೃಥಗಾತ್ಮಾನಮಾತ್ಮಾನಃ ಪೃಥಗೀಶ್ವರಃ ॥—ಸಿದ್ಧಾಂತ ಶಿಖಾಮಣಿ

ಈ ಆಧಾರಗಳಿಂದ ಜೀವನು ಪರಶಿವಬ್ರಹ್ಮದ ಅಂಶವೆಂಬುದೂ ಅಂಶಿಯಲ್ಲಿ ಅಂಶವು ಬೆರೆತು ಸಮರಸವಾಗುವುದಕ್ಕೆ ಮೊದಲು ಭೇದವಿರುವುದೆಂಬುದೂ ಸ್ಪಷ್ಟ. ಆದರೂ ಪರಶಿವಬ್ರಹ್ಮವು ಸರ್ವಾಂತರ್ಯಾಮಿಯಾಗಿರುವುದರಿಂದ ಅಂಶವೆಂದರೆ ಅಂಶಿಯಲ್ಲಿ ಕೊರೆದು ತೆಗೆದು ಬೇರೆ ಮಾಡಿದ ತುಂಡಲ್ಲ. ಎಲೆ, ಹೂ, ಕಾಯಿಗಳು ಮರದ ಅಂಶಗಳಾಗಿರುವಂತೆ, ಘಟಾಕಾಶವು ಮಹಾಕಾಶದ ಅಂಶವಾಗಿರುವಂತೆ ಜೀವಜಗತ್ತುಗಳು ಪರಶಿವಬ್ರಹ್ಮದ ಅಂಶಗಳು. ಮಣ್ಣಿನಂಶವಿಲ್ಲದೆ ಮಡಕೆಯಾಗುವುದಿಲ್ಲ; ಚಿನ್ನದ ಅಂಶವಿಲ್ಲದೆ ಆಭರಣವಾಗುವುದಿಲ್ಲ; ಸಮುದ್ರದ ಅಲೆ ನೊರೆ ತೆರೆಗಳಲ್ಲಿ ಸಮುದ್ರದ ಅಂಶವಿದೆ. ಆದರೆ ಶ್ರೀ ಶಂಕರಾಚಾರ್ಯರ ನಿಲುವು ಇದಕ್ಕೆ ವಿರುದ್ಧವಾಗಿದೆ. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ-ನಾಪರಃ" ಎಂಬುದು ಅವರ ಸಿದ್ಧಾಂತ. "ಬ್ರಹ್ಮವು ಸತ್ಯ, ಜಗತ್ತು ಮಿಥ್ಯವು, ಜೀವನು ಬ್ರಹ್ಮನೇ ಅಲ್ಲದೆ ಬೇರೆಯಲ್ಲ. ಜೀವನು ಬ್ರಹ್ಮನೇ ಹೊರತು ಅಂಶವಲ್ಲ, ಏಕೆಂದರೆ ಪರಬ್ರಹ್ಮವು ನಿರವಯವು" ಎಂಬುದು ಅವರ ವಾದ. ಬ್ರಹ್ಮಸೂತ್ರದಲ್ಲಿ "ಅಂಶೋನಾ-ನಾವ್ಯಪದೇಶಾತ್" ಎಂದು ಹೇಳಿರುವುದನ್ನೂ, ಗೀತೆಯಲ್ಲಿ "ಮಮೈವಾಂಶೋ ಜೀವ ಲೋಕೇ ಜೀವಭೂತಸ್ಸನಾತನಃ" ಎಂದು ಹೇಳಿರುವುದನ್ನೂ ಅಲ್ಲಿ ಹೇಳಿರುವಂತೆಯೇ ಅರ್ಥಮಾಡಿದರೆ ಶಾಂಕರಸಿದ್ಧಾಂತಕ್ಕೆ ಹೊಂದುವುದಿಲ್ಲ. ಅಲ್ಲಿ ಜೀವಜಗತ್ತುಗಳು ಬ್ರಹ್ಮದ ಅಂಶವೆಂದೇ ಹೇಳಿದೆ. ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರದ, ಅಥವಾ ಗೀತೆಯ ಆಧಾರವನ್ನು ನಿರಾಕರಿಸುವಂತಿಲ್ಲ. ಆದುದರಿಂದ ಹೇಗಾದರೂ ತಮಗೆ ಹೊಂದುವ ಅರ್ಥ

ವನ್ನು ಜಗ್ಗಿ ಎಳೆಯಬೇಕು. ಆದುದರಿಂದ "ಅಂಶ ಇವ" ಎಂದರೆ ಅಂಶವೋ ಎನ್ನುವಂತೆ ಕಲ್ಪಿಸಿಕೊಳ್ಳಬೇಕೆಂದು ಹೇಳಿದ್ದಾರೆ. ಇದರಿಂದ ಶ್ರೀ ಶಂಕರರ ಅಭಿಪ್ರಾಯವು ಜೀವನು ಬ್ರಹ್ಮದ ಅಂಶವಲ್ಲ, ಆದರೆ ಹಾಗೆ ಕಲ್ಪಿಸಿಕೊಳ್ಳಬೇಕು, ಎಂದಾಯಿತು. ತಂದೆಯು ಪುತ್ರನನ್ನು ಪುತ್ರನೋ ಎಂಬಂತೆ ಕಲ್ಪಿಸಿಕೊಳ್ಳುವುದಿಲ್ಲ, ಏಕೆಂದರೆ ಅವನು ಅವನ ಪುತ್ರನೇ. ಗುರುವು ಶಿಷ್ಯನನ್ನು ಪುತ್ರನೋ ಎಂಬಂತೆ ಕಲ್ಪಿಸಿಕೊಳ್ಳಬೇಕು. "ಇವ" ಪದಪ್ರಯೋಗದ ಪರಿಣಾಮವಿದು. ಶಾಂಕರಸಿದ್ಧಾಂತವನ್ನು ಬಲ್ಲವರಾರೂ ಜೀವನು ಬ್ರಹ್ಮದ ಅಂಶವೆನ್ನುವುದಿಲ್ಲ. ಶಾಂಕರಭಾಷ್ಯಗಳನ್ನು ಕನ್ನಡಿಸಲು ಶ್ರೀಮನ್ಮಹಾರಾಜರು ಆರಿಸಿಕೊಂಡಿರುವಷ್ಟು ಹಿರಿಯ ವಿದ್ವಾಂಸರಾದ ವೈ. ಸುಬ್ಬರಾಯರು ಅವರ ಗೀತಾಭಾಷ್ಯದ ಗ್ರಂಥದ "ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ" ಎಂಬುದರ ಅಡಿ ಟಿಪ್ಪಣಿಯಲ್ಲಿ ಹೀಗೆ ಬರೆದಿದ್ದಾರೆ—"ಜೀವನು ನಿಜವಾಗಿ ಪರಮಾತ್ಮನ ಅಂಶವಲ್ಲ....ಉಪಾಧಿಯಿಂದ ಪರಮಾತ್ಮನ ಒಂದು ಭಾಗವಾಗಿರುವಂತೆ....ತೋರುತ್ತಾನೆ" ಆದುದರಿಂದ ಶಾಂಕರ ಸಿದ್ಧಾಂತದಂತೆ ಜೀವನು ಬ್ರಹ್ಮದ ಅಂಶವಲ್ಲ. ಘಟದಲ್ಲಿ ಆಕಾಶದ ಅಂಶವಿರುವುದೇ ಹೊರತು ಆಕಾಶವೋ ಎನ್ನುವಂತೆ ಹೊಗೆಯೋ ಹಬೆಯೋ, ಇರುವುದಿಲ್ಲ. ಘಟಾಕಾಶದ ಉದಾಹರಣೆಯನ್ನು ತೆಗೆದುಕೊಂಡು ಸ್ಥಲಪದದಿಂದ ನಿರ್ದೇಶಿಸಲ್ಪಟ್ಟ ಬ್ರಹ್ಮವು, ಲಿಂಗ ಮತ್ತು ಅಂಗ (ಜೀವ) ಎಂಬ ಎರಡು ಭಾಗವಾಗುವುದೆಂದು ಅನುಭವಸೂತ್ರದಲ್ಲಿ ಸ್ಪಷ್ಟವಾಗಿ ಹೇಳಿದೆ. ಸಿದ್ಧಾಂತ ಶಿಖಾಮಣಿಯ ನಿಲುವೂ ಇದೇ ಆಗಿದೆ. ಇದು ಶಾಂಕರ ಸಿದ್ಧಾಂತಕ್ಕೆ ವಿರುದ್ಧವಾದ ನಿಲುವು. ಈ ವಿಷಯದಲ್ಲಿ ಶ್ರೀ ಶಂಕರಾಚಾರ್ಯರಿಗೂ ಇತರರಿಗೂ ಇರುವ ಭಿನ್ನಾಭಿಪ್ರಾಯಗಳನ್ನು ಮಾನ್ಯ ರಾಧಾಕೃಷ್ಣನ್ನರವರು ಅವರ "Indian Philosophy" (Volume II) ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ:

"The passage that the Jiva is a part (amsa) of the highest reality is taken by Shankara to mean 'part as it were' (amsa iva) since Brahman who is not composed of parts cannot have parts in the literal sense. Bhaskara and Vallabha assert that the Jiva is part of the Lord because there is difference as well as identity between them. Ramanuja, Nimbarka, Baladeva and Srikanta think that the Jiva is a real part of Brahman, even as light issuing from a luminous object like the fire or the sun is a part of that object."

ಜೀವನು ಪರಬ್ರಹ್ಮದ ಅಂಶವೆಂಬುದನ್ನು ಬೃಹದಾರಣ್ಯಕ ಭಾಷ್ಯದಲ್ಲಿ (೨-೧-೨೦) ಶ್ರೀ ಶಂಕರಾಚಾರ್ಯರು ಖಂಡಿಸಿರುತ್ತಾರೆ. ಇದರಿಂದ ಶಾಂಕರ ಸಿದ್ಧಾಂತದಂತೆ ಜೀವನು ಬ್ರಹ್ಮದ ಅಂಶವಲ್ಲವೆಂದೂ ಇತರ ಭಾಷ್ಯಕಾರರು ಅದನ್ನು ಒಪ್ಪಿಲ್ಲವೆಂದೂ ತಿಳಿದುಬರುವುದು. ಮೇಲಿನ ವೀರಶೈವ ಆಧಾರಗಳು ಸಹಾ, ಶ್ರೀ ಶಂಕರಾಚಾರ್ಯರು ಜೀವನು ಬ್ರಹ್ಮನ ಅಂಶವಲ್ಲವೆನ್ನುವುದನ್ನು ಒಪ್ಪಿಲ್ಲ.

ಜೀವ ಬ್ರಹ್ಮರ ಸಂಬಂಧದ ವಿಷಯದಲ್ಲೂ, ಇದನ್ನನುಸರಿಸಿದ ಪ್ರಶ್ನೆಯಾದ ಮೋಕ್ಷ ಸ್ವರೂಪ ಮತ್ತು ಅದನ್ನು ಸಾಧಿಸುವ ಉಪಾಯ ಈ ವಿಷಯಗಳಲ್ಲೂ ಉಪನಿಷತ್‌ಕಾಲದಿಂದಲೂ ಭಿನ್ನಾಭಿಪ್ರಾಯಗಳಿವೆ. ಕೆಲವು ಶ್ರುತಿಗಳು ಅದ್ವೈತವನ್ನು ಹೇಳಿದರೆ ಕೆಲವು

ದ್ವೈತವನ್ನು ಹೇಳುವುವು. ಆದುದರಿಂದಲೇ ವಿವಿಧ ಮಂತ್ರಗಳಲ್ಲಿ ಏಕವಾಕ್ಯತೆಯನ್ನು ತೋರಿಸಲು ವೇದವ್ಯಾಸರಿಂದ ವೇದಾಂತ ಸೂತ್ರಗಳು ರಚಿಸಲ್ಪಟ್ಟವು. ಶ್ರೀ ಶಂಕರಾಚಾರ್ಯರು ಅವರ ವೇದಾಂತ ಸೂತ್ರ ಭಾಷ್ಯದಲ್ಲಿ "ವೇದಾಂತ ವಾಕ್ಯ ಕುಸುಮ ಗ್ರಥನಾರ್ಥತ್ವಾತ್ ಸೂತ್ರಾಣಾಂ" ಎಂದರೆ ವೇದಾಂತವಾಕ್ಯಗಳೆಂಬ ಕುಸುಮಗಳನ್ನು ಕಟ್ಟುವ ಸೂತ್ರಗಳೇ ವೇದಾಂತಸೂತ್ರಗಳೆಂದು ಹೇಳಿದ್ದಾರೆ. ಈ ವೇದಾಂತಸೂತ್ರವನ್ನು ರಚಿಸುವಾಗಲೇ ಇದ್ದ ಭಿನ್ನಾಭಿಪ್ರಾಯಗಳನ್ನು ವೇದಾಂತಸೂತ್ರದಲ್ಲಿಯೇ ಹೇಳಿದೆ. "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ; ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ; ಅವಸ್ಥಿತೇರಿತಿ ಕಾಶಕೃತ್ಸ್ನಃ" ಇವು ಮೂರು ಸೂತ್ರಗಳಲ್ಲಿ ಹಿಂದಿನ ಮೂವರು ಆಚಾರ್ಯರ ಭಿನ್ನಾಭಿಪ್ರಾಯಗಳಿವೆ. ಬ್ರಹ್ಮವನ್ನು ತಿಳಿದರೆ ಎಲ್ಲವನ್ನು ತಿಳಿದಂತಾಗುವದು ಎಂದಮೇಲೆ ಜೀವನಿಗೆ ಬ್ರಹ್ಮವು ಕಾರಣವೆಂದಾಯಿತು. ಕಾರ್ಯಕಾರಣಗಳಿಗೆ ಭೇದವೂ ಅಭೇದವೂ ಇರುವಂತೆ ಜೀವ ಬ್ರಹ್ಮರಿಗೆ ಭೇದಾಭೇದವನ್ನು ಹೇಳುವುದು ಸರಿ ಎಂಬರು ಭೇದಾಭೇದ ವಾದಿಗಳಾದ ಆಶ್ಮರಥ್ಯರು. ಜೀವನೂ ಬ್ರಹ್ಮನೂ ಮೋಕ್ಷಕ್ಕೆ ಮೊದಲು ಬೇರೆ ಬೇರೆಯಾದರೂ ಮೋಕ್ಷದಲ್ಲಿ ಒಂದೆಯಾಗುವರು ಎಂಬರು ಔಡು-ಲೋಮಿ ಆಚಾರ್ಯರು. ಜೀವನು ಬ್ರಹ್ಮದ ಪ್ರತಿಬಿಂಬವಾಗಿ ಅಭೇದವಾಗಿ ಇರುವನೆಂದು ಕಾಶಕೃತ್ಸ್ನರು ಹೇಳುವರು; ಇದು ಶಾಂಕರ ಭಾಷಾಭಿಪ್ರಾಯ. ಶ್ರೀಕರಭಾಷ್ಯದಂತೆ ಕಾಶಕೃತ್ಸ್ನರು ವೀರಶೈವರಂತೆ ಭೇದಾಭೇದವಾದಿಗಳು.

ಮಾನ್ಯ ರಾಧಾಕೃಷ್ಣನ್‌ರವರ ಇಂಡಿಯನ್ ಪಿಲಾಸಫಿಯ ಎರಡನೆಯ ಭಾಗದಲ್ಲಿ "ವೇದಾಂತಸೂತ್ರ" ವಿಷಯವಾಗಿ ಹೀಗೆ ಬರೆದಿರುವರು:

"Brahman is the material cause as well as the instrumental cause of the world (i–4–23 to 27). Brahman is the creator of all things and transforms himself into all things as clay or gold becomes things of clay or of gold.... Brahman and the world are not different (ananya ii–1–4) even as the clay pot is not different from the clay (ii–1–14 to 20)....The instances of cause and effect given in the Chandogya Upanishad are earth, gold and iron and things made of them and not rope and snake or shell and silver. Finite things are real as determinations of Brahman. The statement that Brahman is the material cause of the world suggests that the world is modification of substance of Brahman (i–1–26). The world is not an illusion or dreamlike structure, but a real positive something which has its origination, existence and absorption in Brahman."

ಜಗತ್ತು ಸತ್ಯವೆಂದೂ, ಮಡಕೆಗೆ ಮಣ್ಣು ಕಾರಣವಾಗಿರುವಂತೆ ಚಿನ್ನವು ಆಭರಣಕ್ಕೆ ಕಾರಣವಾಗಿರುವಂತೆ ಬ್ರಹ್ಮವು ಜಗತ್ತಿಗೆ ಉಪಾದಾನ ಕಾರಣವಾಗಿದೆಯೆಂದೂ, ಜಗತ್ತೂ ಬ್ರಹ್ಮವೂ ಬೇರೆ ಬೇರೆಯಲ್ಲವೆಂದೂ, ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವ ಉದಾಹರಣೆಗಳು ಮಣ್ಣು ಚಿನ್ನ ಕಬ್ಬಿಣದ ಮತ್ತು ಅವುಗಳಿಂದಾದ ವಸ್ತುಗಳೇ ಹೊರತು ರಜತಶುಕ್ತಿಗಳಾಗಲೀ ಸರ್ಪರಜ್ಜುಗಳಾಗಲೀ ಅಲ್ಲವೆಂದೂ ವೇದಾಂತಸೂತ್ರದ ನಿಲುವನ್ನು ಹೇಳುವ ಸಂದರ್ಭದಲ್ಲಿ ಮಾನ್ಯ ರಾಧಾಕೃಷ್ಣನ್ನರು ಇಂಡಿಯನ್ ಪಿಲಾಸಫಿ ಗ್ರಂಥದಲ್ಲಿ ಹೇಳಿರುವರು. ಮುಂದುವರೆದು,

"Badarayana believes that the power of creation belongs to the pure, stainless Brahman even as heat belongs to fire." ಎಂದು ಹೇಳಿರುವುದು ಇಂಗಡಲೊಳಿಂಪು, ಬೆಳದಿಂಗಳೊಳು ತಂಪು, ಕುಸುಮಂಗಳೊಳು ಕಂಪು ಬೆರೆದಂತೆ ಪರಮನೊಳು ಬೆರದಿಹ ಅಗಜಾತೆಗೆ ನತನಪ್ಪೆ ಎಂದು, ಶಿವಶಕ್ತಿಯರ ಅದ್ವೈತವನ್ನು ನಿಜಗುಣ ಶಿವಯೋಗಿಗಳು ಹೇಳಿರುವುದನ್ನು ಜ್ಞಾಪಕಕ್ಕೆ ತರುತ್ತದೆ. ಇದೇ ಗ್ರಂಥದ ಮೊದಲನೆಯ ಭಾಗದಲ್ಲಿ ಉಪನಿಷತ್ತುಗಳ ನಿಲುವಿನ ವಿಚಾರವಾಗಿ ಹೀಗೆ ಹೇಳಿದ್ದಾರೆ:

"Each little leaf on a tree may very naturally have sufficient consciousness to believe that it is an entirely separate being maintaining itself in the sunlight and the air, withering away and dying when the winter comes on and there is an end of it. It probably does not realise that all the time it is being supported by the sap which flows from the trunk of the tree and that in its turn it is feeding the tree too. If the leaf could really understand itself, it would see that itself was deeply, intimately connected practically one with the life of the whole tree."

ಹೀಗೆ ಹೇಳಿ, ಪರಬ್ರಹ್ಮನನ್ನು ಮರಕ್ಕೂ, ಜೀವಿಗಳನ್ನು ಎಲೆಗಳಿಗೂ ಹೋಲಿಸಿ ಜೀವಿಗಳು ಪರಬ್ರಹ್ಮನ ಅಂಶವೆಂಬುದನ್ನು ಮರೆತಿರುವುದು ಮಾಯೆಯಿಂದ ಎಂದು ತಿಳಿಸಿದ್ದಾರೆ.

ಮರದೊಳಗಣ ಪತ್ರೆಫಲಂಗಳು ಮರಕಾಲವಶದಲ್ಲಿ ತೋರುವಂತೆ, ಹರನೊಳ
ಗಣ ಲೀಲಾಪ್ರಕೃತಿ ಸ್ವಭಾವಂಗಳು ಹರಲೀಲಾ ವಶದಲ್ಲಿ ತೋರುವುವು.
ಲೀಲೆಯಾದೊಡುಮಾಪತಿ, ಲೀಲೆ ನಿಂದೊಡೆ ಸ್ವಯಂಭು ನಮ್ಮ ಗುಹೇಶ್ವರಲಿಂಗವು.

ಅಲ್ಲಮಪ್ರಭುವಿನ ಈ ವಚನದಲ್ಲಿ ಶಿವನು ಶಕ್ತಿವಿಶಿಷ್ಟನಾಗುವುದಕ್ಕೆ ಮೊದಲು ಅವನನ್ನು ಸ್ವಯಂಭುವೆಂದು ಕರೆಯಲಾಗಿದೆ. ಶಕ್ತಿವಿಶಿಷ್ಟನಾಗಿ ಜೀವಜಗತ್ತುಗಳುದಯವಾಗುವುದನ್ನು ಮರಗಳಲ್ಲಿ ಸಕಾಲದಲ್ಲಿ ಪತ್ರೆಫಲಗಳು ಹುಟ್ಟುವುದಕ್ಕೆ ಹೋಲಿಸಿರುವುದು ಮಾನ್ಯ ರಾಧಾಕೃಷ್ಣನ್ನರ ಹೋಲಿಕೆಗೆ ಸರಿಹೊಂದುವುದು. ಮಾನ್ಯ ರಾಧಾಕೃಷ್ಣನ್‌ರವರು ಮುಂದುವರೆದು, "Below the separate wave crests of consciousness there is the unfathomed common depth of life from which all spirits draw the springs of their being." ಎಂದು ಹೇಳಿರುವುದು ವಚನಕಾರರು **ಘನಗಂಭೀರ ಮಹಾವಾರಿಧಿಯಲ್ಲಿ ಫೇನ ತರಂಗಬುದ್ಬುದಗಳುದಯವಲ್ಲದೆ ಬೇರಾಗಬಲ್ಲವೆ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳುದಯವಲ್ಲದೆ ಬೇರಾಗಬಲ್ಲವೆ?"** ಎಂದು ಹೇಳಿರುವುದನ್ನು ಜ್ಞಾಪಕಕ್ಕೆ ತರುವುದು.

ಉಪನಿಷತ್ತುಗಳಲ್ಲಿ ಅದ್ವೈತ ಸಿದ್ಧಾಂತಕ್ಕೆ ಅನುಕೂಲವಾಗಿರುವ ಶ್ರುತಿಗಳಿರುವಂತೆಯೇ ದ್ವೈತಸಿದ್ಧಾಂತಕ್ಕೆ ಅನುಕೂಲವಾಗಿರುವ ಶ್ರುತಿಗಳಿರುವುವೆಂದಮೇಲೆ ದ್ವೈತಾದ್ವೈತ ಸಿದ್ಧಾಂತಕ್ಕೂ ಅನುಕೂಲವಾಗಿರುವುದು ಉಪನಿಷತ್ತು, ಎಂದು ಹೇಳಿದಂತಾಯಿತು. ಆದುದರಿಂದಲೇ ಹಿಂದೆ ಹೇಳಿದಂತೆ ಈ ಶ್ರುತಿಗಳಲ್ಲಿ ಏಕವಾಕ್ಯತೆಯನ್ನು ತೋರಿಸಲು ಹೊರಟ ವೇದಾಂತ ಸೂತ್ರಗಳ ಕಾಲದಲ್ಲಿಯೇ ಭಿನ್ನಾಭಿಪ್ರಾಯಗಳಿದ್ದವು. ಇನ್ನು ವೇದಾಂತಸೂತ್ರಗಳಾದರೂ ಕಿರಿದಾದುದರಲ್ಲಿ ಹಿರಿಯ ವಿಷಯಗಳನ್ನೇ ಸಂಗ್ರಹಿಸಿ ಹೇಳಬೇಕಾದುದರಿಂದ ದ್ವೈತಮತ

ದವರೂ, ಅದ್ವೈತಮತದವರೂ ದ್ವೈತಾದ್ವೈತ ಮತದವರೂ ತಮಗೆ ಬೇಕಾದಂತೆ ಅರ್ಥ ಮಾಡಲು ಅವಕಾಶವಾಯಿತು. ಈ ಜಗ್ಗಾಟವು ಶ್ರೀ ಶಂಕರರಾಮಾನುಜ ಮಾಧ್ವಆಚಾರ್ಯರಿಗೆ ಮೊದಲು ಎಷ್ಟರಮಟ್ಟಿಗೆ ಇದ್ದಿತೋ ಹೇಳಲು ಸಾಧ್ಯವಿಲ್ಲ. ಆದರೆ ಭಿನ್ನಾಭಿಪ್ರಾಯ ಗಳಿದ್ದುದು ನಿಜ. ವೇದಾಂತಸೂತ್ರಗಳನ್ನು ರಚಿಸಿದ ಕಾಲದಲ್ಲೇ ಭೇದಾಭೇದ ವಾದವನ್ನು ಆಶ್ಮರಥ್ಯ ಔಡು-ಲೋಮಿಗಳು ಪ್ರತಿಪಾದಿಸಿದ್ದರೆಂದು ಹಿಂದೆ ಹೇಳಲಾಯಿತಷ್ಟೆ. ತದನಂತರ ಈ ವಾದವನ್ನು ಮಂಡಿಸಿದವರನ್ನು ಶ್ರೀ ಶಂಕರಾಚಾರ್ಯರು ಮತ್ತೆ ಮತ್ತೆ ಖಂಡಿಸಿರುವುದ ರಿಂದ ಆಗ ಭೇದಾಭೇದ ವಾದದ ಪ್ರಭಾವವು ಬಹಳ ಹೆಚ್ಚಿನದಾಗಿರಬೇಕೆಂದು ಮಾನ್ಯ ವೈ. ಸುಬ್ಬರಾಯರು ಅಭಿಪ್ರಾಯಪಡುತ್ತಾರೆ. ಮಹರ್ಷಿ ಅರವಿಂದರು ಅವರ Life Devine ಗ್ರಂಥದಲ್ಲಿ ಭೇದಾಭೇದ ವಾದವೇ ಪ್ರಾಚೀನ ವೇದಾಂತವೆಂದು ಹೇಳಿದ್ದಾರೆ.

**"ದ್ವೈತಾದ್ವೈತಾತ್ಮಕಂ ಏಕಂ ಬ್ರಹ್ಮ । ಯಥಾ ಕಿಲ ಸಮುದ್ರೋ ಜಲತರಂಗ ಫೇನ ಬುದ್ಬುದಾದ್ಯಾತ್ಮಕ ಏವ । ಯಥಾ ಚ ಜಲಂ ಸತ್ಯಂ, ತದುದ್ಭವಾಶ್ಚ ತರಂಗಫೇನ ಬುದ್ಬುದಾದಯಃ ಸಮುದ್ರಾತ್ಮಭೂತಾ ಏವ ।······ಏವಂ ಸರ್ವಮಿದಂ ದ್ವೈತಂ ಪರಮಾರ್ಥ ಸತ್ಯಮೇವ ಜಲತರಂಗಾದಿಸ್ಥಾನೀಯಂ । ಸಮುದ್ರ ಜಲಸ್ಥಾನೀಯಂತು ಪರಂ ಬ್ರಹ್ಮ"** ಎಂದರೆ ಪರಬ್ರಹ್ಮವು ದ್ವೈತಾದ್ವೈತಾತ್ಮಕವಾದುದು; ಅದನ್ನು ಸಮುದ್ರ ಜಲಕ್ಕೆ ಹೋಲಿಸಬಹುದು. ಸಮುದ್ರವು ನೀರು ಅಲೆ ನೊರೆ ಗುಳ್ಳೆ ಮುಂತಾದುವುಗಳ ಸ್ವರೂಪವೇ ಆಗಿರುವುದು; ನೀರೂ ಸತ್ಯವಾಗಿದ್ದು ಅದರಿಂದಲೇ ಉದ್ಭವವಾದ ಅಲೆ, ನೊರೆ ಗುಳ್ಳೆಗಳೂ ಸಮುದ್ರ ಸ್ವರೂಪವೇ ಆಗಿ ಪಾರಮಾರ್ಥಿಕಸತ್ಯವೇ ಆಗಿರುವುವು. ಹಾಗೆಯೇ ನೀರಿನ ಅಲೆ ಮುಂತಾದವುಗಳಂತೆ ಇರುವ ದ್ವೈತ (ಪ್ರಪಂಚ)ವೆಲ್ಲವೂ ಪಾರಮಾರ್ಥಿಕಸತ್ಯವೇ ಆಗಿರುವುದು—ಹೀಗೆ ಶ್ರೀ ಶಂಕರಾಚಾರ್ಯರು ಬೃಹದಾರಣ್ಯಕೋಪನಿಷತ್ತಿನ (೫–೧–೧) ಭಾಷ್ಯದಲ್ಲಿ ತಮಗಿಂತಲೂ ಹಿಂದಿನವರ ದ್ವೈತಾದ್ವೈತ ಸಿದ್ಧಾಂತವನ್ನು ಮಂಡಿಸಿ, ಅದು ಸರಿಯಲ್ಲವೆಂದು ಹೇಳಿರುವರು. ಇಲ್ಲಿ ಗಮನಾರ್ಹವಾದ ವಿಷಯವೇನೆಂದರೆ ವಚನವಾಙ್ಮಯ ದಲ್ಲಿ ಪರಬ್ರಹ್ಮವನ್ನು "ಘನಗಂಭೀರ ಮಹಾವಾರಧಿ"ಗೂ ಸತ್ಯವೇ ಆದ ಪ್ರಪಂಚವನ್ನು "ಫೇನತರಂಗ ಬುದ್ಬುದ"ಗಳಿಗೂ ಹೋಲಿಸಿರುವುದು ಶ್ರೀ ಶಂಕರಾಚಾರ್ಯರಿಗೆ ಹಿಂದೆಯೇ ದ್ವೈತಾದ್ವೈತವನ್ನು ವಿವರಿಸಲು ತೆಗೆದುಕೊಂಡ ಉದಾಹರಣೆಗೆ ಸರಿಯಾಗಿದೆ, ಎಂಬುದು; ಅಲ್ಲದೆ, ಇಂದೂ ಇದೇ ವಿಷಯವನ್ನು ವಿವರಮಾಡಲು ಜಗದ್ವಿಖ್ಯಾತ ವೇದಾಂತಿಗಳಾದ ಮಾನ್ಯ ರಾಧಾಕೃಷ್ಣನ್ನರು ತೆಗೆದುಕೊಂಡಿರುವ ಉದಾಹರಣೆಗೂ ಅದು ಸರಿಯಾಗಿದೆ. ಹಾಗೆಯೇ ವೀರಶೈವರ ಸಿದ್ಧಾಂತದ ಪ್ರಕಾರ ಜೀವನು ಬ್ರಹ್ಮದ ಅಂಶವೆಂಬುದೂ ಶ್ರೀ ಶಂಕರಾಚಾರ್ಯರಿ ಗಿಂತ ಮೊದಲೇ ಸಿದ್ಧಾಂತೀಕರಿಸಲ್ಪಟ್ಟಿದ್ದು ಅದನ್ನು ಶ್ರೀ ಶಂಕರಾಚಾರ್ಯರ ಬೃಹದಾರಣ್ಯ ಕೋಪನಿಷತ್ತಿನ (೨–೧–೨೦) ಭಾಷ್ಯದಲ್ಲಿ ಖಂಡಿಸಲ್ಪಟ್ಟಿರುವುದು ಕಂಡುಬರುವುದು. ಜೀವನು ಬ್ರಹ್ಮದ ಅಂಶವಲ್ಲವೆಂದು ಅವರು ಹೇಳುವ ಭಾಷ್ಯದ ಭಾಗವಿದು: **"ನ ಪಂಡಿತೈಃ ಬ್ರಹ್ಮ ಸ್ವರೂಪ ಪ್ರತಿಪತ್ತಿವಿಷಯೇ ಬ್ರಹ್ಮಣಃ ಅಂಶಾಂಶ್ಯೇಕದೇಶ್ಯೇಕದೇಶಿವಿಕಾರವಿಕಾರಿತ್ವ ಕಲ್ಪನಾ ಕಾರ್ಯಾ"** ಎಂದರೆ ಪಂಡಿತರು, ಬ್ರಹ್ಮಸ್ವರೂಪ ಜ್ಞಾನದ ವಿಷಯದಲ್ಲಿ ಅಂಶ ಅಂಶಿ, ಏಕದೇಶ ಏಕದೇಶಿ, ವಿಕಾರ ವಿಕಾರಿ ಎಂಬ ಕಲ್ಪನೆಗಳನ್ನು ಮಾಡಬಾರದು ಎಂದು ಶ್ರೀ ಶಂಕರಾಚಾರ್ಯರು ಹೇಳುವುದು, ವೀರಶೈವರು ಜೀವನು ಬ್ರಹ್ಮದ ಅಂಶವೆಂದು ಹೇಳಿರು ವುದಕ್ಕೆ ವಿರುದ್ಧವಾಗಿದೆ. ಶ್ರೀ ಶಂಕರಾಚಾರ್ಯರು ಅವರ ಬೃಹದಾರಣ್ಯಕಭಾಷ್ಯದಲ್ಲಿ

(೩-೮-೧೨) "ಅಸ್ಯೈ ಅಕ್ಷರಸ್ಯ ಶಕ್ತಯ ಏತಾ ಇತಿ ವದಂತಿ । ಅನಂತ ಶಕ್ತಿಮದಕ್ಷರ ಮಿತಿಚ" ಎಂದು ಹೇಳಿರುವರಲ್ಲದೆ, ಸೂತ್ರಭಾಷ್ಯದಲ್ಲಿಯೂ (೪-೩-೧೪) ಹೀಗೆ ಹೇಳಿ, ಶಿವಶಕ್ತಿಯಿಂದ ಜಗತ್ತಾಗುವುದೆಂಬ ವೀರಶೈವರ ನಿಲುವನ್ನು ಖಂಡಿಸಿದ್ದಾರೆ. ಖಂಡಿಸಲ್ಪಟ್ಟಿರುವ ವೀರಶೈವರ ನಿಲುವುಗಳು ಶ್ರೀ ಶಂಕರಾಚಾರ್ಯರಿಗಿಂತ ಹಿಂದಿನವೇ ಎಂಬುದು ಸ್ಪಷ್ಟ.

ಬೌದ್ಧರದೇ ಎನ್ನುವಂತಿರುವ ಶ್ರೀ ಶಂಕರಾಚಾರ್ಯರ ವಾದವು ಹಿಂದುಗಳಿಗೆ ಹಿಡಿಸಲಿಲ್ಲ. ಸುಮಾರು ಎರಡುನೂರು ವರ್ಷಗಳ ನಂತರ ಎಂದರೆ ಕ್ರಿ.ಶ. ೧೦೦೦ ದಲ್ಲಿದ್ದ ಭಾಸ್ಕರಾಚಾರ್ಯರು ಭಟ್ಟೋಜಿ ದೀಕ್ಷಿತರ ಮಾತಿನಲ್ಲಿ "ಭೇದಾಭೇದ ವೇದಾಂತ ಸಿದ್ಧಾಂತವಾದಿ"ಯಾಗಿದ್ದರು. "ಆತ್ಮಕೃತೇಃ ಪರಿಣಾಮಾತ್" ಎಂಬ ವೇದಾಂತ ಸೂತ್ರದಲ್ಲಿನ ಸೂತ್ರ (೧-೪-೨೬) ವಿಷಯವಾಗಿ ತರ್ಕಮಾಡುತ್ತ, ಶ್ರೀ ಶಂಕರಾಚಾರ್ಯರ ಅಧ್ಯಾಸ ವಾದವನ್ನು ಮಾಧ್ಯಮಿಕ ಬೌದ್ಧ ಸಿದ್ಧಾಂತವೆಂದು ಅಲ್ಲಗಳೆದಿರುವರು. ಹಾಗೆಯೇ "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" (೧೧-೨೨-೯) ಎಂಬ ಸೂತ್ರ ವಿಷಯವಾಗಿ ಶ್ರೀ ಶಾಂಕರ ಸಿದ್ಧಾಂತವನ್ನು ಹೀಗೆ ಖಂಡಿಸಿರುವರು:—"ಏತು ಭೌದ್ಧಮತಾವಲಂಬಿನೋ ಮಾಯಾವಾದಿನಸ್ತೇಪ್ಯನೇನ ನ್ಯಾಯೇನ ಸೂತ್ರಕಾರೇಣೈವ ನಿರಸ್ತಾ ವೇದಿತವ್ಯಾಃ". ಭೇದಾಭೇದವಾದಿಗಳಾದ ಭಾಸ್ಕರಾಚಾರ್ಯರು ಜೀವಾತ್ಮನಿಗೆ ಮೋಕ್ಷವನ್ನು ಹೇಳುವಲ್ಲಿ "ಏಕೀಭೂಯ ಬ್ರಹ್ಮಣಾಮೋದತೇ" ಎಂದು ಹೇಳಿರುವುದರಲ್ಲಿ ಸಂಪೂರ್ಣ ಐಕ್ಯವು ಹೇಳಲ್ಪಟ್ಟಿಲ್ಲವೆಂದು ನಿರ್ಧರಿಸಲ್ಪಟ್ಟಿದೆ. ಭಾಸ್ಕರಾಚಾರ್ಯರನಂತರ ಸುಮಾರು ಒಂದುವರೆ ಶತಮಾನವಾದ ಮೇಲೆ ಶ್ರೀರಾಮಾನುಜಾಚಾರ್ಯರು ಶ್ರೀಶಂಕರಾಚಾರ್ಯರ ಮಾಯಾವಾದವನ್ನು ಅವರ ಶ್ರೀಭಾಷ್ಯದಲ್ಲಿ ಏಳು ಅನುಪಪತ್ತಿಗಳಿಂದ ಸಂಪೂರ್ಣವಾಗಿ ಖಂಡಿಸಿದ್ದಾರೆ. "ಆಶ್ರಯಾನುಪಪತ್ತಿ, ತಿರೋಧಾನಾನುಪಪತ್ತಿ, ಸ್ವರೂಪಾನುಪಪತ್ತಿ, ಅನಿರ್ವಚನೀಯತ್ವಾನುಪಪತ್ತಿ, ಪ್ರಮಾಣಾನುಪಪತ್ತಿ, ನಿವರ್ತಕಾನುಪಪತ್ತಿ, ನಿವೃತ್ತ್ಯನುಪಪತ್ತಿ" ಎಂಬಿವೇ ಆ ಏಳು ಅನುಪಪತ್ತಿಗಳು. ಇವುಗಳ ವಿವರಣೆಯನ್ನು ಲೇಖನವಿಸ್ತಾರಭಯದಿಂದ ಇಲ್ಲಿ ಮಾಡಿಲ್ಲ. ಈಶಾವಾಸ್ಯದ ಭಾಷ್ಯಗಳ ತುಲನೆಯನ್ನೊಳಗೊಂಡ ನನ್ನ 'ಈಶಾವಾಸ್ಯೋಪನಿಷತ್ ಪ್ರಕಾಶ' ಗ್ರಂಥದಲ್ಲಿ ಶ್ರೀಭಾಷ್ಯದ ಆಧಾರಗಳೊಡನೆ ಈ ಅನುಪಪತ್ತಿಗಳಿಂದ ಶ್ರೀ ಶಂಕರರ ಮಾಯಾವಾದವನ್ನು ಖಂಡಿಸಿರುವುದನ್ನು ವಿವರಿಸಲಾಗಿದೆ. ಆದುದರಿಂದ ಇಲ್ಲಿ ಆ ವಿಷಯ ಅಷ್ಟು ಅವಶ್ಯವಿಲ್ಲ. ಮತ್ತೆ ಮುಕ್ಕಾಲು ಶತಮಾನದನಂತರ ಶ್ರೀ ಮಧ್ವಾಚಾರ್ಯರು ಸಹಾ ಶ್ರೀ ಶಂಕರಾಚಾರ್ಯರ ಜಗತ್ತು ಮಿಥ್ಯವೆಂದು ಹೇಳುವ ಮಾಯಾವಾದವನ್ನು ಖಂಡಿಸಿದರು. ಶ್ರೀ ರಾಮಾನುಜಾಚಾರ್ಯರ ಮತ್ತು ಶ್ರೀ ಮಧ್ವಾಚಾರ್ಯರ ಸಿದ್ಧಾಂತಗಳ ಪ್ರಕಾರ ಚಿದಚಿತ್ತುಗಳು ಎಂದರೆ ಜೀವನೂ ಅಚೇತನ ವಸ್ತುಗಳೂ ಬೇರೆ ಬೇರೆ; ಹಾಗೆಯೇ ಪರಮಾತ್ಮನು ಇವೆರಡಕ್ಕಿಂತಲೂ ಬೇರೆ ಬೇರೆಯೆ. ಇದು ಉಪನಿಷತ್ತುಗಳಲ್ಲಿರುವ ದ್ವೈತವನ್ನು ಹೇಳುವ ಶ್ರುತಿಗಳಿಗೆ ಸರಿಹೋಗುವುದು. ಆದರೆ ಅದ್ವೈತ ಶ್ರುತಿಗಳಿಗೆ ಈ ನಿಲುವು ಸರಿಬರುವುದಿಲ್ಲ. ಪೂರ್ಣ ದ್ವೈತಿಗಳಾದ ಮಧ್ವಾಚಾರ್ಯರು ಅದ್ವೈತ ಶ್ರುತಿಗಳಿಗೆ ಹೇಗಾದರೂ ತಿರಿಚಿ ಎಳೆದು ದ್ವೈತಪರವಾದ ಅರ್ಥವನ್ನೇ ಮಾಡುವರು. ಉದಾಹರಣೆಗೆ ಈಶಾವಾಸ್ಯ ಉಪನಿಷತ್ತಿನಲ್ಲಿ "ಸೋಹಮಸ್ಮಿ" ಎಂಬುದು 'ಅವನು ಎಂದರೆ ಆ ಪರಮಾತ್ಮನೇ ನಾನು' ಎಂಬ ಸ್ಪಷ್ಟವಾದ ಅದ್ವೈತಪರವಾದ ಅರ್ಥವುಳ್ಳ ವಾಕ್ಯ. ಈಶಾವಾಸ್ಯದ ಮಾಧ್ವ ಭಾಷ್ಯದಲ್ಲಿ "ಅಹಂ ಚಾಸಾವಹೇಯತಃ" ಎಂದರೆ ಪರಮಾತ್ಮನು ಹೇಯವಲ್ಲವಾಗಿ "ಅಹಂ"

ಎಂದು ಕರೆಯಲ್ಪಟ್ಟಿದಾನೆಂದೂ, "ಅಸ್ಮಿನಿತ್ಯಾಸ್ತಿತಾಮಾನಾತ್" ಎಂದರೆ ನಿತ್ಯವಾಗಿರುವುದರಿಂದ "ಅಸ್ಮಿ" ಶಬ್ದವಾಚ್ಯನೆಂದೂ ಭಾಷ್ಯ ಬರೆದಿದ್ದಾರೆ. ಆದರೆ ರಾಮಾನುಜೀಯರು ಹೀಗೆ ಎಳೆದು ಅರ್ಥಮಾಡದೆ ದ್ವೈತ ಹಾಗೂ ಅದ್ವೈತ ವಾಕ್ಯಗಳಿರುವುದನ್ನು ಒಪ್ಪಿ ಇವೆರಡು ತರದ ಶ್ರುತಿಗಳೂ ಮಾನ್ಯವೆನ್ನುವರು. ಶರೀರದಿಂದ ಕೂಡಿದ ಜೀವನು ಒಂದೆಯೆಂಬಂತೆ ಜೀವನೂ ಜಗತ್ತೂ ಪರಮಾತ್ಮನ ಶರೀರವಾಗಿರುವುದರಿಂದ ಇವೆಲ್ಲಕ್ಕೂ ಅದ್ವೈತವನ್ನು ಹೇಳಿದೆಯಾಗಿ ಅದ್ವೈತಶ್ರುತಿಯು ಮಾನ್ಯವೆಂದೂ, ಆದರೆ ನಿಜವಾಗಿ ಅವು ಬೇರೆ ಬೇರೆಯೇ ಆದುದರಿಂದ ದ್ವೈತಶ್ರುತಿಯೂ ಸಹಾ ಮಾನ್ಯವೆಂದೂ ರಾಮಾನುಜೀಯರು ಸಮನ್ವಯಮಾಡುವರು. ಅಭೇದ ಶ್ರುತಿಗಳಿಗೆ ಹೇಗೋ ಹಾಗೆಯೇ ಭೇದ ಶ್ರುತಿಗಳಿಗೂ ಮಾನ್ಯವನ್ನು ಕೊಡಬೇಕೆಂಬ ಈ ನಿಲುವು ನಿರ್ದೋಷವಾದುದೆ. ಆದರೆ ದಂಡ ವಿಶಿಷ್ಟ ಪುರುಷನು ದಂಡಿಯೆಂದು ಹೇಳುವಂತೆ, ಚಿದಚಿತ್ತುಗಳಿಂದ ಪರಮಾತ್ಮನು ವಿಶಿಷ್ಟವೆನ್ನುವುದರಿಂದ ಅಭೇದಶ್ರುತಿಗೆ ಮಾನ್ಯವನ್ನು ಶ್ರೀವೈಷ್ಣವರು ಕೊಟ್ಟಿಲ್ಲವೆಂಬುದು ವೀರಶೈವರ ನಿಲುವು. ಏಕೆಂದರೆ, ದಂಡವೂ ದಂಡವನ್ನು ಹಿಡಿದ ದಂಡಿಯೂ ಬೇರೆ ಬೇರೆಯಾಗಿರುವಂತೆ ರಾಮಾನುಜೀಯರ ಪ್ರಕಾರ ಜೀವಪರಮರು ಬೇರೆ ಬೇರೆಯೆ. ನಾಸದೀಯ ಸೂಕ್ತದಲ್ಲಿ ಹೇಳಿರುವ ಸ್ವಧಾ ಎಂದರೆ ತನ್ನಲ್ಲಿರುವ ಶಕ್ತಿಯ ಹೊರಹೊಮ್ಮುವಿಕೆಯಿಂದ ಪರಶಿವಬ್ರಹ್ಮವು ಪ್ರಶಾಂತವಾದ ಸಮುದ್ರದಲ್ಲಿ ವಾಯುವಿನಿಂದ ಏಳುವ ಅಲೆಗಳಂತೆ, ಲಿಂಗ (ಶಿವ), ಅಂಗ (ಜೀವ) ಎಂದು ಎರಡು ವಿಭಾಗವಾಗುವುದೆಂಬುದೂ ಮೋಕ್ಷದಲ್ಲಿ ಸಂಪೂರ್ಣ ಐಕ್ಯವಾಗುವುದೆಂಬುದೂ ವೀರಶೈವ ಸಿದ್ಧಾಂತ. ಜೀವಶಿವರು ಸೃಷ್ಟಿಯಾದ ಮೇಲೆ ಬೇರೆ ಬೇರೆಯೆಂಬ, ದ್ವೈತಿಗಳು ಮತ್ತು ವಿಶಿಷ್ಟಾದ್ವೈತಿಗಳು ಹೇಳುವ ದ್ವೈತ ಸಿದ್ಧಾಂತವನ್ನು ವ್ಯವಹಾರ ಸ್ಥಿತಿಯಲ್ಲಿಯೂ, ಶಂಕರಾದ್ವೈತವನ್ನು ಸೃಷ್ಟಿಗೆ ಮೊದಲೂ, ಮೋಕ್ಷದಲ್ಲಿಯೂ ವೀರಶೈವವು ಒಪ್ಪಿದಂತಾಯಿತು; ಹೀಗೆ ವೀರಶೈವರದು ದ್ವೈತಾದ್ವೈತ ಸಿದ್ಧಾಂತವಾಗಿದೆ. ಅಂಶ ಜೀವ, ಅಂಶಿ ಶಿವ ಎಂಬ ಈ ವಾದವು ಶ್ರೀ ಶಂಕರಾಚಾರ್ಯರ ಹಿಂದಿನಿಂದಲೂ ಪ್ರಸಿದ್ಧವಾಗಿದ್ದು ಅವರಿಂದ ಖಂಡಿಸಲ್ಪಟ್ಟಿದೆಯಾಗಿ ಇದೇನೂ ಹೊಸದಲ್ಲ. ದ್ವೈತಾದ್ವೈತ ವಾದವು ಬ್ರಹ್ಮಸೂತ್ರದಲ್ಲಿಯೇ ಹೇಳಲ್ಪಟ್ಟು ಭರ್ತೃಪ್ರಪಂಚ, ಭಾಸ್ಕರ, ನಿಂಬಾರ್ಕ ಮೊದಲಾದವರಿಂದ ಪುರಸ್ಕರಿಸಲ್ಪಟ್ಟಿದೆ. ಅಲಹಾಬಾದ್ ಯೂನಿವರ್ಸಿಟಿಯ ವ್ಹಾಯಿಸ್ ಛಾನ್ಸಲರ್ ಗಂಗಾನಾಥ್ ಜಾರವರು ಶ್ರೀಕರಭಾಷ್ಯ ವಿಷಯವಾಗಿ ಅಭಿಪ್ರಾಯವನ್ನು ಕೊಡುತ್ತ, "Bhedabheda view has long been regarded as the commonsense and hence rational view" ಎಂದು ಹೇಳಿದ್ದಾರೆ. ಶಕ್ತಿವಿಶಿಷ್ಟಾದ್ವೈತವು, ನಾಸದೀಯ ಸೂಕ್ತದಲ್ಲಿಯೂ, ಶ್ವೇತಾಶ್ವತರ ಉಪನಿಷತ್ತಿನಲ್ಲಿಯೂ, ಕಾಳಿದಾಸನ "ವಾಗರ್ಥಾವಿವ" ಎಂಬ ಶ್ಲೋಕದಲ್ಲಿಯೂ ಶ್ರೀ ಶಂಕರಾಚಾರ್ಯರ 'ಶಿವಃಶಕ್ತ್ಯಾ' ಎಂಬ ಆನಂದಲಹರಿಯ ಶ್ಲೋಕದಲ್ಲಿಯೂ ಶ್ರೀಕಂಠಭಾಷ್ಯದಲ್ಲಿಯೂ ಪ್ರತಿಪಾದಿತವಾದ ಹಳೆಯ ಸಿದ್ಧಾಂತವೆ. ಹೀಗೆ ವೀರಶೈವ ಸಿದ್ಧಾಂತವು ಋಗ್ವೇದದಲ್ಲಿನ ನಾಸದೀಯ ಸೂಕ್ತ ಕಾಲದಿಂದಲೂ ಪ್ರಗತಿಹೊಂದಿದ ಸರ್ವೋತ್ಕೃಷ್ಟ ಸಿದ್ಧಾಂತವಾಗಿದೆ.

---

## ಚತುರ್ಥಾಧ್ಯಾಯ

# ಶುದ್ಧಿಸಂಘಟನೆಯಿಂದ ವೀರಶೈವದ ಪರಿಪೂರ್ಣತೆ

### ಪೂರ್ವೇತಿಹಾಸದ ಸಿಂಹಾವಲೋಕನ

ವೀರಶೈವ ಮಹಾ ವೃಕ್ಷದ ಬೀಜವು ಆದಿಮಾನವನ ಕಾಲದಲ್ಲಿಯೇ ಮೊಳೆತು ಚಿಗುರಿ, ವೀರಶೈವದ ಮೂಲ ರೂಪುರೇಖೆಗಳನ್ನು ತಳೆದಿದ್ದಿತು. ಅದು ಸಿಕ್, ಮಹಮದೀಯ ಅಥವಾ ಕ್ರಿಶ್ಚಿಯನ್ ಧರ್ಮಬೀಜವು ಯಾವುದಾದರೊಂದು ಗೊತ್ತಾದ ಕಾಲದಲ್ಲಿ ಗೊತ್ತಾದ ವ್ಯಕ್ತಿಯಿಂದ ಬಿತ್ತಲ್ಪಟ್ಟಂತೆ ಬಿತ್ತಲ್ಪಟ್ಟು ಬೆಳೆದ ವೃಕ್ಷವಲ್ಲ. ಎಂದೋ ಹೇಗೋ ಮೊಳೆತು ಚಿಗುರಿ ಮಹಾ ವೃಕ್ಷವಾದ ಅಶ್ವತ್ಥದ ಹಿನ್ನೆಲೆಯು ದುರವಗಾಹವಾಗಿರುವಂತೆ ವೀರಶೈವದ ಉಗಮವು ದುರವಗಾಹವಾಗಿದೆ. ಆದರೆ ಸೈಂಧವ ನಾಗರಿಕತೆಯ ಕಾಲದಲ್ಲಿಯೇ, ಎಂದರೆ ಐದಾರು ಸಹಸ್ರ ವರ್ಷಗಳ ಹಿಂದೆಯೇ, ಅದರ ಮುಖ್ಯ ಲಕ್ಷಣವಾದ ಲಿಂಗಪೂಜೆ, ಲಿಂಗ ಧಾರಣೆಗಳಿಂದ ಅದರ ಇರುವನ್ನು ಗುರುತಿಸಬಹುದು ಎಂಬುದು ಆಧಾರಗಳಿಂದ ನಿರ್ಧಾರವಾದ ವಿಷಯ. ಆರ್ಯರ ಆಕ್ರಮಣದಿಂದ ಸೈಂಧವ ನಾಗರಿಕ ಜನರು ದಕ್ಷಿಣ ಭಾರತಕ್ಕೆ ಹಿಮ್ಮೆಟ್ಟಿ ಅಲ್ಲಿ ನೆಲಸಬೇಕಾದುದರಿಂದ ಈ ಲಿಂಗಧಾರಿಗಳ ಧರ್ಮವು ದಕ್ಷಿಣ ದೇಶದ ಕೇಂದ್ರವಾದ ಕರ್ನಾಟಕದಲ್ಲಿಯೇ ಉಳಿದು ನಿಂತಿದೆ. ಈ ಧರ್ಮಕ್ಕೆ ಬಲವಾಗಿ ಪೆಟ್ಟು ಬಿದ್ದುದು ಆರ್ಯರ ಆಕ್ರಮಣದಿಂದಲೇ. ಎಲ್ಲಿಯೋ ಗುಡಿಗುಂಡಾರಗಳಲ್ಲಿ ದುಂಡಾದ ಲಿಂಗವಿಗ್ರಹ ವನ್ನು ಸೈಂಧವ ನಾಗರಿಕರು ಪೂಜಿಸುತ್ತಿದ್ದರೆ ಅವರ ದ್ವೇಷಿಗಳಿಗೆ ಅದು ಅವರ ಮುಖ್ಯ ಲಕ್ಷಣವೆಂದು ಎದ್ದು ಕಾಣುತ್ತಿರಲಿಲ್ಲ. ಇಷ್ಟಪ್ರಾಪ್ತಿಗೂ ಅನಿಷ್ಟನಿವಾರಣೆಗೂ ಲಿಂಗಗಳನ್ನು ಧರಿಸಿ ತಮ್ಮೆದುರಿನಲ್ಲಿ ಯುದ್ಧಮಾಡುತ್ತಿದ್ದ ಸೈಂಧವ ಜನಾಂಗದವರನ್ನೇ ಆರ್ಯರು "ಶಿಶ್ನದೇವಾಃ" ಎಂದು ನಿಂದಿಸಿದರು. ಆದರೆ ಶೈವಧರ್ಮವು ಆಗಲೇ ಬಳೆದು ನಿಂದಿದ್ದಿತು. ಇಂದು ಶಿವನನ್ನು ಯಾವ ಯಾವ ರೂಪದಲ್ಲಿ ಧ್ಯಾನಿಸುತ್ತೇವೆಯೋ ಆಯಾ ರೂಪಗಳ ಕಲ್ಪನೆ ಗಳೆಲ್ಲ ಆಗಿನ ಕಾಲದಲ್ಲಿಯೇ ರೂಪುಗೊಂಡಿದ್ದವು. ಶಿವಯೋಗದ ಅಂಕುರಾರ್ಪಣವಾಗಿ ಹೋಗಿದ್ದಿತು. ಶಕ್ತಿವಿಶಿಷ್ಟಶಿವಾದ್ವೈತದ ಮೂಲರೂಪವು ಆಗಲೇ ಸ್ಫುರಣವಾಗಿದ್ದಿತು. ಆರ್ಯ-ದ್ರಾವಿಡರ ಸಂಸ್ಕೃತಿಗಳು ಹಾಲು, ಜೇನು ಸೇರಿದಂತೆ ಸುಸ್ವಾದವಾದ ಮೇಲೆ ಶೈವ ಧರ್ಮವು ಬಳೆಯಿತು; ಆದರೆ ಆರ್ಯರಲ್ಲಿ ಪ್ರಚಲಿತವಾಗಿದ್ದ ಯಜ್ಞಯಾಗಾದಿಗಳನ್ನು ಶೈವ ಧರ್ಮವು ಮೊದಲಿಂದಲೂ ಮಾನ್ಯ ಮಾಡಲಿಲ್ಲ. ಸೈಂಧವ ನಾಗರಿಕರ ಈ ಉತ್ತಮವಾದ ನಿಲುವಿಗೆ ಆರ್ಯರ ಬಳಗವನ್ನು ತ್ಯಜಿಸಿ ದ್ರಾವಿಡರನ್ನು ಸೇರಿದ ಅಸುರ ಮತ್ತು ವ್ರಾತ್ಯ ಜನರಿಂದ ಪೋಷಣೆ ದೊರೆಯಿತು. ಆರ್ಯರಿಗೆ ನಿಸರ್ಗ ದೇವತೆಗಳಾದ ಇಂದ್ರವಾಯು ವರುಣಾದಿ ದೇವತೆಗಳಲ್ಲಿ ಅಶ್ರದ್ಧೆಯುಂಟಾಗಿ ಏಕದೇವೋಪಾಸನೆಯ ಹಿರಿಮೆಯು ತೋರಿದಾಗ ಮಹಾದೇವ ಪಟ್ಟಕ್ಕೆ ದ್ರಾವಿಡರ ಶಿವನನ್ನಾರಿಸಿಕೊಂಡರು. ಋಗ್ವೇದದಲ್ಲಿಯೇ ತ್ರಿಮೂರ್ತಿ ಗಳಿಗೆ ಅತೀತವಾದ "ತ್ರ್ಯಂಬಕ" ಶಿವನ ಕಲ್ಪನೆಯೂ, ಯಜ್ಞಯಾಗಾದಿಗಳಲ್ಲಿ ದೊರೆಯುವ ನಶ್ವರ ಫಲದ ಬದಲಾಗಿ ಶಾಶ್ವತ ಮೋಕ್ಷಸುಖದ ಕಲ್ಪನೆಯೂ ಕಂಡುಬಂದಿದ್ದಿತು. ಯಜು ರ್ವೇದ, ಸಾಮವೇದ, ಅಥರ್ವವೇದ ಇವುಗಳಲ್ಲಿ, ಕ್ರಮವಾಗಿ ಶಿವನ ಹಿರಿಮೆಯು ಹೆಚ್ಚುತ್ತ

ಹೋಯಿತು. ಯಜ್ಞವಿರೋಧಿಗಳಾದ ವ್ರಾತ್ಯರು ಅಥರ್ವವೇದದ ಕಾಲದಲ್ಲಿ ಸಂಪೂಜ್ಯರಾದರು. ಯಜ್ಞಯಾಗಾದಿ ಕರ್ಮಮಾರ್ಗವನ್ನು ತ್ಯಜಿಸಿ ಜ್ಞಾನಮಾರ್ಗವನ್ನು ಆರಿಸಿಕೊಳ್ಳುವ ಆವಶ್ಯಕತೆಯನ್ನು ಹೇಳುವ ಉಪನಿಷತ್ತುಗಳೆಲ್ಲದರ ಸಾರಸರ್ವಸ್ವವನ್ನು ಗರ್ಭೀಕರಿಸಿಕೊಂಡು ಎಲ್ಲ ಮತದವರಿಂದಲೂ ಗೌರವಿಸಲ್ಪಡುವ ಶ್ವೇತಾಶ್ವತರೋಪನಿಷತ್ತಿನಲ್ಲಿ ಪಶುಪಾಶಪಶುಪತಿಶಿವನ ಕಲ್ಪನೆಯುಂಟಾಗಿ ಪಾಶುಪತಧರ್ಮದ ತಳಹದಿಯು ಹಾಕಲ್ಪಟ್ಟಿತು. ನಾಸದೀಯ ಸೂಕ್ತದ ಪರಬ್ರಹ್ಮವನ್ನು "ಶಿವ ಏವ ಕೇವಲಃ" ಎಂದು ಸಾರಿದುದು ಈ ಉಪನಿಷತ್ತಿನಲ್ಲಿಯೆ. ಗಾಯತ್ರೀ ಮಂತ್ರದಲ್ಲಿ "ತತ್ ಸವಿತುರ್ವರೇಣ್ಯಂ" ಎಂದು ಹೇಳಿರುವುದು ಆ ಶಿವನನ್ನೇ ಕುರಿತು ಎಂದು ಸಹಾ ಈ ಉಪನಿಷತ್ತು ಸಾರಿತು. ಆ ಕಾಲದಲ್ಲಿ ವಿಷ್ಣುವು ಸರ್ವೋತ್ಕೃಷ್ಟನೆಂಬ ಸ್ಪರ್ಧೆಯು ಇರಲಿಲ್ಲವೆಂಬುದು ತಜ್ಞರ ಮತ. ಯಜ್ಞಯಾಗಾದಿಗಳನ್ನು ಬಿಡಲಾರದ ಕರ್ಮಠಪುರೋಹಿತವರ್ಗವು ಇಂದ್ರನ ಬದಲು ಉಪೇಂದ್ರನೆನಿಸಿದ್ದ ವಿಷ್ಣುವನ್ನು ಆರಿಸಿಕೊಂಡರು. ಆದರೆ ಭಗವದ್ಗೀತೆಯೇ ಆಧಾರವಾಗಿ ಉಳ್ಳ ಭಾಗವತ ಧರ್ಮದವರು ಸಹಾ ಯಜ್ಞಯಾಗಾದಿಗಳನ್ನು ತ್ಯಜಿಸಿದರು. ಹೀಗೆ ಯಜ್ಞಯಾಗಾದಿಗಳ ಪ್ರಭಾವವು ಕಡಮೆಯಾಗಲು ಪ್ರಾರಂಭವಾದುದು, ಬಹುಮಟ್ಟಿಗೆ ಆರ್ಯರಲ್ಲಿ ಇವುಗಳ ವಿಷಯದಲ್ಲಿ ಭಿನ್ನಾಭಿಪ್ರಾಯವು ಹುಟ್ಟಿ ಯಜ್ಞವಿರೋಧಿ ವೃಷಭ ಮತವು ಆವಿರ್ಭಾವವಾದಾಗಲೇ ಎನ್ನಬಹುದು. ಸೈಂಧವ ನಾಗರಿಕತೆಯ ವಿಷಯವಾಗಿ ಬರೆದಿರುವ ಗ್ರಂಥಗಳ ಮೇಲೆ ಯೋಗಾರೂಢನಾದ ಶಿವನ ಇಲ್ಲವೇ ವೃಷಭನ ಚಿತ್ರವನ್ನು ಮುದ್ರಿಸುವುದು ರೂಢಿಯಾಗಿದೆ; ಏಕೆಂದರೆ ಶಿವನ ಹಾಗೂ ವೃಷಭನ ಪೂಜೆಯು ಆ ಕಾಲದಲ್ಲಿ ಬಹಳ ಹೆಚ್ಚಾಗಿ ಪ್ರಚಲಿತವಾಗಿದ್ದಿತು. ವೃಷಭನು ಪ್ರಾರಂಭಿಸಿದ ಮತಗಳೆಂದು ಹೇಳಿಕೊಳ್ಳುವ ವೀರಶೈವ ಜೈನ ಮತದ ಹಿನ್ನೆಲೆಯ ಧರ್ಮವನ್ನು ಪುರಾತನವೃಷಭಧರ್ಮವೆನ್ನಬಹುದು. ಇವರಲ್ಲಿ ಉಗ್ರಗಾಮಿಗಳು ಹಿಂಸಾತ್ಮಕ ಯಜ್ಞಗಳನ್ನು ವಿಧಿಸುವುವೆಂದು ವೇದಗಳನ್ನು ತ್ಯಜಿಸಿ ಜೈನರಾದರು; ಯಜ್ಞವನ್ನು ಹೇಳದಿರುವ ವೇದಭಾಗವನ್ನೂ, ಉಪನಿಷತ್ತುಗಳನ್ನೂ ಒಪ್ಪುವ ಮಧ್ಯಮಾರ್ಗದವರು ವೀರಶೈವರಾಗಿ ಹಿಂದೂ ಧರ್ಮದಲ್ಲಿಯೇ ಉಳಿದರು. ಆದರೆ ಈ ಎರಡು ಪಂಗಡದವರ ಯಜ್ಞವಿರೋಧದಿಂದಲೇ ಯಜ್ಞಯಾಗಾದಿಗಳ ಪ್ರಾಬಲ್ಯವು ಕಡಮೆಯಾದುದು. ಉಪನಿಷತ್ತುಗಳೂ ಈ ನಿಲುವಿಗೆ ಸಹಾಯಕವಾಗಿದ್ದರೂ ಸಾಮಾನ್ಯ ಜನರಿಗೆ ಇವು ಅರ್ಥವಾಗದೆ ಅವುಗಳ ಪ್ರಭಾವವು ವಿದ್ಯಾವಂತರ ಮೇಲೆ ಮಾತ್ರ ಆಯಿತು. ಉಪನಿಷತ್ತುಗಳ ಜ್ಞಾನಮಾರ್ಗವನ್ನು ಮುಂದುವರಿಸಿದ ಬೌದ್ಧಮತವು ಜನರಾಡುವ ಮಾತಿನಲ್ಲಿ ಅದರ ಧರ್ಮವನ್ನು ಪ್ರಚಾರ ಮಾಡಿದುದರಿಂದ ಅದರ ಪ್ರಭಾವವು ಸಾಮಾನ್ಯ ಜನರ ಮೇಲೆ ಚೆನ್ನಾಗಿ ಬಿದ್ದಿತು. ವೈದಿಕಧರ್ಮದವರು ವರ್ಣಾಶ್ರಮಗಳಲ್ಲಿಯೂ, ಸ್ತ್ರೀ ಪುರುಷರಲ್ಲಿಯೂ ತಾರತಮ್ಯವನ್ನು ತೋರಿಸುತ್ತಿದ್ದುದು ಸಾಮಾನ್ಯ ಜನರಿಗೆ ಜಿಗುಪ್ಸೆಯಾಗಿದ್ದಿತು. ಇದನ್ನು ನಿವಾರಿಸಲು ಮೊದಲು ಪ್ರಯತ್ನ ಮಾಡಿದ ಹಿರಿಮೆ ಬೌದ್ಧಮತಕ್ಕೆ ಸೇರಿದುದು. ಹಿಂಸಾತ್ಮಕ ಯಜ್ಞಯಾಗಾದಿಗಳನ್ನು ಬೌದ್ಧಧರ್ಮವು ಬಲವಾಗಿ ವಿರೋಧಿಸಿತು. ಪುರೋಹಿತರ ಉಪಟಳದಿಂದ ರೋಸಿಹೋಗಿದ್ದ ಜನರು ತಂಡತಂಡವಾಗಿ ಬೌದ್ಧಮತವನ್ನು ಸೇರಿದರು. ದೇವರೊಬ್ಬನಿರುವನೆಂದು ಹೇಳದೆ, 'ಸರ್ವಂ ಶೂನ್ಯಂ' ಎನ್ನುವ ಈ ಬೌದ್ಧ ಧರ್ಮವು ಜನರಿಗೆ ಅರ್ಥವಾಗದೇ ಹೋದರೂ ಕೆಲವು ವರ್ಣದವರೂ ಸ್ತ್ರೀಯರೆಲ್ಲರೂ ಕೀಳೆಂದು ಹೇಳುವ ಧರ್ಮವನ್ನು ತ್ಯಜಿಸಿ, ಎಲ್ಲ ವರ್ಣದವರಲ್ಲಿಯೂ ಸ್ತ್ರೀಪುರುಷರಲ್ಲಿಯೂ ಯಾವ ತಾರತಮ್ಯವನ್ನು ತೋರದ ಬೌದ್ಧಧರ್ಮವನ್ನು ಜನರು ಅಪ್ಪಿದರು. ಆದರೆ

ಮನುಷ್ಯಮಾತ್ರನಾದವನಿಗೆ ಸಂಕಟ ಬಂದಾಗಲಾದರೂ 'ವೆಂಕಟರಮಣ' ಎನ್ನಲು ಒಬ್ಬ ದೇವರು ಬೇಕು. ಶ್ರೀ ಶಂಕರಾಚಾರ್ಯರು ಈ ಕೊರತೆಯನ್ನು ನೀಗಿಸಿ ಬೌದ್ಧಧರ್ಮದಿಂದ ಹಿಂದೂಧರ್ಮವನ್ನು ಉದ್ಧರಿಸಲು ಕಾರಣರಾದರು. ಶಿವ, ವಿಷ್ಣು, ಸೂರ್ಯ ಮೊದಲಾದ ದೇವರುಗಳನ್ನು ಜನರು ಪೂಜಿಸಿ ಉದ್ಧಾರವಾಗಲೆಂದು ಷಣ್ಮತಗಳನ್ನು ಸ್ಥಾಪಿಸಿದರು. ತರ್ಕಶುದ್ಧವಾದ ಬೌದ್ಧರ ಸರ್ವಶೂನ್ಯ ವಾದವನ್ನು ಜಯಿಸಲು ಅದೇ ರೀತಿಯ ತರ್ಕಶುದ್ಧ ವಾದ ಜಗನ್ಮಿಥ್ಯವಾದದಿಂದ ಬ್ರಹ್ಮಸತ್ಯವಾದವನ್ನು ಮಂಡಿಸಿ ವಿದ್ವಾಂಸರನ್ನು ವೈದಿಕ ಧರ್ಮದ ಕಡೆಗೆ ಎಳೆದುಕೊಂಡುದು ಇವರ ಮಹತ್ಕಾರ್ಯ. ಇವರ ಅದ್ವೈತ ಸಿದ್ಧಾಂತವು ಸರ್ವಮಾನ್ಯವಾದರೂ ಇವರ ಜಗನ್ಮಿಥ್ಯ ವಾದವು ಸರ್ವಮಾನ್ಯವಾಗಲಿಲ್ಲ. ಜಗತ್ತು ಸತ್ಯ ನಾದರೂ ಅದ್ವೈತವು ಸಿದ್ಧಿಸುವುದೆಂಬ ವೀರಶೈವ ಧರ್ಮವು ದಕ್ಷಿಣದಲ್ಲೂ, ಕಾಶ್ಮೀರ ಶೈವವು ಉತ್ತರದಲ್ಲೂ ಜನರಿಗೆ ಪ್ರಿಯವಾದವು. ಶೈವ-ವೈಷ್ಣವ ಧರ್ಮಗಳು ದಕ್ಷಿಣ ದೇಶದಲ್ಲಿ ಬಹಳ ಹಿಂದಿನಿಂದಲೂ ಬೌದ್ಧಧರ್ಮವು ತಲೆಯೆತ್ತದಂತೆ ನೋಡಿದ್ದವು. ಶಿವನೆಂಬ ಹೆಸರಿಂದ ಕರೆಯಲಿ, ವಿಷ್ಣುವೆಂಬ ಹೆಸರಿನಿಂದ ಕರೆಯಲಿ, ದೇವನೊಬ್ಬನೆ ಎಂದು ಹೇಳುವ ಶೈವ-ವೈಷ್ಣವ ಮತಗಳು ಶ್ರೀ ಶಂಕರಾಚಾರ್ಯರ ತರುವಾಯ ಪ್ರಬಲವಾಗಲು, ಷಣ್ಮತಗಳು ಉಳಿದು ನಿಲ್ಲಲಿಲ್ಲ.

ಸೈಂಧವ ನಾಗರಿಕತೆಯ ಕಾಲದಲ್ಲಿಯೇ ಪ್ರಚಲಿತವಾಗಿದ್ದ ಲಿಂಗಧಾರಿಗಳ ಧರ್ಮವು ಮಹಾಭಾರತದ ಕಾಲದಲ್ಲಿಯೂ ಉಳಿದು ಬಂದಿದ್ದುದು ಮಹಾಭಾರತದಿಂದಲೇ ತಿಳಿದು ಬರುವುದು. ಲಿಂಗಿಬ್ರಾಹ್ಮಣರ ವಿಷಯವೂ, ಪಾಶುಪತ ಮತದ ವಿಷಯವೂ ಅದರಲ್ಲಿದೆ. ಪಾಶುಪತರು ಪಾಶುಪತಾಗಮದ ಪ್ರಕಾರ ಲಿಂಗಧಾರಿಗಳು. ಇವರ ಶಾಖೆಗಳಲ್ಲೊಂದು ಶಾಖೆ ಯವರಾದ ಕರ್ನಾಟಕದ ಕಾಳಾಮುಖರು, ೧೦-೧೨ನೆಯ ಶತಮಾನದವರೆಗೂ ರಾಜಪೂಜಿತ ರಾಗಿ ವಿದ್ಯಾರ್ಥಿನಿಲಯಗಳನ್ನು ತಮ್ಮ ಮಠಗಳಲ್ಲಿ ಸ್ಥಾಪಿಸಿದ್ದರು. ಸರ್ವದರ್ಶನಸಂಗ್ರಹದಲ್ಲಿ ಹೇಳಿರುವ ಪ್ರಕಾರ ಶ್ರೀ ಶಂಕರಾಚಾರ್ಯರೊಡನೆ ವಾದಿಸಿದ ಶೈವರನೇಕರು ಲಿಂಗಧಾರಿಗಳು. ಆದರೆ ೧೨ನೆಯ ಶತಮಾನದಲ್ಲಿ ಶುದ್ಧಿಸಂಘಟನೆಗೊಳಗಾಗುವ ಮುನ್ನ ಲಿಂಗಿಗಳಾಗಲೀ, ಅಲಿಂಗಿಗಳಾಗಲೀ ವರ್ಣಾಶ್ರಮ ಧರ್ಮಗಳ ಕಟ್ಟುಗಳಿಗೆ ಒಳಗಾಗಿದ್ದರು. ಹಿಂದೆ ಸ್ಮಾರ್ತ, ವೈಷ್ಣವ, ಮಾಧ್ವ ಅಥವಾ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಎಂಬ ಜಾತಿಪಂಗಡ ಗಳು ಈಗಿನಂತೆ ಇರಲಿಲ್ಲ. ಪಾಶುಪತ ಮತ್ತು ಪಾಂಚರಾತ್ರ ಮತಗಳು ಪ್ರಚಾರದಲ್ಲಿದ್ದವು. ಲಿಂಗಧಾರಿಗಳಾದ ಪಾಶುಪತ ಶೈವಜಂಗಮರು ಗೋತ್ರಸೂತ್ರಗಳನ್ನು ಹೇಳಿಕೊಳ್ಳುತ್ತಿದ್ದರು; ಇವರು ಲಿಂಗದೊಡನೆ ಯಜ್ಞೋಪವೀತವನ್ನು ಧರಿಸಿಕೊಳ್ಳುತ್ತಿದ್ದರು. ಅಲಿಂಗಿಗಳಲ್ಲಿ ಹೇಗೆಯೋ ಲಿಂಗಿಗಳಲ್ಲಿಯೂ ಹಾಗೆಯೇ ಸಾಮಾನ್ಯ ಜನರು ಚಾತುರ್ವರ್ಣ್ಯದ ಕಟ್ಟುನಿಟ್ಟುಗಳ ಗೊಳಗಾಗಿ ಇಷ್ಟದೇವತೆಗಳ ಭಕ್ತರಾಗಿದ್ದರು. ಕಾಳಾಮುಖರನ್ನೊಳಗೊಂಡ ಪಾಶುಪತ ಗುರುಗಳು ಬಹುಮಟ್ಟಿಗೆ ನ್ಯಾಯವೈಶೇಶಿಕ ಯೋಗಸಿದ್ಧಾಂತಗಳಲ್ಲಿ ಪರಿಣತರಾಗಿರುತ್ತಿದ್ದರು. ಹಿಂದೂಧರ್ಮದವರಿಗೆ ಅದ್ವೈತವು ಹೆಚ್ಚೊ, ದ್ವೈತವು ಹೆಚ್ಚೊ ಎಂದು ವೊದಲಾಗಿ ತಲೆ ಕೆರೆದುಕೊಳ್ಳುವುದಕ್ಕಿಂತ ಹೆಚ್ಚಾಗಿ ಪ್ರಜಾನುರಾಗವನ್ನು ಪಡೆದು, ರಾಜಾಧಿರಾಜರಿಂದ ಪ್ರೋತ್ಸಾಹವನ್ನು ಪಡೆದು ಹಬ್ಬುತ್ತಿದ್ದ ಬೌದ್ಧ-ಜೈನರಿಂದ ಚಾತುರ್ವರ್ಣ್ಯಸಿದ್ಧಾಂತ ಕ್ಕೊಳಪಟ್ಟು ಖಿಲವಾಗುತ್ತಿದ್ದ ಹಿಂದೂಧರ್ಮವನ್ನು ರಕ್ಷಿಸಿಕೊಳ್ಳುವುದು ಹೇಗೆಂಬುದು ಸಮಸ್ಯೆಯಾಗಿದ್ದಿತು. ಸುಮಾರು ಕ್ರಿ.ಶ. ೮ನೆಯ ಶತಮಾನದಲ್ಲಿ ಶ್ರೀ ಶಂಕರಾಚಾರ್ಯರು

ಅವರ ಜಗನ್ಮಿಥ್ಯಾವಾದದಿಂದ ಬ್ರಹ್ಮಸತ್ಯವೆಂಬ ಸಿದ್ಧಾಂತವನ್ನು ಸ್ಥಾಪಿಸಿ ಬೌದ್ಧಮತದ ಇಳಿಮುಖಕ್ಕೆ ಕಾರಣವಾದ ಮೇಲೆ ಸುಮಾರು ೧೨ನೆಯ ಶತಮಾನದವರೆಗೂ, ಎಂದರೆ ಶ್ರೀ ರಾಮಾನುಜಾಚಾರ್ಯರೂ, ಶ್ರೀ ಮಧ್ವಾಚಾರ್ಯರೂ ಶಾಂಕರ ಸಿದ್ಧಾಂತವನ್ನು ಖಂಡಿಸಿ ವಿಶಿಷ್ಟಾದ್ವೈತ ದ್ವೈತಸಿದ್ಧಾಂತಗಳನ್ನು ಸ್ಥಾಪಿಸುವವರೆಗೆ, ಶಾಂಕರ ಸಿದ್ಧಾಂತವು ಅಪ್ರತಿಹತವಾಗಿದ್ದಿತೆನ್ನಬಹುದು. ಆದರೆ ಜಗತ್ತು ಸತ್ಯವೆಂದು ಹೇಳುವ ಧರ್ಮಗಳು ಪ್ರಬಲವಾಗುತ್ತಿದ್ದವು.

## ಪಶುಪತಿ ಧರ್ಮವು ಕ್ರಮವಾಗಿ ಉತ್ತಮಗೊಂಡು ಶಿವಾದ್ವೈತದಲ್ಲಿ ಪರಿಪೂರ್ಣತೆಯನ್ನು ಪಡೆಯಿತು

ಪಶುಪಾಶಪಶುಪತಿಸಿದ್ಧಾಂತವು ಸೈಂಧವ ನಾಗರಿಕರ ಕಾಲದಲ್ಲಿಯೇ ಉಗಮವಾಗಿ ವೇದೋಪನಿಷತ್ ಕಾಲದಲ್ಲಿ ಪ್ರಗತಿ ಹೊಂದಿ, ಶ್ವೇತಾಶ್ವತರೋಪನಿಷತ್ತಿನಲ್ಲಿ ರೂಪುಗೊಂಡು ಶೈವ, ಪಾಶುಪತಾದಿ ಧರ್ಮಗಳಲ್ಲಿ ವಿವಿಧತೆಯನ್ನು ಪಡೆದು ವೀರಶೈವದಲ್ಲಿ ಪರಿಪೂರ್ಣತೆಯನ್ನು ಪಡೆಯಿತು. ಈ ಎಲ್ಲ ಶಾಖೆಗಳಲ್ಲಿಯೂ ಲಿಂಗಿಗಳಿದ್ದುದು ಕಂಡುಬರುತ್ತದೆ. ಪಾಶುಪತರಲ್ಲಿ ಲಿಂಗಧಾರಿಗಳಿದ್ದರೆಂಬುದನ್ನು ಹಿಂದೆಯೇ ತೋರಿಸಲಾಗಿದೆ. ತಮಿಳು ಶುದ್ಧ ಶೈವರಲ್ಲಿಯೂ ಲಿಂಗಧಾರಿಗಳಿದ್ದರು. ತಮಿಳು ಶೈವರಿಗೂ ವೀರಶೈವರಿಗೂ ಪೂಜ್ಯರಾದ ಅರವತ್ತುಮೂವರು ಪುರಾತನರಲ್ಲಿ ಕೆಲವರು ಲಿಂಗಧಾರಿಗಳು. ಕುಂಭಕೋಣದಲ್ಲಿನ 'ಪೆರಿಯಮಠಂ' ಎಂಬ ವೀರಶೈವ ಮಠವು ಬಹು ಪುರಾತನ ಮಠವಾಗಿದ್ದು, ಆ ಮಠದ 'ವಟ್ಟಕೊತ್ತರ್' ಎಂಬ ಏಳನೆಯ ಶತಮಾನದ ವಿದ್ವಾಂಸರು ವೀರಶೈವರೆಂದು ತಮಿಳು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಮದರಾಸಿನಲ್ಲಿ ಮೈಲಾಪುರದ ತಿರುವಳ್ಳುವರ್ ಕೋಯಿಲ್ ವೀಧಿಯಲ್ಲಿ ಕ್ರಿಸ್ತಶಕೆಯ ಪ್ರಾರಂಭದಲ್ಲಿದ್ದ ತಿರುವಳ್ಳುವರ್ ಮತ್ತು ಅವರ ಪತ್ನಿ ವಾಸುಕಿಯ ದೇವಾಲಯವಿದೆ. ವಿಗ್ರಹದ ತಲೆಯಲ್ಲಿ ಲಿಂಗಧಾರಣೆಯು ಕಂಡುಬರುವುದು. ಇದರ ಪೂಜಾರಿಗಳು ಇಂದೂ ವೀರಶೈವರೇ ಆಗಿದ್ದಾರೆ. ಕಾಶ್ಮೀರ ಶೈವರಲ್ಲಿ ಅಲಿಂಗಿಗಳಂತೆ ಲಿಂಗಿಗಳೂ ಇದ್ದುದಕ್ಕೆ ಸ್ವಪ್ರಭಾನಂದಶಿವಾಚಾರ್ಯವಿರಚಿತವಾದ ಶಿವಾದ್ವೈತಮಂಜರಿಯೇ ಸಾಕ್ಷಿಯಾಗಿರುವುದು. ಈ ಗ್ರಂಥದಲ್ಲಿ ಇತರ ವೀರಶೈವ ಗ್ರಂಥಗಳಲ್ಲಿ ಕಂಡುಬರದ, ಕಾಶ್ಮೀರ ಶೈವಕ್ಕೆ ವೈಶಿಷ್ಟ್ಯವಾದ ಪ್ರತ್ಯಭಿಜ್ಞೆಯ ವಿಷಯವು ಹೇಳಲ್ಪಟ್ಟು ವೀರಶೈವ ಸಿದ್ಧಾಂತದ ನಿರೂಪಣೆಯಲ್ಲಿ ಕಾಶ್ಮೀರ ಶೈವದ ಛಾಯೆಯು ಬಿದ್ದಿರುವುದನ್ನು ನೋಡಬಹುದು. ಈ ಗ್ರಂಥದ ಪ್ರಾರಂಭದಲ್ಲಿ ಕಾಶೀನಾಥ ಶಾಸ್ತ್ರಿಗಳು ಹೇಳಿರುವಂತೆ "ಸ್ವಪ್ರಭಾನಂದ ಶಿವಾಚಾರ್ಯರು ಶಿವಾದ್ವೈತ ಮಂಜರಿಯಲ್ಲಿ ವಿಶೇಷವಾಗಿ ಕಾಶ್ಮೀರದೇಶಪ್ರಸಿದ್ಧಗಳಾದ ಶಿವಸೂತ್ರ, ಶಿವಸೂತ್ರ ವಾರ್ತಿಕ, ಶಿವದೃಷ್ಟಿ, ಸ್ಪಂದಕಾರಿಕಾ, ತ್ರಿಂಶಿಕಾಶಾಸ್ತ್ರ, ಚಿದ್ಗಗನ ಚಂದ್ರಿಕಾ, ಪ್ರತ್ಯಭಿಜ್ಞಾಹೃದಯ ಇತ್ಯಾದಿ ಗ್ರಂಥಗಳನ್ನೇ ಪ್ರಮಾಣಗಳನ್ನಾಗಿ ಉದಾಹರಿಸಿರುವುದರಿಂದ ಇವರು ಕಾಶ್ಮೀರದೇಶವಾಸಿಗಳಾದ ವೀರಶೈವಾಚಾರ್ಯರೆಂದು ಧಾರಾಳವಾಗಿ ಹೇಳಬಹುದಾಗಿದೆ." ಹಿಮವತ್ ಕೇದಾರ ಜಗದ್ಗುರು ಪೀಠಕ್ಕೆ ಪುರಾತನಕಾಲದಿಂದಲೂ ಲಿಂಗಿಜಂಗಮರೇ ಸ್ವಾಮಿಗಳಾಗುತ್ತಿರುವುದು ಉತ್ತರ ದೇಶದಲ್ಲಿಯೂ ಲಿಂಗಿಧರ್ಮದವರಿದ್ದುದನ್ನು ಸಮರ್ಥಿಸುತ್ತದೆ.

ಪಶುಪತಿಯೇ ಪರಬ್ರಹ್ಮನು, ಜೀವನು ಪಶುವು, ಈ ಜೀವನಿಗೆ ಪಶುತ್ವವನ್ನು ಉಂಟುಮಾಡುವುದು ಮಲತ್ರಯ ರೂಪವಾಗಿರುವ ಪಾಶವು, ಪಾಶದಿಂದ ಬಿಡುಗಡೆ ಹೊಂದಲು

ಗುರುವಿನಿಂದ ದೀಕ್ಷೆಯನ್ನು ಪಡೆದು ಭಕ್ತಿಯಿಂದ ಪಶುಪತಿಯನ್ನು ಆರಾಧಿಸಿ ಮೋಕ್ಷವನ್ನು ಪಡೆಯಬಹುದು, ಎಂಬುದು ಮೇಲೆ ಕಂಡ ಮತಗಳಿಗೆಲ್ಲ ಒಪ್ಪಿಗೆಯಾದ ಸಿದ್ಧಾಂತವಾಗಿದೆ. ಮೋಕ್ಷಸ್ವರೂಪದಲ್ಲಿಯೂ, ಸಾಧನೆಯಲ್ಲಿಯೂ ಇವರಲ್ಲಿ ವ್ಯತ್ಯಾಸವು ಕಂಡುಬರುವುದು. ನ್ಯಾಯವೈಶೇಷಿಕ ಸಿದ್ಧಾಂತದಲ್ಲಿ ಪರಿಣತರೆಂದು ಶಿಲಾಶಾಸನಗಳಲ್ಲಿ ಸಹಾ ಪ್ರಸಿದ್ಧರಾದ ಕಾಳಾಮುಖರನ್ನೊಳಗೊಂಡ ಪಾಶುಪತರ ಸಿದ್ಧಾಂತದ ಪ್ರಕಾರ, ಮೋಕ್ಷದಲ್ಲಿ ಜೀವನು ಸರ್ವಜ್ಞತ್ವ, ಸರ್ವಕರ್ತೃತ್ವಾದಿ ಕಲ್ಯಾಣಗುಣಗಳನ್ನು ಪಡೆದು ಸುಖಿಸುವನು. ತಮಿಳು ಶೈವಸಿದ್ಧಾಂತದ ಪ್ರಕಾರ 'ಶಿವಜ್ಞಾನ ಬೋಧ'ದಲ್ಲಿ "ಶಿವೇನೈಕ್ಯಂ ಗತಃ ಸಿದ್ಧಃ ತದಧೀನ ಸ್ವವೃತ್ತಿಕಃ" ಎಂದು ಹೇಳಿರುವುದರಿಂದ ಮೋಕ್ಷಸ್ಥಿತಿಯಲ್ಲಿ ಐಕ್ಯವೆಂದು ಇವರು ಹೇಳಿದರೂ ಮುಕ್ತಜೀವನು ಶಿವನ ಅಧೀನದಲ್ಲಿರುವನೆಂದು ಹೇಳುವುದರಿಂದ ದ್ವೈತಭಾವನೆಯು ಮೋಕ್ಷದಲ್ಲಿಯೂ ಇರುವುದು. ಶ್ರೀಕಂಠ ಶಿವಾಚಾರ್ಯರು ಮೋಕ್ಷದಲ್ಲಿ ಸಾರೂಪ್ಯವನ್ನು ಹೇಳಿದರೂ ಸೃಷ್ಟ್ಯಾದಿ ಕಾರ್ಯಗಳು ಪರಮಾತ್ಮನಿಗೆ ಮೀಸಲು ಎನ್ನುವರು. ಇವರು ಶ್ರೀ ರಾಮಾನುಜರಂತೆ ಚಿದಚಿತ್ತುಗಳು ಪರಮಾತ್ಮನ ಶರೀರವೆನ್ನುವರಾದರೂ, ಚಿದಚಿತ್ತುಗಳು ಪರಶಿವಾಭಿನ್ನವಾಗಿರುವ ಶಕ್ತಿಯ ಪರಿಣಾಮವೆಂದು ಹೇಳುವುದರಿಂದ ಶಕ್ತಿವಿಶಿಷ್ಟಾದ್ವೈತವೆಂದು ಕರೆಯಲ್ಪಡುವ ಪರಿಷ್ಕೃತ ವೀರಶೈವ ಸಿದ್ಧಾಂತಕ್ಕೆ ಅತ್ಯಂತ ಸಮೀಪವರ್ತಿಯಾಗಿ ಇವರ ಸಿದ್ಧಾಂತವು ಇರುವುದಲ್ಲದೆ, ವೀರಶೈವರಂತೆಯೇ ಉಪಾಸನೆಯಲ್ಲಿ ಮುಂದೆ ತೋರಿಸುವಂತೆ ಆಜೀವಪರ್ಯಂತ ಲಿಂಗಧಾರಣೆ ಲಿಂಗಾರ್ಚನೆಗಳನ್ನೂ, ಸೋಹಂಭಾವನೆಯನ್ನೂ ಮುಮುಕ್ಷುಗಳಿಗೆ ವಿಧಿಸುತ್ತದೆ. ತಮಿಳು ಶೈವಸಿದ್ಧಾಂತದವರು ಒಂದು ರೀತಿಯ ಶರೀರಶರೀರಿಭಾವವನ್ನು ಹೇಳುವರು. ಇದಕ್ಕೂ ಶ್ರೀಕಂಠರ ನಿಲುವಿಗೂ ವ್ಯತ್ಯಾಸವನ್ನು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ *Shivadwaita of Srikantha* ಎಂಬ ಗ್ರಂಥದ ೨೫ನೆಯ ಪುಟದ ಅಡಿ ಟಿಪ್ಪಣಿಯಲ್ಲಿ ಹೀಗೆ ಹೇಳಿದೆ:

"God stands in relation to the soul, as the soul to the body. As the eyes cannot see but for the light of the soul, the soul cannot know but for the light of God. God and soul are one in the sense that they cannot be disjoined; they exist and function together not as if they are two distinct beings. Their unity however is not that of the one causing or being transferred into the other. The latter is Srikantha's conception of identity though he holds to the body and soul conception also."

ಲಿಂಗಿಗಳಲ್ಲಿಯೂ ಅಲಿಂಗಿಗಳಲ್ಲಿ ಇದ್ದಂತೆಯೇ ಸಿದ್ಧಾಂತದಲ್ಲಿಯೂ ಆಚರಣೆಯಲ್ಲಿಯೂ ಬಹಳ ವ್ಯತ್ಯಾಸಗಳಿದ್ದವು. ಮೇಲೆ ಹೇಳಿದಂತೆ ಲಿಂಗಿಗಳಲ್ಲಿ ದ್ವೈತ ವಿಶಿಷ್ಟಾದ್ವೈತಿಗಳೇ ಮೊದಲಾದವರು ಇದ್ದರಲ್ಲದೆ ಶಿವಾದ್ವೈತವನ್ನು ಪ್ರತಿಪಾದಿಸುವ ಶರಣರ ಬಳಗವು ಬಸವೇಶ್ವರರ ಕಾಲಕ್ಕಿಂತಲೂ ಹಿಂದೆಯೇ ಪ್ರಬಲವಾಗುತ್ತಿದ್ದಿತು. ಕಾಪಾಲಿಕರ ಮತ್ತು ಶಾಕ್ತರ ಹಿಂಸಾತ್ಮಕವಾದ ಹಾಗೂ ನೀತಿಬಾಹಿರವಾದ ಆಚರಣೆಗಳು ಕರ್ನಾಟಕದ ಕಾಳಾಮುಖ ಶೈವರಲ್ಲಿ ಕಂಡುಬರುವುದಿಲ್ಲವಾದರೂ, ವರ್ಣಗಳಲ್ಲಿ ತಾರತಮ್ಯ, ಸ್ತ್ರೀಪುರುಷರಲ್ಲಿ ತಾರತಮ್ಯ, ಅರ್ಥರಹಿತವಾದ ಆಚಾರ ಅಂಧಶ್ರದ್ಧೆ ಮೊದಲಾದವುಗಳು ಜನರನ್ನು ಅಧೋಗತಿಗೆ ಇಳಿಸಿದ್ದವು. ಶ್ರದ್ಧೆಯುಳ್ಳವರಾದರೂ ಜನರು ಬೇರೆ ಬೇರೆ ಸಿದ್ಧಾಂತ, ಬೇರೆ ಬೇರೆ ಆಚಾರ, ಇವುಗಳಿಂದ ಪ್ರತ್ಯೇಕಿಸ

ಲ್ಪಟ್ಟಿದ್ದರು. ಇವೆಲ್ಲವುಗಳನ್ನು ಬಿಡಿಸಿ, ಒಂದೇ ಸಿದ್ಧಾಂತವನ್ನೂ ಒಂದೇ ರೀತಿಯ ಆಚರಣೆಯನ್ನೂ ರೂಢಿಗೆ ತಂದು, ವರ್ಣಗಳಲ್ಲಿ ತಾರತಮ್ಯವನ್ನೂ ಸ್ತ್ರೀಪುರುಷರಲ್ಲಿ ತಾರತಮ್ಯವನ್ನೂ ತಪ್ಪಿಸಿ, ಸಮಾಜವನ್ನು ಒಂದುಗೂಡಿಸಿ ಸಮಾಜೋದ್ಧಾರವನ್ನು ಮಾಡುವ ಆವಶ್ಯಕತೆಯು ಅತಿಶಯವಾಗಿದ್ದಿತು. ರೇಣುಕಾದಿ ಆಚಾರ್ಯರೂ, ಬಸವಾದಿ ಪ್ರಮಥರೂ ಈ ಶುದ್ಧಿ ಸಂಘಟನೆಯ ಕಾರ್ಯಕ್ಕಾಗಿ ಅವತಾರ ಮಾಡಿದರು.

## ೧೧ನೆಯ ಶತಮಾನಕ್ಕೆ ಮೊದಲು ವಚನೋಪನಿಷತ್ ಸಾಹಿತ್ಯ

ಶುದ್ಧಿಸಂಘಟನೆಯ ಮಹತ್ಕಾರ್ಯವನ್ನು ಭರದಿಂದ ಕೈಗೊಂಡ ಬಸವೇಶ್ವರರು ಹನ್ನೆರಡನೆಯ ಶತಮಾನದಲ್ಲಿ ಅವತರಿಸುವ ಮೊದಲು, ಲಿಂಗಧಾರಿಗಳಲ್ಲಿ ಶಿವಾದ್ವೈತ ಕಲ್ಪನೆಯಾಗಲೀ, ಚಾತುರ್ವರ್ಣ್ಯದವರಲ್ಲಿಯೂ ಸ್ತ್ರೀಪುರುಷರಲ್ಲಿಯೂ ಸಮಾನತೆಯ ದೃಷ್ಟಿ ಮೊದಲಾದುವು ಇರಲಿಲ್ಲವೆಂದಾಗಲೀ, ವೀರಶೈವರ ಶಿವಾದ್ವೈತ ಕಲ್ಪನೆಗೆ ಕಾಶ್ಮೀರಶೈವವೇ ಮೂಲವೆಂದಾಗಲೀ ಹೇಳುವುದು ಶುದ್ಧ ತಪ್ಪು. "ದೇವರ ದಾಸಿಮಯ್ಯನ ಪ್ರಶಸ್ತಿ" ಗ್ರಂಥದ ೯೧ನೇ ಪುಟದಲ್ಲಿ ಪ್ರಸಿದ್ಧ ಲೇಖಕರಾದ ಮಾನ್ಯ ಗೋವಿಂದಪೈರವರು, "ಕ್ರಿ.ಶ. ಸುಮಾರು ೯೮೦ ರಲ್ಲಿ ಹುಟ್ಟಿ ಕ್ರಿ.ಶ. ಸುಮಾರು ೧೦೪೦ ರಲ್ಲಿ ಶಿವೈಕ್ಯನಾಗಿರಬಹುದೆ"ಂದು ತೀರ್ಮಾನಿಸಿರುವ ದೇವರ ದಾಸಿಮಯ್ಯನು ಪ್ರಸಿದ್ಧ ವಚನಕಾರನು. ಶ್ರೀಯುತ ಗೋವಿಂದಪೈರವರು ಮುಂದುವರಿದು ಹೇಳುವಂತೆ—

"ದೇವರ ದಾಸಿಮಯ್ಯನೆಂಬ ಜೇಡರ ದಾಸಿಮಯ್ಯನಾದರೆ ಕನ್ನಡ ವಚನಕಾರರಲ್ಲಿ ಮೊತ್ತಮೊದಲಿಗನಲ್ಲ ಎಂದು ಆತನ ವಚನಗಳಲ್ಲಿ ಮುಂಚಿನ ಇವೆರಡು ವಚನಗಳಿಂದ ತಿಳಿಯುತ್ತದೆ:

೧. ಕರಿಯನಿತ್ತೊಡೆ ಒಲ್ಲೆ ಸಿರಿಯನಿತ್ತೊಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ ನಿಮ್ಮ ಶರಣರ
ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಣಾ ರಾಮನಾಥಾ

೨. ಕಡೆಗೀಲಿಲ್ಲದ ಬಂಡಿ ಹೊರಗೆಡುವುದು ಮಾಬುದೆ?
ಕಡೆಗೀಲು ಬಂಡಿಗಾಧಾರ; ಕಡುದರ್ಪವೇರಿದ ಒಡಲೆಂಬ
ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ.

ಇವಲ್ಲಿ ೧ನೆಯ ವಚನದಲ್ಲಿ, ಶಿವಶರಣರ ವಚನಗಳು ಸಿಕ್ಕಿದರೆ ಶಿವನನ್ನು ಇತ್ತುಬಿಡುವೆನೆಂಬಲ್ಲಿ ಅವು ಶಿವನಿಗಿಂತಲೂ ಮೇಲೆಂದೂ, ೨ನೆಯ ವಚನದಲ್ಲಿ ಶಿವಶರಣರ ವಚನಗಳು ನಮ್ಮ ಮದೋನ್ಮತ್ತವಾದ ದೇಹವೆಂಬ ಬಂಡಿಯು ಸಾಗಣೆಗೆ, ಅಂದರೆ ವಿವಿಧವಾದ ಮದಗಳಿಗೆ, ಈಡಾಗಿ ಸರಿಯಾಗಿ ಹೋಗಲೊಲ್ಲದ ಈ ದೇಹವನ್ನು ಸುಸೂತ್ರವಾಗಿ ಸಾಗಲಿಕ್ಕೆ ಆಧಾರಭೂತವೆಂದು ಹೇಳಿರುವುದರಿಂದ, ಆತನ ಹಿಂದೆ ಕೆಲವೇ ವಚನಗಳಲ್ಲಿ 'ನುಡಿಗಡಣ' ಎಂದಿರುವುದರಿಂದ ಸಾಕಷ್ಟು ವಚನಗಳು, ಅತ ಏವ ಹಲವರು ವಚನಕಾರರು ಆಗಿಹೋಗಿರಬೇಕು."

ಮತ್ತೆ ಮುಂದುವರಿದು ಶ್ರೀಯುತ ಗೋವಿಂದಪೈರವರು ಹೇಳುವಂತೆ ಡೋಹರ ಕಕ್ಕ, ಮಾದಾರ ಚೆನ್ನ, ಓಹಿಲದೇವ, ಉದ್ಭಟಯ್ಯ ಮೊದಲಾದ ಶರಣರ ಹೆಸರನ್ನು ದಾಸಿಮಯ್ಯನು ಹೇಳಿರುವುದರಿಂದ, ಅವನ ಹಿಂದೆ ಪುರಾತನ ವಚನ ವಾಙ್ಮಯವಿದ್ದಿರಬೇಕು. ಅಲ್ಲದೆ,

ಕ್ರಿ.ಶ. ೧೧೪೮ ನೆಯ ಇಸವಿಯ ಮತ್ತು ಕ್ರಿ.ಶ. ೧೨೦೦ ರ ಶಾಸನಗಳ ಆಧಾರದಿಂದ "ದಾಸನ ಕುಲ" ವೆಂಬ ಶಿವಪಂಥವೊಂದು ಇದ್ದಿರಬೇಕು ಎಂದು ಶ್ರೀಯುತ ಗೋವಿಂದಪೈರವರು ನಿರ್ಧರಿಸಿದ್ದಾರೆ. ದೇವರ ದಾಸಿಮಯ್ಯನಂತೆಯೇ ಬಸವೇಶ್ವರರು ಸಹಾ ಪುರಾತನರನ್ನು ನೆನೆವರಲ್ಲದೆ "ಅದ್ಯರ ವಚನ ಪರುಷ ಕಂಡಯ್ಯಾ" ಎಂದು ಹೇಳಿರುವುದರಿಂದ ಅವರ ಹಿಂದೆಯೇ ವೀರಶೈವ ಶರಣರಿದ್ದುದು ಸ್ಪಷ್ಟ. ಬಸವೇಶ್ವರರ ಕಾಲದಲ್ಲಿ ತಂಡ ತಂಡವಾಗಿ ದೂರದೂರ ದೇಶದಿಂದ ಬಂದು ಲಿಂಗಧಾರಿಗಳಾದ ಜನಸಮುದಾಯದಲ್ಲಿ ಶುದ್ಧಿಸಂಘಟನೆಯನ್ನು ಮಾಡಲು, ಅವರಿಗೆ ಹಿನ್ನೆಲೆಯಾಗಿದ್ದ ಒಂದು ವಿಶಿಷ್ಟ ಸಂಪ್ರದಾಯವನ್ನು ಅವರು ಅನುಸರಿಸಿದರೆಂಬುದನ್ನೂ, ಆ ಸಂಪ್ರದಾಯವು ಕಾಶ್ಮೀರಶೈವದಷ್ಟೆ ಅಥವಾ ಅದಕ್ಕಿಂತಲೂ ಸನಾತನವಾದ ಶಿವಾದ್ವೈತ ಸಂಪ್ರದಾಯವೆನ್ನುವುದನ್ನೂ ಮರೆಯಬಾರದು. ಆದರೆ ತಲಕಾವೇರಿಯಂತೆ ಸೂಕ್ಷ್ಮಧಾರೆಯಾಗಿದ್ದ ಆ ಸಂಪ್ರದಾಯವು ಕೃಷ್ಣರಾಜಸಾಗರದಂತೆ ಜಗನ್ಮೋಹನ ಸುಧಾರಸವಾಗಲು ಶ್ರೀ ಬಸವೇಶ್ವರರೇ ಕಾರಣವೆನ್ನಬಹುದು.

ವಚನವಾಙ್ಮಯವು ಕರ್ಣಾಟಕದ ಉಪನಿಷತ್ ಸಾಹಿತ್ಯವೆಂದೇ ಹೇಳಬಹುದು. "ವೀರಶೈವ ತತ್ವಪ್ರಕಾಶ"ದ ೧೬೯ ನೆಯ ಪುಟದಲ್ಲಿ ಶ್ರೀಯುತ ದಿವಾಕರ ರಂಗಾರಾಯರು ಹೇಳುವಂತೆ "ವಚನಗಳು ಉಪನಿಷತ್ತುಗಳಿಗಿಂತ ಯಾವ ವಿಷಯದಲ್ಲಿಯೂ ಹಿಂದೆ ಬೀಳಲಾರವೆಂಬುದನ್ನು ಹೇಳಲಿಕ್ಕೆ ನನಗೆ ಪರಮಸಂತೋಷವಾಗುತ್ತದೆ. ಉಪನಿಷತ್ತುಗಳಲ್ಲಿದ್ದ ವಿಷಯಗಳೆಲ್ಲ ವಚನಗಳಲ್ಲಿ ಸಿಗುತ್ತವೆ. ವಚನಗಳಲ್ಲಿದ್ದ ವಿಷಯಗಳೆಲ್ಲ ಉಪನಿಷತ್ತಿನಲ್ಲಿ ಸಿಗುವುದು ಸಾಧ್ಯವಿರುವುದಿಲ್ಲ. ಸತ್ಯಾನ್ವೇಷಿಗಳಾದ ಋಷಿಗಳ ಅಂತಃಸ್ಫೂರ್ತಿಯಿಂದ ಹೊರ ಹೊರಟವುಗಳೆ ಉಪನಿಷತ್ತುಗಳು. ಶರಣರ ಹೃದಯದಿಂದ ನಿರರ್ಗಳವಾಗಿ ಹೊರಟವುಗಳೇ ವಚನಗಳು." ಈ ಮಾತುಗಳ ಪೂರ್ಣಸತ್ಯವನ್ನು ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಸಿದ್ಧವಾದ ನನ್ನ "ವಚನೋಪನಿಷತ್" ಲೇಖನಗಳಲ್ಲಿ ಕಾಣಬಹುದು. ಅದರಲ್ಲಿ ಬಹುಮಟ್ಟಿಗೆ ಶ್ರೀ ಬಸವೇಶ್ವರರ ಮತ್ತು ಅವರ ಕಾಲದ ವಚನಕಾರರ ವಚನಗಳಿಂದ ಆಧಾರಗಳನ್ನು ತೆಗೆದುಕೊಂಡಿದೆ. ಆದರೆ ಈ ವಚನೋಪನಿಷತ್ತು ಪ್ರಾರಂಭವಾದುದು ಶ್ರೀ ಬಸವೇಶ್ವರರಿಗಿಂತ ಒಂದೆರಡು ಶತಮಾನಗಳ ಹಿಂದೆಯೇ ಎಂಬುದನ್ನು ತೋರಿಸಲು ಕ್ರಿ.ಶ. ಸುಮಾರು ೯೮೦ ರಲ್ಲಿ ಹುಟ್ಟಿ, ಕ್ರಿ.ಶ. ಸುಮಾರು ೧೦೪೦ ರವರೆಗೆ ಬದುಕಿ ಜಯಸಿಂಹ ರಾಜನ ರಾಣಿಗೆ ಲಿಂಗಧಾರಣೆಯನ್ನು ಮಾಡಿ, 'ದಾಸಕುಲ' ವೆಂಬ ಸಂಪ್ರದಾಯಕ್ಕೆ ಮೂಲಕಾರಣನಾದ ದೇವರ ದಾಸಿಮಯ್ಯನ ವಚನಗಳಿಂದಲೇ ಮೇಲಿನ ಮಾತನ್ನು ಸಿದ್ಧಾಂತಮಾಡಲಾಗುವುದು.

"ಈಶಾ ವಾಸ್ಯಮಿದಗ್ಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್"

ಎಂದರೆ ಚರಾಚರಾತ್ಮಕವಾದ ಪ್ರಪಂಚದಲ್ಲಿ ಅಣುರೇಣು ತೃಣಕಾಷ್ಟದಲ್ಲಿಯೂ ಸಹಾ ಪರಮಾತ್ಮನು ಇರುವನೆಂಬ ಭಾವವುಳ್ಳ ಮೇಲಿನ ಮಂತ್ರಭಾಗದಿಂದ ದಶೋಪನಿಷತ್ತುಗಳಲ್ಲಿ ಮೊದಲನೆಯದಾದ ಈಶಾವಾಸ್ಯೋಪನಿಷತ್ತು ಪ್ರಾರಂಭವಾಗುವುದು.

ಮಣಿಗಳ ಸೂತ್ರದಂತೆ ತ್ರಿನಯನ ನೀನಪ್ಪೆಯಯ್ಯಾ
ಎಣಿಸುವೊಡೆ ತನುಭಿನ್ನ, ಆತ್ಮನೊಬ್ಬನೆ; ಅಣುರೇಣು ಮಧ್ಯದಲ್ಲ
ಗುಣಭರಿತ ನೀನೆಂದು ಮಣಿವುತಿಪ್ಪೆನಯ್ಯಾ ರಾಮನಾಥಾ

ಎಂಬ ದೇವರ ದಾಸಿಮಯ್ಯನ ವಚನದ ಅಭಿಪ್ರಾಯವಾದರೂ ಮೇಲಿನ ಉಪನಿಷದ್ವಾಕ್ಯದ್ದೇ ಆಗಿದೆ; ಅಲ್ಲದೆ, "ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ" ಎಂಬ

ಗೀತಾವಾಕ್ಯವನ್ನು ಈ ವಚನವು ನೆನಪಿಗೆ ತರುವುದು. ಹೀಗೆ ಪರಮಾತ್ಮನು ಎಲ್ಲೆಲ್ಲಿಯೂ ಇರುವನೆಂದರೆ ಆದನ್ನು ಅರಿವೆವೆಂದರೆ ಅರಿಯಲಾಗದುದು ಅದು.

ಖಂಡಿತನಲ್ಲದ ಅಖಂಡಿತನೆ ನಿಮ್ಮ ಕಂಡವರುಂಟೆ ಹೇಳಯ್ಯಾ ?
ಕಂಡೆನೆಂಬವರಿಲ್ಲ ಬಂಜೆಯ ಮಕ್ಕಳು

ಎಂದು ಮೊದಲಾಗಿ ಹೇಳುವ ವಚನವು ಕೇನೋಪನಿಷತ್ತಿನ ಈ ಮಂತ್ರವನ್ನು ಜ್ಞಾಪಿಸುವುದು:

ಯಸ್ಯಾಮತಂ ತಸ್ಯಮತಂ, ಮತಂ ಯಸ್ಯ ನ ವೇದಸಃ

ಏಕೆಂದರೆ ಆ ಪರಾತ್ಪರವು ಅರಿಯಬಾರದ ಘನವು; ಅದು ಈ ವಚನಕಾರನ ಮಾತಿನಲ್ಲಿ:

ಆಡಬಾರದ ಬಯಲು, ನೋಡಬಾರದ ಬಯಲು
ನುಡಿಯಬಾರದ ಬಯಲು, ಹಿಡಿಯಬಾರದ ಬಯಲು.

ಮುಂಡಕೋಪನಿಷತ್ತಿನಲ್ಲಿ ಕೆಳಗೆ ಕಂಡಂತೆ ಹೇಳಿರುವುದಾದರೂ ಇದೇ ಅಭಿಪ್ರಾಯವೆ:

ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ

ಹೀಗೆ ಪರಾತ್ಪರವು ಇದ್ದೂ ಇಲ್ಲದ ಹಾಗೆ ಇರುವುದು ಹೇಗೆಂದರೆ ವಚನಕಾರನ ಉತ್ತರವಿದು:

ಎಣ್ಣೆ ಇರ್ದು ಎಳ್ಳು ನೆನೆಯದ ಭೇದವ, ಕಿಚ್ಚಿದ್ದು ಕಲ್ಲು ಸಿಡಿಯದ ಭೇದವ,
ಕಾಮವಿರ್ದು ಕನ್ನೆಯನನುಭವಿಸದ ಭೇದವ, ಪರವಿರ್ದು ಪ್ರಾಣಪ್ರಕೃತಿಯ
ನರಿಯದ ಭೇದವ ನರರೆತ್ತ ಬಲ್ಲರೈ ರಾಮನಾಥ.

ಸಣ್ಣನನೆಯೊಳಗಣ ಪರಿಮಳವ ಹೊರಸೂಸಿ ಇದಿರಿಂಗರುಹಿಸಬಲ್ಲುದೆ ವಾಯು ?
ಕೊಡಗೂಸಿನೊಳಗಣ ಮೊಲೆ ಮುಡಿಯ ಹಡೆದ ತಾಯಿತಂದೆಗಳೆಂದರೆ ಕಾಣಿಸಿಕೊಡಬಲ್ಲರೆ
ಕಾಂಬವರ ಕಣ್ಣಿಂಗೆ? ಪಕ್ವವಲ್ಲದೆ ಪರಿಣಾಮ ಕಾಣಿಸದು ರಾಮನಾಥ.

ಪರಾತ್ಪರವು ಎಳ್ಳಿನಲ್ಲಿರುವ ಎಣ್ಣೆಯಂತೆ ಎಲ್ಲೆಲ್ಲಿಯೂ ಇದ್ದು ಅವ್ಯಕ್ತವಾಗಿದೆ. ಹಾಗೆಯೇ ಸೂರ್ಯಕಾಂತ ಶಿಲೆಯೊಳಗಣ ಕಿಚ್ಚಿನಂತೆ ಪರಾತ್ಪರವು ಅವ್ಯಕ್ತವಾಗಿದೆ. ಹೂವಿನಲ್ಲಿನ ಪರಿಮಳವು ನನೆಯಲ್ಲಿ ಅವ್ಯಕ್ತವಾಗಿರುವಂತೆಯೂ, ಪ್ರೌಢ ಸ್ತ್ರೀಯಲ್ಲಿನ ಕಾಮವಿಕಾರವು ಮೊಲೆಮುಡಿಗಳೂ ಶಿಶುವಿನಲ್ಲಿ ಅವ್ಯಕ್ತವಾಗಿರುವಂತೆಯೂ ಪರಾತ್ಪರವು ಅವ್ಯಕ್ತವಾಗಿರುವುದು. ನನೆಯೂ ಶಿಶುವೂ ಪಕ್ವವಾದ ಹೊರತು ಅವುಗಳ ಗುಣಗಳು ವ್ಯಕ್ತವಾಗುವುದಿಲ್ಲ.

ತಿಲೇಷು ತೈಲಂ ದಧಿನೀವ ಸರ್ಪಿರಾಪಃ ಸ್ರೋತಃಸ್ವರಣಿಷು ಚಾಗ್ನಿಃ ।
ಏವಮಾತ್ಮಾಽತ್ಮನಿ ಗೃಹ್ಯತೇಽಸೌ ಸತ್ಯೇನೈನಂ ತಪಸಾ ಯೋಽನುಪಶ್ಯತಿ ॥

ಎಂದರೆ ಎಳ್ಳಿನಲ್ಲಿನ ಎಣ್ಣೆಯಂತೆ, ಮೊಸರಿನಲ್ಲಿನ ಬೆಣ್ಣೆಯಂತೆ, ಭೂಮಿಯಲ್ಲಿನ ನೀರಿನಂತೆ, ಅರಣಿಯಲ್ಲಿನ ಬೆಂಕಿಯಂತೆ, ಜೀವಾತ್ಮನಲ್ಲಿನ ಪರಮಾತ್ಮ ತತ್ವವು ಸತ್ಯಾಚರಣೆ ತಪಸ್ಸುಗಳಿಂದ ಹೊರಹೊಮ್ಮುವುದು. ಶ್ವೇತಾಶ್ವತರೋಪನಿಷತ್ತಿನ ಈ ಮಂತ್ರದ ಅರ್ಥವಾದರೂ ಮೇಲಿನ ವಚನಗಳಲ್ಲಿರುವುದೇ ಆಗಿದೆ. ಜೀವನು ಪಕ್ವವಾದಹೊರತು ಪರಮಾತ್ಮನ ದರ್ಶನವಾಗದು. ಎಣ್ಣೆ ತೆಗೆಯಲು ಘರ್ಷಣೆಯಾಗಬೇಕು. ಬೆಣ್ಣೆ ತೆಗೆಯಲು ಕಡೆಯಬೇಕು. ಅಗ್ನಿ ಹೊರ ಹೊಮ್ಮಲು ಅರಣಿಯೆಂಬ ಕೆಳಗಿನ ಕೋಲಿನ ಮೇಲೆ ಉತ್ತರಾರಣಿಯೆಂಬ ಕೋಲನ್ನಿಟ್ಟು ಹೊಸೆದರೆ ಹೊರಹೊಮ್ಮುವುದು ಅಗ್ನಿ. ಹಾಗೆಯೇ ಜೀವಾತ್ಮನನ್ನು ಅರಣಿಯನ್ನಾಗಿ ಮಾಡಿ ಪ್ರಣವವನ್ನು ಉತ್ತರಾರಣಿಯನ್ನಾಗಿ ಮಾಡಿ ಧ್ಯಾನವೆಂಬ ಕಡತಕ್ಕೊಳಗುಮಾಡಿದರೆ ಹೊರ

ಹೊಮ್ಮುವುದು ಪರಮಾತ್ಮವೆಂಬ ಚಿದಗ್ನಿ. ಕೆಳಗಿನ ಶ್ವೇತಾಶ್ವತರೋಪನಿಷತ್ತಿನ ಮಂತ್ರದ ಅಭಿಪ್ರಾಯವೂ ಇದೇ ಆಗಿದೆ.

ಸ್ವದೇಹಮರಣಿಂ ಕೃತ್ವಾ ಪ್ರಣವಂ ಚೋತ್ತರಾರಣಿಂ ।
ಧ್ಯಾನನಿರ್ಮಥನಾಭ್ಯಾಸಾದ್ ದೇವಂ ಪಶ್ಯೇನ್ನಿಗೂಢವತ್ ॥

ದೇವರ ದಾಸಿಮಯ್ಯನ ಈ ವಚನದ ಅಭಿಪ್ರಾಯವಾದರೂ ಇದೇ ಆಗಿದೆ:

ನಿಡಿದೊಂದು ಕೋಲನು ಕಡಿದು ಎರಡು ಮಾಡಿ
ಅಡಿಯ ಹೆಣ್ಣು ಮಾಡಿ ಒಡೆತನವ ಗಂಡು ಮಾಡಿ
ನಡುವೆ ಹೊಸೆದೊಡೆ ಹುಟ್ಟಿದ ಕಿಚ್ಚು ಹೆಣ್ಣೋ ಗಂಡೋ ರಾಮನಾಥ?

ಹೀಗೆ ಹೊರಹೊಮ್ಮಿದ ಪರಾತ್ಪರವು ಹೆಣ್ಣೇ ಎಂದಾಗಲಿ, ಗಂಡೇ ಎಂದಾಗಲಿ ಅಲ್ಲ. ಏಕೆಂದರೆ,

ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ

ಎಂದು ಶ್ವೇತಾಶ್ವತರದಲ್ಲಿ ಹೇಳಿದಂತೆ ಪರಾತ್ಪರವು ಗಂಡೂ ಅಹುದು, ಹೆಣ್ಣೂ ಅಹುದು; ಹಾಗೆಯೇ ಅದು ಕುಮಾರನೂ ಅಹುದು, ಕುಮಾರಿಯೂ ಅಹುದು; ಅದನ್ನು ಇಂತಹುದೆಂದು ಹೇಳಲಾಗುವುದಿಲ್ಲ. ಇಂತಹ ಪರಾತ್ಪರವನ್ನು ಸಾಕ್ಷಾತ್ಕರಿಸಿಕೊಳ್ಳಲು ತಲೆಯನ್ನು ಬೋಳಿಸಿಕೊಂಡು ಸನ್ಯಾಸಿಯಾಗಿ ತಿರಿದು ಉಣ್ಣಬೇಕೇನು? ಕೂಡದು; ದೇವರ ದಾಸಿಮಯ್ಯನು ತನ್ನ ಕಾಯಕವನ್ನು ಬಿಡದ ಜೇಡರ ದಾಸಿಯೂ ಅಹುದು. ಅವನ ಸಿದ್ಧಾಂತದ ಪ್ರಕಾರ ಮಂಡೆ ಬೋಳಿಸಿಕೊಂಡು ತಿರಿದುಂಬುವನನೊಲ್ಲ ಪರಮಾತ್ಮನು.

ಮಂಡೆಯ ಬೋಳಿಸಿಕೊಂಡು ನುಡಿಪು ಗೋಷ್ಠಿಯ ಕಟ್ಟಿದಡೇನು?
ಕಂಡಕಂಡವರ ಕೈಯ್ಯೊಡ್ಡಿ ಬೇಡುವ ಭಂಡರನೊಲ್ಲ ನಮ್ಮ ರಾಮನಾಥ.

ಹಾಗೆ ತಿರಿದುಣ್ಣಬಾರದೆಂದ ಮೇಲೆ ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿದಂತೆ:

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ।
ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥

ಕರ್ಮ ಮಾಡುತ್ತಲೇ ಯಾವಜ್ಜೀವವನ್ನೂ ಕಳೆಯಬೇಕು; ಬೇರೆಯ ಮಾರ್ಗವೇ ಇಲ್ಲ; ಆದರೆ ಕರ್ಮಲೇಪನವಾಗದಂತೆ ನೋಡಿಕೊಳ್ಳಬೇಕು. ಹಾಗೆ ಕರ್ಮಲೇಪನವಾಗದಿರಲು ಮಾರ್ಗವನ್ನು ಈಶಾವಾಸ್ಯೋಪನಿಷತ್ತೇ ಹೇಳಿದೆಯಷ್ಟೆ. ಆ ಮಂತ್ರದ ಭಾಗವಿದು:

ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ

ಎಂದರೆ ಎಲ್ಲವೂ ಪರಮಾತ್ಮನದೆ ಎಂಬ ಭಾವನೆಯಿಂದ ಅನುಭವಿಸಬೇಕು. ದೇವರ ದಾಸಿಮಯ್ಯನು ಹೇಳಿದಂತೆ:

"ಇಳೆ ನಿಮ್ಮ ದಾನ; ಬೆಳೆ ನಿಮ್ಮ ದಾನ ಸುಳಿದು ಬೀಸುವ ಗಾಳಿ ನಿಮ್ಮ ದಾನ. . . . .
ಕಾಯ ನಿಮ್ಮ ದಾನ ಜೀವ ನಿಮ್ಮ ದಾನ."

ಎಂಬ ಭಾವನೆಯಿಂದ ಎಲ್ಲವೂ ಪರಮಾತ್ಮನ ಪ್ರಸಾದವೆಂದು ಅನುಭವಿಸಬೇಕು.

ಪರಧನವನ್ನು ಅಪೇಕ್ಷಿಸಬಾರದು, ಪರಸ್ತ್ರೀಯರಿಗಾಗಿ ಆಸೆಪಡಬಾರದು. **"ಮಾ ಗೃಧಃ ಕಸ್ಯಸ್ವಿದ್ಧನಂ"** ಎಂಬುದರ ಭಾವವಾದರೂ ಇದೆ.

ಪರವಧುವ ಸೆರೆಯದೆ, ಪರಧನವ ತುಡುಕದೆ, ಪರದೈವದಿಚ್ಛೆಯ ನಡೆಯದೆ
ಗುರುಲಿಂಗ ಜಂಗಮಕ್ಕೆ ವರದಾಸನಾದಾತನೆ
ಧರೆ ಮೂರಕ್ಕೆ ಗುರುವಾಗಿಪ್ಪನೈ ರಾಮನಾಥ.

ಎಂಬ ದೇವರ ದಾಸಿಮಯ್ಯನ ವಚನದ ಅಭಿಪ್ರಾಯವಾದರೂ ಇದೆ. ಎಲ್ಲ ಅಂಗಗಳ ಅನುಭವವನ್ನು ಶಿವನದೆ ಎಂಬ ಭಾವನೆಯಿಂದ ಅನುಭವಿಸಬೇಕು. ದೇವರ ದಾಸಿಮಯ್ಯನೇ ಹೇಳುವಂತೆ:

ಕಣ್ಣು ಮಾಸಲು ಶಿವನ, ಕೈ ಮಾಸಲು ಶಿವನ,
ನಾಲಗೆ ಮಾಸಲು ಶಿವನ, ಕಿವಿ ಮಾಸಲು ಶಿವನ,
ನಾಸಿಕ ಮಾಸಲು ಶಿವನ, ತನು ಮಾಸಲು ಶಿವನ, ಮನವೆಲ್ಲ ಮಾಸಲು ಶಿವನ
ಈ ಮಾಸಲು ಬೀಸರವೋಗದಂತಿರೆ ಆತನೆ ಜಗದೀಶ ಕಣಾ ರಾಮನಾಥ.

ಹೀಗೆ ಕಣ್ಣು, ಕಿವಿ, ಕೈ, ನಾಲಗೆ, ನಾಸಿಕ, ತನುಮನಗಳು ಶಿವನಿಗೆ ಮಾಸಲಾದರೆ ಕಣ್ಣು ಕೇಳುವುದೆಲ್ಲ ಶಿವಂಕರವೇ ಆಗಿರಬೇಕು; ಕಿವಿಯು ಕೇಳುವುದೆಲ್ಲ ಶಿವಂಕರವೇ ಆಗಿರಬೇಕು; ಹಾಗೆಯೇ ಎಲ್ಲ ಅಂಗಗಳೂ ದೇವಹಿತ ಕಾರ್ಯದಲ್ಲೇ ರತರಾಗಿರಬೇಕು. ಮುಂಡಕೋಪನಿಷತ್ತಿನ ಶಾಂತಿಮಂತ್ರದ ಅಭಿಪ್ರಾಯವಾದರೂ ಇದೆ:

ಭದ್ರಂ ಕರ್ಣೇಭಿಃ ಶೃಣುಯಾಮದೇವಾಃ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ ॥

ಹೀಗೆ ಅಂಗದ ಅವಯವಗಳು ಲಿಂಗದ ಅವಯವಗಳಾಗಿ, ಅಂಗದ ಕ್ರಿಯೆಗಳು ಲಿಂಗದ ಕ್ರಿಯೆಗಳಾಗಿ ಮಂಗಳಕಾರ್ಯಗಳಾಗಲು ಶಿವನ ಅರಿವು ಆಚಾರದಲ್ಲಿ ಪರಿಣಾಮವಾಗಿರಬೇಕು. ಏಕೆಂದರೆ ಜ್ಞಾನಕ್ಕೆ ಹೊಂದದ ಕ್ರಿಯೆ ಸಾರ್ಥಕವಾಗದು. ಕ್ರಿಯೆಯಿಲ್ಲದ ಜ್ಞಾನ ವ್ಯರ್ಥ. ಜ್ಞಾನಕರ್ಮಸಮುಚ್ಚಯದಿಂದಲೇ ಫಲ ಸಿದ್ಧಿಯಾಗುವುದು.

ಅಗ್ನಿ ಸುಡಲಲ್ಲದೆ ಸುಳಿಯಲರಿಯದು; ವಾಯು ಸುಳಿವುದಲ್ಲದೆ ಸುಡಲರಿಯದು;
ಆ ಅಗ್ನಿ ವಾಯು ಕೂಡಿದಲ್ಲದೆ ಅಡಿಯಿಡಲರಿಯದು;
ಈ ಪರಿಯಂತೆ ನರರರಿವರೆ ಕ್ರಿಯಾಜ್ಞಾನ ಭೇದವ ರಾಮನಾಥ?

ಸತ್ಕ್ರಿಯೆಯಿಂದ ಇಹಲೋಕದಿಂದ ಪಾರಾಗಬೇಕು; ಸಮ್ಯಗ್ಜ್ಞಾನದಿಂದ ಪರವನ್ನು ಸಾಧಿಸಬೇಕು ಎನ್ನುವ ಈಶಾವಾಸ್ಯದ ಮಂತ್ರವಾದರೂ ಕ್ರಿಯಾಜ್ಞಾನದ ಸಮುಚ್ಚಯವನ್ನೇ ಹೇಳುವುದು.

ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಗ್ಂ ಸಹ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥

ಅರಿವಿಗಿಂತಲೂ ಆಚಾರಣೆಗೇ ಹೆಚ್ಚು ಪ್ರಾಮುಖ್ಯವನ್ನು ಈಶಾವಾಸ್ಯೋಪನಿಷತ್ತು ಕೊಟ್ಟಿದೆ.

ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಗ್ಂ ರತಾಃ ॥

ಅವಿದ್ಯೆಯೊಂದೇ ಇದ್ದರೆ ಆಗುವ ದುಷ್ಫಲಕ್ಕಿಂತ ಹೆಚ್ಚು ದುಷ್ಫಲವು ವಿದ್ಯೆಯೊಂದೇ ಇದ್ದರೆ ಆಗುವುದೆನ್ನುವುದು ಈ ಈಶಾವಾಸ್ಯ ಮಂತ್ರ. ಇದರಿಂದ ವಿದ್ಯೆಗಿಂತ ಅವಿದ್ಯೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಈ ಉಪನಿಷತ್ತು ಕೊಟ್ಟಿದೆಯೆಂದಾಯಿತು. ಶಾಂಕರಾದಿ ಭಾಷ್ಯಗಳಲ್ಲಿ ಅವಿದ್ಯೆಯೊಂದಕ್ಕಿಂತ ವಿದ್ಯೆಯೊಂದಕ್ಕೇ ಹೇಗೆ ಹೆಚ್ಚು ಅಪ್ರಾಶಸ್ತ್ಯ ಬರುವುದೆಂಬುದನ್ನು ಹೇಳಿಲ್ಲ.

ಈ ವಿಷಯದಲ್ಲಿ ವಿಸ್ತಾರವಾದ ವಿವರಗಳನ್ನು "ವಚನೋಪನಿಷತ್" ಎಂಬ ಸಾಹಿತ್ಯಪತ್ರಿಕೆಯಲ್ಲಿ ಪ್ರಸಿದ್ಧವಾದ ನನ್ನ ಲೇಖನದಲ್ಲಿ ಕೊಟ್ಟಿದೆ. ವಿದ್ಯೆಯೆಂದರೆ ಅರಿವು; ಅವಿದ್ಯೆಯೆಂದರೆ ಕರ್ಮ, ಕ್ರಿಯೆ, ಆಚರಣೆ; ಸದಾಚಾರದಲ್ಲಿ ಪರ್ಯವಸಾನವಾಗದ ಅರಿವಿಗಿಂತ ಅರಿವಿಲ್ಲದ ಸದಾಚರಣೆಯೇ ಉತ್ತಮವೆಂದು ಇದರ ಅಭಿಪ್ರಾಯ. ಫಲದಾಸೆಯಿಲ್ಲದೆ ಈಶ್ವರಾರ್ಪಣ ಬುದ್ಧಿಯಿಂದ ಮಾಡುವ ಕ್ರಿಯೆಯೇ ಸದಾಚಾರ. ಈ ಸದಾಚಾರಕ್ಕೇ ವಚನಕಾರರ ಪಾರಿಭಾಷಿಕ ಮಾತಿನಲ್ಲಿ ಕಾಯಕವೆಂದು ಹೆಸರು. ದೇವರ ದಾಸಿಮಯ್ಯನ ಕಾಯಕ ಜೇಡರವನದು ಎಂದರೆ ಬಟ್ಟೆ ನೇಯುವುದು. ಕಾಯಕದಿಂದಲೇ ಇಹಲೋಕದಲ್ಲಿಯೇ ಕೈಲಾಸ—ಎಂಬುದು ಅವನ ವಚನದಿಂದ ತಿಳಿದುಬರುವುದು. ಸತ್ತು ಮೋಕ್ಷವ ಪಡೆವೆವೆನ್ನುವರನ್ನೊಪ್ಪರು ವಚನಕಾರರು. ಜೀವನ್ಮುಕ್ತಿಯೇ ಮುಕ್ತಿ. ತನುವೆಂಬುದು ಘಟದಂತೆ. ಅದರಲ್ಲಿರುವ ಆಕಾಶದಂತೆ ಜೀವಾತ್ಮ. ಹೊರಗಿರುವ ಮಹಾಕಾಶದಂತೆ ಪರಮಾತ್ಮ. ಘಟದಲ್ಲಿರುವುದು ಆಕಾಶವೆಂದು ತಿಳಿಯಲು ಅದನ್ನು ಒಡೆದುನೋಡಬೇಕಾಗಿಲ್ಲ. ಹಾಗೆಯೇ ತನುವೆಂಬ ಘಟದಲ್ಲಿರುವ ಜೀವಾತ್ಮನೂ ಪರಮಾತ್ಮನೂ ಒಂದೆಂದು ತಿಳಿಯಲು ತನುವೆಂಬ ಘಟವನ್ನು ಒಡೆದು ನೋಡಬೇಕಾಗಿಲ್ಲ. ತನುವಿದ್ದಾಗಲೇ ಅದರಲ್ಲಿರುವ ಜೀವಾತ್ಮನೂ ಪರಮಾತ್ಮನೂ ಒಂದೆಯೆಂದು ತಿಳಿದರೆ ಸಾಕು. ಪಟದಂತೆ ಜೀವಾತ್ಮ, ತಂತುವಿನಂತೆ ಪರಮಾತ್ಮ; ಪಟವನ್ನು ಹರಿಯದೆ ಅದು ತಂತುಮಯವೆಂದು ತಿಳಿಯಬಹುದು. ಚಿನ್ನದ ಒಡವೆಯಂತೆ ಜೀವಾತ್ಮ, ಚಿನ್ನದಂತೆ ಪರಮಾತ್ಮ; ಒಡವೆಯನ್ನು ಕರಗಿಸದೆ ಒಡವೆಯು ಚಿನ್ನದ್ದೆಂದು ತಿಳಿಯಬಹುದು. ಒಟ್ಟಿನಲ್ಲಿ ಇಹಲೋಕದಲ್ಲಿ ಬದುಕಿರುವಾಗಲೇ ಶಿವೋಹಂ ಎಂಬ ಅರಿವಾಗಬೇಕು. ಹಾಗಿಲ್ಲವಾದರೆ ದೊಡ್ಡ ನಷ್ಟವೆಂದು ಕೇನೋಪನಿಷತ್ತು ಹೇಳುತ್ತದೆ.

ಇಹಚೇದವೇದೀದಥ ಸತ್ಯಮಸ್ತಿ ನ ಚೇದಿಹಾವೇದೀನ್ಮಹತೀ ವಿನಷ್ಟಿಃ

ಕಠೋಪನಿಷತ್ತಿನಲ್ಲಿನ ಕೆಳಗಿನ ಮಂತ್ರದಲ್ಲಿಯೂ ಇದೇ ಅಭಿಪ್ರಾಯವು ಬರುತ್ತದೆ:

ಇಹ ಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ
ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ

ಇಹಲೋಕದಲ್ಲಿ ತನುವೆಂಬ ಘಟವು ಒಡೆದುಹೋಗದ ಮುನ್ನ ಎಂದರೆ ತಾನಳಿಯದ ಮುನ್ನ ಶಿವೋಹಂಭಾವನೆಯಾಗಬೇಕು ಎಂಬುದು ದಾಸಿಮಯ್ಯನ ವಚನ:

ಘಟವನೊಡೆದು ಬಯಲನೋಡಲದೇಕೆ? ಆ ಘಟದೊಳಗಿಪ್ಪುದೇ ಬಯಲೆಂದರಿದೊಡೆ ಸಾಲದೆ?
ಪಟವ ಹರಿದು ತಂತುವ ನೋಡಲದೇಕೆ? ಆ ಪಟವೇ ತಂತುವೆಂದರಿದೊಡೆ ಸಾಲದೆ?
ಕಟಕವ ಮುರಿದು ಕಾಂಚನವ ನೋಡಲದೇಕೆ? ಆ ಕಟಕವೇ ಕಾಂಚನವೆಂದರಿದರೆ ಸಾಲದೆ?
ತನ್ನನಳಿದು ಘನವ ನೋಡಲದೇಕೆ? ತಾನೇ ಘನವೆಂದರಿದೊಡೆ ಸಾಲದೆ ರಾಮನಾಥಾ?

ಶ್ರೀಕೃಷ್ಣದಾಸನ ಉಕ್ತಿಯಂತೆ: "ಜೀವನ್ಮುಕ್ತಿರ್ಮುಕ್ತಿರೇಕಾ ಮತಾ ಸಾ। ನಿತ್ಯಾನಂದಾಸ್ಥಿತಿರ್ಯಾಪರಾ ಸಾ" ಎಂದರೆ ಜೀವನ್ಮುಕ್ತಿಯು ಒಂದು ಮುಕ್ತಿಯೆ: ನಿತ್ಯಾನಂದಸ್ಥಿತಿಯಿದು ಪರತರವಾದುದು ಎಂಬ ಭಾವ. ಇಂತಹ ಜೀವನ್ಮುಕ್ತಿಯೆಂಬ ಲಿಂಗಾಂಗಸಾಮರಸ್ಯರೂಪವಾದ, ಶಿವಾನುಭಾವರೂಪವಾದ ಚಿದವಸ್ಥೆಯನ್ನು ಈ ವಚನವು ಬಸವೇಶ್ವರರ ಕಾಲಕ್ಕೆ ಮೊದಲೇ ಪ್ರತಿಪಾದಿಸುವುದಲ್ಲದೆ, ಶಿವಾದ್ವೈತ ಸಿದ್ಧಾಂತದ ಇತರ ನಿಲುವುಗಳನ್ನು ಇದರಲ್ಲಿ ಕಾಣಬಹುದು.

ತಂತುವಿನಿಂದ ಪಟವಾಗಿದೆ, ಚಿನ್ನದಿಂದ ಒಡವೆಯಾಗಿದೆ. ಪರಬ್ರಹ್ಮದಿಂದ ಜೀವ ಜಗತ್ತುಗಳಾಗಿವೆ. ಆದುದರಿಂದ ಪಟವು ತಂತುವಲ್ಲದೆ ಬೇರೆಯಲ್ಲ. ಒಡವೆಯೂ ಚಿನ್ನವಲ್ಲದೆ ಬೇರೆಯಲ್ಲ. ಜೀವಜಗತ್ತುಗಳು ಬ್ರಹ್ಮವಲ್ಲದೆ ಬೇರೆಯಲ್ಲ. ಇದೇ ರೀತಿಯಲ್ಲಿ ಹೇಳುವುದು ಛಾಂದೋಗ್ಯೋಪನಿಷತ್ತಿನ ಮಂತ್ರಗಳು:

ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್
ವಾಚಾಽಽರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ
ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಗ್ಂ ಸ್ಯಾದ್
ವಾಚಾಽಽರಂಭಣಂ ವಿಕಾರೋ ನಾಮಧೇಯಂ ಲೋಹಮಿತ್ಯೇವ ಸತ್ಯಂ
ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಗ್ಂ ಸ್ಯಾದ್
ವಾಚಾರಂಭಣಂ ವಿಕಾರೋ ನಾಮಧೇಯಂ ಕೃಷ್ಣಾಯಸಮಿತ್ಯೇವ ಸತ್ಯ
ಮೇವಗ್ಂ ಸೋಮ್ಯ ಸ ಆದೇಶೋ ಭವತೀತಿ

ಮಾನ್ಯ ರಾಧಾಕೃಷ್ಣನ್‌ರವರು ಅವರ "ಇಂಡಿಯನ್ ಫಿಲಾಸಫಿ" ಗ್ರಂಥದ ಎರಡನೆಯ ಭಾಗದಲ್ಲಿ ಈ ಮಂತ್ರದ ವಿಷಯವನ್ನು ಉದಾಹರಿಸಿ ಬ್ರಹ್ಮಸೂತ್ರಕಾರನ ಅಭಿಪ್ರಾಯವನ್ನು ಹೇಳಿರುವುದನ್ನು ಹಿಂದೆ ಕೊಟ್ಟಿದೆ. (ಪುಟ 134)

ಚಿನ್ನವು ಒಡವೆಗೆ ಉಪಾದಾನಕಾರಣವಾಗಿರುವಂತೆ, ಮಣ್ಣು ಮಡಕೆಗೆ ಉಪಾದಾನ ಕಾರಣವಾಗಿರುವಂತೆ ಬ್ರಹ್ಮವು ಚರಾಚರ ಜಗತ್ತಿಗೆ ಉಪಾದಾನಕಾರಣವಾಗಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಮಣ್ಣು, ಚಿನ್ನ, ಕಬ್ಬಿಣ ಮತ್ತು ಅವುಗಳಿಂದ ಮಾಡಿದ ವಸ್ತುಗಳ ಉದಾಹರಣೆಯನ್ನು ಕೊಟ್ಟಿದೆಯೇ ಹೊರತು ರಜ್ಜುಸರ್ಪದ ಅಥವಾ ಶುಕ್ತಿರಜತದ ಉದಾಹರಣೆಯನ್ನಲ್ಲ. ಜಗತ್ತು ಸತ್ಯವೆಂಬುದು ಇದರಿಂದ ಸಿದ್ಧವಾಗುವುದು. ಮಾನ್ಯ ರಾಧಾಕೃಷ್ಣನ್ನರ ಈ ಅಭಿಪ್ರಾಯವು ಮೇಲಿನ ವಚನಗಳಿಗೂ ಅನ್ವಯಿಸುವುದು. ಏಕೆಂದರೆ, ಛಾಂದೋಗ್ಯೋಪನಿಷತ್ತಿನ ಮಂತ್ರಗಳ ಸರಣಿಯೂ ಮೇಲಿನ ವಚನಗಳ ಸರಣಿಯೂ ಒಂದೇ ಆಗಿದೆ.

ಘಟಾದಿಷು ಪೃಥಗ್ಭೂತಂ ಯಥಾಕಾಶಂ ನ ಭಿದ್ಯತೇ ।
ತಥೋಪಾಧಿಗತಂ ಬ್ರಹ್ಮ ನಾನಾರೂಪಂ ನ ಭಿದ್ಯತೇ ॥—ಸಿದ್ಧಾಂತ ಶಿಖಾಮಣಿ, ೨೦-೪೩.

ಘಟಾಕಾಶವು ಮಹಾಕಾಶದ ಒಂದು ಅಂಶವಾಗಿದೆ; ಪಟದಲ್ಲಿ ತಂತುವಿನ ಅಂಶವಿದೆ. ಕಟಕದಲ್ಲಿ ಕನಕದ ಅಂಶವಿದೆ; ಜೀವನಲ್ಲಿ ಪರಶಿವಬ್ರಹ್ಮದ ಅಂಶವಿದೆ. ಘಟಾಕಾಶವೂ ಸತ್ಯ, ಮಹಾಕಾಶವೂ ಸತ್ಯ; ಪಟವೂ ಸತ್ಯ, ತಂತುವೂ ಸತ್ಯ; ಕಟಕವೂ ಸತ್ಯ, ಕನಕವೂ ಸತ್ಯ. ಮಹಾಕಾಶವೂ ಅದರ ಅಂಶವಾದ ಘಟಾಕಾಶವೂ ಸತ್ಯವಾದರೂ ಅವು ಹೇಗೆ ಒಂದೆಯೋ, ತಂತುವೂ ಅದರ ಅಂಶವನ್ನೊಳಗೊಂಡ ಪಟವೂ ಸತ್ಯವಾದರೂ ಅವು ಹೇಗೆ ಒಂದೆಯೋ, ಕನಕವೂ ಅದರ ಅಂಶವನ್ನೊಳಗೊಂಡ ಕಟಕವೂ ಸತ್ಯವಾದರೂ ಅವು ಹೇಗೆ ಒಂದೆಯೋ ಹಾಗೆಯೇ ಪರಶಿವ ಬ್ರಹ್ಮವೂ ಅದರ ಅಂಶವನ್ನೊಳಗೊಂಡ ಜೀವಜಗತ್ತುಗಳೂ ಸತ್ಯವಾದರೂ ಒಂದೇ ಆಗಿವೆ ಎಂದರೆ ಅದ್ವೈತವಾಗಿವೆ. ಇದೇ ವೀರಶೈವ ಶಿವಾದ್ವೈತ ಸಿದ್ಧಾಂತ.

ಇನ್ನು ಮೋಕ್ಷದಲ್ಲಿ ಸಾಲೋಕ್ಯವೆ, ಸಾರೂಪ್ಯವೆ, ಸಾಯುಜ್ಯವೆ ಎಂಬ ಪ್ರಶ್ನೆಗೆ ಮೇಲಿನ ವಚನದಲ್ಲಿ ಜೀವಾತ್ಮನನ್ನು ಘಟಾಕಾಶಕ್ಕೂ ಪರಮಾತ್ಮನನ್ನು ಮಹಾಕಾಶಕ್ಕೂ ಹೋಲಿಸಿರು

ವುದರಿಂದಲೇ, ಒಡೆದ ಘಟದಲ್ಲಿನ ಆಕಾಶವು ಮಹಾಕಾಶದಲ್ಲಿ ಸೇರಿಹೋಗುವಂತೆ ಜೀವಾತ್ಮನು ಮೋಕ್ಷದಲ್ಲಿ ಪರಮಾತ್ಮನಲ್ಲಿ ಸಂಪೂರ್ಣವಾಗಿ ಐಕ್ಯವಾಗಿ ಹೋಗುತ್ತಾನೆಂಬುದು ಸ್ಪಷ್ಟ. ಮತ್ತಷ್ಟು ಇದನ್ನು ಸ್ಪಷ್ಟಮಾಡುವ ಕೆಳಗಿನ ವಚನದಲ್ಲಿ ಜೀವನನ್ನು ಸಮುದ್ರದ ಬೊಬ್ಬುಳಿಕೆಗೆ ಹೋಲಿಸಿ, ಅದು ಒಡೆದು ಸಾಗರದಲ್ಲಿ ಲೀನವಾಗುವಂತೆ ಪರಮಾತ್ಮನಲ್ಲಿ ಜೀವನು ಲೀನವಾಗು ವುದನ್ನು ಹೋಲಿಸಿದೆ.

ಒಡಲುಗೊಂಡೆನಾಗಿ ನ್ಮಡ, ನಿಮಗೆ ಹಗೆಯಾದೆನಯ್ಯಾ ಆನುಒಡಲುಗೊಂಡೊಡೇನು?
ಕಡಲೊಳಗಣ ಬೊಬ್ಬುಳಿಕೆ ಕಡಲೊಳಗೆ ಅಳಿವಂತೆ, ಎನ್ನೊಡಲು ಅಳಿದುಹೋದರೇನು?
ನ್ಪ್ರಾಣ ನಿಮ್ಮ ಎದೆಯಲಡಗುವುದಯ್ಯ ರಾಮನಾಥ!

ನೀರಿನ ಬೊಬ್ಬುಳಿಕೆಯು ಸಮುದ್ರದಲ್ಲಿ ಕರಗಿಹೋಗುವಂತೆ ಜೀವನು ಪರಮಾತ್ಮನಲ್ಲಿ ಐಕ್ಯವಾಗುವನೆಂದು ಈ ವಚನದಲ್ಲಿ ಹೋಲಿಸಿರುವುದು ಮುಂಡಕೋಪನಿಷತ್ತಿನಲ್ಲಿ ನದಿಯ ನೀರು ಸಮುದ್ರದಲ್ಲಿ ಸೇರಿಹೋಗುವುದಕ್ಕೆ ಹೋಲಿಸಿರುವುದನ್ನು ನೆನಪಿಗೆ ತರುತ್ತದೆ.

ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥

ಈ ಮಂತ್ರದ ಅರ್ಥದಲ್ಲಿ ಭಿನ್ನಾಭಿಪ್ರಾಯ ಬರದಂತೆ ಉಪನಿಷತ್ತು "ಬ್ರಹ್ಮೈವ ಭವತಿ" ಎಂದರೆ ಬ್ರಹ್ಮವೇ ಆಗುತ್ತಾನೆ ಎಂದು ಮುಂದಿನ ಮಂತ್ರದಲ್ಲಿ ಹೇಳಿರುವಂತೆ ವಚನದ ಅಭಿಪ್ರಾಯವಾದರೂ ಜೀವನು ಮೋಕ್ಷದಲ್ಲಿ ಬ್ರಹ್ಮವೇ ಆಗುತ್ತಾನೆಂದರ್ಥ.

ಮಥಿತಾರ್ಥವೇನೆಂದರೆ ೧೨ನೆಯ ಶತಮಾನಕ್ಕೆ ಮೊದಲು ಲಿಂಗಧಾರಿಗಳಲ್ಲಿ ಈಗಿನ ಲಿಂಗಧಾರಿಗಳಂತೆ ಮೋಕ್ಷದಲ್ಲಿ ಜೀವನು ಶಿವನಲ್ಲಿ, ನೀರಿನಲ್ಲಿ ನೀರು ಬೆರದಂತೆ ಐಕ್ಯವಾಗಿ ಹೋಗುವನೆಂದು ಹೇಳುವ ಪಂಗಡವೊಂದಿದ್ದಿತು. ಹಾಗೆಯೇ ಲಿಂಗಧಾರಿಗಳಲ್ಲಿ ಪಾಶುಪತರು ಮೋಕ್ಷದಲ್ಲಿ ಜೀವನು ಶಿವನಂತೆ ಸರ್ವಜ್ಞತ್ವವನ್ನೂ ಸರ್ವಕರ್ತೃತ್ವವನ್ನೂ ಪಡೆಯುವನೆನ್ನು ತ್ತಿದ್ದರು ಮತ್ತು ಲಿಂಗಧಾರಿಗಳಲ್ಲಿ ಶೈವರು ಮೋಕ್ಷದಲ್ಲಿ ಜೀವನು ಶಿವರೂಪವನ್ನು ಪಡೆಯುವ ನೆನ್ನುತ್ತಿದ್ದರು. ಹೀಗೆ ಭಿನ್ನಾಭಿಪ್ರಾಯಗಳಿದ್ದುದರಿಂದ ಲಿಂಗಧಾರಿಗಳ ಸಮಾಜವನ್ನು ಶುದ್ಧಿ ಸಂಘಟನೆಗೆ ಒಳಗುಮಾಡಿದಾಗ ಈ ನಿಲುವುಗಳಲ್ಲಿ ಉಪನಿಷತ್ತುಗಳಿಗೆ ಹೊಂದಿಕೆಯಾಗುವ, ಶಿವನ ಅಂಶವಾದ ಜೀವನು ಅಂಶಿಯಾದ ಶಿವನಲ್ಲಿ ಐಕ್ಯನಾಗುವನೆಂಬ ಸಿದ್ಧಾಂತವನ್ನೇ ಲಿಂಗ ಧಾರಿಗಳೆಲ್ಲರ ನಿಲುವಾಗಿ ಸಿದ್ಧಾಂತಮಾಡಲಾಯಿತು. ಶಾಸ್ತ್ರೀಯವಾಗಿ ವಚನೋಪನಿಷತ್ತಿನ ಈ ಸಿದ್ಧಾಂತವನ್ನು ಪ್ರಪ್ರಥಮವಾಗಿ ರೂಪಿಸಿದ ಹಿರಿಮೆ ಆಚಾರ್ಯ ರೇಣುಕೋಪದೇಶರೂಪ ವಾದ ಸಿದ್ಧಾಂತ ಶಿಖಾಮಣಿಗೆ ಸೇರಿದುದು.

ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ॥
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥ —ಸಿದ್ಧಾಂತ ಶಿಖಾಮಣಿ, ೨೦—೬೧.

## ಸೈಂಧವ ನಾಗರಿಕರ ಕಾಲದಿಂದ ಸಿದ್ಧಾಂತ ಶಿಖಾಮಣಿಯ ಕಾಲದವರೆಗೆ ಪಶುಪತಿ ಧರ್ಮದ ಬೆಳವಣಿಗೆ

ವೀರಶೈವ, ಕಾಶ್ಮೀರಶೈವ, ಪಾಶುಪತ, ಶೈವ, ಶೈವಸಿದ್ಧಾಂತ ಈ ಎಲ್ಲ ಸಿದ್ಧಾಂತ ಗಳಲ್ಲಿಯೂ, ಪತಿ, ಪಶು, ಪಾಶ ಈ ಕಲ್ಪನೆಗಳು ಒಂದೆಯಾಗಿವೆ. ಏಕೆಂದರೆ ಸೈಂಧವ

ಸಂಸ್ಕೃತಿಯಲ್ಲೇ ಕಾಣಿಸಿಕೊಂಡ ಪಶುಪತಿಯ ಚಿತ್ರದಲ್ಲಿಯೇ ಪಶುಪತಿಯ ಕಲ್ಪನೆಯಿದೆ. ಶತರುದ್ರೀಯದಲ್ಲಿ "ಪಶೂನಾಂ ಪತಿಃ" ಎಂಬ ಉಲ್ಲೇಖವಿದೆ. ಅಥರ್ವವೇದದಲ್ಲಿ ಪಶುಪತಿ-ಪಶು-ಪಾಶಗಳ ಉಲ್ಲೇಖವಿರುವುದನ್ನು ಹಿಂದೆಯೇ ತಿಳಿಸಿದೆ. ಆದರೆ ಪಶುಪತಿ-ಪಶು-ಪಾಶಗಳ ಸಿದ್ಧಾಂತವು ಚೆನ್ನಾಗಿ ರೂಪುಗೊಂಡುದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಮತ್ತು ಶೈವಾಗಮಗಳಲ್ಲಿ. ಇವುಗಳ ಆಧಾರದ ಮೇಲೆ ನಿಂತಿರುವ ಮೇಲೆ ಕಂಡ ಶೈವಧರ್ಮಗಳೆಲ್ಲದರಲ್ಲಿಯೂ ಈ ವಿಷಯವು ಬರುವುದರಲ್ಲಿ ವಿಶೇಷವೇನೂ ಇಲ್ಲ. ಯಜ್ಞಯಾಗಾದಿಗಳನ್ನು ಮಾಡಲು ಅಧಿಕಾರ ಕೊಡುವ ಮತ್ತು ದ್ವಿಜರಲ್ಲಿ ಪುರುಷರಿಗೆ ಮಾತ್ರ ಅನ್ವಯಿಸುವ ಉಪನಯನಕ್ಕೆ ಬದಲು, ಎಲ್ಲ ಜಾತಿಯ ಸ್ತ್ರೀಪುರುಷರು ಪಡೆಯಬಹುದಾದ ದೀಕ್ಷೆಯನ್ನು ಬೋಧಿಸುವುದು, ಈ ಎಲ್ಲ ಶೈವಧರ್ಮಗಳಿಗೂ ಸಮಾನವಾದುದು. ಪಶುವೆನಿಸಿದ ಜೀವನು ಮಲಪಾಶದಿಂದ ಬಿಡುಗಡೆಹೊಂದಿ, ಮೋಕ್ಷವನ್ನು ಪಡೆಯಲು ದೀಕ್ಷೆಯನ್ನು ಗುರುವಿನಿಂದ ಪಡೆದು ಶಿವಯೋಗದಲ್ಲಿ ನಿರತನಾಗಬೇಕು. ಈ ಮೋಕ್ಷಸ್ವರೂಪದಲ್ಲಿರುವ ಭಿನಾಭಿಪ್ರಾಯಗಳನ್ನು ಹಿಂದೆಯೇ ತಿಳಿಸಲಾಯಿತು. ವೀರಶೈವರಂತೆ ಕಾಶ್ಮೀರಶೈವರೂ ಮೋಕ್ಷದಲ್ಲಿ ಶಿವೈಕ್ಯವನ್ನು ಹೇಳುವರೆಂಬುದನ್ನು ಹೇಳುವುದುಳಿದಿದೆ.

ಸಿಂಧೂನದಿಯ ತೀರದ ಜನರ ಅರ್ಧನಾರೀಶ್ವರ ಕಲ್ಪನೆಯಲ್ಲಿಯೇ ಶಿವಶಕ್ತಿಯರು ಒಂದೆಯೆಂಬ ಭಾವನೆಯು ಸ್ಪಷ್ಟವಾಗಿದೆ. ಜೀವ-ಶಿವ-ಶಕ್ತಿಯರು ಒಂದೆಯೆಂಬ ಭಾವನೆಯು ಅಸ್ಪಷ್ಟವಾಗಿಯಾದರೂ ಅವರ 'Divine Triad' ಎಂಬ ಕಲ್ಪನೆಯಲ್ಲಿದೆಯೆಂದು ಹಿಂದೆ ವಿವರಿಸಲಾಯಿತು. ಇನ್ನು ಋಗ್ವೇದದ ನಾಸದೀಯಸೂಕ್ತದಲ್ಲಿ ಸೃಷ್ಟಿಗೆ ಮೂಲವಾದ ಪರತತ್ವವು ಸ್ವಶಕ್ತಿಯಿಂದ ಕೂಡಿ ಅದ್ವೈತವಾಗಿದೆಯೆಂದು ಹೇಳಿದೆಯೆಂಬುದನ್ನು ಹಿಂದೆ ಹೇಳಲಾಯಿತು. "ಕಾಮಸ್ತದಗ್ರೇ" ಎಂದು ಮೊದಲಾಗುವ ನಾಸದೀಯಸೂಕ್ತದ ಋಕ್ಕಿನಲ್ಲಿ "ಕಾಮ" ಎಂದರೆ ಸೃಷ್ಟಿಮಾಡುವ ಇಚ್ಛೆಯೇ ಸೃಷ್ಟಿಗೆ ಬೀಜವಾಯಿತು ಎಂದು ಹೇಳಿದೆ. "ತಪಸಸ್ತನ್ಮಹಿನಾಜಾಯತೈಕಂ" ಎಂದು ನಾಸದೀಯಸೂಕ್ತದಲ್ಲಿ ಹೇಳಿ ಪರಬ್ರಹ್ಮದ ತಪಸ್ಸಿನಿಂದ ಈ ಜಗತ್‌ಸೃಷ್ಟಿಯ ಆರಂಭವನ್ನು ಹೇಳಿದೆ. ಜಗತ್‌ಸೃಷ್ಟಿ ವಿಷಯಕವಾದ ಮುಂದಿನ ಮಂತ್ರದ ಸಾಯಣಭಾಷ್ಯವಿದು:

> "ಏವಂ ಮಾಯಾಸಹಿತಃ ಪರಮೇಶ್ವರಃ ಸರ್ವಂ ಜಗತ್‌ಸೃಷ್ಟ್ವಾ ಸ್ವಯಂಚಾನುಪ್ರವಿಶ್ಯ, ಭೋಕ್ತೃ ಭೋಗ್ಯಾದಿ ರೂಪೇಣ ವಿಭಾಗಂ ಕೃತವಾನಿತ್ಯರ್ಥಃ"

ಶಕ್ತಿವಿಶಿಷ್ಟನಾದ ಪರಮೇಶ್ವರನು ಜಗತ್ತನ್ನೆಲ್ಲ ಸೃಷ್ಟಿಸಿ ಅದರಲ್ಲಿ ಅನುಪ್ರವೇಶಮಾಡಿದನು ಎಂದೂ, ಭೋಕ್ತೃಭೋಗ್ಯವೇ ಮೊದಲಾದ ರೂಪದಲ್ಲಿ ಅದನ್ನು ವಿಭಾಗಿಸಿದನು ಎಂದೂ ಅರ್ಥ. ಶ್ವೇತಾಶ್ವತರೋಪನಿಷತ್ತಿನಲ್ಲಿ "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್" ಎಂದರೆ ಭೋಕ್ತಾ ಭೋಜ್ಯಂ ಪ್ರೇರಿತಾರಂ ಎಂಬಿವೇ ಪರಬ್ರಹ್ಮದ ತ್ರಿವಿಧ ರೂಪವೆಂದು ಹೇಳಿ ಶಿವಾದ್ವೈತವನ್ನು ಉಪದೇಶಿಸಿದೆ. ಇದು ವಾಯವೀಯ ಸಂಹಿತೆಯನ್ನೊಳಗೊಂಡ ಶಿವಮಹಾಪುರಾಣದಲ್ಲಿ ವಿವರಸಲ್ಪಟ್ಟಿದೆ. ಸಿದ್ಧಾಂತ ಶಿಖಾಮಣಿಯಲ್ಲಿ "ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಂ" ಎಂದು ಹೇಳಿರುವುದು ಮೇಲಿನ ಆಧಾರಗಳಿಗೆ ಅನುಸಾರವಾಗಿಯೇ ಇದೆ. ಸಿದ್ಧಾಂತ ಶಿಖಾಮಣಿಯ ೫ನೆಯ ಪರಿಚ್ಛೇದದಲ್ಲಿ ಸೃಷ್ಟಿವೈಭವವನ್ನು ಹೀಗೆ ವರ್ಣಿಸಿದೆ:

ಏಕ ಏವ ಶಿವಃ ಸಾಕ್ಷಾಚ್ಚಿದಾನಂದಮಯೋ ವಿಭುಃ ।
ನಿರ್ವಿಕಲ್ಪೋ ನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ ॥ ೩೩ ॥

ಅನಾದ್ಯವಿದ್ಯಾಸಂಬಂಧಾತ್ ತದಂಶೋ ಜೀವನಾಮಕಃ ।
ದೇವತಿರ್ಯಙ್ಮನುಷ್ಯಾದಿ ಜಾತಿಭೇದೇ ವ್ಯವಸ್ಥಿತಃ ।
ಮಾಯಿಮಾಹೇಶ್ವರಸ್ತೇಷಾಂ ಪ್ರೇರಕೋ ಹೃದಿ ಸಂಸ್ಥಿತಃ ॥ ೩೪ ॥

ಗುಣತ್ರಯಾತ್ಮಿಕಾ ಶಕ್ತಿರ್ಬ್ರಹ್ಮನಿಷ್ಠಾ ಸನಾತನೀ ।
ತದ್ ವೈಷಮ್ಯಾತ್ ಸಮುತ್ಪನ್ನಾ ತಸ್ಮಿನ್ ವಸ್ತುತ್ರಯಾಭಿದಾ ॥ ೩೬ ॥

ಕಿಂಚಿತ್ ಸತ್ವರಜೋರೂಪಂ ಭೋಕ್ತೃ ಸಂಜ್ಞಕಮುಚ್ಯತೇ ।
ಅತ್ಯಂತ ತಾಮಸೋಪಾಧಿರ್ಭೋಜ್ಯಮಿತ್ಯಭಿಧೀಯತೇ ॥ ೩೭ ॥

ಪರತತ್ವಮಯೋಪಾಧಿರ್ಬ್ರಹ್ಮಚೈತನ್ಯಮೀಶ್ವರಃ ।
ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಂ ॥ ೩೮ ॥

ಇದರಿಂದ ತಿಳಿಯಬರುವುದೇನೆಂದರೆ ಅದ್ವೈತವೇ ಆಗಿರುವ ಪರಶಿವಬ್ರಹ್ಮವು ವಿಕಲ್ಪ ರಹಿತವಾದುದೂ, ಗುಣರಹಿತವಾದುದೂ, ಆಕಾರರಹಿತವೂ ಆಗಿರುವುದಲ್ಲದೆ ಪ್ರಪಂಚರಹಿತವೂ ಆದುದಾಗಿದೆ. ಇದರಿಂದ ಪ್ರಪಂಚವು ಸೃಷ್ಟಿಯಾಗಲು ಪರಶಿವನ ಶಕ್ತಿಯು ಹೊರಹೊಮ್ಮು ವುದು. ಇದು ತ್ರಿಗುಣಾತ್ಮಕವಾದುದು. ಈ ಗುಣಗಳ ವೈಷಮ್ಯದಿಂದ ವಸ್ತುತ್ರಯಗಳಾ ಗುವುವು. ಭೋಕ್ತೃ ಭೋಜ್ಯ ಪ್ರೇರಕರೆಂಬುವೇ ವಸ್ತುತ್ರಯಗಳು. ಭೋಗಾರ್ಹವಾದ ಅಚಿತ್‌ಪ್ರಪಂಚವೇ ಭೋಜ್ಯವು; ಭೋಗಿಸುವ ಭೋಕ್ತೃವು ಸುರನರಪಶುಪಕ್ಷಿಗಳಲ್ಲಿ ಇರುವ ಜೀವನು; ಮಾನವನ ಹೃದಯದಲ್ಲಿದ್ದುಕೊಂಡು ಅವನಿಗೆ ಮೋಕ್ಷಪ್ರೇರಕನಾಗಿರುವವನೇ ಈಶ್ವರನು. ಪರತತ್ವಮಯವಾದ (ಸತ್ವಗುಣದ) ಉಪಾಧಿಯಿಂದ ಕೂಡಿದುದೇ ಈಶ್ವರ. ಸತ್ವರಜೋಗುಣಮಿಶ್ರವಾದುದು ಜೀವ. ಇದು ಪರಶಿವನ ಅಂಶವಾಗಿರುವುದು. ತಾಮಸ ಉಪಾಧಿಯಿಂದ ಕೂಡಿದುದು ಭೋಜ್ಯವೆನಿಸುವ ಅಚಿತ್‌ಪ್ರಪಂಚ.

ಅತ್ಯಂತ ಗೂಢಚೈತನ್ಯಂ ಜಡಮವ್ಯಕ್ತಮುಚ್ಯತೇ ।
ಸರ್ವಜ್ಞಃ ಪ್ರೇರಕಃ ಶಂಭುಃ ಕಿಂಚಿದ್‌ಜ್ಞೋ ಜೀವ ಉಚ್ಯತೇ ॥ ೪೦ ॥

ಉಪಾಧಿಃ ಪುನರಾಖ್ಯಾತಃ ಶುದ್ಧಾಶುದ್ಧ ವಿಭೇದತಃ ।
ಶುದ್ಧೋಪಾಧಿಃ ಪರಾಮಾಯಾ ಸ್ವಾಶ್ರಯಾಽಮೋಹಕಾರಿಣೀ ॥ ೪೦ ॥

ಅಶುದ್ಧೋಪಾಧಿರಪ್ಯೇವಮವಿದ್ಯಾಽಽಶ್ರಯಮೋಹಿನೀ ।
ಅವಿದ್ಯಾಶಕ್ತಿಭೇದೇನ ಜೀವಾ ಬಹುವಿಧಾಃ ಸ್ಮೃತಾಃ ॥ ೪೨ ॥

ಮಾಯಾಶಕ್ತಿ ವಶಾದೀಶೋ ನಾನಾಮೂರ್ತಿಧರಃ ಪ್ರಭುಃ ।
ಸರ್ವಜ್ಞಃ ಸರ್ವಕರ್ತಾ ಚ ನಿತ್ಯಮುಕ್ತೋ ಮಹೇಶ್ವರಃ ॥ ೪೩ ॥

ಕಿಂಚಿತ್ಕರ್ತಾ ಚ ಕಿಂಚಿದ್‌ಜ್ಞೋ ಬದ್ಧೋಽನಾದಿಶರೀರವಾನ್ ।
ಅವಿದ್ಯಾಮೋಹಿತಾಜೀವಾ ಬ್ರಹ್ಮೈಕಜ್ಞಾನವರ್ಜಿತಾಃ ॥ ೪೪ ॥

ಪರಿಭ್ರಮಂತಿ ಸಂಸಾರೇ ನಿಜಕರ್ಮಾನುಸಾರತಃ ।
ದೇವತಿರ್ಯಙ್ಮನುಷ್ಯಾದಿ ನಾನಾಯೋನಿ ವಿಭೇದತಃ ॥ ೪೫ ॥

ಈಶ್ವರನು ಮೋಹವನ್ನುಂಟುಮಾಡದಿರುವ ಶುದ್ಧೋಪಾಧಿ (ಊರ್ಧ್ವಮಾಯೆ) ಯಿಂದ ಕೂಡಿ ರುವುದರಿಂದ ಮೋಹಕ್ಕೊಳಗಾಗದೆ ಸರ್ವಜ್ಞನೂ ಸರ್ವಕರ್ತನೂ ನಿತ್ಯಮುಕ್ತನೂ ಆಗಿದ್ದಾನೆ

ಮತ್ತು (ಉಮಾಮಹೇಶ್ವರಾದಿ) ಅನೇಕ ಮೂರ್ತಿರೂಪಗಳನ್ನು ಧರಿಸುತ್ತಾನೆ. ಜೀವನು ಮೋಹವನ್ನುಂಟುಮಾಡುವ ಅಶುದ್ಧೋಪಾಧಿ (ಅಧೋಮಾಯೆ) ಯಿಂದ ಕೂಡಿರುವನಾದುದರಿಂದ ಕಿಂಚಿತ್ಕರ್ತನೂ ಕಿಂಚಿದಜ್ಞನೂ ಆಗಿ ಬ್ರಹ್ಮಜ್ಞಾನವಿಲ್ಲದೆ ಕರ್ಮಾನುಸಾರವಾಗಿ ದೇವ ಮನುಷ್ಯಪಶುಪಕ್ಷಿ ಮೊದಲಾದ ಯೋನಿಗಳಲ್ಲಿ ಸುತ್ತುವನು. ಜಡಜಗತ್ತಿನಲ್ಲಿ ಚೈತನ್ಯವು ಗೂಢವಾಗಿರುತ್ತದೆ. ಪರಶಿವಬ್ರಹ್ಮದಿಂದ ಹೊರಹೊಮ್ಮಿದ ಶಕ್ತಿಯು ತ್ರಿಗುಣಾತ್ಮಕವಾಗಿದ್ದು ಗುಣವೈಷಮ್ಯದಿಂದ ವಸ್ತುತ್ರಯಗಳಾಗುವುವು. ಈ ವಸ್ತುತ್ರಯಗಳು ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿದುವೇ ಆಗಿದ್ದು ಸಿದ್ಧಾಂತಶಿಖಾಮಣಿಯಲ್ಲಿ ಪರಿಷ್ಕಾರಗೊಂಡಿವೆ. ಹೀಗೆ ಪಶುಪತಿ ಧರ್ಮದ ಬೆಳವಣಿಗೆಯನ್ನು ಸೈಂಧವ ನಾಗರಿಕರ ಕಾಲದಿಂದ ಸಿದ್ಧಾಂತ ಶಿಖಾಮಣಿಯವರೆಗೆ ಗುರುತಿಸಬಹುದು.

## ಶ್ರೀಯುತ ಕಪಟರಾಳ ಕೃಷ್ಣರಾಯರ ವೀರಶೈವವು ಸ್ವತಂತ್ರ ಸಿದ್ಧಾಂತವಲ್ಲವೆಂಬ ಆಕ್ಷೇಪ

ಶಕ್ತಿಯಿಂದಲೇ ಜಗತ್ತು ಆವಿರ್ಭಾವವಾಗಿ ಸತ್ಯವಾಗಿರುವುದು ಎಂಬ ಮತ್ತು ಮೋಕ್ಷದಲ್ಲಿ ಜೀವನಿಗೆ ಐಕ್ಯವಾಗುವುದು ಎಂಬ ಸಿದ್ಧಾಂತಗಳು ಕಾಶ್ಮೀರಶೈವದಲ್ಲಿದ್ದಂತೆ ವೀರಶೈವದಲ್ಲಿಯೂ ಇರುವುದರಿಂದ ವೀರಶೈವವು ಸ್ವತಂತ್ರ ಸಿದ್ಧಾಂತವಲ್ಲವೆಂದು ಶ್ರೀಯುತ ಕಪಟರಾಳ ಕೃಷ್ಣರಾಯರು ಹೇಳಿರುವರು. 'ವೀರಶೈವರಲ್ಲಿ ಸಾಂಪ್ರದಾಯಿಕ ಭೇದವಿಲ್ಲವೆ' ಎಂಬ ಪ್ರಶ್ನೆಯನ್ನೆತ್ತಿ ಅವರು ಹೇಳಿರುವ ಮಾತಿದು—"ತ್ರಿಕಶಾಸನವು ಉಳಿದೆಲ್ಲವುಗಳಿಗಿಂತ ಪೂರ್ವದ್ದಾದುದರಿಂದ ಅದರಿಂದಲೇ ಉಳಿದ ಪಂಥಗಳು ಹುಟ್ಟಿವೆ ಎಂದು ಹೇಳಬಹುದು. ಇದರ ಮೇಲಿಂದ ವಚನಕಾರರಾಗಲೀ ಅಥವಾ ಜ್ಞಾನೇಶ್ವರ ಮುಂತಾದವರಾಗಲೀ ಸ್ವತಂತ್ರ ದಾರ್ಶನಿಕರಲ್ಲ. ಕಾಶ್ಮೀರಶೈವವನ್ನು ನಂಬಿ ಅದಕ್ಕನುಸರಿಸಿದ ಸಾಧಕರು, ಸಾಧುಭಕ್ತರು. ಸಾಧನೆಯಿಂದಲೂ, ವಿಚಾರಶಕ್ತಿಯಿಂದಲೂ ದರ್ಶನಶಾಸ್ತ್ರವನ್ನು ನಿರ್ಮಿಸಿದ ಆಚಾರ್ಯರ ಯೋಗ್ಯತೆಯು ಇವರಿಗೆ ಬರಲಾರದು."

ಹಿಂದೆ ಶ್ರೀಯುತರು, ನಿಜಗುಣರು ಬ್ರಾಹ್ಮಣರೆಂದೂ, ಅವರು ಪ್ರತಿಪಾದಿಸಿರುವುದು ದ್ವೈತಸಿದ್ಧಾಂತವೆಂದೂ, ಇಂತಹ ದ್ವೈತಿಗಳಲ್ಲದೆ ವೀರಶೈವರಲ್ಲಿ ಕೆಲವರು ಕಾಶ್ಮೀರಶೈವರಂತಹ ಅದ್ವೈತಿಗಳು ಇರುವರು ಎಂದೂ ಹೇಳಿದ್ದುದರಲ್ಲಿ ಮೊದಲನೆಯದನ್ನು ೩೦ನೆಯ ಪುಟದಲ್ಲಿ ಖಂಡಿಸಿದ್ದಾಯಿತು. ಈಗ ವೀರಶೈವರ ಅದ್ವೈತಸಿದ್ಧಾಂತವು ಸ್ವತಂತ್ರವಾದುದಲ್ಲ, ಕಾಶ್ಮೀರ ಶೈವದುದೇ ಈ ಸಿದ್ಧಾಂತವು—ಎನ್ನುವ ಮಾತನ್ನು ವೀರಶೈವದ ಉಗಮಪ್ರಗತಿಗಳನ್ನು ವಿಚಾರ ಮಾಡುವ ಈ ಗ್ರಂಥದಲ್ಲಿ, ಸ್ವಲ್ಪಮಟ್ಟಿಗಾದರೂ ವಿಚಾರಮಾಡಬೇಕಾಗಿದೆ.

ವೀರಶೈವರಲ್ಲಿ ಸಾಂಪ್ರದಾಯಿಕ ಭೇದಗಳಿರಬಹುದು, ಇಲ್ಲದಿರಬಹುದು; ಇರುವುದು ಒಂದು ಕುಂದಲ್ಲ. ಶ್ರೀಯುತ ಕಪಟರಾಳರೇ ತೋರಿಸಿರುವಂತೆ ಶ್ರೀವೈಷ್ಣವಾದಿಗಳಲ್ಲಿ ಸಂಪ್ರದಾಯಭೇದಗಳಿರುವುವು. ನಿರ್ಜೀವಾಗಿಲ್ಲದ ಎಲ್ಲ ಧರ್ಮಗಳಲ್ಲಿಯೂ ಭಿನ್ನಾಭಿಪ್ರಾಯಗಳು ಇದ್ದೇ ಇರುವುವು. ಆದರೆ ಯಾವುದಾದರೂ ಧರ್ಮವು ಸ್ವತಂತ್ರವಾದ ಧರ್ಮವಲ್ಲವೆನ್ನುವುದು ಹೆಚ್ಚು ವಿಚಾರವಿಲ್ಲದೇ ಹೇಳುವ ಮಾತಾಗಿರಬಾರದು. ವಚನೋಪನಿಷತ್ತಿನಲ್ಲಿಯೂ ಸಿದ್ಧಾಂತ ಶಿಖಾಮಣಿಯಲ್ಲಿಯೂ ಕಂಡುಬರುವಂತೆ ಶಕ್ತಿಯು ಶಿವನಿಂದ ಹೊರ

ಹೊಮ್ಮಿ ಜಗತ್ತಾಗುವುದು. ಮೋಕ್ಷಸ್ಥಿತಿಯನ್ನು "ಜಲೇ ಜಲಮಿವ......ವಿಭಾಗೇನ ನ ದೃಶ್ಯತೇ" ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದೆ. ಬಸವೇಶ್ವರರ ವಚನದಲ್ಲಿಯೂ "ನದಿಯೊಳಗೆ ನದಿಯು ಬೆರಸಿದಂತೆ", "ಅಂಬುಧಿಯೊಳಗೆ ಬಿದ್ದ ಆಲಿಕಲ್ಲಂತೆ" ಲಿಂಗೈಕ್ಯವು ಎಂದೇ ಹೇಳಿದೆ. ಜಗತ್ಸೃಷ್ಟಿಯು ಮತ್ತು ಮೋಕ್ಷಸ್ವರೂಪದ ಈ ಎರಡು ನಿಲುವುಗಳೂ ಕಾಶ್ಮೀರಶೈವಕ್ಕೂ ಶಾಕ್ತಸಿದ್ಧಾಂತಕ್ಕೂ ಅನ್ವಯಿಸುವುವು. ಅಷ್ಟೇಕೆ ಮಾನ್ಯ ರಾಧಾಕೃಷ್ಣನ್ನರು ಹೇಳುವಂತೆ ಅದ್ವೈತಿಗಳೇ ಆದ ಶ್ರೀ ಶಂಕರಾಚಾರ್ಯರು ಶಾಕ್ತರು; "ಶಿವ ಶ್ಯಕ್ತ್ಯಾಯುಕ್ತೋಯದಿ ಭವತಿ" ಎಂದು ಮೊದಲಾಗುವ ಆನಂದಲಹರಿಯನ್ನು ಬರೆದು ಅದರಲ್ಲಿ ಹೇಳಿರುವ ಶ್ರೀಚಕ್ರವನ್ನು ಅವರ ಮಠದಲ್ಲಿ ಸ್ಥಾಪಿಸಿರುವ ಮತ್ತು 'ಸರ್ವತಂತ್ರ ಸ್ವತಂತ್ರ' ಎಂಬ ಬಿರುದಾಂಕಿತರಾದ ಶ್ರೀ ಶಂಕರಾಚಾರ್ಯರು ಶಾಕ್ತರಲ್ಲಿ ಸಮಯಾನು ಯಾಯಿಗಳು. ಮೇಲಿನ ಎರಡು ನಿಲುವುಗಳು ಶ್ರೀ ಶಂಕರರಿಗೂ ಅನ್ವಯಿಸುತ್ತವೆ. ಅದ್ವೈತ ವನ್ನೊಪ್ಪುವ ಶಾಕ್ತಮತವು ಶ್ರೀ ಶಂಕರಾಚಾರ್ಯರಿಗಿಂತಲೂ ಎಷ್ಟೋ ಹಿಂದಿನದು; ಕಾಶ್ಮೀರ ಶೈವವು ಶ್ರೀ ಶಂಕರಾಚಾರ್ಯರ ಕಾಲಕ್ಕಿಂತ ಈಚಿನದು; ಆದುದರಿಂದ ಶಾಂಕರಸಿದ್ಧಾಂತವು ಸ್ವತಂತ್ರವಾದುದಲ್ಲ. ಶಾಕ್ತಸಿದ್ಧಾಂತವೇ ಅದು ಎನ್ನಬಹುದೇ? ಕಾಶ್ಮೀರಶೈವವು ಶಾಕ್ತ ಸಿದ್ಧಾಂತವೋ ಅಥವಾ ಶಾಂಕರಸಿದ್ಧಾಂತವೋ ಹೊರತು ಸ್ವತಂತ್ರಸಿದ್ಧಾಂತವಲ್ಲವೆನ್ನಬಹುದೆ?

ಡಾ॥ ಪಾಂಡೆಯವರ 'ಅಭಿನವಗುಪ್ತ' ಎಂಬ ಗ್ರಂಥದಲ್ಲಿನ ಮಾತುಗಳಿವು, ಈ ವಿಷಯ ದಲ್ಲಿ ಗಮನಾರ್ಹವಾಗಿವೆ:

"The influence of Sankara's Tantric philosophy on the Trika is so great that the supposition of a personal touch of its founder-writers with Sankara seems to be necessary to explain it at such an early time. If we compare, the philosophical ideas of Sankara as contained in his Dakshinamurti Stotra and explained by his pupil Sureswaracharya in his commentary of the above Stotra, we find that Sankara's conception of the ultimate reality is the same as that of the Pratyabhigna. In fact he uses all the important technical expressions in the same sense in which they are used in the Pratyabhigna." (Page 88.)

"There is however no doubt that he (Abhinavagupta) went to Jalandhara and learnt Koulika literature and practices from Sambhunatha. In fact it was through Sambhunatha's teaching that he got peace and attained self-realisation".... "It is from Kula system alone that he affirms to have got perfect satisfaction and peace. Because of this it is that we find in his works a more glowing tribute paid to Sambhunatha his Koulic teacher than to any one else. That before writing Tantraloka, he had realised his identity with the Parama Siva and that it was due to following Sambhunatha's teaching, he himself says in his introduction to Tantraloka".... "This seems to be the foundation of the traditional belief amongst Kashmirian Pandits that Abhinavagupta was Bhairava incarnate". (Pages 8, 14 and 15.)

ಮೇಲಿನ ಆಧಾರಗಳಿಂದ ತಿಳಿದುಬರುವಂತೆ ಕಾಶ್ಮೀರಶೈವದ ಅಭಿನವಗುಪ್ತಾಚಾರ್ಯರನ್ನು ತೃಪ್ತಿಗೊಳಿಸಿದ ಗುರುವು ಶಾಕ್ತಶ್ರೇಷ್ಠನಾದ ಶಂಭುನಾಥನಾದುದರಿಂದ ಕಾಶ್ಮೀರಶೈವದಲ್ಲಿ ಶಾಕ್ತತಾಂತ್ರಿಕಾಚರಣೆಗಳಿರುವುದರಲ್ಲಿ ಆಶ್ಚರ್ಯಪಡಬೇಕಾದುದಿಲ್ಲ. ಏನೇ ಆಗಲೀ ಶಕ್ತಿಯಿಂದಲೇ ಜಗವು ಹೊರಹೊಮ್ಮಿದೆಯೆಂದೂ, ಅದು ಸತ್ಯವೆಂದೂ, ಐಕ್ಯವೇ ಮೋಕ್ಷಸ್ಥಿತಿಯೆಂದೂ ಹೇಳುವ ಶಾಕ್ತ ಮತ್ತು ಕಾಶ್ಮೀರಶೈವಗಳಲ್ಲಿ ಶಾಕ್ತವೇ ಹಿಂದಿನದಾದುದರಿಂದಲೂ, ಶಾಕ್ತಪ್ರಭಾವವು ಕಾಶ್ಮೀರಶೈವದ ಮೇಲೆ ಬಿದ್ದಿರುವುದರಿಂದಲೂ ಶ್ರೀಯುತ ಕಪಟರಾಳ ಕೃಷ್ಣರಾಯರ ವಾದವು ಸರಿಯಾದರೆ, ಕಾಶ್ಮೀರಶೈವವು ಸ್ವತಂತ್ರ ಸಿದ್ಧಾಂತವೇ ಅಲ್ಲ; ಶಾಕ್ತ ಸಿದ್ಧಾಂತವನ್ನೇ ಕಾಶ್ಮೀರ ಶೈವಾಚಾರ್ಯರು ನಂಬಿ ಅದನ್ನು ಅನುಸರಿಸಿದ ಸಾಧು ಸಂತರು, ಭಕ್ತರು—ಎಂದು ಹೇಳಬೇಕಾಗುವುದು. ಆದರೆ ಇದು ಸರಿಯಲ್ಲ. ಹಾಗೆಯೇ ಒಂದು ವೇಳೆ ಕಾಶ್ಮೀರಶೈವವು ವೀರಶೈವಕ್ಕಿಂತ ಹಿಂದಿನದಾದರೂ, ಜಗತ್ತು ಶಕ್ತಿಯ ಪರಿಣಾಮವೆಂದೂ, ಮೋಕ್ಷದಲ್ಲಿ ಐಕ್ಯವಾಗುವುದೆಂದೂ ಕಾಶ್ಮೀರಶೈವದಂತೆ ವೀರಶೈವವು ಹೇಳುವುದಾದರೂ ಇಷ್ಟು ಮಾತ್ರದಿಂದಲೇ, ವೀರಶೈವವು ಸ್ವತಂತ್ರ ಸಿದ್ಧಾಂತವಲ್ಲ ಮತ್ತು ವೀರಶೈವ ಶರಣರು ಕಾಶ್ಮೀರಶೈವವನ್ನು ಅನುಸರಿಸಿದ ಸಾಧು ಸಂತರು—ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಶಾಕ್ತಪ್ರಭಾವಕ್ಕೊಳಗಾಗದ ವೀರಶೈವವು ತನ್ನದೇ ಆದ ಷಟ್‌ಸ್ಥಳ ಸಿದ್ಧಾಂತಕ್ಕೆ ಅನುಸಾರವಾದ ಷಟ್‌ಸ್ಥಳ ಸಾಧನ ಮಾರ್ಗದಿಂದ ಮೋಕ್ಷವಾಗುವುದೆಂದು ಪ್ರತಿಪಾದಿಸುತ್ತದೆ. ಅದರಲ್ಲಿ ಪ್ರತ್ಯಭಿಜ್ಞೆಯ ಸುಳಿವೇ ಆಗಲೀ, ತಾಂತ್ರಿಕಾಚರಣೆಯ ಸುಳಿವೇ ಆಗಲೀ, ಇಲ್ಲ; ಅಲ್ಲದೆ ಕಾಶ್ಮೀರಶೈವವು ಪ್ರಭಾವಯುತವಾಗಿ ದಕ್ಷಿಣ ದೇಶದವರೆಗೂ ಅದರ ಪ್ರಭಾವವನ್ನು ಹರಿಸುವುದಕ್ಕಿಂತಲೂ ಒಂದೆರಡು ಶತಮಾನಗಳ ಹಿಂದೆಯೇ ವೀರಶೈವವು ಪ್ರಭಾವಯುತವಾಗಿದ್ದಿತೆಂಬುದು ಹಿಂದಿನ ಪುಟಗಳಲ್ಲಿನ ವಿವೇಚನೆಯಿಂದ ತಿಳಿದುಬರುವುದು. (ಪು. 145)

ವೀರಶೈವೇತರ ಶೈವಸಿದ್ಧಾಂತಗಳಲ್ಲಿ ಅವುಗಳಲ್ಲಿರುವ ೩೬ ತತ್ವಗಳ ವಿವೇಚನೆಯು ಷಡಧ್ವ ಮಾರ್ಗವನ್ನು ಅನುಸರಿಸಿದೆ. ವೀರಶೈವವು ಆಗಮಗಳಲ್ಲಿ ಹೇಳಿರುವ ಈ ಷಡಧ್ವ ಸಂಪ್ರದಾಯವನ್ನು ಒಪ್ಪುವುದಾದರೂ ಅದರ ತತ್ವವಿವೇಚನೆಯು ಷಟ್‌ಸ್ಥಳ ಸಿದ್ಧಾಂತಕ್ಕೆ ಅನುಸಾರವಾಗಿದೆ. ವಚನೋಪನಿಷತ್ತಿನಲ್ಲಿಯೂ, ಸಿದ್ಧಾಂತ ಶಿಖಾಮಣಿಯಂತಹ ಆಧಾರ ಗ್ರಂಥಗಳಲ್ಲಿಯೂ ಷಟ್‌ಸ್ಥಲ ಸಿದ್ಧಾಂತವೇ ಪ್ರಾಮುಖ್ಯವಾಗಿ ವಿವೇಚಿಸಲ್ಪಟ್ಟಿರುವುದೇ ಹೊರತು ಷಡಧ ಮಾರ್ಗವಲ್ಲ. ಬಸವಾದಿ ಪ್ರಮಥರ ವಚನಗಳೆಲ್ಲವೂ ಷಟ್‌ಸ್ಥಲಗಳಿಗೆ ಅನುಸಾರವಾಗಿ ವಿಭಾಗಿಸಲ್ಪಟ್ಟಿವೆ. ಸ್ಥಲಶಬ್ದವಾಚ್ಯವಾದ ಪರಶಿವಬ್ರಹ್ಮವೂ ಅಂಗಸ್ಥಲವೆಂದೂ, ಲಿಂಗಸ್ಥಲವೆಂದೂ ವಿಭಾಗವಾಯಿತು. ಅಂಗವೇ ಉಪಾಸಕನಾದ ಜೀವ; ಲಿಂಗವೇ ಉಪಾಸ್ಯನಾದ ಶಿವ. ಶಕ್ತಿಯು 'ಶಕ್ತಿ' 'ಭಕ್ತಿ' ಎಂಬ ಎರಡು ಭಾಗಗಳಾಗಿ ಶಕ್ತಿಯು ಲಿಂಗದೊಡನೆಯೂ ಭಕ್ತಿಯು ಅಂಗದೊಡನೆಯೂ ಇರುವುದು. ಶಕ್ತಿಯೇ ಸೃಷ್ಟಿಗೆ ಕಾರಣವಾಗಿ ಪ್ರವೃತ್ತಿಲಕ್ಷಣವಾದುದು; ಭಕ್ತಿಯು ಮೋಕ್ಷಕಾರಣವಾಗಿ ನಿವೃತ್ತಿಲಕ್ಷಣವಾದುದು. ಆದುದರಿಂದ ಭಕ್ತಿಯು ಶಕ್ತಿಗಿಂತ ಶ್ರೇಷ್ಠವೆಂದು ಅನುಭವಸೂತ್ರದಲ್ಲಿ ಹೇಳಿದೆ:

> ಶಕ್ತಿಭಕ್ತ್ಯೋರ್ನಭೇದೋಽಸ್ತಿ ಪರಮಾರ್ಥ ನಿರೂಪಣೇ ।
> ಶಕ್ತಿಃ ಪ್ರವೃತ್ತಿರಾಖ್ಯಾತಾ ನಿವೃತ್ತಿರ್ಭಕ್ತಿರೀರಿತಾ ॥

ಮಹಾಲಿಂಗವು ಶಿವಸಾದಾಖ್ಯಾದಿ ಐದು ಸಾದಾಖ್ಯಗಳಾಗುವುದು. ಈ ಐದು ಸಾದಾಖ್ಯಗಳು ಆಚಾರಾದಿ ಐದು ಲಿಂಗಗಳಾಗಿ ಪರಿಣಮಿಸುವುವು. ಶಕ್ತಿಯು ಶಾಂತ್ಯಾದಿ ಐದು ಕಲೆಗಳಾಗಿ

ಐದು ಲಿಂಗಗಳಿಗೆ ಸಂಬಂಧಿಸಿರುವುವು. ಈ ಕಲೆಗಳಿಂದಲೇ ಪಂಚಭೂತಗಳ ಉತ್ಪತ್ತಿ. ಸೃಷ್ಟಿವಚನದಲ್ಲಿ ಹೇಳಿದಂತೆ—"ಈ ಪಂಚಭೂತಗಳೇ ಪಂಚೀಕರಣವನ್ನೈದಿ ಇಪ್ಪತ್ತೈದು ತತ್ವಗಳಾಗಿ ಆ ಇಪ್ಪತ್ತೈದು ತತ್ವಯುಕ್ತವಾದ ಶರೀರವು ಶಿವಾಂಶಿಕನಾದ ಮೂಲಾತ್ಮನಿಗೆ ಅಂಗವಾಯಿತು". ಹೀಗೆ ಪ್ರವೃತ್ತಿಪರಳಾದ ಶಕ್ತಿಯಿಂದ 'ಅಂಗ'ನೆಂಬ ಪಾರಿಭಾಷಿಕ ಶಬ್ದದಿಂದ ಕರೆಯಲ್ಪಡುವ ಜೀವನಿಗೆ ಶರೀರಸಂಬಂಧವಾಗುವುದು. ಇನ್ನು ನಿವೃತ್ತಿಕಾರಣವಾದ ಭಕ್ತಿಯು ಆರು ತೆರನಾಗಿರುವುದು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಷಟ್‌ಸ್ಥಲದ ಸೋಪಾನಗಳನ್ನು ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ, ಸಮರಸಭಕ್ತಿ, ಎಂಬ ಆರು ತೆರದ ಭಕ್ತಿಗಳ ಸಹಾಯದಿಂದ ಜೀವನು ಮೋಕ್ಷಸೌಧವನ್ನೇರುವ ವಿವರಗಳನ್ನು ಮುಂದೆ ತಿಳಿಸಲಾಗುವುದು. ಷಟ್‌ಸ್ಥಲ ಸಿದ್ಧಾಂತವನ್ನು ಷಟ್‌ಸ್ಥಲ ಸಾಧನಮಾರ್ಗವು ಅನುಸರಿಸಿದೆ ಮತ್ತು ಷಟ್‌ಸ್ಥಳ ಸಿದ್ಧಾಂತದಲ್ಲಿರುವ ಸೃಷ್ಟಿಕ್ರಮದಿಂದ ಮೋಕ್ಷಸಾಧನವು ರೂಪಿಸಲ್ಪಟ್ಟದೆ, ಎಂಬುದನ್ನು ತಿಳಿದರೆ ವೀರಶೈವ ಷಟ್‌ಸ್ಥಳ ವಿವೇಚನೆಯಲ್ಲಿ ಸ್ವತಂತ್ರವಾದ ಸಿದ್ಧಾಂತವೂ ಅದಕ್ಕೆ ಅನುಸಾರವಾದ ಸಾಧನೆಯೂ ಇರುವುದೆಂಬುದು ವ್ಯಕ್ತವಾಗಿ ಶ್ರೀಯುತ ಕಪಟರಾಳರ ಆಕ್ಷೇಪವು ನಿರಾಧಾರವಾದುದೆಂಬುದು ತಿಳಿಯುವುದು.

ಕಾಶ್ಮೀರಶೈವದಲ್ಲಿ ಇತರ ಸಿದ್ಧಾಂತಗಳಲ್ಲಿರುವಂತೆ ಸಾಂಖ್ಯರ ಇಪ್ಪತ್ತೈದು ತತ್ವಗಳು ಇರುವುವಾದರೂ ಅದಕ್ಕಿಂತಲೂ ಹೆಚ್ಚಾದ ಹನ್ನೊಂದು ತತ್ವಗಳು—ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ ಎಂಬಿವು—ಮೂವತ್ತಾರು ತತ್ವಗಳಲ್ಲಿ ಪರಿಗಣಿಸಲ್ಪಟ್ಟಿರುವುವು. ಶಿವಾಗಮಗಳಲ್ಲಿ ಹೇಳಿರುವ ಈ ಮೂವತ್ತಾರು ತತ್ವಗಳನ್ನು ವೀರಶೈವರು ಮಾನ್ಯಮಾಡಿದರೂ, ಅವರಿಗೆ ವೈಶಿಷ್ಟ್ಯವಾದ ಷಟ್‌ಸ್ಥಲ ಸಿದ್ಧಾಂತಕ್ಕೆ ತಳಹದಿಯಾದ ಹನ್ನೊಂದು ತತ್ವಗಳನ್ನು ಮೇಲೆ ಹೇಳಿದೆ. ಕಾಶ್ಮೀರಶೈವ ಗ್ರಂಥಗಳಲ್ಲಿ ವಿಸ್ತಾರವಾಗಿ ವಿವರಿಸಿರುವಂತೆ ಶಿವಾದಿ ತತ್ವಗಳು ಒಂದರಿಂದ ಒಂದು ಹೇಗೆ ಹೊರಹೊಮ್ಮುವವೆಂಬ ವಿಷಯವಾಗಲೀ ಅವುಗಳಲ್ಲಿ ಒಂದೊಂದಕ್ಕಿರುವ ವ್ಯತ್ಯಾಸವಾಗಲೀ ವೀರಶೈವರ ಆಧಾರ ಗ್ರಂಥವಾದ ಸಿದ್ಧಾಂತ ಶಿಖಾಮಣಿಯಲ್ಲಿಯಾಗಲೀ ವಚನ ವಾಙ್ಮಯದಲ್ಲಾಗಲೀ ಹೇಳಿಲ್ಲ. ವೀರಶೈವರ ಷಟ್‌ಸ್ಥಲ ಸಿದ್ಧಾಂತದ ಮೂವತ್ತಾರು ತತ್ವಗಳಲ್ಲಿ ಸ್ವಲ್ಪ ಹೆಚ್ಚುಕಡಮೆ ಎಲ್ಲರೂ ಒಪ್ಪುವ ಸಾಂಖ್ಯರ ೨೫ ತತ್ವಗಳನ್ನು ಬಿಟ್ಟು ಉಳಿದ ಹನ್ನೊಂದು ತತ್ವಗಳನ್ನು ಶಿವಾದ್ವೈತಮಂಜರಿಯಲ್ಲಿ ಹೀಗೆ ಹೇಳಿದೆ—"ಶಾಂತ್ಯತೀತೋತ್ತರಾಖ್ಯ ಕಲೋಪೇತ ಮಹಾಸಾದಾಖ್ಯ ಮಹಾಲಿಂಗತತ್ವಮೇಕಂ ಶಿಷ್ಟ ಪಂಚಲಿಂಗಗತ ಕಲಾಪಂಚಕಂ, ಶಿವಸಾದಾಖ್ಯ, ಮೂರ್ತಿಸಾದಾಖ್ಯ, ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ರೂಪಸಾದಾಖ್ಯಪಂಚಕಂ ಚ ಮಿಳಿತ್ವಾ ಲಿಂಗತತ್ವಾನ್ಯೇಕಾದಶೇತಿ ಸಂಕೇತಃ". ಸೃಷ್ಟಿವಚನದಲ್ಲಿ ಹೇಳಿದಂತೆಯೇ "ಶಾಂತಿಶಕ್ತಿಯೇ ಮೊದಲಾದ ಶಕ್ತಿಗಳೈದು, ಶಿವಸಾದಾಖ್ಯವೇ ಮೊದಲಾದ ಕರ್ತೃಗಳೈದು, ಈ ಎಲ್ಲಕ್ಕೂ ಉಪರಿಯಾಗಿ ತೋರುವ ಮೇಲಣ ಮಹಾಲಿಂಗ ತತ್ವ ತಾನೊಂದು" ಎಂದು ಹನ್ನೊಂದು ಲಿಂಗತತ್ವಗಳನ್ನು ಶಿವಾದ್ವೈತ ಮಂಜರಿಯಲ್ಲಿಯೂ ಹೇಳಿದೆ. ಶ್ರವಣಾದಿ ಇಂದ್ರಿಯಂಗಳೈದು, ವಾಗಾದಿ ಇಂದ್ರಿಯಂಗಳೈದು, ಶಬ್ದವಿಷಯವೇ ಮೊದಲಾದ ವಿಷಯಂಗಳೈದು, ಪ್ರಾಣಾದಿ ವಾಯುಗಳೈದು, ಮನ, ಬುದ್ಧಿ, ಚಿತ್ತ, ಅಹಂಕಾರ, ಮೂಲಾತ್ಮ ಎಂಬ ಅಂತಃಕರಣಂಗಳೈದು—ಹೀಗೆ ೨೫ ಅಂಗತತ್ವಗಳನ್ನು ೧೧ ಲಿಂಗತತ್ವಗಳಿಗೆ ಸೇರಿಸಿದರೆ ಒಟ್ಟು ಮೂವತ್ತಾರು ತತ್ವಗಳಾಗುವುವು.

ಶ್ರೀಯುತ ಕಪಟರಾಳರ ಆಕ್ಷೇಪವು ವಚನಕಾರರ ಮೇಲೆಯೇ ಬಿದ್ದಿರುವುದರಿಂದ ಪ್ರಭುದೇವರ ಸೃಷ್ಟಿವಚನದ ಸ್ವಲ್ಪಭಾಗವನ್ನು ಕೊಟ್ಟು ವಚನಕಾರರು ಕಾಶ್ಮೀರಶೈವವನ್ನು ನಂಬಿರುವರೆಂದು ಶ್ರೀಯುತ ಕಪಟರಾಳರ ಹೇಳಿಕೆಯಲ್ಲಿ ವಚನವಾಙ್ಮಯವನ್ನೇ ನೋಡದ ದೋಷವಿರುವುದೆಂಬುದನ್ನು ತೋರಿಸಬೇಕಾಗುವುದು. ಪ್ರಭುದೇವರ ಸೃಷ್ಟಿವಚನ ಭಾಗವಿದು:

> "ಮೊದಲು ನಿಃಕಲಬ್ರಹ್ಮವು, ಆ ನಿಃಕಲಬ್ರಹ್ಮದಿಂದ ಚಿತ್ತು, ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿಕ್ಕಲೆಗಳು ಪುಟ್ಟಿದವು, ಆ ಚಿನ್ನಾದ ಚಿದ್ಬಿಂದು ಚಿಕ್ಕಲೆ, ಮೂಲಚಿತ್ತೆಂಬ ಚತುರ್ವಿಧವು ಘಟ್ಟಿಗೊಂಡು ಅಖಂಡ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾ ಲಿಂಗ ವಾಯಿತು. ಆ ಮಹಾ ಲಿಂಗದಿಂದ ಸದಾಶಿವಮೂರ್ತಿ ಪುಟ್ಟಿದನು; ಆ ಸದಾಶಿವನ ಪಂಚ ಮುಖದಿಂದ ಭೂತಂಗಳು ಪುಟ್ಟಿದವು; ಗೋಪ್ಯಮುಖದಲ್ಲಿ ಆತ್ಮನು ಪುಟ್ಟಿದನು. ಅಂತಪ್ಪ ಪರಬ್ರಹ್ಮದಿಂದಾದ.... ಅಂಗಸ್ಥಲವೊಂದಕ್ಕೆ ಕವಳಿಗೆಯಾಗಿ ಸೇರಿದ ಇಪ್ಪತ್ತೈದು ತತ್ವಂಗಳು–ಅವು ಎಂತಾವೆಲೆಸ್ವಾಮಿ ಎಂದು ಬೆಸಗೊಂಡೊಡೆ—ಅರಿವು ರೂಪವಾದ ಶ್ರವಣಾದಿ ಇಂದ್ರಿಯಂ ಗಳೈದು, ಕರ್ಮಕ್ರಿಯಾರೂಪವಾದ ವಾಗಾದಿ ಇಂದ್ರಿಯಂಗಳೈದು, ಶಬ್ದವಿಷಯವೇ ಮೊದಲಾದ ವಿಷಯಂಗಳೈದು, ಪ್ರಾಣಾದಿ ವಾಯುಗಳೈದು, ಮನ ಬುದ್ಧಿ ಚಿತ್ತ ಅಹಂಕಾರ ಮೂಲಾತ್ಮ ಎಂಬ ಅಂತಃಕರಣಂಗಳೈದು ಈ ಪ್ರಕಾರದಿಂ ಹೇಳಲ್ಪಟ್ಟವುಗಳಿಂದ ಕೂಡಿರುವುದೇ ಅಂಗವು ....ಮಹಾಲಿಂಗವು ತಾನೆ ಹನ್ನೊಂದು ತೆರನಾಯಿತು ಏಕಾದಶ ತತ್ವ ಸ್ವರೂಪವನ್ನು ತಳೆಯಿತು—ಇಂತು ಏಕಾದಶ ತತ್ವ ಸ್ವರೂಪಮಂ ತಾಳಿದ ಪರಿಕ್ರಮಂ ತರುವಾಯದ ನಿಲುಕಡೆ ಹೇಗಿಪ್ಪುದು ಎಲೆ ಸ್ವಾಮಿಯೆಂದು ಬೆಸಗೊಂಡೊಡೆ—ಶಾಂತಿ ಶಕ್ತಿ ಮೊದಲಾದ ಶಕ್ತಿಗಳೈದು, ಶಿವಸಾದಾಖ್ಯವೇ ಮೊದಲಾದ ಕರ್ತೃಗಳೈದು, ಈ ಎಲ್ಲಕ್ಕೂ ಉಪರಿಯಾಗಿ ತೋರುವ ಮೇಲಣ ಮಹಲಿಂಗ ತತ್ವ ತಾನೊಂದು. ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಅಂಗಸಂಬಂಧವಾದ ತತ್ವಂಗಳಿಪ್ಪತ್ತೈದು, ಲಿಂಗಸಂಬಂಧವಾದ ತತ್ವಗಳು ಹನ್ನೊಂದು, ಅಂಗಲಿಂಗ ಸಂಬಂಧವಾದ ಉಭಯ ತತ್ವಂಗಳೂ ಕೂಡಿ ಮೂವತ್ತಾರು ತತ್ವಗಳಾದುವು."

ಸೃಷ್ಟಿ ವಚನದಲ್ಲಿ ಹೇಳಿರುವ ಹನ್ನೊಂದು ಲಿಂಗತತ್ವಗಳು ವೀರಶೈವ ಸಿದ್ಧಾಂತದ ವೈಶಿಷ್ಟ್ಯವೆಂದು ಹೇಳಲಾಯಿತಷ್ಟೆ. ಉಳಿದ ೨೫ ಅಂಗತತ್ವಗಳಿಗೂ ಇತರ ಸಿದ್ಧಾಂತಗಳಲ್ಲಿ ತೆಗೆದುಕೊಂಡಿರುವ ಸಾಂಖ್ಯರ ೨೫ ತತ್ವಗಳಿಗೂ ಇರುವ ವ್ಯತ್ಯಾಸವು, ಅವುಗಳನ್ನು ಮೇಲಿನ ಅಂಗತತ್ವಗಳೊಂದಿಗೆ ಹೋಲಿಸಿದರೆ ಗೊತ್ತಾಗುವುದು. ಈ ತತ್ವಗಳು ಆವಿರ್ಭಾವವಾಗುವ ರೀತಿಯಲ್ಲಿಯೂ ವೈಶಿಷ್ಟ್ಯವಿದೆ. ಪಂಚಕಲೆಗಳಿಂದ ಪೃಥ್ವಿಯಾದಿ ಐದು ಭೂತಗಳು ಹೊರ ಹೊಮ್ಮುವುವಷ್ಟೆ—ಇವುಗಳಲ್ಲಿ ಪೃಥ್ವಿಯ ಐದನೆಯ ಒಂದಂಶಕ್ಕೆ ಪೃಥ್ವಿಯ ಐದನೆಯ ಒಂದು ಅಂಶ ಸೇರಿದರೆ ಗುಧವೂ, ಜಲದ ಐದನೆಯ ಒಂದು ಅಂಶ ಸೇರಿದರೆ ಗುಹ್ಯವೂ, ಅಗ್ನಿಯ ಐದನೆಯ ಒಂದು ಅಂಶ ಸೇರಿದರೆ ಪಾದವೂ, ವಾಯುವಿನ ಐದನೆಯ ಒಂದು ಅಂಶ ಸೇರಿದರೆ ಪಾಣಿಯೂ, ಆಕಾಶದ ಐದನೆಯ ಒಂದು ಅಂಶ ಸೇರಿದರೆ ವಾಕ್ಕೂ ಆಗಿ ಕರ್ಮೇಂದ್ರಿಯ ಪಂಚಕವಾಗುವುದು. ಹೀಗೆ ಜಲದ ಐದನೆಯ ಒಂದು ಅಂಶಕ್ಕೆ ಮೇಲೆ ಹೇಳಿದ ಪಂಚಭೂತ ಗಳಲ್ಲಿ ಒಂದೊಂದರಲ್ಲಿನ ಐದನೆಯ ಒಂದು ಅಂಶ ಸೇರಿದರೆ ಕ್ರಮವಾಗಿ ಗಂಧ, ರಸ, ರೂಪು, ಸ್ಪರ್ಶ, ಶಬ್ದವೆಂಬ ವಿಷಯಪಂಚಕವಾಗುವುದು. ಅಗ್ನಿ ವಾಯು ಆಕಾಶಗಳಲ್ಲಿ ಪ್ರತಿಯೊಂದರ ಐದನೆಯ ಒಂದು ಭಾಗಕ್ಕೆ ಪ್ರತಿಯೊಂದು ಭೂತಗಳ ಐದನೆಯ ಒಂದು ಭಾಗ ಸೇರಿದರೆ ನಾಸಿಕಾದಿ ಜ್ಞಾನೇಂದ್ರಿಯ ಪಂಚಕವೂ, ಪ್ರಾಣಾದಿ ವಾಯು ಪಂಚಕವೂ, ಚಿತ್ತವೇ ಮೊದಲಾದ ಅಂತಃಕರಣ ಪಂಚಕವೂ ಆಗುವುವು. ಈ ರೀತಿ ಅಂಗತತ್ವಗಳು ಆಗುವುವು. ಶಿವತತ್ವ ಚಿಂತಾಮಣಿಯ ಆಧಾರದ ಮೇಲೆ ಬರೆದಿರುವ ವೀರಶೈವಾಮೃತಮಹಾಪುರಾಣದಲ್ಲಿ (೭-೩-೧೨) "ಪಂಚೀಕರಣಮಂ ವಿಜಯಭೈರವಿಯೊಳುಸುರುವೆಂ" ಎಂದು ಹೇಳಿರುವಂತೆ

ಮೇಲ್ಕಂಡ ವಚನಕಾರರ ಪಂಚೀಕರಣಕ್ಕೆ ವಿಜಯಭೈರವೀ ಆಗಮದ ಆಧಾರವಿರುವುದು ಈ ಸಿದ್ಧಾಂತವು ಇತರ ಶೈವಸಿದ್ಧಾಂತಗಳಿಗಿಂತ ಭಿನ್ನವಾಗಿದ್ದು ಷಟ್‌ಸ್ಥಳದ ಆಚರಣೆಗೆ ತಳಹದಿಯಾಗಿದೆ. ಹೀಗಿದ್ದರೂ ವಚನಕಾರರು "ಸ್ವತಂತ್ರ ದಾರ್ಶನಿಕರಲ್ಲ, ಕಾಶ್ಮೀರಶೈವವನ್ನು ನಂಬಿ ಅದಕ್ಕನುಸರಿಸಿದ ಸಾಧುಸಂತರು," ಎಂದೂ "ಸಾಧನೆಯಿಂದಲೂ ವಿಚಾರಶಕ್ತಿಯಿಂದಲೂ ದರ್ಶನ ಶಾಸ್ತ್ರವನ್ನು ನಿರ್ಮಿಸಿದ ಆಚಾರ್ಯರ ಯೋಗ್ಯತೆಯು ಇವರಿಗೆ ಬರಲಾರದು" ಎಂದೂ ಹೇಳಿಯುವುದು ಸರಿಯಲ್ಲ.

ಇನ್ನು ಯಾವ ಆಚಾರ್ಯರು ವಚನಕಾರರ ಸಿದ್ಧಾಂತಕ್ಕಿಂತಲೂ ಸ್ವತಂತ್ರವಾದ ದರ್ಶನ ಶಾಸ್ತ್ರವನ್ನು ನಿರ್ಮಿಸಿದ್ದಾರೆ ಎಂಬುದನ್ನು ಶ್ರೀಯುತರು ಹೇಳಿಲ್ಲ. ಶ್ರೀ ಶಂಕರಾದಿ ಆಚಾರ್ಯರ ಕಾಲಕ್ಕಿಂತ ಹಿಂದೆ ಅದ್ವೈತ, ದ್ವೈತ, ದ್ವೈತಾದ್ವೈತ ಮೊದಲಾದ ಸಿದ್ಧಾಂತಗಳು ಇದ್ದೇ ಇದ್ದುವು. ಹಿಂದಿನ ಆಚಾರ್ಯರ ಸಿದ್ಧಾಂತವನ್ನೇ ಇವರು ಮುಂದುವರಿಸಿರುವುದನ್ನು ೫ ಮತ್ತು ೬ ನೆಯ ಪುಟಗಳಲ್ಲಿ ತೋರಿಸಲಾಗಿದೆ. ಹಿಂದೆ ಇದ್ದ ಸಿದ್ಧಾಂತಗಳಲ್ಲಿ ಸ್ವಲ್ಪ ವ್ಯತ್ಯಾಸ ಮಾಡಿ ಆ ಸಿದ್ಧಾಂತಗಳು ಸರಿಯಾಗಿವೆಯೆಂದು ತೋರಿಸಿಕೊಡಲು ಭಾಷ್ಯಗಳನ್ನು ಶ್ರೀ ಶಂಕರ ಶ್ರೀ ರಾಮಾನುಜಾದಿ ಆಚಾರ್ಯರು ಒಬ್ಬರನ್ನೊಬ್ಬರು ಪ್ರಬಲವಾಗಿ ಖಂಡಿಸಿ ಭಾಷ್ಯ ಬರೆದರು. ಕಾಶ್ಮೀರಾದಿ ಶೈವಸಿದ್ಧಾಂತಕ್ಕೆ ಭಾಷ್ಯ ಬರೆಯದ ಆಚಾರ್ಯರು ಭಾಷ್ಯ ಬರೆದ ಎಲ್ಲ ಆಚಾರ್ಯರಿಗಿಂತಲೂ ಕೀಳುಮಟ್ಟದವರೆ? ವಚನವಾಙ್ಮಯವನ್ನು ಆಳವಾಗಿ ಅಭ್ಯಾಸ ಮಾಡಿ 'ವಚನಶಾಸ್ತ್ರ ರಹಸ್ಯ'ವನ್ನು ಬರೆದ ಮಾನ್ಯ ದಿವಾಕರರು "ವಚನಗಳು ಉಪನಿಷತ್ತುಗಳಿಗಿಂತ ಯಾವ ವಿಷಯದಲ್ಲಿಯೂ ಹಿಂದೆ ಬೀಳಲಾರವೆಂಬುದನ್ನು ಹೇಳಲಿಕ್ಕೆ ಪರಮ ಸಂತೋಷವಾಗುತ್ತದೆ. ಉಪನಿಷತ್ತುಗಳಲ್ಲಿದ್ದ ವಿಷಯಗಳೆಲ್ಲ ವಚನಗಳಲ್ಲಿ ಸಿಗುತ್ತವೆ. ವಚನಗಳಲ್ಲಿದ್ದ ವಿಷಯಗಳೆಲ್ಲ ಉಪನಿಷತ್ತುಗಳಲ್ಲಿ ಸಾಧ್ಯವಿರುವುದಿಲ್ಲ" ಎಂದಿರುವರು. ಇವರಂತೆಯೇ ವಚನವಾಙ್ಮಯ ವಿಶಾರದರಾದ ಶ್ರೀನಿವಾಸಮೂರ್ತಿಗಳು "ವಚನಸಾಹಿತ್ಯವೇ ತಪೋವನದ ಉಪನಿಷತ್ ಸಾಹಿತ್ಯ, ವಚನಕಾರರೇ ಉಪನಿಷತ್ ಕಾಲದ ಮಹರ್ಷಿಗಳು" ಎಂದಿರುವರು. ಉಪನಿಷತ್ತುಗಳಿಗೆ ಯಾವ ರೀತಿಯಲ್ಲಿಯೂ ಕಡಮೆಯಿಲ್ಲದ ವಚನವಾಙ್ಮಯವನ್ನು ರಚಿಸಿದ ಅಲ್ಲಮಾದಿ ವಚನಕಾರರನ್ನು ಭಾಷ್ಯ ಬರೆದೋ ಇಲ್ಲದೆಯೋ ಸ್ವತಂತ್ರ ದರ್ಶನವನ್ನು ಬರೆದವರೊಡನೆ ಹೋಲಿಸುವುದು ಸರಿಯಲ್ಲ. ಶ್ವೇತಾಶ್ವತರೋಪನಿಷತ್ತನ್ನು ಬರೆದ ಶ್ವೇತಾಶ್ವತರಮುನಿಯು ಯಾವ ಭಾಷ್ಯವನ್ನೂ ಬರೆದಿಲ್ಲವಾಗಿ, ಸ್ವತಂತ್ರದರ್ಶನಶಾಸ್ತ್ರವನ್ನು ನಿರ್ಮಿಸಿದ ಆಚಾರ್ಯರ ಯೋಗ್ಯತೆಯುಳ್ಳವನಲ್ಲವೆನ್ನಬಹುದೆ? ಒಟ್ಟಿನಲ್ಲಿ ವಿವಿಧ ತರದ ಕಾರ್ಯಕರ್ತರಲ್ಲಿ ಯಾರು ಹೆಚ್ಚು ಯಾರು ಕಡಮೆಯೆಂದು ತರ್ಕಮಾಡಿ ಹಳಿಯುವುದು ಒಪ್ಪತಕ್ಕ ಮಾರ್ಗವಲ್ಲ.

ವೀರಶೈವದ ವೈಶಿಷ್ಟ್ಯವೆನಿಸಿದ ಹನ್ನೊಂದು ತತ್ವಗಳಲ್ಲಿ ಶಾಂತ್ಯಾದಿ ಕಲಾರೂಪವಾದ ಐದು ಶಕ್ತಿಗಳು ಸೃಷ್ಟಿಗೆ ಕಾರಣವಾಗಿರುವುವೆಂಬುದೂ, ಶಿವಸಾದಾಖ್ಯವೇ ಮೊದಲಾದ ಐದು ಸಾದಾಖ್ಯಗಳ ಪ್ರಕಾಶವೆನಿಸಿದ ಆಚಾರಾದಿ ಐದು ಲಿಂಗಗಳ ಮತ್ತು ಮಹಾಲಿಂಗದ ಉಪಾಸನೆಯನ್ನು ಆರು ವಿಧವಾದ ಭಕ್ತಿಗಳಿಂದ ಮಾಡಿ ಮೋಕ್ಷ ಪಡೆಯಬಹುದೆಂಬುದೂ, ಭಕ್ತಿಯು ಶಕ್ತಿಯ ರೂಪೇ ಎಂಬುದೂ, ಸಿದ್ಧಾಂತ ಶಿಖಾಮಣಿಯಲ್ಲಿ ಉಪದೇಶಿಸಲ್ಪಟ್ಟ ಷಟ್‌ಸ್ಥಲ ಸಿದ್ಧಾಂತದ ಅಡಿಗಲ್ಲು. ಈ ಸಿದ್ಧಾಂತದ ಮೇಲೆಯೇ ಷಟ್‌ಸ್ಥಲದ ಆಚರಣೆಯು ಏರ್ಪಟ್ಟಿದೆ.

ಈ ರೀತಿಯ ಸೃಷ್ಟಿಕಲ್ಪನೆಯಾಗಲೀ ಅದರಿಂದ ಮೋಕ್ಷವನ್ನು ಪಡೆವ ಷಟ್‌ಸ್ಥಲಾಚರಣೆಯಾಗಲೀ ಕಾಶ್ಮೀರಾದಿ ಶೈವಗಳಲ್ಲಿಲ್ಲ. ಆಯಾ ಸಿದ್ಧಾಂತದ ಆಚರಣೆಗಳು ಆಯಾ ಸಿದ್ಧಾಂತಕ್ಕೆ ಅನುಸಾರವಾಗಿರುತ್ತವೆ. ಕಾಶ್ಮೀರಶೈವದ ಆಚರಣೆಗಳು ಕಾಶ್ಮೀರಶೈವಕ್ಕೆ ಅನುಸಾರವಾಗಿವೆ. ವೀರಶೈವರ ಆಚರಣೆಯು ವೀರಶೈವ ಸಿದ್ಧಾಂತಕ್ಕೆ ಅನುಸಾರವಾಗಿದೆ. ವೀರಶೈವ, ಕಾಶ್ಮೀರಶೈವ, ಶೈವಸಿದ್ಧಾಂತ ಮತ್ತು ಶಾಕ್ತಸಿದ್ಧಾಂತಗಳೆಂಬ ಸಹೋದರಿಯರಿಗೆ ಶ್ವೇತಾಶ್ವತರೋಪನಿಷತ್ತು ಮತ್ತು ಆಗಮಗಳು ತವರುಮನೆಯಾಗಿವೆ. ಸಹೋದರಿಯರಿಗಿರುವ ಸಾಮ್ಯವೂ ಸ್ವತಂತ್ರ ವ್ಯಕ್ತಿತ್ವವೂ ಇವೆಲ್ಲಕ್ಕೂ ಇವೆ.

## ಶ್ರೀಯುತ ಎಸ್. ಕೆ. ದಾಸ್‌ರವರ ಅಭಿಪ್ರಾಯದ ವಿಮರ್ಶೆ

ಶ್ರೀಯುತ ಎಸ್. ಕೆ. ದಾಸ್‌ರವರ *Sakti or Divine Power* ಗ್ರಂಥದಲ್ಲಿ ಹೇಳಿರುವ ಮಾತುಗಳಿವು ಗ್ರಾಹ್ಯವಾಗಿವೆ:

Lingayata school has undoubtedly much in common with the Trika..... Terms such as Vimarsa, Paramarsha, etc., are actually borrowed and incorporated into the exposition of the principle of Sakti. Like the Trika, Sivayogi Renuka in *Siddhanta Sikhamani* starts with the idea of Sakti as possessing a common nature with Siva (Chapter 2–30). He therefore styles her in the ultimate state by the specific term 'Dharmacharini'....Thus for we find practically nothing about the nature of Sakti which stands out as a peculiar characteristic of Veerasaiva thought. But soon the Lingayat thinker throws off, his allegiance to the sister school and carries out a new path for himself. For, the very next moment, we find that he boldly affirms that this supreme Sakti is nothing but the very self of Maya (*Maya Swarupa Siddhanta Sikamani*, I-9; II-2). If you consider how Maya in the ultimate sense is never given a place by the side of the Highest Reality, Brahman, in the strict school of Advaita, but is always viewed with suspicion as the 'Supreme Author' of all evils, we must admit this to be indeed a bold assertion reflecting good deel of original thinking. Trika school it must, however, be admitted that she also regarded Maya Sakti which causes phenomenon diversities as a special mode of the Supreme Swatantra Sakti. But the Lingayats, though they admitted the conclusion of the Trika, proceeded a step further and called this Sakti Maha Maya or Shuddha Maya as she is not in the least contaminated by Thamas."

ಹೀಗೆ ಹೇಳಿರುವುದರಲ್ಲಿ ಕಾಶ್ಮೀರಶೈವಕ್ಕೂ ವೀರಶೈವಕ್ಕೂ ಇರುವ ವ್ಯತ್ಯಾಸವನ್ನು ಶ್ರೀಯುತ ದಾಸ್‌ರವರು ಗಮನಿಸಿರುವರಾದರೂ ಇವೆರಡಕ್ಕೂ ಇರುವ ಸಾಮ್ಯವು ಇವುಗಳಿಗೆ ಹಿನ್ನೆಲೆಯಾದ ಆಗಮಗಳಿಂದ ಬಂದವೇ ಹೊರತು ಒಂದು ಇನ್ನೊಂದನ್ನು ಅನುಸರಿಸಿರುವುದರಿಂದವಲ್ಲವೆನ್ನುವದನ್ನು ಅವರು ಗಮನಿಸಬೇಕಾಗಿದ್ದಿತು. ಅಲ್ಲದೆ ಶ್ರೀಯುತ ದಾಸರು ಗಮನಿಸಿರುವುದಕ್ಕಿಂತಲೂ ಬಹಳ ವ್ಯತ್ಯಾಸಗಳು ಇವೆ. ಕಾಶ್ಮೀರಶೈವದ ಸೃಷ್ಟಿಕಲ್ಪನೆಗೂ ವೀರಶೈವದ ಸೃಷ್ಟಿಕಲ್ಪನೆಗೂ ವ್ಯತ್ಯಾಸವಿದೆಯೆಂಬುದನ್ನು ಅವರು ಗಮನಿಸಿಲ್ಲ.

ಉದಾಹರಣೆಗಾಗಿ ಕಾಶ್ಮೀರಶೈವದ ಪ್ರಕಾರ, ಮೂರುಮಟ್ಟದಲ್ಲಿ ಶಕ್ತಿಯ ಸೃಷ್ಟಿಕಾರ್ಯವಾಗುತ್ತದೆ.—ಚಿಚ್ಛಕ್ತಿ ಮೊದಲಾದ ಐದುಶಕ್ತಿಗಳಲ್ಲಿ ಒಂದೊಂದರ ಪ್ರಾಧಾನ್ಯದಿಂದ ಶಿವಾದಿ ಐದು ತತ್ವಗಳಾಗುತ್ತವೆ; ಎರಡನೆಯ ಮಟ್ಟದಲ್ಲಿ ಶಕ್ತಿಯ ರೂಪವೇ ಆದ ಮಾಯೆಯು ಸರ್ವಜ್ಞತ್ವಾದಿಗಳನ್ನು ಮರೆಮಾಡಿ ಕಲಾದಿ ಕಂಚುಕಗಳಿಗೆ ಕಾರಣವಾಗುತ್ತದೆ; ಮೂರನೆಯ ಮಟ್ಟದಲ್ಲಿ ಪ್ರಕೃತಿಯು ತ್ರಿಗುಣಾತ್ಮಿಕವಾಗಿ ಪಂಚಭೂತಾದಿ ತತ್ವಗಳಿಗೆ ಕಾರಣವಾಗುತ್ತದೆ. ಸಿದ್ಧಾಂತ ಶಿಖಾಮಣಿಯ ಪ್ರಕಾರ ಒಂದೇ ಮಟ್ಟದಲ್ಲಿ ಶಕ್ತಿಯು ಸೃಷ್ಟಿಕಾರಣಿಯಾಗುವಳು; ಶಿವನಿಂದ ಹೊರಹೊಮ್ಮಿದ ಮಾಯೆಯೇ ತ್ರಿಗುಣಾತ್ಮಿಕಳಾಗಿರುತ್ತಾಳೆ. ಇವುಗಳಲ್ಲಿ ಶುದ್ಧ ಸತ್ವಗುಣವೊಂದೇ ಪ್ರೇರಕನಾದ ಈಶ್ವರನಿಗೆ ಉಪಾಧಿಯಾಗಿರುತ್ತದೆ. ಸತ್ವರಜೋಗುಣಗಳು ಪರಶಿವಾಂಶನಾದ ಜೀವನಿಗೆ ಉಪಾಧಿಯಾಗುತ್ತದೆ. ಶುದ್ಧ ತಾಮಸಗುಣವು ಜಡತತ್ವಕ್ಕೆ ಕಾರಣವಾಗುತ್ತದೆ. ಈ ವ್ಯತ್ಯಾಸಗಳು ಗಮನಾರ್ಹವಲ್ಲದೆ ಜಡ ಪ್ರಪಂಚದಲ್ಲಿಯೂ ಗೂಢವಾಗಿ ಯಾದರೂ ಚೈತನ್ಯವಿರುತ್ತದೆಯೆಂಬ ಸಿದ್ಧಾಂತ ಶಿಖಾಮಣಿಯ ಸಿದ್ಧಾಂತವು ಇಂದಿನ ವಿಜ್ಞಾನಕ್ಕೆ ಅನುಸಾರವಾಗಿದೆಯೆಂಬ ಗಮನಾರ್ಹ ವಿಷಯವನ್ನು ಮುಂದೆ ಸ್ಪಷ್ಟಮಾಡಲಾಗುವುದು. ವೀರಶೈವರ ಆದಿ ಆಧಾರ ಗ್ರಂಥವೆನಿಸಿದ ಸಿದ್ಧಾಂತ ಶಿಖಾಮಣಿಯಲ್ಲಿನ ಸೃಷ್ಟಿಕಲ್ಪನೆಗೂ ಕಾಶ್ಮೀರ ಶೈವಗ್ರಂಥಗಳಲ್ಲಿರುವ ಸೃಷ್ಟಿಕಲ್ಪನೆಗೂ ಬಹಳ ವ್ಯತ್ಯಾಸಗಳಿರುವುವೆಂಬುದನ್ನು ತೋರಿಸಲು ಪ್ರತ್ಯೇಕ ಗ್ರಂಥವೇ ಅವಶ್ಯವಾಗುವುದು. ವೀರಶೈವವು ಕಾಶ್ಮೀರಶೈವವನ್ನೇ ತಮ್ಮ ಸಿದ್ಧಾಂತವನ್ನಾಗಿ ಮಾಡಿಕೊಂಡಿರುವುದೇ ಹೊರತು ಅದು ಸ್ವತಂತ್ರ ಸಿದ್ಧಾಂತವಲ್ಲ ವೆನ್ನುವ ಶ್ರೀಯುತ ಕಪಟರಾಳರ ವಾದವನ್ನು ಒಪ್ಪದಿರುವುದಕ್ಕೆ ಸಾಕಾದಷ್ಟನ್ನು ಮಾತ್ರ ಇಲ್ಲಿ ಹೇಳಲಾಗಿದೆ. ಕಾಶ್ಮೀರದಲ್ಲಿ ಹಿಂದೆ ಇದ್ದ ಶೈವ ಬೌದ್ಧ ಶಾಕ್ತ ಸಿದ್ಧಾಂತಗಳ ಮೇಲೆ ಶಾಂಕರ ಸಿದ್ಧಾಂತದ ಪ್ರಭಾವವಾಗಿ ಕಾಶ್ಮೀರಶೈವವು ಉತ್ತರದಲ್ಲಿ ಬಳೆಯಿತೆಂದರೆ ದಕ್ಷಿಣದೇಶದಲ್ಲಿ ಸೈಂಧವನಾಗರಿಕರ ಕಾಲದಲ್ಲೇ ಪ್ರಾರಂಭವಾಗಿ, ಲಿಂಗಿಪಾಶುಪತ ಶೈವಸಿದ್ಧಾಂತಗಳಿಂದ ಪ್ರಚೋದನೆಗೊಂಡು, ಲಿಂಗಧಾರಣೆಯನ್ನು ಹೇಳುವ ಪಾಶುಪತವ್ರತವನ್ನು ಆಜೀವಪರ್ಯಂತರ ಆಚರಿಸಿ ಮೋಕ್ಷವನ್ನು ಪಡೆಯಬಹುದೆಂದು ಭಾಷ್ಯದಲ್ಲಿ ಬರೆದು, ಶ್ರೀ ಶಂಕರಾಚಾರ್ಯರೊಡನೆ ವಾದಮಾಡಿದವರೆಂದು ಪ್ರಸಿದ್ಧರಾದ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತದಿಂದ ಪ್ರಭಾವಿತ ವಾಗಿ, ವೀರಶೈವ ಆಚಾರ್ಯರಿಂದಲೂ ಬಸವಾದಿ ಪ್ರಮಥರಿಂದಲೂ ಶುದ್ಧಿ ಸಂಘಟನೆಗೊಳ ಗಾಗಿ ಬಳೆದುದು ವೀರಶೈವಧರ್ಮ. ಹೀಗೆ ವೀರಶೈವ ಸಿದ್ಧಾಂತಕ್ಕೆ ಹಿನ್ನೆಲೆಯಾದ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ವೀರಶೈವಕ್ಕೆ ಸಂಬಂಧಪಟ್ಟುದಲ್ಲವೆಂಬ ಭಾವನೆಯಿರುವುದರಿಂದ ಇದು ಸಂಶೋಧನಾರ್ಹವಾಗಿದೆ.

## ಶ್ರೀಕಂಠ ಶಿವಾಚಾರ್ಯರು ವೀರಶೈವರೆ?

ಶತಮಾನಗಳು, ಭಾಷ್ಯರಚನೆಯಾದಮೇಲೆ ಎಷ್ಟೋ ಉರುಳಿ ಹೋಗಿದ್ದರೂ ಇಂದು ಉಳಿದು ನಿಂದು ಉತ್ತಮವಾದವುಗಳೆನಿಸಿಕೊಂಡಿರುವ ನಾಲ್ಕೈದು ಭಾಷ್ಯಗಳಲ್ಲಿ ಶ್ರೀಕಂಠ ಭಾಷ್ಯವು ಒಂದಾಗಿ, ಇಂದೂ ವಿದ್ವಾಂಸರಿಂದ ಮನ್ನಣೆಯನ್ನು ಪಡೆದಿದೆ. ಇದರ ಅಭ್ಯಾಸವನ್ನು ಆಳವಾಗಿ ಮಾಡಿದ ಈಗಿನ ಕಾಲದ ವಿದ್ವಾಂಸರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಶ್ರೀಯುತ ಎಸ್. ಎಸ್. ಸೂರ್ಯನಾರಾಯಣ ಶಾಸ್ತ್ರಿಗಳು ಹೆಸರುವಾಸಿಯಾದವರು. ಇಂತಹ ವಿದ್ವಾಂಸರ ಸಂಶೋಧನೆಗೆ ಒಳಗಾದರೂ, ಶ್ರೀಕಂಠ ಶಿವಾಚಾರ್ಯರ ತಂದೆ ತಾಯಿಗಳ

ಹೆಸರಾಗಲೀ ದೇಶವಾಗಲೀ ಊರಾಗಲೀ ಕುಲಜಾತಿಗಳಾಗಲೀ ತಿಳಿಯದಿರುವುದು ವಿಷಾದಕಾರಿಯಾಗಿದೆ. "Very little is known of Srikantha's place, period or parentage" ಎಂದೂ "that he was a Brahmin no one can assert with certainty" ಎಂದೂ ಶ್ರೀಯುತ ಸೂರ್ಯನಾರಾಯಣರು ಹೇಳಿದ್ದಾರೆ. ಇವರಲ್ಲದೆ ನೀಲಕಂಠಭಾಷ್ಯವನ್ನು ಬರೆದ ನೀಲಕಂಠ ಶಿವಾಚಾರ್ಯರು ಮತ್ತೊಬ್ಬರಿದ್ದಾರೆಯೆ ಎಂಬ ಸಂಶಯ ಬಂದುದುಂಟು. ಆದರೆ ಅಂತಹ ಮತ್ತೊಂದು ಭಾಷ್ಯವು ದೊರೆತಿಲ್ಲ; ಅಲ್ಲದೆ ಶ್ರೀಕಂಠ ಶಿವಾಚಾರ್ಯರು ನೀಲಕಂಠ ಶಿವಾಚಾರ್ಯರೆಂದೂ, ಶ್ರೀಕಂಠಭಾಷ್ಯವು ನೀಲಕಂಠಭಾಷ್ಯವೆಂದೂ ಕರೆಯಲ್ಪಡುತ್ತಿದ್ದುದಕ್ಕೆ ಸಾಕಾದಷ್ಟು ಆಧಾರಗಳಿವೆ. ಆದುದರಿಂದ ಈ ಎರಡು ಹೆಸರುಗಳಿಂದಲೂ ಕರೆಯಲ್ಪಡುತ್ತಿರುವ ಭಾಷ್ಯಕಾರರು ಒಬ್ಬರೇ ಎಂಬುದರಲ್ಲಿ ಸಂಶಯವಿಲ್ಲ. ಇಂದೂ ಮಾನ್ಯ ರಾಧಾಕೃಷ್ಣನ್‌ರವರು 'ನೀಲಕಂಠ' ಎಂಬ ಹೆಸರಿನಿಂದಲೇ ಈ ಭಾಷ್ಯಕಾರರನ್ನು ಕರೆದಿದ್ದಾರೆ. ಅಪ್ಪಯ್ಯದೀಕ್ಷಿತರು ಇವರನ್ನು ಶ್ರೀಕಂಠ ಶಿವಾಚಾರ್ಯರೆಂದು ಕರೆದಿರುವರು; ಆದರೆ ತಮಿಳು ಗ್ರಂಥಗಳಲ್ಲಿ ಇವರನ್ನು ನೀಲಕಂಠರೆಂದು ಕರೆದಿರುವುದೇ ಹೆಚ್ಚು; ನಿರ್ಮಲಮಣಿಪ್ರಭಾದಲ್ಲಿ ಇವರನ್ನು 'ಭಗವಾನ್ ನೀಲಕಂಠ ಆಚಾರ್ಯ' ಎಂದು ಕರೆಯಲಾಗಿದೆ. ಉಮಾಪತಿಯ ಪೌಷ್ಕರ ಭಾಷ್ಯದಲ್ಲಿ ಈ ಭಾಷ್ಯಕಾರರನ್ನು ನೀಲಕಂಠ ಆಚಾರ್ಯರೆಂದೂ ಇವರ ಭಾಷ್ಯವನ್ನು ಶ್ರೀಕಂಠಭಾಷ್ಯವೆಂದೂ ಕರೆಯಲಾಗಿದೆ. ಶ್ರೀಕಂಠಭಾಷ್ಯ, ನೀಲಕಂಠಭಾಷ್ಯ ಎಂದು ಕರೆಯಲ್ಪಡುತ್ತಿರುವ ಭಾಷ್ಯವು ಒಂದೇ, ಅದರ ಭಾಷ್ಯಕಾರರು ಒಬ್ಬರೇ, ಎಂಬುದನ್ನು ಶ್ರೀಕರಭಾಷ್ಯದಿಂದ ಸ್ಪಷ್ಟಮಾಡಬಹುದು. ಶ್ರೀಕರಭಾಷ್ಯದ 'ಉತ್ಪತ್ತೇರಸಂಭವಾತ್' (೨-೨-೪೨) ಎಂಬ ಸೂತ್ರದ ಭಾಷ್ಯದಲ್ಲಿ ಹೀಗೆ ಹೇಳಿದೆ: "ನಾರಾಯಣಸ್ಯ ಸೂರ್ಯಮಂಡಲಾಂತರ್ವರ್ತಿತ್ವನಿರ್ದೇಶಾತ್ ಭರ್ಗಶಬ್ದವಾಚ್ಯತ್ವಂ ತಸ್ಯೈವೇತಿ ಚೇನ್ನ, ಅಂತಸ್ತದ್ಧರ್ಮೋಪದೇಶಾಧಿಕರಣೇ ತನ್ನಿರಾಕೃತಂ ನೀಲಕಂಠಭಾಷ್ಯೇ······ಕಪ್ಯಾಸಮಿತಿ ಮಂತ್ರೇ ಕಮುದಕಂ ಕಿರಣೈಃ ಪಿಬತೀತಿ ಕಪಿಃ ಸೂರ್ಯಃ ತೇನ ಅಸಿತಂ ವಿಕಸಿತಂ ಪುಂಡರೀಕಮಿವೇತ್ಯನೇನ ತೃತೀಯಲೋಚನಸ್ಯ ಮುಕುಲೀಕೃತತ್ವಮರ್ಥಾತ್ ಸಿದ್ಧಮಿತಿ ಬಹುಧಾ ನಿರೂಪಿತಂ" ಎಂದು ಹೇಳಿದೆ. ಇನ್ನು ಇಲ್ಲಿ ಹೇಳಿದ ಆಧಾರವನ್ನು ಶ್ರೀಕಂಠಭಾಷ್ಯದ 'ಅಂತಸ್ತದ್ಧರ್ಮೋಪದೇಶಾತ್' (೧-೧-೨೧) ಎಂಬ ಸೂತ್ರಭಾಷ್ಯದಲ್ಲಿ ನೋಡಬಹುದು; ಅದು ಹೀಗಿದೆ: ಕಂ ಉದಕಂ ರಶ್ಮಿಭಿಃ ಪಿಬತೀತಿ ಕಪಿರಾದಿತ್ಯಃ; ತೇನಾಸಿತಂ ವಿಕಸಿತಂ ಪುಂಡರೀಕಂ ಯಥಾ ಸ್ಫುರತಿ ತಥಾ ಪರಮೇಶ್ವರಸ್ಯ ಲೋಚನದ್ವಯಂ। ತೃತೀಯ ಲೋಚನಂ ತು ಮುಕುಲಿತಸ್ವಭಾವಂ ವಿಕಸಿತಪುಂಡರೀಕಸದೃಶಂ ನ ಭವತಿ." ಛಾಂದೋಗ್ಯೋಪನಿಷತ್ತಿನಲ್ಲಿನ "ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ" ಎಂಬ ಮಂತ್ರಭಾಗವು ತ್ರಿನೇತ್ರನಾದ ಪರಮೇಶ್ವರನಿಗೆ ಅನ್ವಯಿಸುವುದೆಂದು ಶ್ರೀಕಂಠಭಾಷ್ಯದಲ್ಲಿ ಸಿದ್ಧಾಂತಮಾಡಿದೆ. ಅಕ್ಷಿಣೀ ಎಂಬ ಪದವು ದ್ವಿವಚನವಾದುದರಿಂದ ತ್ರಿನೇತ್ರನಾದ ಶಿವನಿಗೆ ಈ ಮಂತ್ರಭಾಗವು ಹೇಗೆ ಅನ್ವಯಿಸುವುದು ಎಂಬ ಪ್ರಶ್ನೆಯು ಏಳುವುದು. ಕಪ್ಯಾಸಂ ಎಂಬುದರಲ್ಲಿನ ಕಪಿ ಎಂದರೆ ಸೂರ್ಯ (ಕಂ=ನೀರನ್ನು ಪಿ=ಕಿರಣಗಳಿಂದ ಕುಡಿಯುವವನು); ಕಪ್ಯಾಸಂ ಪುಂಡರೀಕಂ ಎಂದರೆ ಸೂರ್ಯನಿಂದ ವಿಕಸಿತವಾದ ತಾವರೆ; ಇಂತಹ ಕಣ್ಣುಗಳು ಶಿವನಿಗಿರುವುದು ಎರಡೇ; ಏಕೆಂದರೆ ಮೂರನೆಯ ನೇತ್ರವು ವಿಕಸಿತವಾಗಿರುವುದಿಲ್ಲ. 'ಕಪ್ಯಾಸಂ' ಎಂದು ಮೊದಲಾಗುವ ಮಂತ್ರಕ್ಕೆ ಈ ರೀತಿ ಶಿವಪರವಾಗಿ ನೀಲಕಂಠಭಾಷ್ಯದಲ್ಲಿ ಅರ್ಥಮಾಡಿದೆ

ಯೆಂದು ಶ್ರೀಪತಿ ಪಂಡಿತರು ಹೇಳಿದ್ದಾರೆ. ಈ ರೀತಿ ಅರ್ಥಮಾಡಿರುವುದು ಶ್ರೀಕಂಠಭಾಷ್ಯ ದಲ್ಲಿ ಎಂದು ಮೇಲೆ ತೋರಿಸಿದೆ. ಆದುದರಿಂದ ನೀಲಕಂಠಭಾಷ್ಯವೂ ಶ್ರೀಕಂಠಭಾಷ್ಯವೂ ಒಂದೇ ಎಂದಾಯಿತು. ಈ ತೆರದ ಭಾಷ್ಯವನ್ನೊಳಗೊಂಡ ಪ್ರಥಮಾಧ್ಯಾಯಾಂತ್ಯದಲ್ಲಿ "ಇತಿ ಶ್ರೀಕಂಠ ಶಿವಾಚಾರ್ಯವಿರಚಿತೇ ಬ್ರಹ್ಮಮೀಮಾಂಸಾಭಾಷ್ಯೇ ಪ್ರಥಮಸ್ಯಾಧ್ಯಾಯಸ್ಯ ಪ್ರಥಮಃ ಪಾದಃ" ಎಂದಿದೆ. ಹೀಗೆ ಈ ಶ್ರೀಕಂಠ ಶಿವಾಚಾರ್ಯವಿರಚಿತ ಬ್ರಹ್ಮಸೂತ್ರ ಮೀಮಾಂಸಾ ಭಾಷ್ಯವನ್ನು ನೀಲಕಂಠಭಾಷ್ಯವೆಂದು ಶ್ರೀಕರಭಾಷ್ಯದಲ್ಲಿ ಕರೆದಿರುವುದರಿಂದ ಶ್ರೀಕಂಠ ಶಿವಾಚಾರ್ಯರಿಗೆ ನೀಲಕಂಠ ಶಿವಾಚಾರ್ಯರೆಂಬ ಹೆಸರಿದ್ದುದೂ ಅವರ ಭಾಷ್ಯವು ಶ್ರೀಕಂಠಭಾಷ್ಯವೆಂದೂ ನೀಲಕಂಠಭಾಷ್ಯವೆಂದೂ ಕರೆಯಲ್ಪಡುತ್ತಿದ್ದುದೂ ಶ್ರೀಪತಿ ಪಂಡಿತ ರಿಗೂ ತಿಳಿದಿದ್ದಿತೆಂಬುದು ಸಹಾ ಸ್ಪಷ್ಟವಾದ ವಿಷಯ.

ಶ್ರೀಕರಭಾಷ್ಯದಲ್ಲಿಯೇ '**ಅಧಿಕಂ ತು ಭೇದ ನಿರ್ದೇಶಾತ್**' ಎಂಬ ಸೂತ್ರ ಭಾಷ್ಯದಲ್ಲಿ ಶ್ರೀಕಂಠ ಶಿವಾಚಾರ್ಯರ ಭಾಷ್ಯ ವಿಷಯದಲ್ಲಿ "**ಶೈವಾಗ್ರಗಣ್ಯ ಶ್ರೀಕಂಠ ಶಿವಾರಾಧ್ಯಕೃತ ಬ್ರಹ್ಮಮೀಮಾಂಸಾ ಭಾಷ್ಯೇ ವಿಶಿಷ್ಟಾದ್ವೈತಂ ಸ್ವಾಭಿಪ್ರೇತತ್ವೇನ ಪ್ರಸಾದಿತಂ**" ಎಂದು ಹೇಳಿದೆ. ಆ ಶ್ರೀಕರಭಾಷ್ಯದ ೨-೨-೮ನೆಯ ಸೂತ್ರ ಭಾಷ್ಯದಲ್ಲಿ ಶ್ರೀಕಂಠ ಭಾಷ್ಯಕಾರರನ್ನು ಶಿವಾಚಾರ್ಯರೆಂದು ಕರೆಯಲಾಗಿದೆ. ಶ್ರೀಪತಿ ಪಂಡಿತರಿಗೂ ಶ್ರೀಪತಿ ಪಂಡಿತಾರಾಧ್ಯರೆಂಬ ಹೆಸರೂ ಇದೆ. ಶ್ರೀಪತಿ ಪಂಡಿತರು ಶ್ರೀಕಂಠ ಶಿವಾಚಾರ್ಯರು ಉಪಯೋಗಿಸಿರುವ 'ವಿಶಿಷ್ಟಾದ್ವೈತ' ಎಂಬ ಪದದ ಔಚಿತ್ಯವನ್ನು ಒಪ್ಪದೇ ಹೋದರೂ ಅವರನ್ನು ಗೌರವದಿಂದ '**ಶೈವಾಗ್ರಗಣ್ಯ ಶ್ರೀಕಂಠ ಶಿವಾರಾಧ್ಯ**' ಎಂದೂ '**ಶಿವಾಚಾರ್ಯ**' ಎಂದೂ ಕರೆದಿರು ವುದನ್ನು ನೋಡಿದರೆ ಶ್ರೀಕಂಠ ಶಿವಾಚಾರ್ಯರಾದರೂ ಶ್ರೀಪತಿ ಪಂಡಿತರಂತೆ ವೀರಶೈವರಲ್ಲಿ ಆರಾಧ್ಯ ಪಂಗಡಕ್ಕೆ ಸೇರಿದವರೆಂದು ತಿಳಿದುಬರುವುದು. ಕೆಲವು ವೇಳೆ, ಸ್ವಜನ ಪಂಡಿತರಲ್ಲಿಯೂ ಸ್ವಲ್ಪಮಟ್ಟಿಗೆ ಭಿನ್ನಾಭಿಪ್ರಾಯಗಳಿರುವ ರೀತಿಯಲ್ಲಿ ಭಿನ್ನಾಭಿಪ್ರಾಯವು ಶ್ರೀಪತಿ ಪಂಡಿತರಿಗೂ ಶ್ರೀಕಂಠ ಶಿವಾಚಾರ್ಯರಿಗೂ ಇದ್ದಿತಾದರೂ ಶ್ರೀಪತಿ ಪಂಡಿತರು ಶ್ರೀಕಂಠ ಶಿವಾಚಾರ್ಯರನ್ನು "**ಶೈವಾಗ್ರಗಣ್ಯ ಶ್ರೀಕಂಠ ಶಿವಾರಾಧ್ಯ**" ಎಂದು ಕರೆದಿರುವುದನ್ನು ನೋಡಿದರೆ ಇಬ್ಬರೂ ಒಂದೇ ಮತದವರೆಂಬ ವಿಷಯದಲ್ಲಿ ಸಂದೇಹಕ್ಕೆ ಕಾರಣವು ಉಳಿಯುವುದಿಲ್ಲ. ಶ್ರೀಯುತ ಹಯವದನರಾಯರ ಶ್ರೀಕರಭಾಷ್ಯದ ಮುನ್ನುಡಿಯಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿ ದ್ದಾರೆ. "The change from Srikantha Sivaradhya to Srikantha Sivacharya should be noted. The former designation would seem to indicate his being claimed as Veerasaiva by Sripati." ಶ್ರೀಪತಿ ಪಂಡಿತರಂತಹ ಆಚಾರ್ಯ ಪುರುಷರು ತಮ್ಮ ಭಾಷ್ಯವನ್ನು ಬರೆಯುವಾಗ ವೀರಶೈವರಲ್ಲದವರನ್ನು ವೀರಶೈವರು ಎಂದು ಕರೆದು ಕೊಳ್ಳುವಷ್ಟು ದೂರ ಹೋಗುವವರಲ್ಲ. ಅಲ್ಲದೆ, ಅವರು ಹಿಂದೆ ತೋರಿಸಿದಂತೆ ಶ್ರೀಕಂಠ ಭಾಷ್ಯದಲ್ಲಿ ಹೇಳಿರುವ ಆಧಾರವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಆದುದರಿಂದ ಶ್ರೀಪತಿ ಪಂಡಿತರು ಶ್ರೀಕಂಠ ಶಿವಾಚಾರ್ಯರನ್ನು ತಮ್ಮಂತೆ ವೀರಶೈವ ಆರಾಧ್ಯ ಬ್ರಾಹ್ಮಣರೆಂದೇ ತಿಳಿದಿದ್ದರು ಎಂಬುದು ಸ್ಪಷ್ಟ.

ಶ್ರೀಪತಿ ಪಂಡಿತರಂತೆಯೇ, ಇತರ ಆಚಾರ್ಯರೂ ಶ್ರೀಕಂಠ ಶಿವಾಚಾರ್ಯರನ್ನು ವೀರಶೈವರೆಂದೇ ತಿಳಿದಿದ್ದರು. ಸುಮಾರು ೧೪ನೆಯ ಶತಮಾನದಲ್ಲಿ ಬರೆಯಲ್ಪಟ್ಟ ಕ್ರಿಯಾ

ಸಾರವು, ಸಿದ್ಧಾಂತ ಶಿಖಾಮಣಿಯಂತೆ ವೀರಶೈವರಿಗೆ ಆಧಾರ ಗ್ರಂಥವಾಗಿದೆ. ಈ ಕ್ರಿಯಾ ಸಾರವನ್ನು ಬರೆದವರ ಹೆಸರೂ ನೀಲಕಂಠ ಶಿವಾಚಾರ್ಯ ಎಂಬುದೇ. ಇವರು ಶೈವವಿಶಿಷ್ಟಾದ್ವೈತ ಸಿದ್ಧಾಂತವೆಂದೂ ಪ್ರಸಿದ್ಧವಾದ ಶ್ರೀಕಂಠಭಾಷ್ಯವನ್ನು ಬರೆದ, ನೀಲಕಂಠ ಶಿವಾಚಾರ್ಯರೆಂದೂ ಪ್ರಸಿದ್ಧರಾದ ಶ್ರೀಕಂಠ ಶಿವಾಚಾರ್ಯರನ್ನು ವೀರಶೈವರೆಂದೂ ಅವರ ಭಾಷ್ಯವು ವೀರಶೈವ ಭಾಷ್ಯವೆಂದೂ ತಿಳಿದುಕೊಂಡಿದ್ದರು. ಕ್ರಿಯಾಸಾರವು ಶ್ರೀಕಂಠಭಾಷ್ಯದ ಕಾರಿಕೆಯೆಂದು ಹೇಳಿಕೊಂಡಿದ್ದಾರೆ. ಶ್ರೀಕಂಠಭಾಷ್ಯವನ್ನು ನೀಲಕಂಠಭಾಷ್ಯವೆಂದೇ ಕರೆದಿದ್ದಾರೆ; ಕ್ರಿಯಾ ಸಾರದ ಮೊದಲ ಉಪದೇಶದಲ್ಲಿ ಹೀಗೆ ಹೇಳಿದೆ:

ನೀಲಕಂಠ ಶಿವಾಚಾರ್ಯ ನಾಮ್ನಾ ಭಾಷ್ಯಮಚೀಕರತ್ ।
ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನಮುತ್ತಮಂ ॥ ೩೨ ॥

ಮಯಾಪಿ ತಸ್ಯ ತಾತ್ಪರ್ಯಂ ಶ್ರೋತೄಣಾಂ ಸುಖಬುದ್ಧಯೇ ।
ಕಾರಿಕಾರೂಪತಃ ಸರ್ವಂ ಕ್ರಮೇಣೈವ ನಿಬಧ್ಯತೇ ॥ ೩೩ ॥

ತಲ್ಲಿಂಗಮೇವ ಸೂತ್ರೇಷು ವ್ಯಾಸೇನಾಪಿ ವಿಚಾರಿತಂ ।
ನೀಲಕಂಠ ಶಿವಾಚಾರ್ಯೈಸ್ತತ್ತಾತ್ಪರ್ಯಂ ಪ್ರಕಾಶಿತಂ ॥ ೫೩ ॥

ತಸ್ಮಾಚ್ಛಕ್ತಿ ವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಸ್ಸ್ಫುಟಂ ॥ ೯೭ ॥

ನೀಲಕಂಠ ಶಿವಾಚಾರ್ಯ ಭಾಷ್ಯಾರ್ಥಮನುಸಂದಧನ್ ।
ವೀರಶೈವೈರಭಿಮತಮಭಿಧಾಸ್ಯೇ ಶ್ರುತೇರ್ಮತಂ ॥ ೧೦೦ ॥

ಕ್ರಿಯಾಸಾರವನ್ನು ಬರೆದ ನೀಲಕಂಠ ಶಿವಾಚಾರ್ಯರು, ಅವರು ಅನುಸರಿಸಿದ ಭಾಷ್ಯವು ವಿಶಿಷ್ಟಾದ್ವೈತ ಪ್ರತಿಪಾದಕವಾದುದೆಂದೂ ಅದರಲ್ಲಿ ಶಕ್ತಿವಿಶಿಷ್ಟಪರಶಿವಬ್ರಹ್ಮ ವಿಷಯವು ಹೇಳಲ್ಪಟ್ಟಿದೆಯೆಂದೂ ಹೇಳಿದ್ದಾರೆ. ಶಕ್ತಿವಿಶಿಷ್ಟಶಿವನ ವಿಷಯವಾಗಿ ಬರೆದಿರುವ ಶೈವ ವಿಶಿಷ್ಟಾದ್ವೈತವೆಂದು ಕರೆಯಲ್ಪಡುವ ಭಾಷ್ಯವು, ಶ್ರೀಕಂಠಭಾಷ್ಯವೆಂದೂ, ನೀಲಕಂಠ ಭಾಷ್ಯವೆಂದೂ ಕರೆಯಲ್ಪಡುವ ಶ್ರೀಕಂಠ ಶಿವಾಚಾರ್ಯರ ಭಾಷ್ಯವಲ್ಲದೆ ಮತ್ತಾವುದೂ ಇಲ್ಲ. ಕ್ರಿಯಾಸಾರವು ಈ ಶೈವವಿಶಿಷ್ಟಾದ್ವೈತಭಾಷ್ಯದ ಕಾರಿಕೆಯೆಂದು ಕರೆಯಲ್ಪಡುವುದರಿಂದ ಅದು ಪ್ರತಿಪಾದಿಸುವ ವೀರಶೈವ ಸಿದ್ಧಾಂತವನ್ನು ವಿಶಿಷ್ಟಾದ್ವೈತ ಸಿದ್ಧಾಂತವೆಂದೇ ಅದರಲ್ಲಿ ಕರೆಯಲಾಗಿದೆ. ಈ ಭಾಷ್ಯವನ್ನು ವೀರಶೈವಭಾಷ್ಯವೆಂದೂ, ಭಾಷ್ಯಕಾರರನ್ನು ವೀರಶೈವ ರೆಂದೂ, ಕ್ರಿಯಾಸಾರದ ಗ್ರಂಥಕರ್ತೃಗಳೂ, ಅದನ್ನು ಈಚೆಗೆ ಮುದ್ರಿಸಿದವರೂ ಪರಿಭಾವಿ ಸಿರುವರೆಂಬುದರಲ್ಲಿ ಸಂದೇಹವೇ ಇಲ್ಲ. ಶ್ರೀಯುತ ಹಯವದನರಾಯರು ಶ್ರೀಕರಭಾಷ್ಯದ ಮುನ್ನುಡಿಯ ೩೬ ನೇ ಪುಟದಲ್ಲಿ ಹೇಳಿದಂತೆ:

It is strange, however, that in the colophons appearing in *Kriasara*, in the M.S. copies of this work as found in the Madras Oriental M.S.S. Library ....and as printed in the Telugu script edition published by Mr. Veerasangappa, at the Mysore Sarada Press, in the year Tarana, the work is described as that of the teacher Neelakantha who possessed the secret of the doctrine of *Ekoththara Sathsthala* of the Vishishtadvaita philosophy. A possible explanation is that the reference here is to *Saiva Vishishtadvaita* and not to Vaishnava or Ramanuja's *Vishishtadvaita* philosophy, for the

*Ekoththara Sathsthala* doctrine is not part of the latter's *Vishishtadvaita* philosophy. The Veerasaiva stand-point, though described by Neelakantha in his colophons as *Vishishtadvaita*, evidently following Srikantha who called his system Siva Vishishtadvaita, is also plainly called by him *Bhedabheda* which is in keeping with the Veerasaiva stand-point as propounded by Sripati in his *Bhashya*.

ಹೀಗೆ ಶ್ರೀಕರಭಾಷ್ಯಕಾರರಾದ ಶ್ರೀಪತಿ ಪಂಡಿತರಿಂದಲೂ, ಕ್ರಿಯಾಸಾರ ಗ್ರಂಥಕರ್ತೃಗಳಾದ ನೀಲಕಂಠ ಶಿವಾಚಾರ್ಯರಿಂದಲೂ ಶ್ರೀಕಂಠ ಶಿವಾಚಾರ್ಯರು ವೀರಶೈವರೆಂದೇ ಪರಿಗಣಿಸಲ್ಪಟ್ಟಿರುವರಲ್ಲದೆ ವೀರಶೈವ ಶಿವಯೋಗಿಗಳಾದ ನಿಜಗುಣ ಶಿವಯೋಗಿಗಳಿಂದಲೂ ಅವರು ವೀರಶೈವರೆಂದೇ ಪರಿಗಣಿಸಲ್ಪಟ್ಟಿರುವರೆಂದು ತಿಳಿಯಲು ಅವಕಾಶವಿದೆ. ನಿಜಗುಣ ಶಿವಯೋಗಿಗಳ "ತಾರಾವಳಿಯು" ಶ್ರೀಕಂಠಭಾಷ್ಯದ ಮೇಲೆ ಬರೆದ ವ್ಯಾಖ್ಯಾನವೆಂದು ತಿಳಿದುಬಂದಿರುವುದಾಗಿ ಶ್ರೀಯುತ ಸೂರ್ಯನಾರಾಯಣ ಶಾಸ್ತ್ರಿಗಳು ಅವರ ಶ್ರೀಕಂಠನ ಶಿವಾದ್ವೈತವೆಂಬ ಗ್ರಂಥದಲ್ಲಿ ಬರೆದಿರುವುದನ್ನು ನೋಡಿದರೆ ನಿಜಗುಣ ಶಿವಯೋಗಿಗಳು ಶ್ರೀಕಂಠ ಶಿವಾಚಾರ್ಯರನ್ನು ವೀರಶೈವರೆಂದೇ ತಿಳಿದಿರಬೇಕೆನ್ನಿಸುತ್ತದೆ. "**ವೇದ ವೇದಾಂತಾಗಮ ಪುರಾಣಂಗಳಲ್ಲಿ ಸಾರತರವೆನಿಸಿದ ರಹಸ್ಯಾರ್ಥ ಪ್ರತಿಪಾದಕವಾದ ವೀರಶೈವ ಮಾರ್ಗದಿಂ ಲಿಂಗಾಂಗ ಸಂಬಂಧಿಗಳಾದ ಷಟ್‌ಸ್ಥಲ ಜ್ಞಾನಿಗಳಿಗೆ ಸರ್ವೋತ್ಕೃಷ್ಟವಾದ ಅವಿರಳ ಶಿವೈಕ್ಯಪ್ರಾಪ್ತಿ**" ಎಂದು ಸಾರಿದ ವೀರಶೈವ ಯತಿವರ್ಯರಾದ ನಿಜಗುಣ ಶಿವಯೋಗಿಗಳು ಅವರ ಗ್ರಂಥದಲ್ಲ ಮುದ್ರಿಸಲ್ಪಟ್ಟಿರುವ ಕೆಲವು ಗ್ರಂಥಗಳ ಉಲ್ಲೇಖವಿರುವುದರಿಂದ ೧೫ನೆಯ ಶತಮಾನದವರೆಂದು ಕವಿಚರಿತ್ರೆಯಲ್ಲಿ ಭಾವಿಸಲ್ಪಟ್ಟಿದ್ದರೂ, ಆ ಗ್ರಂಥಗಳ ಹೆಸರನ್ನು ಹೊಸದಾಗಿ ಸೇರಿಸಲ್ಪಟ್ಟವೆಯೆಂದು ತಾಡವಾಲೆ ಗ್ರಂಥಗಳಿಂದ ತಿಳಿದುಬಂದು ಅವರು ಹದಿಮೂರನೆಯ ಶತಮಾನದವರಾದರೂ ಆಗಿರಬೇಕೆಂದು ಗೊತ್ತಾಗಿದೆ. ಶ್ರೀಕಂಠಭಾಷ್ಯ ಸಮರ್ಥಗ್ರಂಥವನ್ನು ಬರೆದ ಹರದತ್ತಾಚಾರ್ಯರ ವಿಷಯದಲ್ಲಿ ಶ್ರೀ ಸೂರ್ಯನಾರಾಯಣರು 'Haradatta presents many close parallels to Sreekantha's' ಎಂದು ಹೇಳಿದ್ದಾರೆ. ಶ್ರೀಕಂಠ ಶಿವಾಚಾರ್ಯರ ಶಿಷ್ಯರೆಂದು ಶಂಕರ ದಿಗ್ವಿಜಯದಲ್ಲಿ ಹೇಳಲ್ಪಟ್ಟಿರುವ ಈ ಹರದತ್ತಾಚಾರ್ಯರ 'ಚತುರ್ವೇದ ತಾತ್ಪರ್ಯ ಸಂಗ್ರಹ'ದ ಮೇಲೆ 'ಗಿರೀಶಸೂಕ್ತಿಮಾಲಾ' ಎಂಬ ಭಾಷ್ಯವನ್ನು ಬರೆದ ಶಿವಲಿಂಗ ಭೂಪತಿಯು ವೀರಶೈವನು (ವೀರಶೈವ ತ್ರೈಮಾಸಿಕ, ೧೯೬೧ ಡಿಶೆಂಬರ್ ಸಂಚಿಕೆ, ಪುಟ ೧೨).

ಇಂದೂ ವೀರಶೈವ ಗುರುಪೀಠದ ಶಿವಾಚಾರ್ಯರುಗಳು ಹಿಂದಿನ ಶಿವಾಚಾರ್ಯರಂತೆಯೇ, ಶ್ರೀಕಂಠ ಶಿವಾಚಾರ್ಯರು ವೀರಶೈವರೆಂದೇ ಭಾವಿಸಿದ್ದಾರೆ. 'ವಿಭೂತಿ'ಯಲ್ಲಿ ಸೂರ್ಯ ಸಿಂಹಾಸನಾಧೀಶ್ವರ ಜಗದ್ಗುರು ನಿಡುಮಾಮಡಿ ಶ್ರೀಯವರು ಹೀಗೆ ಹೇಳಿದ್ದಾರೆ:

"ನೀಲಕಂಠ ಶಿವಾಚಾರ್ಯರು: ಇವರು ಪ್ರಸಿದ್ಧ ಭಾಷ್ಯಕಾರರು. ಶಿವಾದ್ವೈತ ಸಿದ್ಧಾಂತ ಪರವಾಗಿ ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದಿದ್ದಾರೆ. ಇವರಿಗೆ ಶ್ರೀಕಂಠ ಶಿವಾಚಾರ್ಯರೆಂತಲೂ ಇನ್ನೊಂದು ಹೆಸರಿದೆ. ಶಂಕರಾಚಾರ್ಯರಿಗಿಂತ ಪೂರ್ವ; ಸುಮಾರು ಏಳನೆಯ ಶತಮಾನ. ಇವರ ವಿಷಯದಲ್ಲಿ ಶ್ರೀ ವೆಂಕಟಲಕ್ಷ್ಮಣರಾವ್, ಎಂ.ಎ., ಅವರು ರಚಿಸಿದ 'ಹಿಂದೂದೇಶ ಕಥಾಸಂಗ್ರಹ ಹಿಂದೂ ಮಹಾಯುಗ'ವೆಂಬ ಗ್ರಂಥದ ಪುಟ ೪ರಲ್ಲಿ ಶಂಕರರಾಮಾನುಜ

ಮಾಧ್ವ ಭಾಷ್ಯಗಳಿಗೆ ಮುನ್ನವೇ ನೀಲಕಂಠಭಾಷ್ಯವನ್ನು ರಚಿಸಿದ್ದರು ಎಂದು ಹೇಳಿದ್ದಾರೆ. ....ಶ್ರೀ ಜೆ. ಎಂ. ನಲ್ಲಸ್ವಾಮಿ ಪಿಳ್ಳೆಯವರು ಸಹಾ ಶ್ರೀ ಶಂಕರಾಚಾರ್ಯರಿಗೆ ಸ್ವಲ್ಪ ಹಿಂದೆ ನೀಲಕಂಠ ಶಿವಾಚಾರ್ಯರಿದ್ದರೆಂದು ಹೇಳಿದ್ದಾರೆ." *Sri Shankaracharya and His Mission* ಎಂಬ ಗ್ರಂಥದ ೬೦ನೆಯ ಪುಟದಲ್ಲಿ ಗ್ರಂಥಕರ್ತೃಗಳಾದ ಶ್ರೀ ಎಸ್. ಶ್ರೀಕಂಠಯ್ಯನವರು, ನೀಲಕಂಠ ಶಿವಾಚಾರ್ಯರೆಂಬ ವೀರಶೈವ ಭಾಷ್ಯಕಾರರ ಶಿಷ್ಯರಾದ ಹರದತ್ತಾಚಾರ್ಯರೊಡನೆ ಗೋಕರ್ಣದಲ್ಲಿ ಶ್ರೀ ಶಂಕರಾಚಾರ್ಯರು ವಾದಮಾಡಿ ಅವರನ್ನು ಅದ್ವೈತಿಗಳನ್ನಾಗಿ ಮಾಡಿದರೆಂದು ಹೇಳಿದ್ದಾರೆ. ಹೀಗೆ ಸುಮಾರು ಏಳು ಶತಮಾನಗಳಿಂದ ಇಂದಿನವರೆಗೂ ವೀರಶೈವ ಭಾಷ್ಯಕಾರರೆಂದೇ ವೀರಶೈವಯತಿಗಳಿಂದ ಗೌರವಿಸಲ್ಪಟ್ಟಿರುವ ಶ್ರೀಕಂಠ ಶಿವಾಚಾರ್ಯರು ವೀರಶೈವರಲ್ಲವಾಗಿದ್ದರೆ ಹಾಗೆ ಇಷ್ಟು ದೀರ್ಘಕಾಲದಿಂದಲೂ ವೀರಶೈವರೆಂದು ಪರಿಭಾವಿಸಲ್ಪಡುತ್ತಿರಲಿಲ್ಲ. ಆದರೂ ಅವರ ಭಾಷ್ಯವು ಶೈವ ಸಿದ್ಧಾಂತಗಳಲ್ಲಿ ಯಾವ ಸಿದ್ಧಾಂತಕ್ಕೆ ಸರಿಹೋಗುತ್ತದೆಂದು ವಿಚಾರಮಾಡುವುದರಿಂದ ಅವರ ಮತವೇನೆಂಬುದನ್ನು ನಿರ್ಧರಿಸಬೇಕಾಗುವುದು. ಕಾಳಾಮುಖರನ್ನೊಳಗೊಂಡ ಪಾಶುಪತರು, ತಮಿಳುದೇಶದ ಶೈವ ಸಿದ್ಧಾಂತದವರು, ಕಾಶ್ಮೀರಶೈವದವರು, ವೀರಶೈವರು ಅಂದಿನ ಪ್ರಮುಖ ಶೈವಪ್ರಭೇದಗಳವರಾಗಿದ್ದರು. ಇವರುಗಳಲ್ಲಿ ಯಾರ ಸಿದ್ಧಾಂತಕ್ಕೆ ಶ್ರೀಕಂಠಭಾಷ್ಯದ ಸಿದ್ಧಾಂತವು ಹೊಂದುತ್ತದೆಯೋ ಪರೀಕ್ಷಿಸಬೇಕಾಗುವುದು.

ಪಾಶುಪತರು ನ್ಯಾಯವೈಶೇಷಿಕ ಸಿದ್ಧಾಂತಗಳಲ್ಲಿ ಪರಿಣತರಾಗಿದ್ದುದು ಶಿಲಾಶಾಸನಗಳಿಂದ ತಿಳಿದುಬರುವುದರಿಂದ ಅವರ ಸಿದ್ಧಾಂತವು ದ್ವೈತ ಸಿದ್ಧಾಂತವೆನ್ನಬಹುದು. ಪರಶಿವ ಬ್ರಹ್ಮವು ಜಗತ್ತಿಗೆ ನಿಮಿತ್ತಕಾರಣವೇ ಹೊರತು ಉಪಾದಾನ ಕಾರಣವಲ್ಲವೆನ್ನುವ ಮತ ಅವರದು. ಶ್ರೀಕಂಠಭಾಷ್ಯದ ೨-೨-೩೮ನೆಯ ಸೂತ್ರ ಭಾಷ್ಯದಲ್ಲಿ "ಪರಮೇಶ್ವರಸ್ಯ ಜಗದುಭಯಕಾರಣತ್ವಮಿತ್ಯನವದ್ಯಂ" ಎಂದು ಜಗದುಭಯಕಾರಣವನ್ನು ಆಧಾರಗಳಿಂದ ಸಿದ್ಧಾಂತ ಮಾಡಿರುವುದರಿಂದ ಶ್ರೀಕಂಠ ಶಿವಾಚಾರ್ಯರು, ಪರಶಿವಬ್ರಹ್ಮವು ನಿಮಿತ್ತಕಾರಣವೇ ಹೊರತು, ಉಪಾದಾನಕಾರಣವಲ್ಲ ಎನ್ನುವುದನ್ನು ಒಪ್ಪುವರಲ್ಲವಾಗಿ ಇವರು ಪಾಶುಪತರಲ್ಲ. "ಶಿವಾಗಮೈಕದೇಶೇ ಶಿವಸ್ಯ ಪರಬ್ರಹ್ಮಣಃ ಕೇವಲ ನಿಮಿತ್ತತ್ವಮುಪಪಾದಿತಂ। ತತ್ ಪರಿಹಾರಾರ್ಥಮಿದಮಧಿಕರಣಮಿತಿ ಪೂರ್ವಾಚಾರ್ಯಾಣಾಂ ವ್ಯಾಖ್ಯಾ" ಎಂದು, ಮೇಲೆ ಹೇಳಿರುವುದರ ಮುಂದೆಯೇ ಶ್ರೀಕಂಠ ಶಿವಾಚಾರ್ಯರು ಹೇಳಿರುವುದು, ಪರಶಿವ ಬ್ರಹ್ಮವು ಕೇವಲ ನಿಮಿತ್ತ ಕಾರಣವೆನ್ನುವ ಪಾಶುಪತ ಮತದವರನ್ನು ಕುರಿತು ಹೇಳಿದುದಾಗಿರಬೇಕು. ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಅವರ ಪೂರ್ವೋಕ್ತ ಗ್ರಂಥದ ೧೯ನೆಯ ಪುಟದಲ್ಲಿ ಪಾಶುಪತಮತ ವಿಷಯವಾಗಿ ಹೇಳುತ್ತ Between that system and Srikantha, there are significant points of difference ಎಂದಿದ್ದಾರೆ. ಆದುದರಿಂದ ಶ್ರೀಕಂಠ ಶಿವಾಚಾರ್ಯರು ಪಾಶುಪತ ಧರ್ಮದವರಲ್ಲವೆಂದಾಯಿತು.

ಪರಶಿವಾಭಿನ್ನವಾದ ಶಕ್ತಿಯಿಂದಲೇ ಚಿದಚಿತ್ ಪ್ರಪಂಚಗಳಾಗುವುವೆಂಬ ಶ್ರೀಕಂಠ ಶಿವಾಚಾರ್ಯರ ಹಾಗೂ ವೀರಶೈವರ ನಿಲುವನ್ನು ಎಂದರೆ ಪರಶಿವನು ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನಕಾರಣನೆಂಬುದನ್ನು ಒಪ್ಪದ ತಮಿಳುದೇಶದ ಶೈವಸಿದ್ಧಾಂತದ ವಿಷಯದಲ್ಲೂ ಮೇಲೆ ಹೇಳಿದ ಮಾತು ಅನ್ವಯಿಸುವುದು. ಆದರೂ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು

ತಮ್ಮ ಸಿದ್ಧಾಂತವೆಂದೇ ಶೈವಸಿದ್ಧಾಂತದವರಲ್ಲಿ ಕೆಲವರು ಹೇಳುವುದರಿಂದ ಈ ವಿಷಯವನ್ನು ಹೆಚ್ಚು ವಿಚಾರಮಾಡಬೇಕಾಗುವುದು. ವೀರಶೈವ ಸಿದ್ಧಾಂತದಂತೆಯೂ ಶ್ರೀಕಂಠ ಸಿದ್ಧಾಂತ ದಂತೆಯೂ ಚಿಚ್ಛಕ್ತಿಯಿಂದ ಅಚಿತ್ ಪ್ರಪಂಚವು ಸಹಾ ಹೊರಹೊಮ್ಮುವುದು. ಚಿಚ್ಛಕ್ತಿ ಯಿಂದ ಅಚಿತ್ ಪ್ರಪಂಚವು ಹುಟ್ಟಲಾರದೆಂಬುದೇ ತಮಿಳು ಶೈವಸಿದ್ಧಾಂತದವರ ನಿಲುವು. ಆದುದರಿಂದ ಅವರು ಶಿವಾಧೀನವಾದ ಪರಿಗ್ರಹಶಕ್ತಿಯೇ ಜಗದುಪಾದಾನಕಾರಣವೆಂಬರು. ವೀರಶೈವರ ಸಿದ್ಧಾಂತದಂತೆಯೂ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತದಂತೆಯೂ ಪರಶಿವಬ್ರಹ್ಮ ವೊಂದೇ ಅಂತಿಮ ಸತ್ಯವು; ಆದರೆ ಶೈವಸಿದ್ಧಾಂತದಂತೆ ಪಶುಪತಿ, ಪಶು, ಪಾಶ ಈ ಮೂರು ಅಂತಿಮ ಸತ್ಯವಾದವುಗಳಾಗಿವೆ. ಶರೀರಶರೀರಿ ಸಂಬಂಧದಲ್ಲಿ ಶ್ರೀಕಂಠಶಿವಾದ್ವೈತಕ್ಕೂ ಶೈವಸಿಂದ್ಧಾತಕ್ಕೂ ಇರುವ ವ್ಯತ್ಯಾಸವನ್ನು ಪುಟ 143ರಲ್ಲಿ ತಿಳಿಸಿದೆ. ಶ್ರೀಕಂಠ ಸಿದ್ಧಾಂತದಂತೆ ಜೀವನು ಅಣುವು, ಶೈವಸಿದ್ಧಾಂತದಂತೆ ಜೀವನು ವಿಭುವು. ಶ್ರೀಕಂಠ ಸಿದ್ಧಾಂತವು ಜೀವನ್ಮುಕ್ತಿ ಯನ್ನು ಒಪ್ಪುವುದಿಲ್ಲ. ಜೀವನ್ಮುಕ್ತಿಗೆ ಶೈವಸಿದ್ಧಾಂತದಲ್ಲಿ ಒಪ್ಪಿಗೆಯಿದೆ. ಶ್ರೀಕಂಠ ಸಿದ್ಧಾಂತದಲ್ಲಿ ಅನುಮಾನ ಪ್ರಮಾಣಕ್ಕೆ ಸ್ಥಾನವಿಲ್ಲ; ಶ್ರುತಿಯೊಂದೇ ಪ್ರಮಾಣ. ಶೈವಸಿದ್ಧಾಂತ ದಲ್ಲಿ ಆ ಎರಡಕ್ಕೂ ಎಡೆ ಇದೆ. ಶೈವಸಿದ್ಧಾಂತದಲ್ಲಿ ಹೇಳುವ ಆಣವಮಲವಿಷಯವು ಶ್ರೀಕಂಠ ಸಿದ್ಧಾಂತದಲ್ಲಿ ಎಲ್ಲಿಯೂ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿಲ್ಲ. ಇವೇ ಮೊದಲಾದ ವ್ಯತ್ಯಾಸಗಳು ಶ್ರೀಕಂಠ ಸಿದ್ಧಾಂತಕ್ಕೂ ಶೈವಸಿದ್ಧಾಂತಕ್ಕೂ ಇರುವುದರಿಂದ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ತಮಿಳರ ಶೈವಸಿದ್ಧಾಂತವಲ್ಲ.

ಇನ್ನು ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ಕಾಶ್ಮೀರಶೈವವೇ ಎಂಬ ಪ್ರಶ್ನೆಯು ಏಳುವುದು. ಶ್ರೀಕಂಠ ಶಿವಾಚಾರ್ಯರೂ ಶ್ರೀ ಶಂಕರಾಚಾರ್ಯರೂ ಸಮಕಾಲೀನರಾದರೆ ಆಗ ಕಾಶ್ಮೀರಶೈವವು ಇನ್ನೂ ರೂಪುಗೊಂಡಿರಲಿಲ್ಲವೆನ್ನಬಹುದು. ಆದರೆ ಶ್ರೀಕಂಠ ಶಿವಾಚಾರ್ಯರು ಶ್ರೀರಾಮಾನುಜರ ಕಾಲದವರೆಂಬುದನ್ನು ನಂಬುವವರಿರುವುದರಿಂದ ಶ್ರೀಕಂಠ ಶಿವಾಚಾರ್ಯರು ಕಾಶ್ಮೀರಶೈವದವರೆ ಎಂಬ ಪ್ರಶ್ನೆಯು ವಿಮರ್ಶಾರ್ಹವಾಗಿದೆ. ಸಿದ್ಧಾಂತ ಶಿಖಾಮಣಿಯಲ್ಲಿ

> ಯಸ್ಯೋರ್ಮಿಬುದ್ಬುದಾಭಾಸಃ ಷಟ್‌ತ್ರಿಂಶತ್ ತತ್ತ್ವಸಂಚಯಃ ।
> ನಿರ್ಮಲಂ ಶಿವನಾಮಾನಂ ತಂ ವಂದೇ ಚಿನ್ಮಹೋದಧಿಂ ॥

ಎಂದು ಹೇಳಿರುವಂತೆ ಶಿವಾದಿ ಭೂಮ್ಯಂತವಾದ ಮೂವತ್ತಾರು ತತ್ತ್ವದ ಮಾತು ಶ್ರೀಕಂಠ ಶಿವಾಚಾರ್ಯರ ಭಾಷ್ಯದಲ್ಲಿಯೂ ಬರುವುದು. ಆದರೆ ಶಿವನಿಂದ ಶಕ್ತಿಯು ಹೇಗೆ ಹೊರಹೊಮ್ಮಿತು, ಶಕ್ತಿಯಿಂದ ಸದಾಶಿವತತ್ತ್ವ ಹೇಗೆ ಹೊರಹೊಮ್ಮಿತು, ಇತರ ತತ್ತ್ವಗಳು ಹೇಗೆ ಹೊರಹೊಮ್ಮಿದವು ಎಂಬ ವಿಷಯವಾಗಲೀ, ಅವುಗಳಲ್ಲಿ ಒಂದಕ್ಕೊಂದಕ್ಕಿರುವ ಸಂಬಂಧದ ವಿಷಯವಾಗಲೀ ಕಾಶ್ಮೀರಶೈವಗ್ರಂಥಗಳಲ್ಲಿ ವಿಸ್ತಾರವಾಗಿ ಉಲ್ಲೇಖಿಸಿರುವಂತೆ, ಸಿದ್ಧಾಂತ ಶಿಖಾಮಣಿಯಲ್ಲಾಗಲೀ ಶ್ರೀಕಂಠಭಾಷ್ಯದಲ್ಲಾಗಲೀ ಉಲ್ಲೇಖವಾಗಿರುವುದಿಲ್ಲ. ಶ್ರೀಯುತ ಸೂರ್ಯನಾರಾಯಣ ಶಾಸ್ತ್ರಿಗಳ *Sivadvaita of Srikantha* ಎಂಬ ಗ್ರಂಥದ ೩೦೬ ನೆಯ ಪುಟದಲ್ಲಿ ಹೇಳಿದಂತೆ: "That Srikantha recognized the thirty-six Tattvas can apparently be known only by referring to his quotations of the Puranic text '*Saktyadi ca prthivyantam Siva-tattva samudbhavam*'. Whenever this text is quoted, it will be found that the commentator is interested not in the number or nature of the categories, but in the relation between Siva

and Sakti and the pervasion of the world by the First Cause as mud pots by mud." ಕಾಶ್ಮೀರಶೈವದಲ್ಲಿ ಪ್ರಮುಖ ಸಿದ್ಧಾಂತವಾದ 'ಪ್ರತ್ಯಭಿಜ್ಞೆ'ಯ ವಿಷಯವೇ ಶ್ರೀಕಂಠಶಿವಾದ್ವೈತದಲ್ಲಿ ಕಂಡುಬರುವುದಿಲ್ಲ. ಮೋಕ್ಷಸ್ವರೂಪವಿಷಯದಲ್ಲೂ ಶ್ರೀಕಂಠ ಸಿದ್ಧಾಂತಕ್ಕೂ ಕಾಶ್ಮೀರಶೈವಸಿದ್ಧಾಂತಕ್ಕೂ ವ್ಯತ್ಯಾಸವಿದೆ. ಆದುದರಿಂದ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ಕಾಶ್ಮೀರಶೈವಕ್ಕೆ ಹೊಂದುವುದಿಲ್ಲ.

ಉಳಿದುದು ವೀರಶೈವ ಸಿದ್ಧಾಂತ; ಇದಕ್ಕೆ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ಹೊಂದುವುದೇ ಎಂಬುದನ್ನು ಈಗ ನೋಡಬೇಕಾಗಿದೆ. ಪರಶಿವಾಭಿನ್ನವಾದ ಶಕ್ತಿಯು ಅದ್ವೈತ ವಾದ ಪರಶಿವಬ್ರಹ್ಮದಿಂದ ಹೊರಹೊಮ್ಮಿ ಅದರ ಪರಿಣಾಮದಿಂದ ಚಿದಚಿತ್ ಪ್ರಪಂಚವು ಸೃಷ್ಟಿ ಯಾಗುವುದೆಂಬ ಸಿದ್ಧಾಂತದಲ್ಲಿಯೂ ಲಿಂಗಧಾರಣೆ, ಲಿಂಗಾರಾಧನೆ, ಅಹಂಗ್ರಹೋಪಾಸನಾ ರೂಪವಾದ ಶಿವಯೋಗ ಇವುಗಳಿಂದ ಮೋಕ್ಷವನ್ನು ಪಡೆವುದೇ ಸರಿಯೆಂಬ ಸಾಧನ ವಿಷಯ ದಲ್ಲಿಯೂ ಶ್ರೀಕಂಠಭಾಷ್ಯದಲ್ಲಿ ಹೇಳಿರುವುದೂ, ವೀರಶೈವರ ಆಧಾರಗಳಲ್ಲಿ ಹೇಳಿರುವುದೂ ಒಂದೇಯೇ, ಎಂಬುದನ್ನು ಪರಿಶೀಲಿಸಬೇಕಾಗುವುದು. ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ಗ್ರಂಥದಿಂದ ಶ್ರೀಕಂಠ ಶಿವಾಚಾರ್ಯರ ಭಾಷ್ಯದ ಪ್ರಕಾರ ಚಿದಚಿತ್ ಪ್ರಪಂಚವು ಶಿವಾಭಿನ್ನ ವಾದ ಶಕ್ತಿಯಿಂದಲೇ ಹೊರಹೊಮ್ಮಿತೆಂಬುದು ತಿಳಿದುಬರುವುದು. ವೀರಶೈವ ಸಿದ್ಧಾಂತವೂ ಇದೇ ಆದುದರಿಂದ ಶ್ರೀಕಂಠಭಾಷ್ಯದ ನಿಲುವೂ ಶ್ರೀಕರಭಾಷ್ಯದ ನಿಲುವೂ ಒಂದೆಯೆಂಬುದನ್ನು ಮೂಲ ಆಧಾರಗಳಿಂದಲೇ ಶ್ರುತಪಡಿಸುವುದು ಉಳಿದಿದೆ.

ವೀರಶೈವರು ಪರಶಿವಬ್ರಹ್ಮದಿಂದ ಸೃಷ್ಟಿಗೆ ಮೊದಲು ಶಕ್ತಿಯು ಹೊರಹೊಮ್ಮುವುದೆಂಬು ದನ್ನು ತೋರಿಸಲು ಆಧಾರವಾಗಿ ತೆಗೆದುಕೊಳ್ಳುವ '**ಯದಾತಮಃ**' ಎಂದು ಮೊದಲಾಗುವ ಶ್ವೇತಾಶ್ವತರಶ್ರುತಿಯನ್ನೂ, '**ಮಾಯಾಂತು ಪ್ರಕೃತಿಂ**' ಎಂದು ಮೊದಲಾಗುವ ಶ್ವೇತಾಶ್ವತರ ಶ್ರುತಿಯನ್ನೂ ಶ್ರೀಕಂಠಶಿವಾಚಾರ್ಯರು ಸಹಾ ತೆಗೆದುಕೊಂಡು '**ಪರಿಣಾಮಾತ್**' ಎಂಬ ಸೂತ್ರಭಾಷ್ಯದಲ್ಲಿ ಸೃಷ್ಟಿಯಾಗುವ ಮೊದಲು ಅದ್ವಿತೀಯವಾಗಿದ್ದ ಪರಶಿವಬ್ರಹ್ಮವು ಶಕ್ತಿಯನ್ನು ಹೊರಹೊಮ್ಮಿಸಲು, ಅದರಿಂದ ಸೃಷ್ಟಿಯಾಗುವುದನ್ನು ವಿವರಿಸುತ್ತಾರೆ. ಆ ಭಾಗವಿದು:

ಯದಾ ತಮಸ್ತನ್ನ ದಿವಾ ನ ರಾತ್ರಿರ್ನಸನ್ನಚಾಸಚ್ಛಿವ ಏವ ಕೇವಲಃ
ತದಕ್ಷರಂ ತತ್ ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ

ಇತಿ । ಯಸ್ಮಿನ್ ಕಾಲೇ ವಿಗತಚಂದ್ರಸೂರ್ಯಾದಿ ತೇಜಸ್ತಯಾ ದಿವಾರಾತ್ರಿವಿಭಾಗ ಶೂನ್ಯಂ ನಾಮರೂಪವಿಶೇಷರಾಹಿತ್ಯೇನ ಸ್ಥೂಲ ಸೂಕ್ಷ್ಮಚೇತನಾಚೇತನ ಸದಸದ್ವ್ಯಕ್ತಿ ವ್ಯವಸ್ಥಾರಹಿತಂ ಸರ್ವಮಿದಂ ತಮೋಭೂತಮವರ್ತತ, ತದಾ ಶಿವ ಏವಾದ್ವಿತೀಯಃ. ಕೇವಲಃ ಸ್ವಾವಿಭಾಗಾಪನ್ನಚಿದಚಿಚ್ಛಕ್ತಿಃ ಸ್ವಪ್ರಕಾಶಃ ಪರಿಶಿಷ್ಟೋಽಭೂತ್.... ತಸ್ಮಾತ್ ತಾದೃಶಾತ್, ಸ್ವ ವಿಲೀನಸ್ವೇತರ ನಿಖಿಲ ಚಿದಚಿತ್ ಪ್ರಪಂಚಾತ್, ಅದ್ವಿತೀಯಾ ಪುರಾಣೀ ನಿತ್ಯಸಿದ್ಧಾ ತತ್ಕಾಲತಮೋಽಪನೋದಿನೀ ಮಹಾಸ್ಫುರಣರೂಪಾಪರಮಾ ಪ್ರಜ್ಞಾ ಜ್ಞಾನಶಕ್ತಿಃಪ್ರಸೃತಾ ಪ್ರಾವರ್ತತ । ತತಃ 'ಸೋಽಕಾಮಯತ ಬಹುಸ್ಯಾಂ' ಇತಿ ನಾಮರೂಪಾದಿವಿಭಾಗರಹಿತ ಸೂಕ್ಷ್ಮಚಿದಚಿದ್ ವಸ್ತುಶರೀರಕಃ ಕಾರಣಾವಸ್ಥಃ ಪರಮೇಶ್ವರಃ ಸಂವಿಭಕ್ತನಾಮರೂಪಚಿದಚಿದ್ವಸ್ತುಶರೀರಕೋ ಭವೇಯಮಿತಿ ಸಂಕಲ್ಪ ಮಕರೋತ್ । ತತಶ್ಚ 'ಇದಂ ಸರ್ವಮಸೃಜತ ಯದಿದಂ ಕಿಂ ಚ' ಇತಿ ಸ್ವಶರೀರ ಭೂತಂ ಸೂಕ್ಷ್ಮ ಚಿದಚಿದ್ ವಸ್ತು ಸ್ವಸ್ಮಾದ್ ವಿಭಜ್ಯ. 'ತತ್ಸೃಷ್ಟ್ವಾ ತದೇವಾನು ಪ್ರಾವಿಶತ್' ಇತಿ ಸ್ವತೋ ವಿಭಕ್ತೇ ಚಿದಚಿದ್ ವಸ್ತುನೀ ಸ್ವಯಮಾತ್ಮತಯಾ ಪ್ರವಿಶ್ಯ

'ಸಚ್ಚತ್ಯಚ್ಚಾಭವತ್' ಇತ್ಯಾದಿನಾ ಸದಸತ್ ಪ್ರಪಂಚರೂಪೇಣ ಬಹುಧಾಪರಿಣತೋಽ ಭವದಿತಿ ಪುರುಷಸ್ಯ ಬಾಲತ್ವಯುವತ್ವಾದಿವತ್ ಬ್ರಹ್ಮಣೋ ಜಗಚ್ಛರೀರಿಣಃ ಕಾರಣತ್ವಂ ಕಾರ್ಯತ್ವಂ ಚ ॥

ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ
ತಸ್ಯಾವಯವಭೂತೇನ ವ್ಯಾಪ್ತಂ ಸರ್ವಮಿದಂ ಜಗತ್

ಭಾಷ್ಯಭಾಗದ ಪ್ರಾರಂಭದಲ್ಲಿ ಹೇಳಿರುವ ಶ್ವೇತಾಶ್ವತರ ಮಂತ್ರದ ಕನ್ನಡ ಅನುವಾದನಿದು:

ಕಂದ॥ ಸವಿತುರ್ವರೇಣ್ಯನಕ್ಷರ ।
ಶಿವನೊರ್ವನೆಯಿರ್ದನಂದು, ದಿನನಿಶಿಸದಸಡ್ ॥
ರವಿಶಶಿಯಿಲ್ಲದ ತಮದೊಳ್ ।
ಶಿವನಿಂ ಪ್ರಜ್ಞೆಯೆ ಪುರಾಣಿಯೆನಿಸಿಪವಳೊಗೆದಳ್ ॥

ಇನ್ನು ಈ ಮಂತ್ರದ ಭಾಷ್ಯದ ಪರಿಚಯವನ್ನು ಮಾಡಿಕೊಟ್ಟರೆ ಅದು ವೀರಶೈವ ಸಿದ್ಧಾಂತಕ್ಕೆ ಹೊಂದುವುದೇ ಇಲ್ಲವೇ ಎಂಬುದು ತಿಳಿಯುವುದು. ಇದರಲ್ಲಿ ಹೇಳಿರುವುದರ ಸಾರಾಂಶವು ಹೀಗಿದೆ: ಸೂರ್ಯ ಚಂದ್ರರಿಲ್ಲದೆ ಹಗಲು ರಾತ್ರಿಗಳ ವಿಭಾಗವಾಗದೆ ನಾಮರೂಪ ರಹಿತವಾಗಿ, ಇದು ಸ್ಥೂಲ, ಇದು ಸೂಕ್ಷ್ಮ, ಇದು ಚೇತನ, ಇದು ಅಚೇತನ, ಇದು ಸತ್, ಇದು ಅಸತ್ ಎಂಬ ವ್ಯಕ್ತಿವ್ಯವಸ್ಥೆ ಇಲ್ಲದಿರುವ ಇದೆಲ್ಲವನ್ನೂ ತಮವು ಆವರಿಸಿದ್ದಾಗ, ಪರಶಿವ, ನೊಬ್ಬನೇ ಅದ್ವಿತೀಯನಾಗಿ ಚಿದಚಿದ್ ಶಕ್ತಿಯು ಹೊರಹೊಮ್ಮದಿರುವ ಸ್ಥಿತಿಯಲ್ಲಿ ಸ್ವಪ್ರಕಾಶ ದಿಂದ ಬೆಳಗುತ್ತಿದ್ದನು. (ಹೀಗೆ ಹೇಳಿರುವುದರಿಂದ ಸೃಷ್ಟಿಗೆ ಮೊದಲು ಪರಶಿವಬ್ರಹ್ಮದಲ್ಲಿ ಶಕ್ತಿಯು ಸಹಾ ವಿಭಾಗವಾಗಿರಲಿಲ್ಲವಾಗಿ ಪರಬ್ರಹ್ಮವು ಕೇವಲ ತಾನೇತಾನಾಗಿ ಸ್ವಪ್ರಕಾಶ ದಿಂದ ಕೂಡಿದ್ದಿತು ಎಂದಾಯಿತು.) ಸಕಲ ಚಿದಚಿದ್ ಪ್ರಪಂಚವನ್ನು ತನ್ನೊಳಗೆ ಲೀನಮಾಡಿ ಕೊಂಡಿದ್ದ ಪರಶಿವಬ್ರಹ್ಮದಿಂದ ತಮೋಪಹಾರಿಣಿಯಾದ ಅನಾದಿಜ್ಞಾನಶಕ್ತಿಯು ಹೊರಹೊಮ್ಮಿತು. ಆಗ ನಾಮರೂಪವಿಭಾಗವಿಲ್ಲದ ಸೂಕ್ಷ್ಮ ಚಿದಚಿದ್ವಸ್ತುವೆ ಶರೀರ ವುಳ್ಳವನಾಗಿ ಕಾರಣಾವಸ್ಥೆಯಲ್ಲಿದ್ದ ಪರಮೇಶ್ವರನು "ಸೋಽಕಾಮಯತ ಬಹುಸ್ಯಾಂ" ಎಂಬ ಶ್ರುತಿಯಲ್ಲಿ ಹೇಳಿದಂತೆ ನಾಮರೂಪವಿಭಾಗಗಳಿಂದ ಕೂಡಿದ ಚಿದಚಿದ್ವಸ್ತುಶರೀರಕ ನಾಗಬೇಕೆಂದು ಸಂಕಲ್ಪಮಾಡಿದನು. ಆಗ "ಇದಂ ಸರ್ವಮಸೃಜತ ಯದಿದಂ ಕಿಂ ಚ" ಎಂಬ ಶ್ರುತಿಯಲ್ಲಿ ಹೇಳಿದಂತೆ ಸ್ವಶರೀರಭೂತ ಚಿದಚಿದ್ವಸ್ತುಗಳನ್ನು ತನ್ನಿಂದ ವಿಭಾಗಿಸಿ ದನು; "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತಿಯಂತೆ ಚಿದಚಿದ್ವಸ್ತು ಗಳಲ್ಲಿ ಅನುಪ್ರವೇಶಮಾಡಿದನು; "ಸಚ್ಚತ್ಯಚ್ಚಾಭವತ್" ಎಂಬುವೇ ಮೊದಲಾದ ಶ್ರುತಿಗಳಂತೆ ಸದಸತ್ಪ್ರಪಂಚರೂಪವಾಗಿ ಅನೇಕ ರೀತಿಯಲ್ಲಿ ಪರಿಣಮಿಸಿದನು. ಜಗತ್ತೇ ಶರೀರವಾಗಿ ಉಳ್ಳ ಪರಬ್ರಹ್ಮವು, ಮನುಷ್ಯನು ಬಾಲ್ಯ ಯೌವನ ಅವಸ್ಥೆಗಳನ್ನು ಪಡೆಯುವಂತೆ ಕಾರಣಾವಸ್ಥೆಯಿಂದ ಕಾರ್ಯಾವಸ್ಥೆಗೆ ಪರಿಣಮಿಸಿತು. ಮಾಯಾಂತು ಎಂದು ಮೊದಲಾಗುವ ಶ್ವೇತಾಶ್ವತರ ಶ್ರುತಿಯಲ್ಲಿ ಹೇಳಿದಂತೆ ಮಾಯೆಯೇ ಪ್ರಕೃತಿ, ಮಾಯೆಯುಳ್ಳವನು ಮಾಯಿ ಪರಮೇಶ್ವರ. ತಸ್ಯಾವಯವಭೂತೇನ ಎಂದರೆ ಚಿಚ್ಛಕ್ತಿಯ ಅಂಶರೂಪವಾಗಿ ಚಿದಚಿದ್ ರೂಪವಾದ ಜಗತ್ತೆಲ್ಲವೂ ವ್ಯಾಪ್ತವಾಗಿದೆ.

ಹೀಗೆ ಶ್ರೀಕಂಠಭಾಷ್ಯದಲ್ಲಿ ಹೇಳಿರುವುದರಲ್ಲಿ ವೀರಶೈವ ಸಿದ್ಧಾಂತಕ್ಕೆ ಎಲ್ಲವೂ ಹೊಂದುಗಡೆಯಾಗುತ್ತದೆ. ಭಾಷ್ಯದ ಪ್ರಕಾರ ಸೃಷ್ಟಿಗೆ ಮೊದಲು ಅದ್ವೈತವಾಗಿ ಪರಶಿವಬ್ರಹ್ಮವೊಂದೆ ಇದ್ದಿತು; ಸೃಷ್ಟಿವಿಲಾಸವುಂಟಾದಾಗ ಅದರಿಂದ ಶಕ್ತಿಯು ಹೊರಹೊಮ್ಮಿತು; ಅವಿಭಾಗವಾಗಿದ್ದ ಸೂಕ್ಷ್ಮಚಿದಚಿದ್‌ರೂಪಶಕ್ತಿಯು ಸೃಷ್ಟಿಯಾದಮೇಲೆ ಸ್ಥೂಲಚಿದಚಿದ್‌ರೂಪಶಕ್ತಿಯಾಯಿತು. ವೀರಶೈವ ಸಿದ್ಧಾಂತದಲ್ಲಿಯಾದರೂ ಇದೇ ತರದ ನಿಲುವಿದೆ. ಆದರೆ ಸೂಕ್ಷ್ಮಚಿದಚಿತ್‌ಗಳು ಸೃಷ್ಟಿಗೆ ಮೊದಲೂ, ಸ್ಥೂಲಚಿದಚಿತ್‌ಗಳು ಸೃಷ್ಟಿಯಾದಮೇಲೂ ಪರಶಿವಬ್ರಹ್ಮದ ಶರೀರವಾಗಿರುವುವು ಎನ್ನುವ ಮಾತು ಮಾತ್ರ ವೀರಶೈವ ಸಿದ್ಧಾಂತಕ್ಕೆ ಹಿಡಿಸುವುದಿಲ್ಲ. ಏಕೆಂದರೆ ಹೆಚ್ಚು ಪರಿಚಿತವಾಗಿರುವ ಶ್ರೀರಾಮಾನುಜ ಸಿದ್ಧಾಂತದಂತೆ ಶರೀರಶರೀರಿ ಭಾವವೆಂಬುದರಲ್ಲಿ ಶರೀರಕ್ಕೂ ಶರೀರಿಗೂ ಅತ್ಯಂತವೈಲಕ್ಷಣ್ಯವೇ ಹೇಳಲ್ಪಟ್ಟಿದೆ. ಶರೀರಶರೀರಿ ಭಾವವೆಂದರೆ ದ್ವೈತವೇ ದ್ಯೋತಕವಾಗಿರುವುದರಿಂದ ಶರೀರಶರೀರಿ ಭಾವವನ್ನು ವೀರಶೈವವು ಒಪ್ಪುವುದಿಲ್ಲ. ಆದರೆ ಮಾತುಗಳಲ್ಲೇನಿದೆ. ಅಭಿಪ್ರಾಯವೇ ಮುಖ್ಯ. ಶ್ರೀಕಂಠ ಶಿವಾಚಾರ್ಯರ ಅಭಿಪ್ರಾಯದಂತೆ, ಚಿದಚಿತ್ ಎಂದರೆ ಶಕ್ತಿಯೆ; ಇದು ಪರಶಿವಾಭಿನ್ನವಾಗಿರುವುದೆಂಬುದು ವೀರಶೈವರ ಹಾಗೂ ಶ್ರೀಕಂಠ ಶಿವಾಚಾರ್ಯರ ಮತ. ಇದನ್ನು ಹೆಚ್ಚು ಆಧಾರಗಳಿಂದ ವಿವರಿಸುವ ಬದಲು, ಶ್ರೀಕಂಠ ಶಿವಾಚಾರ್ಯರ ಭಾಷ್ಯವನ್ನು ಚೆನ್ನಾಗಿ ಪರಿಶೀಲಿಸಿರುವ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಹೇಳುವುದನ್ನಿಲ್ಲಿ ಕೊಟ್ಟರೆ ಸಾಕು. ಅವರು ಹೇಳುವಂತೆ ಶ್ರೀಕಂಠ ಶಿವಾಚಾರ್ಯರ ನಿಲುವಿದು: "The world both intelligent and non-intelligent (Chit as well as Achit) is the result of transformation of Chitsakti, the Lords energy which as Intelligence and Bliss is non-different from Himself." ಪರಶಿವಾಭಿನ್ನವಾದ ಶಕ್ತಿಯ ಪರಿಣಾಮವೇ ಚಿದಚಿತ್‌ಪ್ರಪಂಚವೆನ್ನುವುದರಿಂದ ಶ್ರೀಕಂಠ ಶಿವಾಚಾರ್ಯರ ಶರೀರಶರೀರಿಭಾವನೆಯಲ್ಲಿ ದ್ವೈತಭಾವನೆಯೇ ಇಲ್ಲ. ಶ್ರೀಕಂಠ ಶಿವಾಚಾರ್ಯರು ಶರೀರಶರೀರಿಭಾವವನ್ನು ಹೇಳದೆಯೇ ಮೇಲಿನ ಭಾಷ್ಯದಲ್ಲಿ ಹೇಳಿರುವುದನ್ನು ಹೇಳಿರುವುದೂ ಉಂಟು. ೨-೧-೧೭ ನೆಯ ಸೂತ್ರದ ಶ್ರೀಕಂಠಭಾಷ್ಯದಲ್ಲಿ ಹೀಗೆ ಹೇಳಿರುವರು:

> "ಅಯಮಭಿಪ್ರಾಯಃ-ಪೂರ್ವಂ ಸ್ವಾಭಿನ್ನನಾಮರೂಪವಿಭಾಗಾನರ್ಹ ಸೂಕ್ಷ್ಮಚಿದಚಿದ್ ರೂಪಪರಶಕ್ತಿಗರ್ಭಿತೋ ಹಿ ಶಿವಃ ಕೇವಲೋ ಭವತಿ । ಪುನಃ ಸ್ವಾತ್ಮಿಕಾಂ ತಾದೃಶೀಂ ಶಕ್ತಿಂ ಪೂರ್ವದಶಾವಿರೋಧಿ ಸ್ಥೂಲತ್ವಯುಕ್ತನಾಮರೂಪವಿಭಾಗಾರ್ಹ ಚಿದಚಿದ್ ರೂಪಾಂ ಬಹಿರ್ವಿಸ್ತಾರಯತಿ । ತತ್ರ ಶಕ್ತಿಮತಃ ಶಿವಸ್ಯ ಸಂಕೋಚವಸ್ಥಾ ಪ್ರಲಯಃ ವಿಕಾಸಾವಸ್ಥಾ ಸೃಷ್ಟಿರಿತಿ"

ಇದೇ ಅಭಿಪ್ರಾಯವನ್ನು ಇದೇ ಮಾತಿನಲ್ಲಿ ಶ್ರೀಪತಿಪಂಡಿತರು ಶ್ರೀಕರಭಾಷ್ಯದಲ್ಲಿ ೨-೧-೧೪ ಸೂತ್ರ ವಿಷಯವನ್ನು ಪ್ರಸ್ತಾಪಿಸುತ್ತ ಹೇಳಿರುವರು:

> ಯಥೋರ್ಣನಾಭಿರ್ಜಂತುಸ್ಸ್ವಕಾರ್ಯಂ ತಂತುಚಕ್ರಂ ಕಾರಣಾವಸ್ಥಾಯಾಂ ನಾಮರೂಪ ವಿಭಾಗಾನರ್ಹ ಸೂಕ್ಷ್ಮರೂಪೇಣ ಸ್ವಸ್ಮಿನ್ನಿಧಾಯ ಕಾರ್ಯಾವಸ್ಥಾಯಾಂ ನಾಮರೂಪವಿಭಾಗಾರ್ಹ ಸ್ಥೂಲರೂಪೇಣ ಪ್ರಕಟೀಕರೋತಿ ತಥಾ ಪರಮೇಶ್ವರಶ್ಚಿದಚಿದಾತ್ಮಕಂ ಪ್ರಪಂಚಂ ಪ್ರಲಯಾವಸ್ಥಾಯಾಂ ಸೂಕ್ಷ್ಮರೂಪೇಣ ಸ್ವಸ್ಮಿನ್ ಸಂಸ್ಥಾಪ್ಯ ಸೃಷ್ಟಿಕಾಲೇ ಸ್ಥೂಲಾತ್ಮಕತ್ವೇನ ಪ್ರಕಾಶಯತಿ ಅತಃ ಕಾರ್ಯಕಾರಣಯೋರನನ್ಯತ್ವಂ ಸಿದ್ಧಂ.

ಇವೆರಡು ಭಾಗಗಳಲ್ಲಿ ಸ್ವಲ್ಪ ಹೆಚ್ಚು ಕಡಮೆ ಒಂದೇ ಮಾತಿನಲ್ಲಿ ವೀರಶೈವ ಸಿದ್ಧಾಂತದ ಮುಖ್ಯ ವಿಷಯವನ್ನು ಹೇಳಿರುವುದನ್ನು ಗಮನಿಸಬೇಕು. ದಪ್ಪ ಅಕ್ಷರಗಳಲ್ಲಿ ಮುದ್ರಿತ

ವಾಗಿರುವ ಭಾಗಗಳನ್ನು ಓದಿದರೆ ಒಬ್ಬರೇ ಭಾಷ್ಯಕಾರರು ಎರಡು ಭಾಗಗಳನ್ನು ಬರೆದರೋ ಎನಿಸುವುದು. ಎರಡು ಭಾಗಗಳಲ್ಲಿ ಹೇಳಿರುವುದರ ಅಭಿಪ್ರಾಯವಾದರೂ ಒಬ್ಬರೇ ಹೇಳಿದಂತಿದೆ. ಶಕ್ತಿವಿಶಿಷ್ಟನಾದ ಪರಮಾತ್ಮನು ಸೃಷ್ಟಿಗೆ ಮೊದಲು, ಕಾರಣರೂಪದಲ್ಲಿ, "ನಾಮರೂಪವಿಭಾಗಾನರ್ಹಸೂಕ್ಷ್ಮರೂಪೇಣ" ಎಂದರೆ ನಾಮರೂಪವಿಭಾಗಕ್ಕೆ ಅನರ್ಹವಾದ ಸೂಕ್ಷ್ಮರೂಪದ ಚಿದಚಿದ್‌ಶಕ್ತಿವಿಶಿಷ್ಟನಾಗಿ ಇರುತ್ತಾನೆ. ಸೃಷ್ಟಿಯಾದಮೇಲೆ, ಕಾರ್ಯರೂಪದಲ್ಲಿ "ನಾಮರೂಪವಿಭಾಗಾರ್ಹಸ್ಥೂಲರೂಪೇಣ" ಎಂದರೆ ನಾಮರೂಪ ವಿಭಾಗಕ್ಕೆ ಅರ್ಹವಾದ ಸ್ಥೂಲರೂಪದ ಚಿದಚಿದ್‌ಶಕ್ತಿಯಿಂದ ವಿಶಿಷ್ಟನಾಗಿರುತ್ತಾನೆ. ಆದುದರಿಂದ ಕಾರ್ಯಕಾರಣಗಳಲ್ಲಿ ಅಭೇದವಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಶಿವಶಕ್ತಿಯ ಸಂಕೋಚಾವಸ್ಥೆಯಲ್ಲಿ ಪ್ರಳಯವೂ ವಿಕಾಸಾವಸ್ಥೆಯಲ್ಲಿ ಸೃಷ್ಟಿಯೂ ಎಂದು ಹೇಳಬಹುದು. ಹೀಗೆ ಎರಡು ಭಾಷ್ಯಗಳಲ್ಲಿ ಹೇಳಿರುವುದೂ, ವೀರಶೈವ ಸಿದ್ಧಾಂತವೆ. ಅಷ್ಟೇ ಏಕೆ ಶ್ರೀಕಂಠಭಾಷ್ಯಭಾಗದಲ್ಲಿ ಶಕ್ತಿಯು ಶಿವನಿಂದ ಅಭಿನ್ನವಾಗಿರುವುದು ಶ್ರೀಕರ ಭಾಷ್ಯಭಾಗಕ್ಕಿಂತಲೂ ಹೆಚ್ಚು ಸ್ಪಷ್ಟವಾಗಿದೆ.

ಇದಕ್ಕಿಂತಲೂ ಹೆಚ್ಚಿನ ವಿಶೇಷವೇನೆಂದರೆ ಶಕ್ತಿವಿಶಿಷ್ಟಾದ್ವೈತವೆಂದು ಪ್ರಸಿದ್ಧವಾದ ವೀರಶೈವಸಿದ್ಧಾಂತದ ಮೂಲತತ್ವವಿದನ್ನು ವಿವರಿಸಲು ಭಾಷ್ಯಕಾರರಿಬ್ಬರೂ ಒಂದೇ ತರದ ಉಪಮಾನಗಳನ್ನು ಕೊಟ್ಟಿರುವುದು. ಶ್ರೀಕಂಠ ಶಿವಾಚಾರ್ಯರ 'ಪರಿಣಾಮಾತ್' ಸೂತ್ರದ ಭಾಷ್ಯ ಭಾಗದಲ್ಲಿ ಕಾರಣವಾದ ಪರಶಿವಬ್ರಹ್ಮವು ಕಾರ್ಯವಾದ ಪ್ರಪಂಚವಾಗುವುದಕ್ಕೆ ಮನುಷ್ಯನು ಬಾಲ್ಯ ಯೌವನಾದಿಗಳನ್ನು ಪಡೆಯುವ ಉದಾಹರಣೆಯನ್ನು ಕೊಟ್ಟು ಎರಡು ಸ್ಥಿತಿಗೂ ಅಭೇದವನ್ನು ತೋರಿಸಿದೆಯಷ್ಟೆ. ಅದೇ ಉದಾಹರಣೆಯನ್ನು ಶ್ರೀಕರಭಾಷ್ಯದ ೨–೧–೧೮ ನೆಯ ಸೂತ್ರಭಾಷ್ಯದಲ್ಲಿ ಕೊಟ್ಟಿದೆ. ಆ ಭಾಗವಿದು:

> ಏಕಸ್ಯೈವ ಶರೀರಸ್ಯ ಬಾಲತ್ವಯುವತ್ವಸ್ಥವಿರತ್ವವತ್ ಪ್ರಪಂಚಸ್ಯ ಸೂಕ್ಷ್ಮತ್ವ ಸ್ಥೂಲತ್ವ ವ್ಯವಸ್ಥಾ ಕಾಲಭೇದೇನ ನಿರ್ದಿಷ್ಟಾ ಅತೋಽಸಚ್ಛಬ್ದಸ್ಯ ಸೂಕ್ಷ್ಮಾತ್ಮಕತ್ವಂ ತದ್ಭಿನ್ನಸತ್ವಸ್ಯ ಸ್ಥೂಲಾತ್ಮಕತ್ವಮಿತಿ ನಿರ್ದಿಷ್ಟಂ. ತಸ್ಮಾತ್ ಪ್ರಪಂಚಸ್ಯ ಸತ್ಯತ್ವಂ ಬ್ರಹ್ಮಾಭಿನ್ನತ್ವಂ ಚ ಸಮಂಜಸಂ.

ಇಬ್ಬರೂ ಕೊಟ್ಟಿರುವ ಉದಾಹರಣೆ ಇನ್ನೊಂದು ಗುಡಾರದ ಬಟ್ಟೆಯದು. ಸಂಕುಚಿತಾವಸ್ಥೆಯಲ್ಲಿನ ಗುಡಾರದ ಬಟ್ಟೆಯು ವಿಕಾಸಾವಸ್ಥೆಯಲ್ಲಿ ಗುಡಾರವಾಗುವುದನ್ನು ಸೃಷ್ಟಿಗೆ ಮೊದಲಿನ ಸ್ಥಿತಿಯು ಸೃಷ್ಟಿಯಾದ ಮೇಲಿನ ಸ್ಥಿತಿಯಾಗುವುದಕ್ಕೆ ಹೋಲಿಸಿದೆ. ಶ್ರೀಕಂಠ ಭಾಷ್ಯದ ೨–೧–೧೯ ನೆಯ ಸೂತ್ರದ ಭಾಷ್ಯಭಾಗವಿದು:

> ಯಥಾ ಸಂಕುಚಿತಃ ಸೂಕ್ಷ್ಮರೂಪಃ ಪಟಃ ಪ್ರಸಾರಿತೋ ಮಹಾಪಟಃ ಕುಟೀರೂಪೇಣ ಕಾರ್ಯಂ ಭವತಿ, ತಥಾ ಬ್ರಹ್ಮಾಪಿ ಸಂಕುಚಿತರೂಪಂ ಕಾರಣಂ ಪ್ರಸಾರಿತರೂಪಂ ಕಾರ್ಯಂ ಭವತಿ.

ಶ್ರೀಕರಭಾಷ್ಯದ ೨–೧–೧೯ ನೆಯ ಸೂತ್ರ ಭಾಷ್ಯಭಾಗವಿದು:

> ಯಥಾ ಪಟಸ್ಯ ಕದಾಚಿತ್ ಸಂಕುಚಿತಾವಸ್ಥಾ ಕದಾಚಿದ್ ವಿಕಾಸಾವಸ್ಥಾ ಚ ವಿಲಕ್ಷಣ ಪ್ರತೀತಿ ವಿಷಯತ್ವೇನ ದೃಶ್ಯತೇ, ತದ್ವತ್ ಪರಮ ಶಿವಶಕ್ತಿ ಸಂಕುಚಿತಾವಸ್ಥಾ ಕಾರಣಂ ಶಕ್ತಿಪ್ರಸಾರಿತಾವಸ್ಥಾ ಕಾರ್ಯಂ.

ಹೀಗೆಯೇ ಕಾರ್ಯಕಾರಣಗಳಿಗೆ ಅಭೇದವನ್ನು ಹೇಳಲು ವಾಯುವೇ ಪ್ರಾಣಾದಿ ರೂಪ ಗಳನ್ನು ತಳೆವುದೆಂಬ ಉದಾಹರಣೆಯನ್ನು ಇಬ್ಬರೂ ಕೊಟ್ಟು ಅದ್ವೈತವನ್ನು ಸಿದ್ಧಾಂತ ಮಾಡಿದ್ದಾರೆ. ಮಣ್ಣು ಮಡಿಕೆಗಳ ಉದಾಹರಣೆಯನ್ನೂ ಇಬ್ಬರೂ ಕೊಟ್ಟಿದ್ದಾರೆ. ಚೇತನಾತ್ಮಕ ಶಕ್ತಿಯಿಂದ ಅಚೇತನ ವಸ್ತುಗಳು ಹುಟ್ಟುವುದಕ್ಕೆ ಇಬ್ಬರೂ ನಖಗಳ ಉತ್ಪತ್ತಿಯ ಉದಾಹರಣೆಯನ್ನು ಕೊಟ್ಟಿದ್ದಾರೆ. ಶ್ರೀಕರಭಾಷ್ಯದಲ್ಲಿಯೂ ಇರಬಹುದಾದ ಶಕ್ತಿ ವಿಶಿಷ್ಟ ಶಿವನವಿಷಯವಿದು ಶ್ರೀಕಂಠಭಾಷ್ಯದಲ್ಲಿದೆ:

> "ವಿಚಿತ್ರಾನಂತ ಶಕ್ತಿಶಬಲ ಮಾಯಾ ಪರಮಶಕ್ತಿವಿಶಿಷ್ಟಃ ಪರಮೇಶ್ವರಃ
> ಸ್ವಶಕ್ತಿ ಶಕಲೇನ ಪ್ರಪಂಚಾಕಾರಃ ಸ್ವತಃ ಪ್ರಪಂಚಾತೀತಶ್ಚ ಭವತಿ"
>
> —ಶ್ರೀಕಂಠಭಾಷ್ಯ, ೨-೧-೩೧.

ಹೀಗೆ ಶಕ್ತಿವಿಶಿಷ್ಟ ಪರಶಿವಬ್ರಹ್ಮವು ಸ್ವಶಕ್ತಿಯ ಅಂಶದಿಂದ ವಿಶ್ವಾಕಾರನಾಗಿಯೂ, ವಿಶ್ವಾತೀತ ವಾಗಿಯೂ ಇರುವುದೆಂದು ಇಲ್ಲಿ ಹೇಳಿರುವುದು ಯಾವ ವೀರಶೈವ ಗ್ರಂಥದಲ್ಲಿದ್ದರೂ ಕುಂದೇನೂ ಕಾಣುತ್ತಿರಲಿಲ್ಲ.

ಒಟ್ಟಿನಲ್ಲಿ ಎರಡು ಭಾಷ್ಯಗಳಲ್ಲಿ ಹೇಳಿರುವ ಸಿದ್ಧಾಂತವು ಒಂದೇ. ತ್ರಿಮೂರ್ತಿಗಳಿಗೂ ಅತೀತವಾದ ಪರಶಿವಬ್ರಹ್ಮವು ಅಂತಿಮ ಮಟ್ಟದಲ್ಲಿ ಅದ್ವೈತವಾಗಿ ಇರುವುದು; ಇದರಲ್ಲಿ ಅಭಿನ್ನವಾಗಿದ್ದ ಶಕ್ತಿಯು ಹೊರಹೊಮ್ಮುವುದು; ಇದು ಚಿದಚಿತ್ ಪ್ರಪಂಚವಾಗಿ ಪರಿಣಮಿ ಸುವುದು; ಕಾರಣಾವಸ್ಥೆಯಲ್ಲಿ ಸೂಕ್ಷ್ಮ ಚಿದಚಿದ್ ರೂಪವಾಗಿದ್ದುದು ಕಾರ್ಯಾವಸ್ಥೆಯಲ್ಲಿ ಸ್ಥೂಲ ಚಿದಚಿದ್ ರೂಪವಾಗುವುದು. ಇವೇ ವೀರಶೈವ ಸಿದ್ಧಾಂತದ ಮುಖ್ಯ ತತ್ವಗಳು. ಇವುಗಳಲ್ಲಿ ಎರಡು ಭಾಷ್ಯಗಳಲ್ಲಿಯೂ ಒಮ್ಮತವಿದೆ. ಶಕ್ತಿವಿಶಿಷ್ಟಾದ್ವೈತವೆಂದು ಕರೆಯಲ್ಪಡು ತ್ತಿರುವ ವೀರಶೈವ ಸಿದ್ಧಾಂತದಲ್ಲಿ 'ವಿಶಿಷ್ಟ' ಪದದ ಬಳಕೆ ಇಲ್ಲದೆ ಇಲ್ಲ. ಶಿವಾದ್ವೈತ ದರ್ಪಣದಲ್ಲಿ 'ವಿಶಿಷ್ಟ' ಪದ ಪ್ರಯೋಗದಿಂದ ಸಿದ್ಧಾಂತವನ್ನು ವಿವರಿಸಲಾಗಿದೆ:

> "ಶಿವಾದ್ವೈತಮಿತ್ಯತ್ರ ಶಿವಶ್ಚ ಶಿವಶ್ಚ ಶಿವೌ ತಯೋರದ್ವೈತಂ ಶಿವಾದ್ವೈತಂ ಇತಿ ವ್ಯುತ್ಪತ್ತಿ ಬಲಲಬ್ಧಂ ಪ್ರಥಮ ಶಿವಪದಂ ಸೂಕ್ಷ್ಮಚಿದಚಿದ್‌ರೂಪಶಕ್ತಿವಿಶಿಷ್ಟಬ್ರಹ್ಮಬೋಧಕಂ ಭವತಿ । ಅಪರಂ ಶಿವಪದಂ ಸ್ಥೂಲಚಿದ್‌ರೂಪಶಕ್ತಿವಿಶಿಷ್ಟಜೀವ ಬೋಧಕಂ ಭವತಿ."

ಶ್ರೀಕಂಠಭಾಷ್ಯವನ್ನು ವೀರಶೈವಭಾಷ್ಯವೆಂದೇ ಭಾವಿಸಿ ಅದರ ಕಾರಿಕೆಯ ರೂಪವಾಗಿ ಬರೆ ದಿರುವ ವೀರಶೈವರಿಂದ ಉತ್ತಮ ಆಧಾರವಾಗಿ ಪರಿಗ್ರಹಿಸಲ್ಪಟ್ಟಿರುವ ಕ್ರಿಯಾಸಾರದಲ್ಲಿ

> ನೀಲಕಂಠ ಶಿವಾಚಾರ್ಯ ನಾಮ್ನಾ ಭಾಷ್ಯಮಚೀಕರತ್ ।
> ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನಮುತ್ತಮಂ ॥

ಎಂದು ಹೇಳಿದೆ. ವೀರಶೈವಾನಂದ ಚಂದ್ರಿಕೆಯಲ್ಲಿ 'ವಿಶಿಷ್ಟಾದ್ವೈತ ಜ್ಞಾನಸಂಪ್ರದಾತೃತ್ವೇನ ಸರ್ವಾಭ್ಯರ್ಹಿತತಯಾ' ಎಂದು ಹೇಳಿದೆ. 'ಶರೀರ ಶರೀರಿ' ಪದಪ್ರಯೋಗದಿಂದಲೂ 'ವಿಶಿಷ್ಟ' ಪದಪ್ರಯೋಗದಿಂದಲೂ ಶ್ರೀಕಂಠ ಶಿವಾಚಾರ್ಯರ ಅಭಿಪ್ರಾಯವು ಶರೀರದಲ್ಲಿ ಆತ್ಮನಿರು ವಂತೆ ಚಿದಚಿತ್ತುಗಳಲ್ಲಿ ಪರಮಾತ್ಮನಿರುವನೆಂಬ ಭಾವವೇ ಹೊರತು ಶ್ರೀ ರಾಮಾನುಜರ ಭಾಷ್ಯದಲ್ಲಿ ಈ ಪದಗಳಿಂದ ಹೊರಹೊಮ್ಮುವ ಮೋಕ್ಷಸ್ಥಿತಿಯಲ್ಲಿಯೂ ಚಿದಚಿತ್ತುಗಳಿಂದ ಪರಬ್ರಹ್ಮವು 'ವಿಲಕ್ಷಣ'ವಾದುದೆಂಬ ದ್ವೈತಭಾವನೆಯು ಇಲ್ಲ. ವೀರಶೈವಾನಂದ ಚಂದ್ರಿಕೆ ಯಲ್ಲಿ "ಶಕ್ತಿವಿಶಿಷ್ಟ ಶಿವಾದ್ವೈತಸ್ಯ ಸಕಲದ್ವೈತವಿಲಕ್ಷಣತ್ವೇನ ಸಾಧನೀಯತಯಾ"

ಎಂದು ಹೇಳಿರುವುದರಲ್ಲಿನ ಸಲಹೆಯಂತೆ ಈ ಪದಗಳಲ್ಲಿ ಅಂತಿಮಸ್ಥಿತಿಯಲ್ಲಿ ದ್ವೈತಭಾವನೆಯು ಅಭಿಪ್ರೇತವಲ್ಲವೆಂಬುಷನ್ನು ಮನಗಂಡರೆ ಈ ಪದಗಳ ಉಪಯೋಗದಿಂದ ನಷ್ಟವೇನೂ ಇಲ್ಲ.

ವಿಶಿಷ್ಟಾದ್ವೈತ ಪದದ ಅಥವಾ ದ್ವೈತಾದ್ವೈತ ಪದದ ಔಚಿತ್ಯವು ಮುಖ್ಯವಲ್ಲ. ಈ ಪದಗಳು ಯಾವ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆಯೆಂಬುದು ಸಿದ್ಧಾಂತನಿರ್ಣಯದಲ್ಲಿ ಮುಖ್ಯ. ಶ್ರೀಕಂಠ ಶಿವಾಚಾರ್ಯರು 'ವಿಶಿಷ್ಟಾದ್ವೈತ' ಮತ್ತು 'ಶರೀರ ಶರೀರಿ' ಪದಗಳಿಂದ ಶಿವಜೀವರುಗಳಲ್ಲಿ ಮೋಕ್ಷದಶೆಯಲ್ಲಿ ದ್ವೈತಭಾವನೆಯನ್ನು ಉಂಟುಮಾಡುವ ಉದ್ದೇಶ ವುಳ್ಳವರಲ್ಲವೆಂದು ವ್ಯಕ್ತಮಾಡಲಾಯಿತು. ಶ್ರೀಕರಭಾಷ್ಯಾದಿಗಳಲ್ಲಿ 'ದ್ವೈತಾದ್ವೈತ' ಪದ ವನ್ನೇ ಉಪಯೋಗಿಸಿರುವ ರೀತಿಯಲ್ಲಿ ಶ್ರೀಕಂಠ ಶಿವಾಚಾರ್ಯರ ಭಾಷ್ಯದ ಸಿದ್ಧಾಂತವಾದರೂ ದ್ವೈತಾದ್ವೈತವೇ ಎಂದು ತೋರಿಸಬಹುದು. ಪ್ರಪಂಚಸ್ಥಿತಿಯಲ್ಲಿ ದ್ವೈತವಾಗಿದ್ದು ಮೋಕ್ಷಸ್ಥಿತಿ ಯಲ್ಲಿ ಅದ್ವೈತವಾಗಿರುವುದರಲ್ಲಿ ವಿರೋಧವೇನೂ ಇಲ್ಲ. ಒಂದೇ ಕಾಲದಲ್ಲಿ ಬ್ರಹ್ಮವು ಒಂದು ರೀತಿಯಲ್ಲಿ ದ್ವೈತವೂ ಇನ್ನೊಂದು ರೀತಿಯಲ್ಲಿ ಅದ್ವೈತವೂ ಆಗಿದೆಯೆನ್ನುವುದರಲ್ಲಿ ವಿರೋಧ ವಿದೆಯೆಂಬುದು ಶ್ರೀಕಂಠರ ಅಭಿಪ್ರಾಯವೆಂದು ಕಾಣುತ್ತದೆ. ಶ್ರೀಕಂಠ ಶಿವಾಚಾರ್ಯರು ಅವರ ಹಿಂದೆ ಪ್ರಚಲಿತವಾಗಿದ್ದ ಭೇದಾಭೇದ ವಾದವನ್ನು ಖಂಡಿಸಿರುವುದು ವೀರಶೈವದ ದ್ವೈತಾದ್ವೈತಕ್ಕೆ ಅನ್ವಯಿಸುವುದಿಲ್ಲ. ಮೇಲೆ ಕೊಟ್ಟಿರುವ ಶ್ರೀಕಂಠಭಾಷ್ಯದ ಭಾಗಗಳಲ್ಲಿ **"ಸ್ವಾಭಿನ್ನನಾಮರೂಪ ವಿಭಾಗಾನರ್ಹ ಸೂಕ್ಷ್ಮ ಚಿದಚಿದ್‌ರೂಪ"**ದಲ್ಲಿ ಅದ್ವೈತ ಸ್ಥಿತಿಯೂ **"ಸ್ಥೂಲತ್ವಯುಕ್ತ ನಾಮರೂಪ ವಿಭಾಗಾರ್ಹ ಚಿದಚಿದ್‌ರೂಪ"**ದಲ್ಲಿ ದ್ವೈತಸ್ಥಿತಿಯೂ ಇರುವುದು ಸ್ಪಷ್ಟ. ಕಾರಣರೂಪದಲ್ಲಿ ಅದ್ವೈತವನ್ನೂ ಕಾರ್ಯರೂಪದಲ್ಲಿ ದ್ವೈತವನ್ನೂ ಅಥವಾ ಮೋಕ್ಷದಶೆಯಲ್ಲಿ ಅದ್ವೈತವನ್ನೂ ಸಂಸಾರದಶೆಯಲ್ಲಿ ದ್ವೈತವನ್ನೂ ಶ್ರೀಕಂಠ ಶಿವಾಚಾರ್ಯರು ಹೇಳಿದಂತಾಯಿತು. **"ಅವಸ್ಥಿತೇರಿತಿ ಕಾಶಕೃತ್ಸ್ನಃ"** ಎಂಬ ಸೂತ್ರದ ಶ್ರೀಕರಭಾಷ್ಯದಲ್ಲಿ **"ಬ್ರಹ್ಮವೇದ ಬ್ರಹ್ಮೈವ ಭವತಿ ಇತ್ಯಾದಿಷು ಸಂಸಾರ ದಶಾಯಾಂ ಜೀವಬ್ರಹ್ಮಣೋರ್ಭೇದಃ, ಮೋಕ್ಷದಶಾಯಾಮಭೇದಶ್ಚ ಪ್ರತಿಪಾದ್ಯತೇ"** ಎಂದೂ **"ಬ್ರಹ್ಮಪ್ರಪಂಚಯೋಃ ಕಾರ್ಯಕಾರಣಯೋರ್ಮೃತ್ತಿಕಾದಿ ದೃಷ್ಟಾಂತೇನ ಭೇದಾಭೇದ ವ್ಯಪದೇಶಾತ್"** ಎಂದೂ ಹೇಳಿರುವುದು ಶ್ರೀಕಂಠ ಶಿವಾಚಾರ್ಯರು ಒಪ್ಪುವ ಭೇದಾಭೇದವೆ. ಶ್ರೀಕರಭಾಷ್ಯದಲ್ಲಿ ಕೊಟ್ಟಿರುವ ಮಣ್ಣು ಮಡಿಕೆಯಾಗುವುದೇ ಮೊದಲಾದ ಉದಾಹರಣೆಗಳನ್ನೇ ಶ್ರೀಕಂಠಭಾಷ್ಯದಲ್ಲಿಯೂ ಕೊಟ್ಟಿದೆ. **"ಭೇದಾಭೇದ ಶ್ರುತೀನಾಂ ಅವಿರುದ್ಧ ವಿವಾಯಂ ಮಾರ್ಗಃ"** ಎನ್ನುವ ಶ್ರೀಕಂಠ ಶಿವಾಚಾರ್ಯರ ಮಾತು ಗಮನಾರ್ಹ ವಾಗಿದೆ. ಶ್ರೀಯುತ ಸೂರ್ಯನಾರಾಯಣ ಶಾಸ್ತ್ರಿಗಳು *The Sivadvaita of Srikantha* ಎಂಬ ಗ್ರಂಥದ ೧೪೦ ನೆಯ ಪುಟದಲ್ಲಿ ಶ್ರೀಕಂಠಭಾಷ್ಯದ ಪ್ರಕಾರ ಶಕ್ತಿವಿಶಿಷ್ಟಪರಶಿವನ ಕಲ್ಪ ನೆಯ ವಿಷಯವಾಗಿ ಹೇಳಿದಂತೆ "He is unity-in-duality, an identity in difference." ಎರಡೊಂದಾಗಿರುವುದೇ (Unity-in-duality) ಶ್ರೀಪತಿಪಂಡಿತರು ಹೇಳುವ ದ್ವೈತಾದ್ವೈತ ಪದಗಳಲ್ಲಿರುವ ಭಾವನೆ. ಎರಡೊಂದಾಗಿರುವುದೇ ಶ್ರೀಕಂಠ ಶಿವಾಚಾರ್ಯರು ಉಪಯೋಗಿಸಿ ರುವ ವಿಶಿಷ್ಟಾದ್ವೈತದ ಕಲ್ಪನೆ. ಇಬ್ಬರ ಅಭಿಪ್ರಾಯ ಒಂದೇ, ಮಾತು ಬೇರೆ. ಮಾತಿನ ಹಿಂದಿನ ಅಭಿಪ್ರಾಯವನ್ನು ಗ್ರಹಿಸಿದರೆ ವಾದವು ಕಡಮೆಯಾಗುವುದು. ಮಾತಿನಲ್ಲಿನ ಪದಗಳ ಅರ್ಥವನ್ನು ಜಗ್ಗಿಸಿ ಎಳೆದರೆ ಭಿನ್ನಾಭಿಪ್ರಾಯವು ಹೆಚ್ಚುವುದು. ಡಾ॥ ಪಾಂಡೆಯವರ ಅಭಿನವಗುಪ್ತ ವಿಷಯಕ ಗ್ರಂಥದ ೨೧೪ ನೆಯ ಪುಟದಲ್ಲಿ ಹೇಳಿದಂತೆ:

No language is perfect. We cannot find a conventional expression for each shade of difference in our ideas, in any language. We have to depend upon approximations to convey the idea of subtle differences. We have therefore to clearly understand the implication of each word of a question regarding a philosophical problem. In fact much of the confusion we find in the writings of later commentators on ancient philosophical authorities is due to the fight over words.

ಇಬ್ಬರು ಒಂದೇ ಮಾತನ್ನು ಹೇಳಿದರೂ ಇಬ್ಬರ ಅಭಿಪ್ರಾಯವೂ ಬೇರೆ ಬೇರೆಯಾಗಿರಬಹುದು. ಇಬ್ಬರು ಬೇರೆ ಬೇರೆ ಮಾತನ್ನು ಹೇಳಿದರೂ ಇಬ್ಬರ ಅಭಿಪ್ರಾಯವೂ ಒಂದೇ ಆಗಿರಬಹುದು. ಹಿಂದೆ ತೋರಿಸಿದಂತೆ ಶ್ರೀಕಂಠ ಶಿವಾಚಾರ್ಯರೂ ಶ್ರೀಪತಿಪಂಡಿತರೂ ಒಂದೇ ತರದ ಮಾತಿನಲ್ಲಿ ಇಬ್ಬರಿಗೂ ಒಂದೆಯಾದ ಅಭಿಪ್ರಾಯವನ್ನೇ ಹೇಳಿರುವರು. ಕೆಲವು ವೇಳೆ ಇವರೀರ್ವರ ಮಾತುಗಳಲ್ಲಿ ವ್ಯತ್ಯಾಸವಿದ್ದರೂ ಅವರಿಬ್ಬರ ಅಭಿಪ್ರಾಯವು ಒಂದೆಯೆಂದು ತೋರಿಸಲಾಗಿದೆ. ಪ್ರತಿಯೊಂದು ಮತದವರಲ್ಲಿಯೂ ಅವರ ಆಚಾರ್ಯರುಗಳಲ್ಲಿ ಸ್ವಲ್ಪ ಮಟ್ಟಿಗೆ ಭಿನ್ನಾಭಿಪ್ರಾಯವಿರುವುದು. ಶ್ರೀಕರಭಾಷ್ಯಕ್ಕೂ ಶ್ರೀಕಂಠಭಾಷ್ಯಕ್ಕೂ ಈ ತರದ ಅಲ್ಪಸ್ವಲ್ಪ ವ್ಯತ್ಯಾಸವಿರಬಹುದು; ಆದರೆ ಈ ಭಾಷ್ಯಕಾರರಿಬ್ಬರೂ ಒಂದೇ ಸಿದ್ಧಾಂತವನ್ನು ಹೇಳುವ ಒಂದೇ ಮತದವರೆಂದು ಹೇಳಲು ಯಾವ ಸಂದೇಹವೂ ಇಲ್ಲ.

ಯಾವುದಾದರೂ ಸಿದ್ಧಾಂತದ ನಿಲುವೇನೆಂಬುದನ್ನು ತಿಳಿಯಲು ಕೆಲವು ವಿಷಯಗಳ ದೃಷ್ಟಿಯಿಂದ ಆ ಸಿದ್ಧಾಂತವನ್ನು ಪರೀಕ್ಷಿಸಬೇಕಾಗುವುದು. (೧) ಆ ಸಿದ್ಧಾಂತದ ಪ್ರಕಾರ ಚರಾಚರಾತ್ಮಕವಾದ ಪ್ರಪಂಚದ ಸೃಷ್ಟಿಸ್ಥಿತಿಲಯಾದಿಗಳಿಗೆ ಕಾರಣರಾರು? (೨) ಜಗತ್ತೆಂಬ ಕಾರ್ಯಕ್ಕೆ ಆ ಕಾರಣವು ನಿಮಿತ್ತ ಕಾರಣವೋ ಉಪಾದಾನ ಕಾರಣವೋ ಅಭಿನ್ನ ನಿಮಿತ್ತೋಪಾದಾನ ಕಾರಣವೋ? (೩) ಈ ಭವಸಾಗರದಿಂದ ಪಾರಾಗಿ ಪಡೆಯುವ ಮೋಕ್ಷದ ಸ್ವರೂಪವೇನು? ಸಿದ್ಧಾಂತವಿಷಯಕ್ಕೆ ಸಂಬಂಧಪಟ್ಟ ಈ ಪ್ರಶ್ನೆಗಳಾದ ಮೇಲೆ ಉಳಿದ ೪ನೆಯ ಪ್ರಶ್ನೆಯು ಮೋಕ್ಷೋಪಾಯವೇನು ಎಂಬುದು. ಈ ಪ್ರಶ್ನೆಗಳಿಗೆ ಉತ್ತರಗಳು ಶ್ರೀಕಂಠಭಾಷ್ಯದಲ್ಲಿಯೂ ಶ್ರೀಕರಭಾಷ್ಯದಲ್ಲಿಯೂ ಒಂದೇ ರೀತಿಯಾಗಿರುವುದು ಕಂಡುಬರುವುದು. ಜಗತ್ಕಾರಣವು ಪರಶಿವ ಬ್ರಹ್ಮನೆಂದೇ ಶ್ರೀಕಂಠ ಶಿವಾಚಾರ್ಯರೂ ಶ್ರೀಪತಿಪಂಡಿತರೂ ಒತ್ತಿ ಒತ್ತಿ ಹೇಳುತ್ತಿರುವುದು ಕಂಡುಬರುವುದು. ಅಷ್ಟೇ ಅಲ್ಲ 'ಉತ್ಪತ್ತೇರಸಂಭವಾತ್' (೨-೨-೪೨) ಎಂಬ ಸೂತ್ರದ ಶ್ರೀಕರಭಾಷ್ಯದಲ್ಲಿ "ಧ್ಯೇಯಸ್ಸದಾಸವಿತೃಮಂಡಲಮಧ್ಯವರ್ತೀ ಇತ್ಯಾದಿನಾ ನಾರಾಯಣಸ್ಯ ಸೂರ್ಯಮಂಡಲಾಂತರ್ವರ್ತಿತ್ವ ನಿರ್ದೇಶಾತ್, ಭರ್ಗಶಬ್ದವಾಚ್ಯತ್ವಂ ತಸ್ಯೈವೇತಿ ಚೇನ್ನ; ಅಂತಸ್ತದ್ಧರ್ಮೋಪದೇಶಾಧಿಕರಣೇ ತನ್ನಿರಾಕೃತಂ ನೀಲಕಂಠಭಾಷ್ಯೇ.... ಶಿವಸ್ಯ ಸೂರ್ಯಮಂಡಲಾಂತರ್ವರ್ತಿತ್ವೇನ ತನ್ಮಂತ್ರಾರ್ಥಸ್ಯೋಪದೇಶಾತ್" ಎಂದು ಹೇಳಿ ಶಿವನೇ ಜಗತ್ಕಾರಣವಾದ ಪರಬ್ರಹ್ಮವೆನ್ನುವುದಕ್ಕೆ ಆಧಾರವನ್ನಾಗಿ ನೀಲಕಂಠಭಾಷ್ಯವೆಂದೂ ಕರೆಯಲ್ಪಡುತ್ತಿರುವ ಶ್ರೀಕಂಠಭಾಷ್ಯದಿಂದ ತೆಗೆದುಕೊಂಡು ಶ್ರೀಪತಿಪಂಡಿತರು ಸಿದ್ಧಾಂತ ಮಾಡಿದ್ದಾರೆ. ಇನ್ನು ಪರಶಿವಾಭಿನ್ನವಾದ ಶಕ್ತಿಯು ಪರಶಿವ ಬ್ರಹ್ಮದಿಂದ ಹೊರಹೊಮ್ಮಿ ಚಿದಚಿತ್ತುಗಳಾಗಿ ಪರಿಣಮಿಸಿ ಜಗತ್ತಾಗುವುದೆಂಬುದನ್ನು ಇಬ್ಬರೂ ಒಂದೇ ರೀತಿಯಲ್ಲಿ ಸಿದ್ಧಾಂತಮಾಡಿ ಒಂದೇ ತರದ ಉದಾಹರಣೆ

-ಗಳನ್ನು ಕೊಟ್ಟಿರುವುದನ್ನು ಹಿಂದೆಯೇ ತಿಳಿಸಿದೆ. ಇಬ್ಬರ ಸಿದ್ಧಾಂತದ ಪ್ರಕಾರವೂ, ಪರಶಿವ ಬ್ರಹ್ಮವು ಸತ್ಯವಾದ ಜಗತ್ತಿಗೆ ಅಭಿನ್ನನಿಮಿತ್ತೋಪಾದಾನಕಾರಣವಾಗಿರುವುದು. ಇನ್ನು ಮೋಕ್ಷವನ್ನು ಸಾಧಿಸುವ ಉಪಾಯವೇನು ಎಂಬ ಪ್ರಶ್ನೆಗೆ ಯಾವಜ್ಜೀವವೂ ಲಿಂಗಧಾರಣ ಲಿಂಗಾರ್ಚನೆಗಳಿಂದೊಡಗೂಡಿದ ಅತ್ಯಾಶ್ರಮಿ, ಮಹಾಪಾಶುಪತ ಎಂಬ ಹೆಸರುಗಳಿಂದ ಕರೆಯಲ್ಪಡುವ ವ್ರತವನ್ನಾಚರಿಸುತ್ತ, ಅಹಂಗ್ರಹೋಪಾಸನೆಯಿಂದ ಮೋಕ್ಷವನ್ನು ಪಡೆವುದೇ ಎರಡು ಭಾಷ್ಯಗಳ ಪ್ರಕಾರವೂ ಮೋಕ್ಷೋಪಾಯವು ಎಂಬುದನ್ನು ವಿಚಾರಮಾಡುವ ಮೊದಲು ಮೋಕ್ಷದ ಸ್ವರೂಪವಿಷಯದಲ್ಲಿ ಎರಡು ಭಾಷ್ಯಗಳಲ್ಲಿ ಹೊಂದಾಣಿಕೆಯಿರುವುದನ್ನು ಪರೀಕ್ಷಿಸಲಾಗುವುದು.

ಶ್ರೀಕರಭಾಷ್ಯದ " **ಮುಕ್ತೋಪಸೃಪ್ಯವ್ಯಪದೇಶಾತ್** " (೧-೩-೨) ಎಂಬ ಸೂತ್ರದ ಭಾಷ್ಯದಲ್ಲಿ " **ಪರಮಂ ಸಾಮ್ಯಮುಪೈತಿ-ಇತ್ಯತ್ರ ಪರಮಶಿವೋಪಾಸಕಾನಾಂ ಶಿವ ಸಾರೂಪ್ಯಮುದ್ದಿಶ್ಯ** " ಎಂದು ಹೇಳಿ " **ನಿರತಿಶಯಾನಂದಸ್ವರೂಪಾ ತತ್ಸಮಾನಗುಣ-ಸಾರಾ ಕೈವಲ್ಯಲಕ್ಷ್ಮೀಪ್ರಾಪ್ತಿರೂಪ ಮುಕ್ತಿಃ** " ಎಂದು ಮುಕ್ತಿಯನ್ನು ವಿವರಿಸಿರುವುದರಲ್ಲಿ ಸಾರೂಪ್ಯವೇ ಮುಕ್ತಿಸ್ವರೂಪವೆಂಬುದು ಸ್ಪಷ್ಟಮಾಡಲ್ಪಟ್ಟಿದೆ. ' **ಅಥಾತೋ ಬ್ರಹ್ಮಜಿಜ್ಞಾಸಾ** ' ಎಂಬ ಸೂತ್ರದ ಶ್ರೀಕಂಠಭಾಷ್ಯದಲ್ಲಿ " **ನಿಖಿಲ ಜ್ಞಾನಾನಂದ ಸ್ವರೂಪಾ ತತ್ಸಮಾನಗುಣಸಾರಾ ಕೈವಲ್ಯಲಕ್ಷ್ಮೀಃ ಪ್ರಯೋಜನಂ ಚ ಭವತಿ** " ಎಂದು ಹೇಳಿರುವಂತೆಯೇ ಶ್ರೀಕರಭಾಷ್ಯದಲ್ಲಿ ಹೇಳಿರುವುದು ಗಮನಾರ್ಹ. " **ಭೋಗಮಾತ್ರ ಸಾಮ್ಯಲಿಂಗಾಚ್ಚ** " (೪-೪-೨೧) ಎಂಬ ಸೂತ್ರದ ಶ್ರೀಕಂಠಭಾಷ್ಯದಲ್ಲಿ " **ಮುಕ್ತಸ್ಯ ಬ್ರಹ್ಮಣಾ ಸಾಮ್ಯಂ ಸಕಲ ಕಾಮಭೋಗಮಾತ್ರಾದೇವ, ನ ಜಗತ್ ಸೃಷ್ಟ್ಯಾದಿನಾ** " ಎಂದು ಹೇಳಿ ಮುಂದಿನ ಸೂತ್ರದ ಆರಂಭದಲ್ಲಿ " **ಉಕ್ತಂ ಬ್ರಹ್ಮಣಾ ಸಾದೃಶ್ಯಂ ಸಾಯುಜ್ಯಂ ಮುಕ್ತಾನಾಂ, ಭೋಗಾದಿ ಸಾಧರ್ಮ್ಯಾತ್** " ಎಂದು ಮೋಕ್ಷಸ್ವರೂಪವನ್ನು ವಿವರಿಸಿರುವುದರಲ್ಲಿಯೂ ಸಾರೂಪ್ಯವೇ ಮುಕ್ತಿಸ್ವರೂಪವೆಂಬುದು ಸ್ಪಷ್ಟವಾಗಿದೆ. ಈ ಸಾರೂಪ್ಯವಾದರೂ ಭೋಗದಲ್ಲಿ ಸಾಧರ್ಮ್ಯ ಮಾತ್ರವಲ್ಲದೆ ಪರಶಿವಬ್ರಹ್ಮಕ್ಕೆ ಮೀಸಲಾದ ಸೃಷ್ಟಿಕಾರ್ಯಕ್ಕೆ ಅನ್ವಯಿಸಿಲ್ಲವೆಂದು ಶ್ರೀಕಂಠಭಾಷ್ಯದಲ್ಲಿ ಹೇಳಿರುವಂತೆಯೇ ಶ್ರೀಕರಭಾಷ್ಯದಲ್ಲಿಯೂ ಹೇಳಿರುವುದು ಕಂಡುಬರುವುದು. ಮೇಲೆ ಹೇಳಿದ ಸೂತ್ರದ ಶ್ರೀಕರಭಾಷ್ಯದಲ್ಲಿ " **ಭೋಗಮಾತ್ರೇ ಮುಕ್ತಸ್ಯ ಬ್ರಹ್ಮಸಾಮ್ಯ ಪ್ರತಿಪಾದನಾತ್** " ಎಂದು ಪ್ರಾರಂಭದಲ್ಲಿ ಹೇಳಿ, ತದನಂತರ " **ಮುಕ್ತಜೀವಾನಾಂ ಜಗತ್ಕಾರಣತ್ವಂ ····ನ ಸಂಭವತಿ** " ಎಂದು ವಿವರಿಸಿರುವುದೂ, ಕ್ರಿಯಾಸಾರದಲ್ಲಿ "**ನ ಜಗದ್ವ್ಯಾಪೃತೌತು ಭೋಗಮಾತ್ರೇತು ಕೇವಲಂ**" ಎಂದು ಈ ಸೂತ್ರವಿಷಯವಾಗಿ ಹೇಳಿರುವುದೂ ಸಹಾ ಶ್ರೀಕಂಠಭಾಷ್ಯಾನುಸಾರವಾಗಿದೆ. ಹೀಗೆ ಮುಕ್ತರಿಗೆ ಜಗತ್‌ಸೃಷ್ಟ್ಯಾದಿ ಕಾರ್ಯಗಳಲ್ಲಿ ಮಾತ್ರ ಶಿವಸಾಮ್ಯವಿಲ್ಲದಿರುವುದನ್ನು " **ಜಗದ್ವ್ಯಾಪಾರವರ್ಜಂ** " ಎಂದು ಮೊದಲಾಗುವ (೪-೪-೧೭ ನೆಯ) ಸೂತ್ರದಲ್ಲಿ ಹೇಳಿದೆ. ಇದರ ಶ್ರೀಕಂಠಭಾಷ್ಯದಲ್ಲಿ " **ಯತೋವಾ ಇಮಾನಿ ಭೂತಾನಿ ಜಾಯಂತೇ ದ್ಯಾವಾಪೃಥಿವೀ ಜನಯನ್ ದೇವ ಏಕಃ—ಇತ್ಯಾದಿಷು ಶ್ರುತಂ ಜಗತ್ ಸೃಷ್ಟ್ಯಾದಿಕಂ ಪರಮೇಶ್ವರಸ್ಯ ಪ್ರಕರಣಾದವಗಮ್ಯತೇ; ಸೃಷ್ಟ್ಯಾದಿ ಪ್ರಕರಣೇಷ್ವಸನ್ನಿಹಿತ ಏವ ಜೀವಃ** " ಎಂದು ಹೇಳಿದೆ. ಇದಕ್ಕೆ ಅನುಸಾರವಾಗಿಯೇ ಈ ಸೂತ್ರದ ಶ್ರೀಕರಭಾಷ್ಯದಲ್ಲಿ " **ಯತೋವಾ ಇಮಾನಿ ಭೂತಾನಿ ಜಾಯಂತೇ, ದ್ಯಾವಾಪೃಥಿವೀ ಜನಯನ್ ದೇವ ಏಕಃ····**

ಇತ್ಯಾದಿ ಶ್ರುತಿ ನಿರ್ದಿಷ್ಟ ಜಗಜ್ಜನ್ಮಾದಿ ಕಾರಣತ್ವಂ ಮುಕ್ತಾನಾಂ ಸಾಧಾರಣತ್ವೇ ಬ್ರಹ್ಮ ಲಕ್ಷಣಂ ನ ಸಂಗಚ್ಛತೇ" ಎಂದು ಹೇಳಿರುವುದು ಎಷ್ಟರಮಟ್ಟಿಗೆ ಎರಡು ಭಾಷ್ಯಗಳಲ್ಲಿಯೂ ಹೊಂದಾಣಿಕೆಯಿದೆ ಎಂಬುದನ್ನು ತೋರಿಸುತ್ತದೆ. ಶ್ರೀಯುತ ಹಯವದನರಾಯರು ಶ್ರೀಕರ ಭಾಷ್ಯದ ಉಪೋದ್ಘಾತದಲ್ಲಿ "Sripati speaks of the sārūpya form of Brahman ....and describes mukti in these words:" "ನಿರತಿಶಯ ಸ್ವರೂಪಾನಂದ ಸಾಕ್ಷಿ ಸ್ವಪ್ರಕಾಶ ಶಿವರೂಪಪರಾಹಂಭಾವಾಪತ್ತಿಃ ಮುಕ್ತಿಃ" ಎಂದು ಹೇಳಿದ್ದಾರೆ. ಶ್ರೀಕಂಠ ಭಾಷ್ಯದ ೪-೧-೩ನೆಯ ಸೂತ್ರದಭಾಷ್ಯದ ಕೊನೆಯಲ್ಲಿ "ನಿರತಿಶಯ ಸ್ವರೂಪಾನಂದ ಸಾಕ್ಷಿಸ್ವಪ್ರಕಾಶ ಶಿವರೂಪಪರಾಹಂಭಾವಾಪತ್ತಿರ್ಮುಕ್ತಿಃ" ಎಂದೇ ಹೇಳಿದೆ.

## ಕ್ರಿಯಾಸಾರವು ನೀಲಕಂಠಭಾಷ್ಯದ ಕಾರಿಕೆಯೆ

ನೀಲಕಂಠಭಾಷ್ಯವೆಂದೂ ಕರೆಯಲ್ಪಡುವ ಶ್ರೀಕಂಠಭಾಷ್ಯದ ಕಾರಿಕೆಯೆಂದು ಕರೆದು ಕೊಳ್ಳುವ ಕ್ರಿಯಾಸಾರದ ಪ್ರಥಮೋಪದೇಶದಲ್ಲಿ, ಶ್ರೀಕಂಠಭಾಷ್ಯ ಮತ್ತು ಶ್ರೀಕರಭಾಷ್ಯದಂತೆ ಸಾರೂಪ್ಯವೇ ಮುಕ್ತಿಸ್ವರೂಪವೆಂದು ಹೇಳಿದೆ.

ಅಮೃತಸ್ಯೇತಿ ವಾಕ್ಯೇನ ಧಾರಣಂ ಪ್ರತಿಪಾದಿತಂ ।
ತನ್ನಿಷ್ಠಾ ಏವ ಮನುಜಾ ಅತಿವರ್ಣಾಶ್ರಮೋ ರತಾಃ ॥ ೧೮೧ ॥

ತ ಏವ ಹಿ ಮಹಾತ್ಮಾನೋ ಬ್ರಹ್ಮನಿಷ್ಠಾ ಉದಾಹೃತಾಃ ।
ಲಿಂಗಾಂಗ ಸಾಮರಸ್ಯೇನ ಬ್ರಹ್ಮಭಾವಮುಪಾಶ್ರಿತಾಃ ॥ ೧೮೧ ॥

ಸಾರೂಪ್ಯ ರೂಪಿಣೀಂ ಮುಕ್ತಿಂ ಸಂಪ್ರಾಪ್ಯ ಪರದುರ್ಲಭಾಂ ।
ಕೃತಕೃತ್ಯಾ ಭವಂತ್ಯೇವ ಶಿವಾನಂದಭುಜೋಽನಿಶಂ ॥

ಕ್ರಿಯಾಸಾರದ 'ಭೋಗಮಾತ್ರ ಸಾಮ್ಯ ಲಿಂಗಾಚ್ಚ' ಎಂಬ ಸೂತ್ರದ ಕಾರಿಕೆಯಲ್ಲಿಯೂ ಸಾರೂಪ್ಯ ಮುಕ್ತಿಯನ್ನೇ ಹೇಳಿದೆ.

"ತಥಾ ವಿದ್ವಾನ್ ಪುಣ್ಯಪಾಪೇ ವಿಧೂಯಾಥ ನಿರಂಜನಃ ।
ಉಪೈತಿ ಪರಮಂ ಸಾಮ್ಯಮಿತಿಯತ್ ಸಾಮ್ಯಮೀರಿತಂ ॥"

ಹೀಗೆ ಶ್ರೀಕಂಠಭಾಷ್ಯದ ಕಾರಿಕೆಯೆಂದು ಕರೆದುಕೊಳ್ಳುವ ವೀರಶೈವರಿಂದ ಆಧಾರ ಗ್ರಂಥವೆಂದು ಪರಿಗ್ರಹಿಸಲ್ಪಟ್ಟಿರುವ ಕ್ರಿಯಾಸಾರದಲ್ಲಿ ಸಹಾ ಮುಕ್ತಿಸ್ವರೂಪವು ಸಾರೂಪ್ಯ ವೆಂದೇ ಹೇಳಿರುವುದು ಶ್ರೀಕಂಠಭಾಷ್ಯಾನುಸಾರವಾಗಿದೆ. ಇದರಿಂದ ಕ್ರಿಯಾಸಾರವನ್ನು ಬರೆದ ನೀಲಕಂಠರು ಶ್ರೀಕಂಠ ಶಿವಾಚಾರ್ಯರ ಭಾಷ್ಯವನ್ನೇ ಅನುಸರಿಸಿರುವರೆಂಬುದು ಸ್ಪಷ್ಟ. ಶ್ರೀಕಂಠಭಾಷ್ಯ ಕ್ರಿಯಾಸಾರ, ಶ್ರೀಕರಭಾಷ್ಯ ಮತ್ತು ಸಿದ್ಧಾಂತ ಶಿಖಾಮಣಿಗಳನ್ನು ತುಲನಾತ್ಮಕ ದೃಷ್ಟಿಯಿಂದ ವಿವರಿಸುವ ಮಹತ್ಕಾರ್ಯವು ವೀರಶೈವ ಪಂಡಿತರಿಂದ ಆಗಬೇಕಾಗಿದೆ.

ಕ್ರಿಯಾಸಾರವು ನೀಲಕಂಠ ಶಿವಾಚಾರ್ಯರೆಂದೂ ಕರೆಯಲ್ಪಡುವ ಶ್ರೀಕಂಠ ಶಿವಾಚಾರ್ಯರ ಭಾಷ್ಯದ ಕಾರಿಕೆಯೆ ಎಂಬುದು ವಿಚಾರಾರ್ಹವಾದುದಾಗಿದೆ. ಶೈವ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವ ಭಾಷ್ಯವು ಈ ಭಾಷ್ಯವಲ್ಲದೆ ಮತ್ತಾವುದೂ ಇಲ್ಲ. ಕ್ರಿಯಾಸಾರ ದಲ್ಲಿಯೇ ಅದು ವಿಶಿಷ್ಟಾದ್ವೈತವನ್ನು ಹೇಳುವ ನೀಲಕಂಠಭಾಷ್ಯದ ಕಾರಿಕೆಯೆಂದು ಹೇಳಿರು ವುದಕ್ಕೆ ಆಧಾರವನ್ನು ಹಿಂದೆ ಕೊಡಲಾಗಿದೆ. ಆದರೆ ಕ್ರಿಯಾಸಾರವು ವೀರಶೈವ ಸಿದ್ಧಾಂತ

ವನ್ನೇ ವಿಶಿಷ್ಟಾದ್ವೈತಸಿದ್ಧಾಂತವೆಂದು ಕರೆದಿರುವುದು ಗಮನಾರ್ಹವಾಗಿದೆ. ವೀರಶೈವ ಆಧಾರಗ್ರಂಥಗಳಲ್ಲಿ ಶಿವನು ಶಕ್ತಿವಿಶಿಷ್ಟನಾಗಿ ಜಗತ್ಸೃಷ್ಟಿಗೆ ಕಾರಣನಾಗುವನೆಂಬುದು ಹೇಳಲ್ಪಟ್ಟಿದ್ದರೂ ಯಾವ ಆಧಾರಗ್ರಂಥದಲ್ಲಿಯೂ ವೀರಶೈವವನ್ನು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವೆಂಬ ಹೆಸರಿನಿಂದ ಕರೆದಿಲ್ಲ. ಆದುದರಿಂದ ವೀರಶೈವ ಪದಕ್ಕೆ ಪರ್ಯಾಯ ಪದವಾಗಿ ಈಗ ರೂಢಿಯಲ್ಲಿರುವ ಈ ಪದವು ಸರಿಯೆ ಎಂಬುದನ್ನು ಶ್ರೀ ಜ. ಚ. ನಿ. ಯವರ 'ಶಿವಾದ್ವೈತದರ್ಶನ'ದ ಪೀಠಿಕೆಯಲ್ಲಿ ವಿಚಾರಮಾಡಿದ್ದೇನೆ; ಇಲ್ಲಿ ಅದರ ಪ್ರಕೃತವಿಲ್ಲ. ಏಕೆಂದರೆ ವೀರಶೈವವನ್ನು ಪ್ರಕೃತ ವಿಷಯವಾದ ವಿಶಿಷ್ಟಾದ್ವೈತ ಪದದಿಂದ ಕರೆಯುವುದು ರೂಢಿಯಲ್ಲಿ ಸಹಾ ಇಲ್ಲ. ಉಳಿದ ಯಾವ ವೀರಶೈವ ಗ್ರಂಥದಲ್ಲಿಯೂ ಕ್ರಿಯಾಸಾರ ಕಾಲಕ್ಕೆ ಹಿಂದಾಗಲೀ ಮುಂದಾಗಲೀ ವೀರಶೈವ ಸಿದ್ಧಾಂತವನ್ನು ವಿಶಿಷ್ಟಾದ್ವೈತವೆಂದು ಕರೆದಿಲ್ಲ; ಅಲ್ಲದೆ ವಿಶಿಷ್ಟಾದ್ವೈತ ಪದವು ಶೂದ್ರಬ್ರಾಹ್ಮಣ ಪದದಂತೆ ಉಕ್ತಿವಿರೋಧವಾದ ಪದವೆಂದು ಶ್ರೀಕರಭಾಷ್ಯದಲ್ಲಿ ಹೇಳಿದೆ: **"ವಿಶಿಷ್ಟಾದ್ವೈತಮಿತ್ಯುಕ್ತಿವಿರೋಧಾತ್, ವಿಶಿಷ್ಟಸ್ಯ ದುರ್ನಿರೂಪ್ಯತ್ವೇನ ಮಿಥ್ಯಾತ್ವಾಚ್ಚ......ಶಿವಾದ್ವೈತಮೇವಗ್ರಾಹ್ಯಂ......ಶೂದ್ರ ಬ್ರಾಹ್ಮಣ ಇತಿವದ್ ವಿಶಿಷ್ಟಾದ್ವೈತಮಿತಿ ಮತಮವಿದುಷಾಮೇವ ಶೋಭತೇ";** ಈ ಟೀಕೆಯು ವೈಷ್ಣವವಿಶಿಷ್ಟಾದ್ವೈತಕ್ಕೆ ಹೆಚ್ಚು ಅನ್ವಯಿಸುವುದಿಲ್ಲ; ಏಕೆಂದರೆ ಆ ಸಿದ್ಧಾಂತ ದಂತೆ ಮೋಕ್ಷಸಾಧನೆಗೆ ಭಕ್ತಿಯುತವಾದ ಉಪಾಸನೆಯೇ ಉಪಾಯವಾದುದರಿಂದ ಕೊನೆಯ ವರೆಗೂ ದ್ವೈತಭಾವನೆಯಿರುವುದು; ಅಲ್ಲದೆ ಮೋಕ್ಷದಲ್ಲಿಯೂ ಜೀವಪರಮರು 'ಅತ್ಯಂತ ವಿಲಕ್ಷಣ'ರೆಂದು ಹೇಳಿರುವುದರಿಂದ ಭೇದವೇ ಅಭಿಪ್ರೇತವಾಗಿರುವುದು. ಆದುದರಿಂದ ಒಂದರೊಡನೆ ಮತ್ತೊಂದು ಸೇರಿರುವುದನ್ನು ಹೇಳುವ ವಿಶಿಷ್ಟಾದ್ವೈತ ಪದವು ರಾಮಾನುಜೀಯ ಸಿದ್ಧಾಂತಕ್ಕೆ ಹೊಂದಬಹುದು. ಅಂತಿಮ ಸ್ಥಿತಿಯಲ್ಲಿ ದ್ವೈತವನ್ನೇ ಪ್ರತಿಪಾದಿಸುವ ಈ ವೈಷ್ಣವ ವಿಶಿಷ್ಟಾದ್ವೈತವು ಪ್ರಸಿದ್ಧವಾದ ಮೇಲಂತೂ 'ವಿಶಿಷ್ಟಾದ್ವೈತ' ಪದವು ಮೋಕ್ಷ ದಲ್ಲಿ ಐಕ್ಯವನ್ನೂ, ಸಾಧನೆಯಲ್ಲಿ ಅಹಂಗ್ರಹೋಪಾಸನೆಯನ್ನೂ ಹೇಳುವ ವೀರಶೈವಕ್ಕೆ ಹೊಂದುವುದೇ ಇಲ್ಲ. ಹೀಗೆಲ್ಲ ಇದ್ದರೂ ಕ್ರಿಯಾಸಾರದಲ್ಲಿ 'ವಿಶಿಷ್ಟಾದ್ವೈತ' ಪದವನ್ನು ವೀರಶೈವ ಪದದ ಪರ್ಯಾಯಪದವಾಗಿ ಉಪಯೋಗಿಸಿರುವುದು ಅನಿವಾರ್ಯವಾದುದು. ಏಕೆಂದರೆ, ಕ್ರಿಯಾಸಾರವು ವಿಶಿಷ್ಟಾದ್ವೈತ ಪ್ರತಿಪಾದಕವಾದುದೆಂದು ಹೇಳಿಕೊಳ್ಳುವ, ಶ್ರೀಕಂಠ ಭಾಷ್ಯದ ಕಾರಿಕೆಯಾದುದರಿಂದಲೇ ಎನ್ನಬೇಕಾಗುವುದು.

ಕ್ರಿಯಾಸಾರವು ಶ್ರೀಕಂಠಭಾಷ್ಯಕ್ಕೆ ಅನುಸಾರವಾಗಿದೆಯೆಂಬುದು ಮೊದಲನೆಯ ಸೂತ್ರ ಭಾಷ್ಯದೊಡನೆ ಹೋಲಿಸುವುದರಿಂದ ಗೊತ್ತಾಗುವುದು. **"ಅಥಾತೋ ಬ್ರಹ್ಮಜಿಜ್ಞಾಸಾ"** ಎಂಬ ಸೂತ್ರದ ಮೊದಲನೆಯ ಪದದ ಅರ್ಥವನ್ನು ವಿವರಿಸುವಾಗ ಶ್ರೀಕಂಠಭಾಷ್ಯದಲ್ಲಿ ತೆಗೆದು ಕೊಂಡಿರುವ ಆಧಾರವಿದು: **"ಓಂಕಾರಶ್ಚಾಥಶಬ್ದಶ್ಚ ದ್ವಾವೇತೌಬ್ರಹ್ಮಣಃ ಪುರಾ। ಕಂಠಂಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ".** ಈ ಆಧಾರವನ್ನು ಕೊಟ್ಟು 'ಅಥ' ಶಬ್ದಕ್ಕೆ ಮಂಗಳವೆಂಬ ಅರ್ಥವು ಹೊಂದುವುದಿಲ್ಲವೆಂದು ಹೇಳುವ ಭಾಗವಿದು: **"ಇತಿ ಸ್ಮೃತೇರಯಮಥಶಬ್ದೋ ನ ಮಂಗಳಾರ್ಥೋ ವರ್ಣನೀಯಃ".** ಕ್ರಿಯಾಸಾರ ದಲ್ಲಿ ಸಹಾ ಇದೇ ಆಧಾರವನ್ನು ಕೊಟ್ಟು **"ಇತಿ ಪ್ರಮಾಣತಸ್ತತ್ರ ಮಂಗಲಾರ್ಥೋ ನ ಯುಜ್ಯತೇ"** ಎಂದರೆ 'ಮಂಗಳ' ಎಂಬ ಅರ್ಥವು 'ಅಥ' ಶಬ್ದಕ್ಕೆ ಹೊಂದುವುದಿಲ್ಲವೆಂದು ಹೇಳಿದೆ. ಅನೇಕ ವಿಷಯಗಳಲ್ಲಿ ಶ್ರೀಕರಭಾಷ್ಯಕ್ಕೂ ಶ್ರೀಕಂಠಭಾಷ್ಯಕ್ಕೂ ಹೋಲಿಕೆಯಿರುವ

ದಾಗಿ ಹಿಂದೆ ಹೇಳಲಾಯಿತಷ್ಟೆ. ಶ್ರೀಕರಭಾಷ್ಯದಲ್ಲಿಯೂ ಸಹಾ ಮೇಲಿನ ಆಧಾರವನ್ನೇ ಕೊಟ್ಟು 'ಅಥ' ಶಬ್ದಕ್ಕೆ 'ಮಂಗಳ' ಎಂಬ ಅರ್ಥವು ಹೊಂದುವುದಿಲ್ಲವೆಂದು ಹೇಳಿದೆಯೆಂಬುದನ್ನು ಆ ವಿಷಯಸಮರ್ಥನೆಗಾಗಿ ಇಲ್ಲಿ ಹೇಳಬಹುದು. "ಧರ್ಮವಿಚಾರಾನಂತರಂ ಬ್ರಹ್ಮ ವಿಚಾರಃ" ಎಂದು ಶ್ರೀಕಂಠಭಾಷ್ಯದಲ್ಲಿ ಹೇಳಿರುವಂತೆ 'ಅಥ' ಶಬ್ದಕ್ಕೆ 'ಅನಂತರ' ಎಂಬ ಅರ್ಥವನ್ನು ಕ್ರಿಯಾಸಾರದಲ್ಲಿ ಉಪಯೋಗಿಸಿಕೊಂಡಿದೆಯಾದರೂ, ಧರ್ಮವೆಂಬ ಪದದ ಅರ್ಥವನ್ನು ಕ್ರಿಯಾಸಾರವನ್ನು ರಚಿಸಿದ ಕಾಲದಲ್ಲಿ ಪ್ರಚಲಿತವಾಗಿದ್ದ ವೀರಶೈವ ಧರ್ಮಕ್ಕೆ ಅನುಸಾರವಾಗಿ ಹಿಗ್ಗಿಸಿಕೊಳ್ಳುವುದು ಕ್ರಿಯಾಸಾರಕ್ಕೆ ಅನಿವಾರ್ಯವಾಯಿತು. ಇನ್ನು ಸಾಧನ ಚತುಷ್ಟಯಗಳು ಬ್ರಹ್ಮಜಿಜ್ಞಾಸಕ್ಕೆ ಉಪಯೋಗವುಳ್ಳವುಗಳಾದರೂ ಅವುಗಳು ಜಿಜ್ಞಾಸಕ್ಕೆ ಮೊದಲೇ ಅವಶ್ಯವಾಗಿ ಅಧಿಕಾರವನ್ನು ಕೊಡತಕ್ಕವಲ್ಲವೆಂಬ ಭಾವವು ಕ್ರಿಯಾಸಾರದ ಈ ಶ್ಲೋಕಗಳಲ್ಲಿದೆ:

ಚತುರ್ಣಾಂ ಸಾಧನಾನಾಂ ತು ಸಂಪತ್ತೇಃ ಸಮನಂತರಂ ॥

ಇತಿ ಕೇಚಿದ್ವರ್ಣಯಂತಿ ತನ್ನಾತೀವೋಪಯುಜ್ಯತೇ ।
ಇಹಾಮುತ್ರಫಲೇ ಭೋಗವಿರಾಗಃ ಶಮಶಾಲಿತಾ ॥

ವೇದಾಂತಾರ್ಥ ವಿಚಾರೈಕಲಭ್ಯತ್ವಾದಧಿಕಾರಿತಾಂ ।
ನ ಸಂಪಾದಯತೀತ್ಯತ್ರ ಧರ್ಮಾನಂತರ್ಯಮುಚ್ಯತೇ ॥

ಶ್ರೀಯುತ ಸೂರ್ಯನಾರಾಯಣ ಶಾಸ್ತ್ರಿಗಳು *The Sivadvaita of Srikantha* ಎಂಬ ಗ್ರಂಥದ ೯೨ನೆಯ ಪುಟದಲ್ಲಿ ಹೇಳಿದಂತೆ—"It is also seen from the commentary on 1–I–4 that the acquisition of calmness, etc., is *subsidiary* to the aquisition of the knowledge of Brahman, *not a preliminary* thereto." ಆದುದರಿಂದ ಕ್ರಿಯಾಸಾರದಲ್ಲಿ ಹೇಳಿರುವುದು ಶ್ರೀಕಂಠಭಾಷ್ಯದಲ್ಲಿ ಹೇಳಿದಂತೆ ಶಮಾದಿಗಳು ಉಪಯೋಗವಾದುವಾದರೂ, ಅವು ಬ್ರಹ್ಮಜಿಜ್ಞಾಸಕ್ಕೆ ಪೂರ್ವಭಾವಿಯಾಗಿ ಅಧಿಕಾರಸೂಚಕವಾದುವಲ್ಲವೆನ್ನುವುದಕ್ಕೆ ಅನುಸಾರವಾಗಿದೆ. "ತನ್ನಾತೀವೋಪಯುಜ್ಯತೇ" ಎಂದು ಕ್ರಿಯಾಸಾರದಲ್ಲಿ ಹೇಳಿರುವುದರಲ್ಲಿ ಸಾಧನ ಚತುಷ್ಟಯದ ಉಪಯೋಗವು ಅತೀವವಾಗಿ ಅಲ್ಲವಾದರೂ ಸಾಮಾನ್ಯವಾಗಿಯಾದರೂ ಇದೆ ಎಂಬ ಭಾವವಿದೆ. ಕ್ರಿಯಾಸಾರದಲ್ಲಿ "ಅತಃ ಶಬ್ದೋಽತ್ರ ಹೇತ್ವರ್ಥಃ" ಎಂದು ಹೇಳಿರುವುದು ಶ್ರೀಕಂಠಭಾಷ್ಯಾನುಸಾರವಾಗಿರುವುದರಲ್ಲಿ ಗಮನಾರ್ಹವಾದುದೇನೂ ಇಲ್ಲ. ಇನ್ನು "ಬ್ರಹ್ಮ" ಪದದ ವಿಷಯದಲ್ಲಿ "ಸಕಲ ಚಿದಚಿತ್ ಪ್ರಪಂಚಾಕಾರ ಪರಮಶಕ್ತಿವಿಶಿಷ್ಟಾದ್ವಿತೀಯ ವೈಭವಸ್ಯ" ಎಂದು, ಶಕ್ತಿವಿಶಿಷ್ಟಾದ್ವೈತ ಪರಶಿವಬ್ರಹ್ಮ ವಿಷಯವಾಗಿ ಇಂದೂ ವೀರಶೈವರು ಹೇಳುವಂತೆ ಶ್ರೀಕಂಠ ಭಾಷ್ಯದ ಮೊದಲನೆಯ ಸೂತ್ರದ ಭಾಷ್ಯದಲ್ಲಿ ಹೇಳಿರುವುದೇ ಕ್ರಿಯಾಸಾರದಲ್ಲಿ ಆ ಭಾಷ್ಯದ ಕಾರಿಕೆಯನ್ನು ಬರೆಯಲು ಕಾರಣವಾಗಿರಬೇಕು. "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದಲ್ಲಿ ಉಳಿದ ಪದವು 'ಜಿಜ್ಞಾಸ' ಎಂಬುದು. ಜಿಜ್ಞಾಸವೆಂದರೆ ವಿಚಾರ. ವಿಚಾರ ಮಾಡುವುದು ಸಂಶಯ ಬಂದಿದ್ದರೆ ಅಲ್ಲವೆ? ಇಲ್ಲಿ ಸಂಶಯವೇನು ಎಂದರೆ ಪರಸ್ಪರ ವಿರುದ್ಧವಾದ ಗುಣಗಳುಳ್ಳ ಜೀವಬ್ರಹ್ಮರು ಒಂದೆಯೆಂದು ಶ್ರುತಿಗಳು ಹೇಳುತ್ತಿರುವುದು ಸಂಶಯಕ್ಕೆ ಕಾರಣವಾಗಿದೆ. "ನಿರಸ್ತ ಸಮಸ್ತೋಪಪ್ಲವ ಕಲಂಕ ನಿರತಿಶಯ ಜ್ಞಾನಾನಂದಾದಿ ಶಕ್ತಿಮಹಿಮಾತಿಶಯವತ್ತ್ವಂ ಹಿ ಬ್ರಹ್ಮತ್ವಂ" ಎಂಬುದು ಬ್ರಹ್ಮದ ವರ್ಣನೆ. "ಅನಾದ್ಯ

ಜ್ಞಾನವಾಸನಾವಷ್ಟಂಭ ವಿಜೃಂಭಿತ ವಿಚಿತ್ರ ಕರ್ಮಫಲ ಭೋಗಾನುಗುಣ ಬಹುಶರೀರ ಪ್ರವೇಶನಿರ್ಗಮವ್ಯಾಪಾರಪರವಶನಿಸ್ಸೀಮ ತಾಪಸಹಿಷ್ಣುತ್ವಂ ಹಿ ಜೀವತ್ವಂ" ಎಂಬುದು ಜೀವತ್ವದ ವರ್ಣನೆ. "ಕಥಮೇತಯೋಃ ಪರಸ್ಪರ ವಿಲಕ್ಷಣಯೋರೇಕಭಾವಮಾಹುಃ ಶ್ರುತಯ ಇತಿ ಸಂಶಯಃ". ಹೀಗೆ ಸಂಶಯವನ್ನು ಶ್ರೀಕಂಠಭಾಷ್ಯದಲ್ಲಿ ಹೇಳಿದೆ. ಇದೇ ವಿಷಯವನ್ನು ಇದೇ ರೀತಿಯಲ್ಲಿ ಬ್ರಹ್ಮತ್ವವನ್ನೂ ಜೀವತ್ವವನ್ನೂ ವರ್ಣಿಸಿ, ಒಂದನ್ನೊಂದರ ಎದುರಿಗಿಟ್ಟು ಸಂಶಯವನ್ನು ಶ್ರೀಕರಭಾಷ್ಯದಲ್ಲಿ ತೋರಿಸಿರುವುದನ್ನು ನೋಡಿದರೆ ಶ್ರೀಪತಿಯು ಶ್ರೀಕಂಠ ಶಿವಾಚಾರ್ಯರನ್ನು ಭಗವತ್ಪಾದರೆಂದು ಗೌರವಿಸಿರುವುದರಲ್ಲಿ ಹೆಚ್ಚೇನು ಕಾಣುವುದಿಲ್ಲ. ಶ್ರೀಕಂಠಭಾಷ್ಯ ಭಾಗಕ್ಕೆ ಅನುಸಾರವಾಗಿರುವ ಶ್ರೀಕರಭಾಷ್ಯದ ಭಾಗವಿದು: "ಅನಂತಶಕ್ತಿ ವಿಶಿಷ್ಟ ಜಗದುಭಯಕಾರಣ ಪಶುಪಾಶ ನಿಯಾಮಕ ಸಕಲ ನಿಷ್ಕಲ ಸ್ಥೂಲಸೂಕ್ಷ್ಮ ಚಿದಚಿತ್ ಪ್ರಕಾಶಕ ಸತ್ಯಜ್ಞಾನಾನಂತ ಕಲ್ಯಾಣಗುಣವಿಭವಾಶ್ರಯತ್ವಂ ಬ್ರಹ್ಮತ್ವಂ. ಅನಾದಿ ಸ್ವಾಭಾವಿಕ ಮಾಯಾಪಾಶಬದ್ಧ ಘೋರಾಪಾರ ನಿಸ್ಸಾರ ಸಂಸಾರವ್ಯಾಪಾರ ತಾಪತ್ರಯಾನಲದಂದಹ್ಯಮಾನ ನಾನಾಶರೀರಪ್ರವೇಶ ನಿರ್ಗಮನ.... ಸುಖದುಃಖಾ ಶ್ರಯತ್ವಂ ಜೀವತ್ವಂ; ಪರಸ್ಪರ ವಿರುದ್ಧಸ್ವಭಾವಯೋಃ....ಅಭೇದವ್ಯಪದೇಶಾತ್ ಸಂದೇಹಃ"—ಇಷ್ಟು ಉದ್ದವಾದ ವಾಕ್ಯಗಳಿಂದ ಬ್ರಹ್ಮತ್ವವನ್ನೂ ಜೀವತ್ವವನ್ನೂ ಎದುರಿಟ್ಟು ಶ್ರೀಕರ ಮತ್ತು ಶ್ರೀಕಂಠಭಾಷ್ಯಗಳಂತೆಯೇ ವರ್ಣಿಸಿರುವುದು ಕಾರಿಕೆಯಾದ ಕ್ರಿಯಾಸಾರ ದಲ್ಲಿ ನಿರೀಕ್ಷಿಸುವುದು ಸರಿಯಲ್ಲವಾದರೂ ಇದರ ಸಂಕುಚಿತ ರೂಪವನ್ನು ಕ್ರಿಯಾಸಾರ ಭಾಗವಿದರಲ್ಲಿ ಕಾಣಬಹುದು:

ವಿಷಯಸ್ತು ದ್ವಯೋರೈಕ್ಯಂ ಜೀವಸ್ಯ ಬ್ರಹ್ಮಣಸ್ತಥಾ ॥
ವಿರುದ್ಧಯೋಃ ಸ್ವಭಾವೇನ ತಮಸ್ತೇಜಸ್ಸಮಾನಯೋಃ ।
ಯುಷ್ಮದಸ್ಮದ್‌ಗೋಚರಯೋಃ ಕಥಮನ್ಯೋನ್ಯತಾ ಭವೇತ್ ॥
ಕಿಂಚಿಜ್‌ಜ್ಞತ್ವಂ ಚ ಜೀವತ್ವಂ ಸರ್ವಜ್ಞತ್ವಂ ತದನ್ಯತಾ ।
ಅನಿತ್ಯತ್ವಂ ಚ ನಿತ್ಯತ್ವಂ ಕಥಮೇಕತ್ರಯುಜ್ಯತೇ ॥

ಹೀಗೆ ಜಿಜ್ಞಾಸವಾದನಂತರ ಸಿದ್ಧಾಂತವಾಗುವುದು ಅತ್ಯಂತ ದ್ವೈತವೂ ಅಲ್ಲ, ಅದ್ವೈತವೂ ಅಲ್ಲ; ಭೇದಾಭೇದವೂ ಅಲ್ಲ ಎನ್ನುವ ಶ್ರೀಕಂಠಭಾಷ್ಯದ ಆಧಾರವಿದು: "ನ ವಯಂ ಬ್ರಹ್ಮಪ್ರಪಂಚಯೋರತ್ಯಂತಮೇವ ಭೇದವಾದಿನಃ····ನ ವಾಽತ್ಯಂತಾ ಭೇದವಾದಿನಃ····ನ ಚ ಭೇದಾಭೇದವಾದಿನಃ." ಈ ನಿಲುವನ್ನು ಕ್ರಿಯಾಸಾರದಲ್ಲಿ, "ನಾತ್ಯಂತ ಭೇದಭಾವೋ ಹಿ ನ ಚಾಭೇದೋ ನ ಚೋಭಯಂ" ಎಂದು ಹೇಳಿರುವುದರಲ್ಲಿ ಕಾಣಬಹುದು. ಹಾಗೆಯೇ ಕ್ರಿಯಾಸಾರದಲ್ಲಿ "ಯಥಾ ಘಟ ಇತಿ ಜ್ಞಾನೇ ಘಟತ್ವಂ ಸ್ಯಾದ್ ವಿಶೇಷಣಂ ತಥಾ ಬ್ರಹ್ಮಣಿ ವೈಶಿಷ್ಟ್ಯಂ ಶಕ್ತೇರಿತ್ಯವಧಾರ್ಯತಾಂ" ಎಂದು ಹೇಳಿರುವುದು ಶ್ರೀಕಂಠಭಾಷ್ಯದ ವಿಶಿಷ್ಟಾದ್ವೈತದ ನಿಲುವಿಗೆ ಪೋಷಕವಾಗಿದೆ. ಕ್ರಿಯಾಸಾರ ದಲ್ಲಿ 'ಶುಗಸ್ಯೇತ್ಯಾದಿ ಸೂತ್ರಾರ್ಥ ವಿಚಾರ' ಮಾಡುವಾಗ "ಶೂದ್ರಾದೀನಾಂ ನಾಧಿಕಾರ ಇತಿ ಸಮ್ಯಕ್ ಸುನಿಶ್ಚಿತಃ" ಎಂದು ಹೇಳಿರುವುದು ಶ್ರೀಕಂಠಭಾಷ್ಯಾನುಸಾರವಾಗಿಯೇ ಇದೆ. "ಪರಸ್ಪರಾವಿರುದ್ಧಾರ್ಥಾಃ ಶಿವೋಕ್ತಾ ನಿಗಮಾಗಮಾಃ । ಅಲ್ಪಬುದ್ಧಿಭಿರನ್ಯೋನ್ಯ ವಿರೋಧಃ ಪರಿಕಲ್ಪ್ಯತೇ" ಎಂದು ಕ್ರಿಯಾಸಾರದಲ್ಲಿ ಹೇಳಿರುವುದು "ವಯಂ ತು ವೇದಾಗಮಯೋಃ ಭೇದಂ ನ ಪಶ್ಯಾಮಃ" ಎಂದರೆ ವೇದಾಗಮಗಳಲ್ಲಿ ವ್ಯತ್ಯಾಸವನ್ನೇ

ಕಾಣೆವೆಂಬ ಶ್ರೀಕಂಠ ಶಿವಾಚಾರ್ಯರ ಪ್ರಸಿದ್ಧವಾದ ಉಕ್ತಿಗೆ ಅನುಸಾರವಾಗಿದೆ. ಕ್ರಿಯಾಸಾರದ ಉಪೋದ್ಘಾತ ಪ್ರಕರಣದ ೩೫–೩೬ ನೆಯ ಶ್ಲೋಕಗಳಲ್ಲಿ ಪರಶಿವಬ್ರಹ್ಮವು ನಿಮಿತ್ತೋಪಾದಾನಕಾರಣವೆಂದು ಶ್ರೀಕಂಠ ಶಿವಾಚಾರ್ಯರು ಹೇಳಿರುವಂತೆಯೇ ಹೇಳಿದೆ.

ಕ್ರಿಯಾಸಾರವು ಶ್ರೀಕಂಠಭಾಷ್ಯದ ಕಾರಿಕೆಯೆಂದು ನಿಶ್ಚಯಿಸುವುದರಲ್ಲಿ ಎಲ್ಲಕ್ಕಿಂತಲೂ ಮುಖ್ಯವಾದ ವಿಷಯವೊಂದಿದೆ. ಶ್ರೀಕಂಠಶಿವಾಚಾರ್ಯರು ಮೋಕ್ಷಪ್ರಾಪ್ತಿಯಾಗುವುದು ಪುರಾಣಪ್ರಸಿದ್ಧವಾದ ಆಜೀವಪರ್ಯಂತ ಆಚರಿಸುವ ಪಾಶುಪತವ್ರತದಿಂದಲೆಂದು ಹೇಳಿ ಶಿವಮಹಾಪುರಾಣದ ಶ್ಲೋಕವನ್ನು ಕೊಟ್ಟು ಆ ಪಾಶುಪತವಾವುದೆಂಬುದನ್ನು ಭಾಷ್ಯದಲ್ಲಿ ಸ್ಪಷ್ಟಮಾಡಿರುವರಷ್ಟೆ. ಆ ಶಿವಮಹಾಪುರಾಣದಲ್ಲಿ ಈ ಪಾಶುಪತವ್ರತವನ್ನು ಆಚರಿಸುವವರನ್ನು ಅತಿವರ್ಣಾಶ್ರಮಿಗಳೆಂದು ಕರೆಯಲಾಗಿದೆ. ಕ್ರಿಯಾಸಾರದಲ್ಲಿ ಸಹಾ ಅವರನ್ನು ಅತಿವರ್ಣಾಶ್ರಮಿಗಳು ಎಂದಿರುವುದನ್ನು ಕಾಣಬಹುದು:

ಏತೇ ಸರ್ವೇ ಮಹಾಭಾಗಾ ಅತಿವರ್ಣಾಶ್ರಮೇರತಾಃ ।
ವೀರಶೈವಾಃ ಸಮಾಖ್ಯಾತಾ ಜೀವನ್ಮುಕ್ತಾ ನ ಸಂಶಯಃ ॥

ಅಲ್ಲದೆ ಯಾವಜ್ಜೀವವೂ ಪಾಶುಪತವ್ರತವನ್ನು ಆಚರಿಸುವವರು ಲಿಂಗವನ್ನು ಯಾವಜ್ಜೀವವೂ ತ್ಯಜಿಸಲಾಗದುದರಿಂದ ಅದನ್ನು ಶಿರಸ್ಸಿನಲ್ಲಿ ಸದಾ ಧರಿಸಬೇಕೆಂದು ಶ್ರೀಕಂಠ ಶಿವಾಚಾರ್ಯರಿಗೆ ಆಧಾರವಾದ ಶಿವಮಹಾಪುರಾಣದಲ್ಲಿ ಹೇಳಿದೆ. ಆಜೀವಪರ್ಯಂತ ಪಾಶುಪತವ್ರತವನ್ನಾಚರಿಸುವ ನಿವೃತ್ತರಾದ ಮುಮುಕ್ಷುಗಳು ಲಿಂಗವನ್ನು ಕರದಲ್ಲಿಟ್ಟು ಪೂಜೆಯನ್ನು ಮಾಡಬೇಕೆಂದೂ ಹೇಳಿದೆಯಲ್ಲದೆ, ಇತರರು ಯಾವಯಾವ ತರದ ಲಿಂಗವನ್ನು ಪೂಜಿಸಬೇಕು ಮತ್ತು ಅದನ್ನು ಪೂಜಾಂತ್ಯದಲ್ಲಿ ಸಂಪುಟದಲ್ಲಿ ಪ್ರತ್ಯೇಕ ಗೃಹದಲ್ಲಿ ಇಡಬೇಕು ಮೊದಲಾದ ವಿಷಯಗಳನ್ನು ಅದರಲ್ಲಿಯೇ ಹೇಳಿದೆ. ಈ ಶ್ಲೋಕಗಳನ್ನು ಈ ಗ್ರಂಥದ ೨೪ ನೇ ಪುಟದಲ್ಲಿ ಕೊಡಲಾಗಿದೆ. ಶಿವಮಹಾಪುರಾಣದ ಈ ಶ್ಲೋಕಗಳನ್ನೊಳಗೊಂಡ ೯೮ ಶ್ಲೋಕಗಳೇ ಕ್ರಿಯಾಸಾರದ ತೃತೀಯಾಧ್ಯಾಯದಲ್ಲಿ ೩೧೪ ನೆಯ ಶ್ಲೋಕದನಂತರ ಉದ್ಧೃತವಾಗಿವೆ. ಕ್ರಿಯಾಸಾರದ ರಚನೆಯ ಕಾಲದ ವೀರಶೈವಕ್ಕೆ ಈ ಶ್ಲೋಕಗಳಲ್ಲಿ ಹೇಳಿರುವುದು ಹೊಂದುವುದಿಲ್ಲವಾದರೂ ಶ್ರೀಕಂಠಭಾಷ್ಯದ ಕಾರಿಕೆಯಾದ ಕ್ರಿಯಾಸಾರದಲ್ಲಿ ಶ್ರೀಕಂಠ ಶಿವಾಚಾರ್ಯರಿಗೆ ಆಧಾರವಾಗಿರುವ ಶಿವಮಹಾಪುರಾಣದ ಈ ಶ್ಲೋಕಗಳು ಅವಶ್ಯವೆಂದು ಭಾವಿಸಲ್ಪಟ್ಟಿರಬೇಕು.

ಶ್ರೀಕಂಠ ಶಿವಾಚಾರ್ಯರು 'ಶುಗಸ್ಯ' ಎಂದು ಮೊದಲಾಗುವ ಸೂತ್ರ ವಿಷಯದಲ್ಲಿ ಭಾಷ್ಯವನ್ನು ಬರೆಯುವಾಗ ಶ್ರೀ ಶಂಕರ ಶ್ರೀ ರಾಮಾನುಜ ಮೊದಲಾದವರ ಭಾಷ್ಯದಲ್ಲಿ ಹೇಳಿದಂತೆ "ನಾಸ್ತಿ ಶೂದ್ರಾಣಾಂ ಬ್ರಹ್ಮವಿದ್ಯಾಯಾಮಧಿಕಾರಃ" ಎಂದು ಹೇಳಿದ್ದಾರೆ. ಮೋಕ್ಷವನ್ನು ಕೊಡುವ ಲಿಂಗಧಾರಣೆಯ ಅವಕಾಶವನ್ನು ಶೂದ್ರರಿಗೂ ವೀರಶೈವರು ಕೊಟ್ಟಿರುವುದರಿಂದ ಶ್ರೀಕಂಠ ಶಿವಾಚಾರ್ಯರು ಲಿಂಗಧಾರಿಗಳು ಹೇಗೆ ಆದಾರು ಎಂಬ ಸಂದೇಹ ಬರಬಹುದು. ಈ ಸಂದೇಹಕ್ಕೆ ಕಾರಣವಿಲ್ಲ. ಏಕೆಂದರೆ ತಮಿಳು ಪ್ರಬಂಧಗಳಿಗೆ ವೇದದಷ್ಟೇ ಅಥವಾ ಅದಕ್ಕೂ ಹೆಚ್ಚು ಪ್ರಾಮುಖ್ಯವನ್ನು ಕೊಡುವ ವಿಷಯದಲ್ಲಿ ತೆಂಕಲೆ ವಡಗಲೆಗಳೆಂಬ ಶ್ರೀವೈಷ್ಣವ ಪಂಗಡಗಳಲ್ಲಿ ಭಿನ್ನಾಭಿಪ್ರಾಯವಿರುವಂತೆ ವೀರಶೈವರಲ್ಲಿ ಸಂಪ್ರದಾಯಶರಣರಾದ ಆರಾಧ್ಯ ಬ್ರಾಹ್ಮಣರಿಗೂ ಇತರ ವೀರಶೈವರಿಗೂ ಭಿನ್ನಾಭಿಪ್ರಾಯವಿದೆ. ವರ್ಣಾಶ್ರಮಧರ್ಮಗಳಲ್ಲಿ ತಾರತಮ್ಯವನ್ನು ತೋರದ ವಚನೋಪನಿಷತ್ತುಗಳಿಗೆ ಪ್ರಾಮುಖ್ಯವನ್ನು ಕೊಡುವ ಸಂಸ್ಕೃತ

ರಾದ ವೀರಶೈವರು ವರ್ಣಾಶ್ರಮ ಧರ್ಮಗಳಲ್ಲಿ ತಾರತಮ್ಯವನ್ನು ತೋರಿಸುವುದಿಲ್ಲ. ಆದರೆ ಈ ಸಂಸ್ಕರಣವನ್ನು ಒಪ್ಪದ ವೀರಶೈವ ಆರಾಧ್ಯ ಬ್ರಾಹ್ಮಣರು ಉಪನಯನಕ್ಕೆ ಪ್ರಾಮುಖ್ಯ ವನ್ನು ಕೊಟ್ಟು ಇಂದೂ ಲಿಂಗದೊಡನೆ ಯಜ್ಞೋಪವೀತವನ್ನು ಧರಿಸುತ್ತಾರೆ. ಅಲ್ಲದೆ ಉಪನಯನಕ್ಕೆ ಅಧಿಕಾರವಿಲ್ಲದ ಶೂದ್ರರು ಮೋಕ್ಷಕ್ಕೆ ಅಧಿಕಾರಿಗಳಲ್ಲವೆನ್ನುತ್ತಾರೆ. ಹಿಂದೆ ಹೇಳಿದಂತೆ, ಶ್ರೀಕಂಠ ಶಿವಾಚಾರ್ಯರು, ಶ್ರೀಪತಿ ಪಂಡಿತರು ಮತ್ತು ಶ್ರೀಕಂಠಭಾಷ್ಯದ ಕಾರಿಕಾ ರೂಪವಾದ ಕ್ರಿಯಾಸಾರವನ್ನು ಬರೆದ ನೀಲಕಂಠ ಶಿವಾಚಾರ್ಯರು ಈ ಆರಾಧ್ಯ ಬ್ರಾಹ್ಮಣ ಪಂಗಡಕ್ಕೆ ಸೇರಿದವರು.

ಆರಾಧ್ಯ ಬ್ರಾಹ್ಮಣರಿಗೂ, ಇತರ ವೀರಶೈವರಿಗೂ ಕೆಲವು ವಿಷಯಗಳಲ್ಲಿ ಭಿನ್ನಾಭಿ ಪ್ರಾಯವಿದ್ದರೂ ಲಿಂಗಧಾರಣೆಯಿಂದಲೇ ಮೋಕ್ಷಪ್ರಾಪ್ತವಾಗುವುದು ಎಂಬುದೇ ಮೊದಲಾದ ಮುಖ್ಯ ವಿಷಯಗಳಲ್ಲಿ ಒಮ್ಮತವಿದೆ. ಆದುದರಿಂದಲೇ ಶ್ರೀಕರಭಾಷ್ಯವನ್ನೂ ಕ್ರಿಯಾಸಾರ ವನ್ನೂ ಆಧಾರವಾಗಿ ವೀರಶೈವರೆಲ್ಲರೂ ಅಂಗೀಕರಿಸುವರು. ಕ್ರಿಯಾಸಾರದಲ್ಲಿಯೂ 'ಶ್ರುಗಸ್ಯ' ಎಂದು ಮೊದಲಾಗುವ ಸೂತ್ರವಿಚಾರವನ್ನು ಹೇಳುವಾಗ "**ಶೂದ್ರಾದೀನಾಂ ನಾಧಿಕಾರ ಇತಿ ಸಮ್ಯಕ್ ಸುನಿಶ್ಚಿತಃ**" ಎಂದು ಶ್ರೀಕಂಠಭಾಷ್ಯಾನುಸಾರವಾಗಿ ಹೇಳಿರು ವಂತೆ, ಶ್ರೀಕರಭಾಷ್ಯದ ಇದೇ ಸೂತ್ರದ ಭಾಷ್ಯದಲ್ಲಿ ಸಹಾ, "**ನ ಶೂದ್ರಸ್ಯ ಬ್ರಹ್ಮ ವಿದ್ಯಾಧಿಕಾರಃ**" ಎಂದು ಶ್ರೀಕಂಠಭಾಷ್ಯಾನುಸಾರವಾಗಿಯೇ ಹೇಳಿದೆ. ಛಾಂದೋಗ್ಯೋಪ ನಿಷತ್ತಿನಲ್ಲಿ ರೈಕ್ವಋಷಿಯು ಜಾನಶ್ರುತಿಯನ್ನು ಶೂದ್ರನೆಂದು ಕರೆದನಾದರೂ ಅವನಿಗೆ ಬ್ರಹ್ಮಜ್ಞಾನೋಪದೇಶವನ್ನು ಮಾಡಿದನು. ಇದಕ್ಕೆ ಪರಿಹಾರವನ್ನು ಹೇಳುವುದೇ ಈ ಸೂತ್ರದ ಅಭಿಪ್ರಾಯ. ಇದನ್ನು ಸಾಧಿಸಲು ಶ್ರೀಕಂಠ, ಶಂಕರ, ಶ್ರೀಪತಿ, ನೀಲಕಂಠ ಮೊದಲಾದ ಆಚಾರ್ಯರೆಲ್ಲರೂ ಒಂದೇ ರೀತಿಯಲ್ಲಿ ಶ್ರಮಿಸಿದ್ದಾರೆ. ಶೂದ್ರನೆಂದರೆ ಶೋಕತಪ್ತನೆಂದು ಎಳೆದು ಅರ್ಥಮಾಡಿದ್ದಾರೆ. ಚೈತ್ರರಥನೆಂಬ ಕ್ಷತ್ರಿಯನ ಸಹವಾಸವಿದ್ದುದರಿಂದ ಜಾನ ಶ್ರುತಿಯೂ ಕ್ಷತ್ರಿಯನೇ ಆಗಿರಬೇಕಂತೆ. ವಿದುರ ಮತ್ತು ಧರ್ಮವ್ಯಾಧರು ದೇವಾಂಶ ಪುರುಷರಂತೆ. ಶ್ರೀಯುತ ಸೂರ್ಯನಾರಾಯಣ ಶಾಸ್ತ್ರಿಗಳ *Srikantha's Sivadvaita* ಎಂಬ ಗ್ರಂಥದ ೯೭ನೆಯ ಪುಟದಲ್ಲಿ ಹೇಳಿದಂತೆ:

It is noteworthy that the Sutra expounded through this ingenius tissue of reasoning is read by both Srikantha and Ramanuja as a separate Sutra and not as part of the previous "Kshatriyatvavagatesca". Sankara reads the two together and the Citraratha series of deductions loom large in his exposition. One wonders whether these protagonists of religions, which while true to sruti and smruti, yet rose above the trivialities of caste distinctions felt ashamed of this ingenuity and religated that portion of the Sutra to the position of a secondary subsidiary argument.

ವರ್ಣ ತಾರತಮ್ಯದಲ್ಲಿನ ನ್ಯಾಯಾನ್ಯಾಯದ ವಿಷಯವು ಹೇಗೇ ಇರಲಿ, ಶ್ರೀಕಂಠ ಶಿವಾಚಾರ್ಯರಂತೆಯೇ ಶ್ರೀಕರಭಾಷ್ಯದಲ್ಲಿಯೂ ಕ್ರಿಯಾಸಾರದಲ್ಲಿಯೂ ಶೂದ್ರರಿಗೆ ಬ್ರಹ್ಮ ಜ್ಞಾನಾಧಿಕಾರವು ಇಲ್ಲವೆಂದು ಹೇಳಿದೆಯಾಗಿ, ಹಾಗೆ ಹೇಳಿರುವುದರಿಂದ ಶ್ರೀಕಂಠ ಶಿವಾ ಚಾರ್ಯರು ಲಿಂಗಧಾರಿಗಳಲ್ಲವೆನ್ನುವುದಾದರೆ ಶ್ರೀಪತಿ ಪಂಡಿತರೂ ಕ್ರಿಯಾಸಾರವನ್ನು ಬರೆದ ನೀಲಕಂಠರೂ ಲಿಂಗಧಾರಿಗಳಲ್ಲವೆನ್ನಬೇಕಾಗುವುದು. ಶ್ರೀಕರಭಾಷ್ಯದ ಪ್ರಾರಂಭದಲ್ಲಿಯೇ

"ಗರ್ಭಾಷ್ಟಮವರ್ಷಪ್ರಯುಕ್ತೋಪನಯನ ಸಂಸ್ಕಾರಸಿದ್ಧ····ಶೋತ್ರಿಯಸ್ಯೈವ ····ಧರ್ಮಜಿಜ್ಞಾಸಾದರ್ಶನೇ ಸ್ವಭಾವನಿಯಮನಿಯತಪ್ರಯೋಜಕತಯಾ ಯತ್ ಪೂರ್ವಭಾವಿತ್ವಂ ವಿಧೀಯತೇ" ಎಂದು ಮೋಕ್ಷಾಧಿಕಾರಕ್ಕೆ ಉಪನಯನದ ಅವಶ್ಯಕತೆಯನ್ನು ಹೇಳಿದ್ದಾರೆ. ಕ್ರಿಯಾಸಾರದಲ್ಲಿಯೂ "ಕೃತೋಪನಯನಸ್ಯಾತು ವೇದಾಂತೇಷು ಪ್ರವೇಶನಾತ್" ಎಂದು ಉಪನಯನದ ಅವಶ್ಯಕತೆಯನ್ನು ಹೇಳಿದೆ. ಶ್ರೀಕಂಠ ಶಿವಾಚಾರ್ಯರ ಕಾಲದಲ್ಲಿ ಲಿಂಗಧಾರಣೆಯಾಗಲೀ ಯಜ್ಞೋಪವೀತಧಾರಣೆಯಾಗಲೀ ವೇದದಲ್ಲಿ ವಿಧಿಸಲ್ಪಟ್ಟಿದೆಯೆ ಎಂಬ ಪ್ರಶ್ನೆಯು ಎದ್ದಿರಲಿಲ್ಲ. ಶ್ರೀಪತಿ ಪಂಡಿತರು ಲಿಂಗಧಾರಣೆಯು ಶ್ರುತಿಯಲ್ಲಿ ಹೇಗೆ ವಿಧಿಸಲ್ಪಟ್ಟಿದೆಯೆಂಬುದನ್ನು ಸಿದ್ಧಾಂತಮಾಡಬೇಕಾಯಿತು. ಆದರೆ ಅವರ ಅಭಿಪ್ರಾಯದಂತೆ ಯಜ್ಞೋಪವೀತಧಾರಣೆಯು ವೇದದಲ್ಲಿ ವಿಧಿಸಲ್ಪಡದಿದ್ದರೂ ಸ್ಮೃತಿಯಲ್ಲಿ ವಿಧಿಸಲ್ಪಟ್ಟಿರುವುದರಿಂದಲೂ, ಅದಕ್ಕೆ ವೇದದಲ್ಲಿ ವಿರುದ್ಧವಾದುದೇನೂ ಇಲ್ಲದುದರಿಂದಲೂ ಯಜ್ಞೋಪವೀತವನ್ನು ಧರಿಸುವುದು ಆಚರಣೀಯವೆಂದು ಹೇಳುವ ಶ್ರೀಕರಭಾಷ್ಯಭಾಗವಿದು- "ಪತ್ಯುರಸಾಮಂಜಸ್ಯಾತ್" ಎಂಬ ಸೂಕ್ತಭಾಷ್ಯದಲ್ಲಿದೆ—"ನನು ಕೇಶವಾದಿನಾಮ್ನಾಂ, ವೇದೋಕ್ತತ್ವಾಭಾವೇಽಪಿ ಯಜ್ಞೋಪವೀತವದಾಚರಣೀಯಮಿತಿಚೇತ್, ತದಸತ್, ಯಜ್ಞೋಪವೀತವಿಧಾನಸ್ಯ ಗೃಹ್ಯಪರಿಶೇಷೇ 'ಯಜ್ಞೋಪವೀತಂ ಪರಮಂ ಪವಿತ್ರಂ' ಇತಿ ಮಂತ್ರಪ್ರತಿಪಾದನಾತ್, ಶ್ರುತಿ ವಿರೋಧಾಭಾವಾತ್ ಬ್ರಹ್ಮೋಪನಿಷದ್ ದರ್ಶನಾಚ್ಚ ತದ್‌ವತ್ ಕೇಶವಾದಿನಾಮ್ನಾಂ ಶ್ರುತಿಪ್ರತಿಪಾದಕತ್ವಾಭಾವಾತ್ ತಾಂತ್ರಿಕತ್ವಮನಿವಾರ್ಯಂ". ಇದೇ ಸೂತ್ರದ ಭಾಷ್ಯದಲ್ಲಿಯೇ ಶ್ರೀಪತಿ ಪಂಡಿತರು ಶ್ರೀಕಂಠಭಾಷ್ಯದ ಆಧಾರವನ್ನು ತೆಗೆದುಕೊಂಡಿರುವುದು ಕಂಡುಬರುವುದು. ಶ್ರೀಕಂಠಭಾಷ್ಯದ ಆರಂಭದಲ್ಲಿಯೇ "ಫಲಾಭಿಸಂಧಿರಹಿತಸ್ಯ ಪಾಪಾಪನಯನರೂಪಚಿತ್ತಶುದ್ಧಿಸಂಪಾದನದ್ವಾರಾ ಬೋಧಹೇತುತ್ವಾತ್ । ತಥಾಭಿಯುಕ್ತಸ್ಮೃತಿಃ 'ಯಸ್ಯೈತೇ ಚತ್ವಾರಿಂಶತ್ ಸಂಸ್ಕಾರಾಃ' ಇತ್ಯಾದಿನಾ 'ಸಬ್ರಹ್ಮಣಃ ಸಾಯುಜ್ಯಂ ಸಾಲೋಕ್ಯಂ ಚ ಗಚ್ಛತಿ' ಇತ್ಯಂತೇನ ಗರ್ಭಾಧಾನಾದಿ ಸಕಲ ಕರ್ಮಣಾಂ ಪಾಪಮಲಾಪಕರ್ಷ ಸಂಸ್ಕಾರಹೇತುತಾಂ ಪ್ರಕಾಶಯತಿ" ಎಂದು ಹೇಳಿ, ನಿಷ್ಕಾಮನಾಗಿದ್ದರೆ, ಗರ್ಭಾಧಾನಾದಿ ಕರ್ಮಗಳು ಬ್ರಹ್ಮಪ್ರಾಪ್ತಿ ಸಾಧನವಾಗುವವೆನ್ನುವ ಶ್ರೀಕಂಠಭಾಷ್ಯಭಾಗವನ್ನು ಶ್ರೀಕರಭಾಷ್ಯದ ೧–೪–೨೨ನೆಯ ಸೂತ್ರಭಾಷ್ಯದಲ್ಲಿ ಅನುಸರಿಸಿರುವ ಭಾಗವಿದು: ಫಲಾಭಿಲಾಷಾರಹಿತಕರ್ಮಣಾಂ ದುರಿತಕ್ಷಯದ್ವಾರಾ····ಬ್ರಹ್ಮಪ್ರಾಪ್ತಿಹೇತುತ್ವಾತ್ ತಥಾಚ ಸ್ಮೃತಿಃ 'ಯಸ್ಯೈತೇಽಷ್ಟಾಚತ್ವಾರಿಂಶತ್ ಸಂಸ್ಕಾರಾ' ಇತ್ಯಾರಭ್ಯ 'ಸಬ್ರಹ್ಮಣ ಸ್ಸಾಯುಜ್ಯಂ ಸಾಲೋಕ್ಯಂ ಗಚ್ಛತಿ' ಇತ್ಯಂತೇನ ಗರ್ಭಾಧಾನಾದಿ ಕರ್ಮಣಾಂ ಪಾಪಕ್ಷಯದ್ವಾರಾ ಬ್ರಹ್ಮಪ್ರಾಪ್ತ್ಯುಪದೇಶಾತ್." ಮುಂದೆ ಎರಡು ಭಾಷ್ಯಗಳಲ್ಲಿಯೂ 'ಸರ್ವ ಏತೇ ಪುಣ್ಯಲೋಕಾ ಭವಂತಿ' ಎಂಬ ಶ್ರುತಿಯು ವಿಚಾರಕ್ಕೊಳಗಾಗಿದೆ. ಒಟ್ಟಿನಲ್ಲಿ ಶ್ರೀಕಂಠ ಶಿವಾಚಾರ್ಯರು ಶ್ರೀಕರಭಾಷ್ಯಕಾರರಾದ ಶ್ರೀಪತಿ ಪಂಡಿತರಂತೆಯೇ ವೀರಶೈವರಲ್ಲಿ ಗರ್ಭಾಧಾನಾದಿ ಕರ್ಮಗಳ ಸಂಸ್ಕಾರವನ್ನು ಒಪ್ಪುವ ಆರಾಧ್ಯ ಬ್ರಾಹ್ಮಣರೆನ್ನುವುದಕ್ಕೆ ಯಾವ ಅಡ್ಡಿಯೂ ಇಲ್ಲ.

ಸಿದ್ಧಾಂತ ವಿಷಯದಲ್ಲಿ ಶ್ರೀಕಂಠ ಶಿವಾಚಾರ್ಯರು ಪ್ರತಿಪಾದಿಸಿರುವುದು ವೀರಶೈವ ಸಿದ್ಧಾಂತವೇ ಎಂಬುದನ್ನು ವಿಚಾರಮಾಡಲಾಯಿತು. ಈಗ ಶ್ರೀಕಂಠ ಶಿವಾಚಾರ್ಯರು ಪ್ರತಿಪಾದಿಸಿರುವ ಮೋಕ್ಷಸಾಧನಾಮಾರ್ಗವು ವೀರಶೈವಕ್ಕೆ ಅನುಸಾರವಾಗಿದೆಯೇ ಎಂಬುದನ್ನು

ನೋಡುವುದುಳಿದಿದೆ. ಲಿಂಗಧಾರಣೆ, ಲಿಂಗಾರ್ಚನೆಗಳ ಮೂಲಕ ಅಹಂಗ್ರಹೋಪಾಸನೆಯೆ ವೀರಶೈವ ಸಾಧನಾಮಾರ್ಗವಾಗಿರುವುದು. ವೀರಶೈವ ಗ್ರಂಥಗಳಲ್ಲಿ ಪ್ರಮುಖವಾಗಿ ಕಂಡು ಬರುವಂತೆ ಲಿಂಗಧಾರಣೆಯು ವೈದಿಕವೆ, ಎಂಬ ಪ್ರಶ್ನೆಯನ್ನು ಶ್ರೀಕಂಠ ಶಿವಾಚಾರ್ಯರು ಎತ್ತಿಲ್ಲವಾಗಿ ಅವರು ವೀರಶೈವರಲ್ಲವೆಂಬ ಭಾವನೆ ಬರಬಹುದು. ಆದರೆ ಲಿಂಗಧಾರಣೆಯೂ ಲಿಂಗಪೂಜೆಯೂ ಹನ್ನೆರಡನೆಯ ಶತಮಾನಕ್ಕೆ ಹಿಂದೆ ಪ್ರಚಾರದಲ್ಲಿದ್ದರೂ ಅದು ಅವೈದಿಕ ವೆಂದು ಆಗ ಯಾರೂ ತಿಳಿದಿರಲಿಲ್ಲ. ಆಗ ಲಿಂಗಿಗಳನ್ನು ಕುಲಿಂಗಿಗಳೆಂದು ಹಳಿದವರು ಜೈನರು, ಹಿಂದುಗಳಲ್ಲ. ಅಂದು ಅಲಿಂಗಿಗಳಂತೆ ಲಿಂಗಿಗಳೂ ವರ್ಣಾಶ್ರಮ ಧರ್ಮಾನುಯಾಯಿಗಳಾ ಗಿದ್ದರು. ಆಗ ಯಾರಾದರೂ ಲಿಂಗಪೂಜೆಯು ವೈದಿಕವು, ಆದರೆ ಲಿಂಗಧಾರಣೆಯು ಅವೈದಿಕವು ಎಂದಿದ್ದರೆ ಅವರು ನಗೆಗೀಡಾಗುತ್ತಿದ್ದರು. ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ದ್ವಿಜರಿಗೂ, ಶೂದ್ರರಿಗೂ ಅಸ್ಪೃಶ್ಯರಿಗೂ ಲಿಂಗಧಾರಣೆಯನ್ನು ಮಾಡಿ ವರ್ಣಾಶ್ರಮ ಧರ್ಮ ಗಳಲ್ಲಿದ್ದ ತಾರತಮ್ಯವನ್ನು ತೊಡೆದುಹಾಕಿದಮೇಲೆ ಸನಾತನ ಧರ್ಮಪ್ರೇಮಿಗಳು ಲಿಂಗ ಧಾರಣೆಯು ವೈದಿಕವಲ್ಲವೆಂದು ಆಕ್ಷೇಪಿಸಿದರು. ಅಂದಿನಿಂದ ಲಿಂಗಧಾರಣೆಯು ವೈದಿಕವೆ ಎಂಬ ಪ್ರಶ್ನೆ ಎದ್ದಿತು; ಅಂದಿನಿಂದಲೇ ಅದನ್ನು ವೀರಶೈವ ಆಚಾರ್ಯರು ಬಿಡಿಸಬೇಕಾಯಿತು. ಶ್ರೀಕಂಠ ಶಿವಾಚಾರ್ಯರ ಕಾಲದಲ್ಲಿ ಈ ಪ್ರಶ್ನೆಯು ಎದ್ದಿರಲಿಲ್ಲ.

ಆದರೂ ಶ್ರೀಕಂಠ ಶಿವಾಚಾರ್ಯರು ಲಿಂಗಧಾರಿಗಳೇ, ಲಿಂಗಾರ್ಚಕರೇ ಎಂಬ ಪ್ರಶ್ನೆಯು ಉಳಿಯುವುದು. ಈ ಪ್ರಶ್ನೆಯನ್ನು ಬಿಡಿಸಲು ಶ್ರೀಕಂಠಭಾಷ್ಯದಲ್ಲಿ ಮೋಕ್ಷಸಾಧನ ಮಾರ್ಗ ವೇನೆಂದು ಹೇಳಿದೆಯೆಂಬುದನ್ನು ಪರೀಕ್ಷಿಸಬೇಕು. **"ಮೌನವದಿತರೇಷಾಮುಪ್ಪೃಷ ದೇಶಾತ್"** ಎಂಬ ಸೂತ್ರದ ಶ್ರೀಕಂಠಭಾಷ್ಯದಲ್ಲಿ **"ಪಾಶುಪತವ್ರತಮಥರ್ವ ಶಿರಸಿ ಶ್ರುತಂ ಪುರಾಣೇಷು ಚ ಪ್ರಸಿದ್ಧಮೇವ । ತನ್ನಿಷ್ಠಾನಾಂ ವಿದ್ಯಾಪ್ರಾಪ್ತಿರ್ಮುಕ್ತಿಶ್ಚ ಸಂಭವತಿ ನವೇತಿ ಸಂಶಯಃ"**—ಪಾಶಪತವ್ರತವನ್ನು ಅಥರ್ವ ಶಿರಸ್ಸಿನಲ್ಲಿ ಹೇಳಿದೆ; ಅದು ಪುರಾಣ ದಲ್ಲಿಯೂ ಪ್ರಸಿದ್ಧವಾಗಿದೆ; ಅದರಲ್ಲಿ ನಿಷ್ಠೆಯುಳ್ಳವನಿಗೆ ಜ್ಞಾನವೂ ಮೋಕ್ಷವೂ ಲಭಿಸುವುದರಲ್ಲಿ ಸಂಶಯವಿಲ್ಲ ಎಂದು ಶ್ರೀಕಂಠ ಶಿವಾಚಾರ್ಯರು ಹೇಳಿದ್ದಾರೆ. ಅನಂತರ **"ಪುತ್ರಾರ್ಥಂ ಕೃಷ್ಣಾದಿಭಿರನುಷ್ಠಿತತ್ವಾತ್......ನ ಮೋಕ್ಷ ಸಿದ್ಧಿರಸ್ತಿ"**—ಎಂದರೆ ಕೃಷ್ಣಾದಿಗಳು ಪುತ್ರಾರ್ಥಿಗಳಾಗಿ ಈ ವ್ರತವನ್ನು ಆಚರಿಸಿದುದರಿಂದ ಇದು ಮೋಕ್ಷವನ್ನು ಕೊಡಲಾರದು ಎಂಬ ಪೂರ್ವಪಕ್ಷವನ್ನು ಹಾಕಿಕೊಂಡು ಅದಕ್ಕೆ ಉತ್ತರವನ್ನು ಹೇಳಿದ್ದಾರೆ. **"ಯಾವದಾಯುಷಂ ಪಾಶುಪತವ್ರತಧಾರಿಣಾಂ ಮುಕ್ತಿರೇವಫಲಂ"**—ಆಯುಸ್ಸು ತೀರುವವರೆಗೂ ಪಾಶುಪತ ವ್ರತಧಾರಿಯಾದರೆ ಮುಕ್ತಿಯೇ ಫಲವೆಂಬುದೇ ಉತ್ತರ. ಇದಕ್ಕೆ ಆಧಾರವನ್ನು ಕೊಡಬೇಕಷ್ಟೆ. ಮುಂದಿನ ಸೂತ್ರದ ಭಾಷ್ಯದಲ್ಲಿ ಕೊಟ್ಟಿರುವ ಆಧಾರವು ಹೀಗಿದೆ: **"'ಯಾವಚ್ಛರೀರ ಪಾತಂವಾ ದ್ವಾದಶಾಬ್ದಮಥಾಪಿವಾ' ಇತ್ಯುಕ್ತೇರಾತ್ಯಂತಿಕಸಾವಧಿತ್ವೇನ ಪಾಶುಪತ ವ್ರತಸ್ಯವಿಕಲ್ಪಃ । ತತ್ರಾತ್ಯಂತಿಕಮತ್ಯಾಶ್ರಮ ಸಂಜ್ಞಕಮಪವರ್ಗಹೇತುಃ"**—ಈ ವ್ರತ ವನ್ನು ಯಾವಜ್ಜೀವವಾದರೂ ಮಾಡಬಹುದು, ಹನ್ನೆರಡು ವರ್ಷವಾದರೂ ಮಾಡಬಹುದು ಎಂಬುದಕ್ಕೆ ಪುರಾಣದ ಆಧಾರವನ್ನು ಕೊಟ್ಟು ಯಾವಜ್ಜೀವವೂ ಪಾಶುಪತವ್ರತವನ್ನು ಆಚರಿಸಿದರೆ ಮೋಕ್ಷವಾಗುವುದೆಂದು ಹೇಳಿದ್ದಾರೆ. ಪುರಾಣದ ಆಧಾರವನ್ನು ಕೊಟ್ಟಿರುವುದ ರಿಂದ ಭಾಷ್ಯದಲ್ಲಿ ಹೇಳಿದ ಪುರಾಣವು ಯಾವುದು ಎಂಬುದನ್ನು ಸುಲಭವಾಗಿ ಗೊತ್ತುಹಚ್ಚಲು ಸಾಧ್ಯವಾಗಿದೆ.

ವ್ರತಮೇತತ್ ಕರೋಮೀತಿ ಭವೇತ್ ಸಂಕಲ್ಪ್ಯ ದೀಕ್ಷಿತಃ ।
ಯಾವಚ್ಛರೀರಪಾತಂ ವಾ ದ್ವಾದಶಾಬ್ದಮಥಾಪಿ ವಾ ॥ ೭ ॥
ತದರ್ಧಂ ವಾ ತದರ್ಧಂ ವಾ ಮಾಸದ್ವಾದಶಕಂತು ವಾ ।
ತದರ್ಧಂ ವಾ ತದರ್ಧಂ ವಾ ಮಾಸಮೇಕಮಥಾಪಿವಾ ॥ ೮ ॥

ಶ್ರೀಕಂಠ ಶಿವಾಚಾರ್ಯರು ಹೇಳಿರುವ ಶ್ಲೋಕಗಳಿವು ಶಿವಮಹಾಪುರಾಣಾಂತರ್ಗತ ವಾಯವೀಯ ಸಂಹಿತೆಯ ಪೂರ್ವಭಾಗದ ೩೩ ನೆಯ ಅಧ್ಯಾಯದಲ್ಲಿವೆ. ಪಾಶುಪತವ್ರತವನ್ನು ಬದುಕಿರುವವರೆಗಾಗಲೀ ಹನ್ನೆರಡು ವರ್ಷವಾಗಲೀ ಅಥವಾ ಇನ್ನೂ ಕಡಮೆ ಕಾಲವಾಗಲೀ ಕೊನೆಗೆ ಒಂದು ದಿನವಾಗಲಿ ಮಾಡಬೇಕೆಂದು ಸಂಕಲ್ಪಮಾಡಿಕೊಳ್ಳಬೇಕು. ೨೩, ೨೪ ಮತ್ತು ೨೫ ನೆಯ ಶ್ಲೋಕಗಳಲ್ಲಿ ಭಸ್ಮಸ್ಪರ್ಶಭಸ್ಮೋದ್ಧೂಳನಗಳನ್ನು ಮತ್ತು ಭಸ್ಮಧಾರಣೆಯನ್ನು ಹೇಳಿದೆ. ೨೮ ನೆಯ ಶ್ಲೋಕದಲ್ಲಿ ಲಿಂಗವನ್ನಿಡಲು ಚಿನ್ನದ ಅಥವಾ ಇತರ ಲೋಹದ ಕಮಲವನ್ನು ಮಾಡಿಸಬೇಕಾಗಿ ಹೇಳಿರುವುದು, ಇಂದು ವೀರಶೈವರಲ್ಲಿ ಶ್ರದ್ಧಾವಂತರು ಚಿನ್ನದ ಅಥವಾ ಬೆಳ್ಳಿಯ ಕರಕಮಲವನ್ನು ಪೂಜೆಗೆ ಉಪಯೋಗಿಸುತ್ತಿರುವುದನ್ನು ನೆನಪಿಗೆ ತರುತ್ತದೆ. ೩೦ ನೆಯ ಶ್ಲೋಕದಲ್ಲಿ **"ಲಿಂಗಂಕನೀಯಸಂ"**—ಎಂದರೆ ಸಣ್ಣದಾದ ಲಿಂಗವನ್ನು ಪೂಜೆಗೆ ಇಟ್ಟುಕೊಳ್ಳಬೇಕೆಂದು ಹೇಳಿದೆ. ೬೦ ನೆಯ ಶ್ಲೋಕದಲ್ಲಿ **"ಪ್ರತ್ಯಹಂ"**—ಎಂದರೆ ಪ್ರತಿ ದಿನವೂ ಪೂಜಿಸಬೇಕೆಂದು ಹೇಳಿದೆ. ಇನ್ನು ಸಾಯುವವರೆಗೂ ವ್ರತವನ್ನು ಆಚರಿಸದವರು ಲಿಂಗವನ್ನು ಏನು ಮಾಡಬೇಕೆಂದರೆ ೬೧ ನೆಯ ಶ್ಲೋಕದಲ್ಲಿ ಹೇಳಿದಂತೆ ಗುರುವಿಗೆ ಸಮರ್ಪಿಸಬೇಕು ಇಲ್ಲವೇ ಗುಡಿಯಲ್ಲಿಡಬೇಕು. ಹಾಗಿಲ್ಲದೆ ಮೋಕ್ಷಪ್ರಾಪ್ತಿಗಾಗಿ ಯಾವಜ್ಜೀವವೂ ೮೪–೮೫ ನೆಯ ಶ್ಲೋಕದಲ್ಲಿ ಹೇಳಿರುವಂತೆ ಈ ವ್ರತವನ್ನಾಚರಿಸುವವರಿಗೆ **ನೈಷ್ಠಿಕ, ಅತ್ಯಾಶ್ರಮಿ, ಮಹಾ ಪಾಶುಪತ, ಮಹಾವ್ರತೀ** ಮತ್ತು **ತಪಸ್ವಿಶ್ರೇಷ್ಠ** ಎಂಬ ಹೆಸರುಗಳಿರುವುವು. ಆದುದರಿಂದ ಯಾವಜ್ಜೀವವೂ ವ್ರತವನ್ನು ಆಚರಿಸುವವರು ಶ್ರೀಕಂಠ ಶಿವಾಚಾರ್ಯರಂತೆ ನಿವೃತ್ತರಷ್ಟೆ. ಇವರು ಲಿಂಗವನ್ನು ಕರದಲ್ಲಿ ಪೂಜಿಸಿ ತಾವು ಊಟಮಾಡುವುದನ್ನು ಲಿಂಗಕ್ಕೆ ಸಮರ್ಪಿಸಬೇಕೆಂದು ಇದೇ ಪುರಾಣದ ಪ್ರಥಮಭಾಗದ ೧೮ ನೆಯ ಅಧ್ಯಾಯದ ೫೫ ನೆಯ ಶ್ಲೋಕದಲ್ಲಿ ಹೇಳಿದೆ: **"ಕರಪೂಜಾ ನಿವೃತ್ತಾನಾಂ ಸ್ವಭೋಜ್ಯಂತು ನಿವೇದಯೇತ್."** ಹೀಗೆ ಹೇಳಿರುವುದಲ್ಲದೆ ೫೭ ನೆಯ ಶ್ಲೋಕದಲ್ಲಿ **"ಪೂಜಾಂ ಕೃತ್ವಾಥತಲ್ಲಿಂಗಂ ಶಿರಸಾ ಧಾರಯೇತ್ ಸದಾ"**—ಎಂದರೆ ಪೂಜೆಯಾದ ಮೇಲೆ ಸದಾ ಲಿಂಗವನ್ನು ಶಿರಸ್ಸಿನಲ್ಲಿ ಧರಿಸಬೇಕೆಂದು ಹೇಳಿದೆ. ಶ್ರೀಕಂಠಭಾಷ್ಯದಲ್ಲಿ ಹೇಳಿದಂತೆ ಮೋಕ್ಷಾಪೇಕ್ಷಿಗಳಾದ ಶ್ರೀಕಂಠ ಶಿವಾಚಾರ್ಯರು ಆಜೀವಪರ್ಯಂತ ಪಾಶುಪತವ್ರತದೀಕ್ಷಿತರಾಗಿರಬೇಕಾದುದರಿಂದ ಇವರು ಲಿಂಗವನ್ನು ಸದಾ ಶಿರಸ್ಸಿನಲ್ಲಿ ಧರಿಸಿ ಕರಪೂಜೆ ಮಾಡುವ ಲಿಂಗಧಾರಿಗಳಾಗಿರಬೇಕು. ಶೂದ್ರರಿಗೆ ವೈದಿಕಮಾರ್ಗದಲ್ಲಿ ಪೂಜೆಗೆ ಅರ್ಹತೆಯಿಲ್ಲವೆಂದು ಈ ಪುರಾಣದಲ್ಲೇ ಹೇಳಿದೆಯಾಗಿ ಶ್ರೀಕಂಠ ಶಿವಾಚಾರ್ಯರು ವರ್ಣಾಶ್ರಮ ಧರ್ಮಗಳಿಗೊಳಪಟ್ಟ ಲಿಂಗಧಾರಿ ವೀರಶೈವ ಆರಾಧ್ಯ ಬ್ರಾಹ್ಮಣರಾಗಿರಬೇಕು. ಪಾಶುಪತರಲ್ಲಿ ವೈದಿಕರೂ ತಾಂತ್ರಿಕರೂ ಇದ್ದರು. ಪಾಶುಪತ ಸೂತ್ರದಲ್ಲಿ 'ಲಿಂಗಧಾರೀ' ಎಂಬುದೊಂದು ಸೂತ್ರವಿರುವುದೆಂದೂ ಪಾಶುಪತರು ಎದೆ, ಹಣೆ, ಭುಜಾದಿಗಳಲ್ಲಿ ಲಿಂಗವನ್ನು ಧರಿಸುವರು ಎಂದೂ ಹಿಂದೆ ಹೇಳಿದೆ. ಇವರು ತಾಂತ್ರಿಕ ಪಾಶುಪತರಿರಬಹುದು.

ಶ್ರೀಕಂಠ ಶಿವಾಚಾರ್ಯರು ಶ್ರೀಕೃಷ್ಣನು ಪುತ್ರಾರ್ಥಿಯಾಗಿ ಪಾಶುಪತವ್ರತವನ್ನು ಒಂದು ವರ್ಷಕಾಲ ಮಾಡಿದುದನ್ನು ಪೂರ್ವಪಕ್ಷವಾಗಿ ತೆಗೆದುಕೊಂಡಿದ್ದಾರಷ್ಟೆ. ಹೀಗೆ ತೆಗೆದು

ಕೊಳ್ಳಲು ಕಾರಣವೇನೆಂದರೆ ಶಿವಮಹಾಪುರಾಣದಲ್ಲಿಯೇ ಪುತ್ರಾರ್ಥಿಯಾಗಿ ಶ್ರೀಕೃಷ್ಣನು ಪಾಶುಪತವ್ರತವನ್ನು ಆಚರಿಸಿದುದಾಗಿ ಹೇಳಿದೆ. ಶಿವಪುರಾಣಾಂತರ್ಗತ ವಾಯವೀಯ ಸಂಹಿತೆಯ ಉತ್ತರ ಭಾಗದ ೧ನೆಯ ಅಧ್ಯಾಯದಲ್ಲಿ "**ಕಥಂ ಸ ಲಬ್ಧವಾನ್ ಕೃಷ್ಣೋ ಜ್ಞಾನಂ ಪಾಶುಪತಂ ಪರಂ**" ಎಂಬ ಪ್ರಶ್ನೆಯು ಕೇಳಲ್ಪಟ್ಟು ಆ ಕಥೆಯನ್ನು ಹೇಳಿದಾಗ ಕೊನೆಯಲ್ಲಿ ಹೀಗೆ ಹೇಳಿದೆ:

> " ತದೇತತ್ಕಥಿತಂ ಸರ್ವಂ ಕೃಷ್ಣಸ್ಯಾಮಿತಕರ್ಮಣಃ ।
> ಮಹರ್ಷೇರ್ಜ್ಞಾನಲಾಭಶ್ಚ ಪುತ್ರಲಾಭಶ್ಚ ಶಂಕರಾತ್ ॥ "

ಹೀಗೆ ಶ್ರೀಕಂಠ ಶಿವಾಚಾರ್ಯರು ತೆಗೆದುಕೊಂಡ ಪೂರ್ವಪಕ್ಷವೂ ಶಿವಮಹಾಪುರಾಣದಲ್ಲಿಯೇ ಹೇಳಿದ್ದ ಕಥೆಯಿಂದ ಉದ್ಭವವಾಯಿತು. ಆದುದರಿಂದ ಶ್ರೀಕಂಠ ಶಿವಾಚಾರ್ಯರಿಗೆ ಮಾನ್ಯವಾದುದು ಶಿವಮಹಾಪುರಾಣದಲ್ಲಿ ಹೇಳಿರುವ ಮೋಕ್ಷೋಪಾಯವೇ ಎಂಬುದು ಇದರಿಂದಲೂ ದೃಢವಾಗುವುದು. ಶ್ರೀಕರಭಾಷ್ಯಕಾರರ ಪ್ರಕಾರವಾದರೂ ಈ ಮಹಾ ಪಾಶುಪತವ್ರತವೇ ಮೋಕ್ಷದಾಯಕವೆಂಬುದು, ವೇದವ್ಯಾಸರಿಗೇ ಈ ದೀಕ್ಷೆಯಾಗಿದ್ದಿತೆಂದು ಅವರು ಹೇಳಿರುವುದರಿಂದ ತಿಳಿಯುವುದು. "**ಮಹಾಪಾಶುಪತದೀಕ್ಷಾವಿಶಿಷ್ಟೇನ ಪಾರಾಶರ್ಯೇಣ**" ಎಂದು ಶ್ರೀಕರಭಾಷ್ಯದ ಪ್ರಾರಂಭದಲ್ಲಿಯೇ ಶ್ರೀಪತಿ ಪಂಡಿತರು ಹೇಳಿದ್ದಾರೆ.

ಶ್ರೀಕಂಠ ಶಿವಾಚಾರ್ಯರು ೪–೧–೩ನೆಯ ಸೂತ್ರದ ಭಾಷ್ಯದಲ್ಲಿ "**ನಿರಂತರಂ ಶಿವೋಽಹಮಿತಿ ಭಾವನಾಪ್ರವಾಹೇಣ ಶಿಥಿಲಿತ ಪಾಶತಯಾಽಪಗತ ಪಶುಭಾವ ಉಪಾಸಕಃ ಶಿವ ಏವ ಭವತಿ**" ಎಂದು ಹೇಳಿ ಉಪಾಸನೆಯಲ್ಲಿ ಅಹಂಗ್ರಹೋಪಾಸನೆಯನ್ನೇ ಹೇಳುತ್ತಾರೆ. ವೀರಶೈವ ಸಾಧನಕ್ರಮದ ತಳಹದಿಯು ಅಹಂಗ್ರಹೋಪಾಸನೆಯೆಂಡೇ ಬೇರೆ ಕಡೆ ವಿವರಣೆ ಕೊಡಲಾಗಿದೆ. ಬ್ರಹ್ಮಸೂತ್ರ ೪–೧–೩ನೆಯ ಶ್ರೀಕರಭಾಷ್ಯದಲ್ಲಿಯೇ, "'**ಅಹಂ ಬ್ರಹ್ಮಾಸ್ಮೀ' ತ್ಯಾದಿ ಮಹಾವಾಕ್ಯೇನ ಶಿವೋಽಹಮಿತ್ಯುಪಾಸನಮವಿರೋಧಂ**" ಎಂದು ಹೇಳಿದೆ. ಕ್ರಿಯಾಸಾರದಲ್ಲಿಯೂ "**ಅಥಾಪ್ಯುಪಾಸನಾಕಾಲೇಽಪ್ಯಹಂಬ್ರಹ್ಮೇತ್ಯುಪಾಸನಂ**" ಎಂದು ಹೇಳಿದೆ. ಹೀಗೆ ವೀರಶೈವ ಸಿದ್ಧಾಂತದಂತೆಯೇ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವೂ ಇರುವುದಲ್ಲದೆ ಸಾಧನೆಯಲ್ಲಿಯೂ ಅಂದಿನ ಕಾಲದ ವೀರಶೈವರ ಸಾಧನೆಯನ್ನೇ ಅವರು ಅನುಸರಿಸುತ್ತಿದ್ದರೆಂದು ತಿಳಿದುಬಂದಂತಾಯಿತು. ಇಷ್ಟಾದಮೇಲೂ ಅವರು ವೀರಶೈವರೆಂಬುದರಲ್ಲಿ ಸಂದೇಹವಿದ್ದರೆ ಅದರ ಸಂದೇಹನಿವಾರಣೆಗೋ ಎಂಬಂತೆ ವೀರಶೈವ ಭಾಷ್ಯಕಾರರಾದ ಶ್ರೀಪತಿ ಪಂಡಿತರು, "**ಅಂತಸ್ತದ್ಧರ್ಮೋಪದೇಶಾತ್**" ಎಂಬ ಸೂತ್ರದ ಭಾಷ್ಯದಲ್ಲಿ "**ನೀಲಕಂಠ ಭಗವತ್ಪಾದ ಭಟ್ಟ ಭಾಸ್ಕರ ಘಂಟಾನಾಥ ಜ್ಯೋತಿರ್ನಾಥಾದಿ**" ಪೂರ್ವಾಚಾರ್ಯರನ್ನು ಹೇಳುವಾಗ ಶ್ರೀಕಂಠ ಶಿವಾಚಾರ್ಯರೋರ್ವರನ್ನೇ ಭಗವತ್ಪಾದ ಪದದಿಂದ ಗೌರವಿಸಿರುವುದು ಗಮನಾರ್ಹ. ಶ್ರೀಕಂಠ ಶಿವಾಚಾರ್ಯರು ವೀರಶೈವರಲ್ಲವಾದರೆ ಭಾಷ್ಯಕಾರರಾದ ಶ್ರೀಪತಿಪಂಡಿತರು, ಭಟ್ಟಭಾಸ್ಕರಾದಿಗಳಿಗೆ ಉಪಯೋಗಿಸದಿರುವ ಭಗವತ್ಪಾದ ಪದದಿಂದ ಅವರನ್ನು ಗೌರವಿಸುತ್ತಿರಲಿಲ್ಲ. ಶ್ರೀಕಂಠ ಶಿವಾಚಾರ್ಯರು ಅಂದಿನ ಲಿಂಗಿ ವೀರಶೈವ ಆರಾಧ್ಯ ಬ್ರಾಹ್ಮಣ ಪಂಗಡದವರೆಂಬುದರಲ್ಲಿ ಸಂದೇಹವಿಲ್ಲ.

ಶ್ರೀಕಂಠಭಾಷ್ಯದಲ್ಲಿ (೩–೪–೪೯) "**ವಿದ್ಯಾಸಾಧನ ಬ್ರಹ್ಮಚರ್ಯಾದಿ ಯತಿಧರ್ಮ ಸಮನ್ವಯಾದತ್ಯಾಶ್ರಮ ಸಂಜ್ಞಕೋಽಯಮಾಶ್ರಮ ಭೇದಃ ಸ್ವತಂತ್ರಃ ಪರಮಶಿವ**

ಪ್ರಾಪ್ತಿಹೇತುಃ" ಎಂದು ಹೇಳಿರುವುದರಲ್ಲಿ ಮೋಕ್ಷದಾಯಕವಾದ ಪಾಶುಪತವ್ರತವನ್ನು 'ಅತ್ಯಾಶ್ರಮ' ಎಂಬ ಹೆಸರಿನಿಂದ ಶ್ರೀಕಂಠ ಶಿವಾಚಾರ್ಯರು ಕರೆದಿದ್ದಾರೆ. ಶ್ರೀಕಂಠ ಶಿವಾಚಾರ್ಯರಿಗೆ ಆಧಾರವಾದ ಶಿವಮಹಾಪುರಾಣದ ವಾಯವೀಸಂಹಿತೆಯಲ್ಲಿಯೇ (ಪೂರ್ವ ಭಾಗ, ಅಧ್ಯಾಯ ೩೩) ಈ ವ್ರತಧಾರಿಯು 'ನೈಷ್ಠಿಕ, ಅತ್ಯಾಶ್ರಮಿ, ಮಹಾಪಾಶುಪತ, ಮಹಾವ್ರತೀ, ಶ್ರೇಷ್ಠತಪಸ್ವೀ' ಎಂಬ ಹೆಸರುಗಳಿಂದ ಕರೆಯಲ್ಪಡುವನೆಂದು ಹೇಳಿದೆ:

ಯಃ ಕೃತ್ವಾತ್ಯಂತಿಕೀಂ ದೀಕ್ಷಾಮಾದೇಹಾಂತಮನಾಕುಲಃ ।
ವ್ರತಮೇತತ್ಪ್ರಕುರ್ವೀತ ಸ ತು ವೈ ನೈಷ್ಠಿಕಃ ಸ್ಮೃತಃ ॥ ೭೪ ॥

ಸೋಽತ್ಯಾಶ್ರಮೀ ಚ ವಿಜ್ಞೇಯೋ ಮಹಾಪಾಶುಪತಸ್ತಥಾ ।
ಸ ಏವ ತಪಸಾಂ ಶ್ರೇಷ್ಠಃ ಸ ಏವ ಚ ಮಹಾವ್ರತೀ ॥ ೭೫ ॥

ಕಾರಣೋತ್ತರ ತಂತ್ರದ ಕ್ರಿಯಾಪಾದದಲ್ಲಿ ಈ ಹೆಸರುಗಳಲ್ಲದೆ ಶಿರೋವ್ರತವೆಂಬ ಹೆಸರು ಪಾಶುಪತವ್ರತಕ್ಕೆ ಇತ್ತೆಂಬುದೂ, ಈ ವ್ರತವನ್ನಾಚರಿಸುವವನು ಲಿಂಗಧಾರಣ ದೀಕ್ಷೆಯನ್ನು ಪಡೆವನೆಂದೂ ಹೇಳಿದೆ:

ನಿವೇದಯಿಷ್ಯನ್ ಮದ್‌ಜ್ಞಾನಂ ದದ್ಯಾದಾದೌ ಶಿರೋವ್ರತಂ
ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ
ಇತೀದಂ ನಾಮಭಿಃ ಪುಣ್ಯೈಃ ನಿಗಮಾಂತೇಷು ಗೀಯತೇ
ತನುತ್ರಯ ಗತಾನಾದಿ ಮಲತ್ರಯಮಸೌ ಗುರುಃ
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶೇತ್

ಪಾಶುಪತಧರ್ಮವು ರೂಪುಗೊಂಡ ಶ್ವೇತಾಶ್ವತರೋಪನಿಷತ್ತಿನಲ್ಲಿ "ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ ಪ್ರೋವಾಚ ಸಮ್ಯಗ್ ಋಷಿ ಸಂಘಜುಷ್ಟಂ"—ಎಂದರೆ ಅತ್ಯಾಶ್ರಮಿಗಳಿಗೆ ಆ ಧರ್ಮವು ಉಪದೇಶಿಸಲ್ಪಟ್ಟಿದೆಯೆಂದು ಹೇಳಿದೆ. ಇನ್ನು ಮುಂಡಕೋಪನಿಷತ್ತಿನಲ್ಲಿ "ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್‌ಯೈಸ್ತು ಚೀರ್ಣಂ"—ಎಂದರೆ ಯಾರಿಂದ ಶಿರೋವ್ರತವು ವಿಧಿಗನುಸಾರವಾಗಿ ಮಾಡಲ್ಪಟ್ಟಿರುವುದೋ ಅವರಿಗೇನೇ ಆ ಉಪನಿಷತ್ತಿನಲ್ಲಿ ಹೇಳಿದ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂದು ಹೇಳಿದೆ. ಅತ್ಯಾಶ್ರಮ, ಶಿರೋವ್ರತ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ಆಜೀವಪರ್ಯಂತ ಲಿಂಗಧಾರಣ ಲಿಂಗಾರ್ಚನ ವ್ರತವನ್ನು ಅನುಸರಿಸುವವರಿಗೇನೇ ಈ ಉಪನಿಷತ್ತುಗಳಲ್ಲಿನ ಬ್ರಹ್ಮವಿದ್ಯೆಯನ್ನು ಉಪದೇಶ ಮಾಡಬೇಕೆಂದಾಯಿತು. ಈ ಸಂದರ್ಭದಲ್ಲಿ ಇದೇ ಮುಂಡಕ ಉಪನಿಷತ್ತಿನಲ್ಲಿ "ನಾಯಮಾತ್ಮಾ ಬಲಹೀನೇನ ಲಭ್ಯೋ ನ ಚ ಪ್ರಮಾದಾತ್ ತಪಸೋವಾಪ್ಯಲಿಂಗಾತ್"—ಎಂದರೆ ವೀರನಲ್ಲದವನಿಗೂ ಲಿಂಗರಹಿತನಾದವನಿಗೂ ತಪಸ್ಸಿನಿಂದಲೂ ಆತ್ಮಸಾಕ್ಷಾತ್ಕಾರವಾಗುವುದಿಲ್ಲವೆಂದು ಹೇಳಿರುವುದು ಜ್ಞಾಪಕಾರ್ಹವಾಗಿದೆ. ಈ ತರದ ವರ್ಣಾಶ್ರಮ ಧರ್ಮಗಳಿಗೆ ಒಗ್ಗದ ಅತ್ಯಾಶ್ರಮ ಪಾಶುಪತ ಲಿಂಗಧಾರಿಗಳಿಗೆ ಅನುಕೂಲವಾದ ಇತರ ಮಂತ್ರಗಳು ಉಪನಿಷತ್ತಿನಲ್ಲಿದ್ದು ಕಾಲಾಂತರದಲ್ಲಿ ಲೋಪವಾಗಿರಬೇಕೆಂಬ ಆರೋಪಕ್ಕೆ ಅವಕಾಶವಿದೆ.

ಶೈವಧರ್ಮವು ವರ್ಣಾಶ್ರಮ ಧರ್ಮಗಳ ಕಟ್ಟನ್ನು ಸಡಲಿಸುತ್ತ ಬಂದುದಕ್ಕೆ ವ್ರಾತ್ಯರೇ ಸಾಕ್ಷಿ. "ವರ್ಣಾಶ್ರಮ ಕೃತೈರ್ಧರ್ಮೈರ್ವಿಪರೀತಂ ಕ್ವಚಿತ್ ಸಮಂ" ಎಂದು ಹೇಳಿ ವರ್ಣಾಶ್ರಮಧರ್ಮಕ್ಕೆ ಹೆಚ್ಚು ಮಾನ್ಯಮಾಡದ ಶಿವಮಹಾಪುರಾಣದಲ್ಲಿ ಶೂದ್ರರೂ ಲಿಂಗಪೂಜೆ

ಮಾಡಬಹುದೆಂದು ಹೇಳಿರುವ ಶ್ಲೋಕಗಳನ್ನು ೨೪ನೆಯ ಪುಟದಲ್ಲಿ ಕೊಟ್ಟಿದೆ. ಅದರಿಂದಲೇ ಶ್ರೀಕಂಠ ಶಿವಾಚಾರ್ಯರು ವರ್ಣತಾರತಮ್ಯಕ್ಕೆ ಮಹತ್ವವನ್ನು ಕೊಡದ ಪ್ರಗತಿಗಾಮಿಗಳಾಗಿ ಮುಂದೆಬರುವ ವೀರಶೈವದ ಶುದ್ಧಿ ಸಂಘಟನೆಗೆ ಮುನ್ಸೂಚನೆ ಕೊಡುವವರಂತಿದ್ದಾರೆ. ಚಂಡಾಲ ನಾದರೂ ಶಿವಭಕ್ತನಾದರೆ ಶುದ್ಧನಾಗುವನೆಂಬ ಭಾವನೆಯು ಇವರಿಗಿದೆ. ಶ್ರೀಕಂಠಭಾಷ್ಯದಲ್ಲಿ (೪-೧-೧೬) ಹೇಳಿರುವುದಿದು ಗಮನಾರ್ಹವಾಗಿದೆ:

> "ಮುಂಡಕೋಪನಿಷದಿ ಶ್ರೂಯತೇ—'ಅಪಿ ವಾ ಯಶ್ಚಾಂಡಾಲಃ ಶಿವ ಇತಿ ವಾಚಂ ವದೇತ್ ತೇನ ಸಹ ಸಂವದೇತ್, ತೇನ ಸಹ ಸಂವಸೇತ್, ತೇನ ಸಹ ಭುಂಜೀತ' ಇತಿ। ಅತ್ರ ಹಿ ಶಿವಶಬ್ದಸ್ಯ ಬ್ರಹ್ಮಬೋಧಕಸ್ಯ ಸಮುಚ್ಚರಣಮಾತ್ರೇಣಾತ್ಯಂತಾವಿಶುದ್ಧಸ್ಯ ಪಾತಕಿನಃ ಪರಮ ವಿಶುದ್ಧಿಪ್ರಾಪ್ತಿರವಗಮ್ಯತ ಇತಿ"

ಪರಮಪಾಪಿಯಾದ ಚಾಂಡಾಲನಾದರೂ ಶಿವಶಬ್ದವನ್ನು ಉಚ್ಚರಿಸಿದರೆ ಶುದ್ಧನಾಗುವುದರಿಂದ ಶಿವನಾಮವನ್ನು ಉಚ್ಚರಿಸುವ ಚಾಂಡಾಲನೊಡನೆ ಮಾತನಾಡಬಹುದು, ವಾಸಮಾಡ ಬಹುದು, ಊಟಮಾಡಬಹುದು ಎಂಬುದನ್ನು ಸಿದ್ಧಾಂತಮಾಡಲು ಶ್ರೀಕಂಠ ಶಿವಾಚಾರ್ಯರು ಮೇಲೆಕಂಡ ಮುಂಡಕಶ್ರುತಿಯ ಆಧಾರವನ್ನು ತೆಗೆದುಕೊಂಡಿದ್ದಾರೆ. ಆದರೆ ಮೇಲಿನ ಮುಂಡಕಶ್ರುತಿಯು ಇಂದು ಮುಂಡಕೋಪನಿಷತ್ತಿನಲ್ಲಿ ಇಲ್ಲ. ದಶೋಪನಿಷತ್ತುಗಳಲ್ಲಿ ಒಂದಾದ ಮುಂಡಕೋಪನಿಷತ್ತಿನಂತಹ ಪ್ರಸಿದ್ಧವಾದ ಉಪನಿಷತ್ತಿನಲ್ಲಿ ಇಲ್ಲದ ಮಂತ್ರವನ್ನು ಇದೆ ಯೆಂದು ಹೇಳಿ ಭ್ರಾಂತಿಕಾರಕವಾದ ಮೇಲಿನ ಸಿದ್ಧಾಂತಕ್ಕೆ ಶ್ರೀಕಂಠ ಶಿವಾಚಾರ್ಯರಂತಹ ಭಾಷ್ಯಕಾರರು ಆಧಾರ ತೆಗೆದುಕೊಂಡರೆನ್ನಲು ಹಿಂದು ಮುಂದು ನೋಡಬೇಕಾಗುವುದು.

ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ *The Sivadvaita of Srikantha* ಎಂಬ ಗ್ರಂಥದ ೨೩೪ನೆಯ ಪುಟದಲ್ಲಿ ಹೀಗೆ ಹೇಳಿದೆ:

We are told (by Srikantha) even by the utterance of the name of Siva, the unclean become clean and a Candala becomes a worthy companion ; "If a Candala mentions the word Siva, talk to him, live with him, eat with him" says Mundaka (the reference cannot be traced). It is said that this verse must have been deliberately left out by all commentators from Shankara downwards, that it must have been found in earlier texts of the Mundaka and Srikantha who has evidently used this text should have preceded Shankara.

ಇಷ್ಟು ಹೇಳಿ ಅತಿವರ್ಣವಿಷಯವನ್ನು ಮುಗಿಸಬಹುದು. ಅತ್ಯಾಶ್ರಮ ಎಂಬ ಪದ ವಾದರೂ ವರ್ಣಾಶ್ರಮ ಧರ್ಮಾನುಯಾಯಿಗಳಿಗೆ ಹಿಡಿಸದ ಮಾತೆ. ಆದರೆ ಶ್ವೇತಾಶ್ವತರ ಉಪನಿಷತ್ತಿನಲ್ಲಿಯೂ ಬ್ರಹ್ಮವಿದ್ಯೆಗೆ ಅರ್ಹರಾದವರು ಅತ್ಯಾಶ್ರಮಿಗಳೇ ಎಂದು ಹೇಳಿದೆ. ಭಾಷ್ಯಗಳಲ್ಲಿ ಈ ಪದಕ್ಕೆ ಕೊಟ್ಟಿರುವ ಅರ್ಥವು ಗಮನಾರ್ಹವಾಗಿದೆ. ಶಾಂಕರ ಭಾಷ್ಯದಲ್ಲಿ "ಪರಮಹಂಸ ಸಂನ್ಯಾಸಿನಸ್ತು ಏವಾತ್ಯಾಶ್ರಮಿಣಃ" ಎಂದು ಹೇಳಿದೆ. ವಿಜ್ಞಾನ ಭಗವದ್‌ಕೃತ ವಿವರಣದಲ್ಲಿ "ಅತ್ಯಾಶ್ರಮಃ – ಸಂನ್ಯಾಸಾಶ್ರಮಃ ತತ್ರಾಪಿ ಪರಮಹಂಸಾ ಶ್ರಮಃ" ಎಂದು ಹೇಳಿದೆ. ಸಂನ್ಯಾಸಾಶ್ರಮದಲ್ಲಿ ಉತ್ಕೃಷ್ಟವಾದುದು ಪರಮಹಂಸ ಸಂನ್ಯಾ ಸಾಶ್ರಮವೆಂದು ಅರ್ಥಮಾಡಿದ್ದಾರೆ. ಆದರೆ ಸಂನ್ಯಾಸಾಶ್ರಮದಲ್ಲಿ ಉತ್ಕೃಷ್ಟವಾದುದೂ

ಸಂನ್ಯಾಸಾಶ್ರಮವೇ ಆದುದರಿಂದ, ಅದು ಅತ್ಯಾಶ್ರಮ ಎಂದರೆ ಆಶ್ರಮಗಳಿಗೆ ಮೀರಿದುದಾಗಲಾರದು. ಆದುದರಿಂದಲೇ ನಾರಾಯಣರ ದೀಪಿಕೆಯಲ್ಲಿ 'ಅತ್ಯಾಶ್ರಮಿಭ್ಯಃ' ಎಂಬುದನ್ನು 'ಅಂತ್ಯಾಶ್ರಮಿಭ್ಯಃ' ಎಂದು ಬದಲಾಯಿಸಿಕೊಂಡು ಆ ಪದಕ್ಕೆ ಸಂನ್ಯಾಸಾಶ್ರಮವೆಂದು ಅರ್ಥಮಾಡಲಾಗಿದೆ. ಅನಾನುಕೂಲವಾದ ಶ್ರುತಿ ಮೊದಲಾದ ಆಧಾರಗಳನ್ನು ಬದಲಾಯಿಸುವುದೂ ಕೈಬಿಡುವುದೂ ಎಲ್ಲ ಧರ್ಮದವರಿಗೂ ಅಪರಿಚಿತವಾದುದೇನೂ ಅಲ್ಲ.

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲೆಯಲ್ಲಿ ಮುದ್ರಿತವಾಗಿರುವ ಶಿವಮಹಾಪುರಾಣದ ಮೊದಲ ಭಾಗದ ಪ್ರಸ್ತಾವನೆಯಲ್ಲಿ ಹೇಳಿರುವಂತೆ "ಶ್ರೀಮಚ್ಛಂಕರ ಭಗವತ್ಪಾದರು ತಮ್ಮ ಸೂತ್ರಭಾಷ್ಯದಲ್ಲಿ ಈ ಪುರಾಣದ ಅನೇಕ ಶ್ಲೋಕಗಳನ್ನು ಪ್ರಮಾಣವಾಗಿ ಉದಾಹರಿಸುತ್ತಾರೆ" ಎಂಬುದನ್ನು ಹಿಂದೆಯೇ ಹೇಳಿದೆ. ಇದರಲ್ಲಿ ಹೇಳಿರುವ ಯಾವಜ್ಜೀವವೂ ಲಿಂಗಧಾರಣ ಲಿಂಗಾರ್ಚನೆಗಳನ್ನು ಮಾಡಬೇಕೆಂದು ಹೇಳುವ ಮಹಾಪಾಶುಪತವ್ರತವೇ ಮೋಕ್ಷಕ್ಕೆ ಮಾರ್ಗವೆಂದು ಶ್ರೀಕಂಠ ಶಿವಾಚಾರ್ಯರೂ ಹೇಳಿದ್ದಾರಷ್ಟೆ. ಹೀಗೆ ಪುರಾತನರಾದ ಹಿರಿಯ ಭಾಷ್ಯಕಾರರಿಂದ ಗೌರವಿಸಲ್ಪಟ್ಟಿರುವ ಶಿವಮಹಾಪುರಾಣದ ಹಿರಿಮೆ ಅತುಳವಾದುದು. ಶ್ರೀ ಶಂಕರಾಚಾರ್ಯರ ಕಾಲಕ್ಕಿಂತಲೂ ಹಿಂದಿನಿಂದಲೂ ಪ್ರಸಿದ್ಧವಾದ ಈ ಪುರಾಣದಲ್ಲಿ ಹೇಳಿರುವುದರಲ್ಲಿ ಅಂದಿನ ವೀರಶೈವ ಧರ್ಮದ ಸ್ಥಿತಿಯಮೇಲೆ ಬೆಳಕು ಬೀಳುವುದು. ಇಹಲೋಕ ಭೋಗರತರಾದವರು ಎಂದರೆ ಪ್ರವೃತ್ತರು ಗುರುದತ್ತವಾದ ಲಿಂಗಗಳನ್ನು ಪೀಠದಲ್ಲಿಟ್ಟು ಪೂಜಿಸಿ ಸಂಪುಟದಲ್ಲಿ ಪ್ರತ್ಯೇಕ ಗೃಹಗಳಲ್ಲಿಡುತ್ತಿದ್ದರು. ಒಬ್ಬೊಬ್ಬರಿಗೂ ಅವರವರ ಲಿಂಗವಿರಬೇಕಾದುದರಿಂದ ಈ ತರದ ಲಿಂಗಗಳನ್ನು ಇಷ್ಟಲಿಂಗವೆಂದು ಕರೆದಿರುವುದನ್ನು 25ನೆಯ ಪುಟದಲ್ಲಿ ಹೇಳಿದೆ. ಮುಖ್ಯವಾದ ಶ್ಲೋಕಗಳು 24ನೆಯ ಪುಟದಲ್ಲಿ ಮುದ್ರಿಸಲ್ಪಟ್ಟು ವಿವರಣೆಯನ್ನು ಕೊಟ್ಟಿದೆ. ಇಹಲೋಕ ಭೋಗವಿರಾಗಿಗಳಾಗಿ ಮೋಕ್ಷಕಾಂಕ್ಷಿಗಳಾದ ನಿವೃತ್ತರು ಆಜೀವಪರ್ಯಂತರ ಲಿಂಗವನ್ನು ತಲೆಯಲ್ಲಿ ಧರಿಸಿ ಕರದಲ್ಲಿ ಪೂಜಿಸಬೇಕಾಗಿದ್ದಿತು. ಬೇರೆ ಬೇರೆ ಜಾತಿಯವರಿಗೂ ಸ್ತ್ರೀ ಪುರುಷರಿಗೂ ಬೇರೆ ಬೇರೆ ಲಿಂಗಗಳಿದ್ದವು. ಇದು ಶೈವಜಂಗಮ ಅಥವಾ ವೈದಿಕ ವೀರಮಾಹೇಶ್ವರರ ಪದ್ಧತಿಯಾಗಿದ್ದಿತು. ಲಿಂಗಧಾರಿಗಳಾದ ತಾಂತ್ರಿಕ ಪಾಶುಪತರಿಗೆ ಇದು ಅನ್ವಯಿಸುವುದಿಲ್ಲ. ವೀರಶೈವದ ಶುದ್ಧಿ ಸಂಘಟನೆಯಾದ ಮೇಲೆ ಈ ವ್ಯತ್ಯಾಸಗಳು ತೆಗೆದುಹಾಕಲ್ಪಟ್ಟವು. ಸ್ವಕೀಯವಾದ ಲಿಂಗಪೂಜೆಯು ಎಂದರೆ ಚರಲಿಂಗಗಳನ್ನು ಪೀಠದ ಮೇಲಿರಿಸಿ ಪೂಜಿಸುವುದು ಶ್ರೀ ಶಂಕರಾಚಾರ್ಯರಿಂದಲೇ ಪ್ರಾರಂಭಿಸಲ್ಪಟ್ಟಿತೆಂದು ಆಂಧ್ರ ವಿಜ್ಞಾನ ಸರ್ವಸ್ವದಲ್ಲಿ (ಸಂ. ೨, ಪುಟ ೫೮) ಹೇಳಿರುವುದು ಒಪ್ಪತಕ್ಕುದಲ್ಲ. ಏಕೆಂದರೆ ಅವರ ಕಾಲದಲ್ಲೇ ಗೌರವಿಸಲ್ಪಡುವಷ್ಟು ಹಿಂದಿನದಾದ ಶಿವಮಹಾಪುರಾಣದಲ್ಲಿಯೇ ಇದು ಹೇಳಲ್ಪಟ್ಟು ಇರುವುದರಿಂದಲೇ ಶ್ರೀ ಶಂಕರಾಚಾರ್ಯರು ಚಂದ್ರಮೌಳೀಶ್ವರಲಿಂಗವನ್ನು ಪೀಠದಲ್ಲಿಟ್ಟು ಪೂಜಿಸುತ್ತಿದ್ದಂತೆ, ಇಂದೂ ಅದು ಪೂಜಿಸಲ್ಪಡುತ್ತಿದೆ. ಶ್ರೀ ಶಂಕರಾಚಾರ್ಯರನ್ನು ತಪ್ತಲಿಂಗಧಾರಿಗಳೂ ಪಾಷಾಣಲಿಂಗಧಾರಿಗಳೂ ಸಂಧಿಸಿದರೂ ತಪ್ತಲಿಂಗಧಾರಣವನ್ನು ಮಾತ್ರ ಖಂಡಿಸಿ ಪಾಷಾಣಲಿಂಗಧಾರಣವನ್ನು ಶ್ರೀ ಶಂಕರರು ಖಂಡಿಸದಿರುವರೆಂಬುದರಲ್ಲಿ ಆಶ್ಚರ್ಯವಿಲ್ಲ. ಏಕೆಂದರೆ ಲಿಂಗಧಾರಣವು ಅವರು ಒಪ್ಪಿರುವ ಶಿವಮಹಾಪುರಾಣದಲ್ಲಿ ಹೇಳಲ್ಪಟ್ಟಿದೆ. ಶ್ರೀ ಶಿವಮಹಾಪುರಾಣವು ಶ್ವೇತಾಶ್ವತರ ಮಂತ್ರಗಳನೇಕವನ್ನು ಒಳಗೊಂಡ ಅದರ ವಿಸ್ತಾರರೂಪವೆನ್ನಬಹುದು. ಅದರಲ್ಲಿ ಶ್ರೀಕಂಠ ಶಿವಾಚಾರ್ಯರಿಗೂ, ಶ್ರೀಪತಿ ಪಂಡಿತರಿಗೂ ಕ್ರಿಯಾಸಾರಕರ್ತರಿಗೂ ಸಿದ್ಧಾಂತ ಶಿಖಾಮಣಿಗೂ

ಆಧಾರವಾದ ಆಧ್ಯಾತ್ಮಿಕ ವಿಚಾರಗಳಿವೆ. ಗ್ರಂಥವಿಸ್ತಾರಭಯದಿಂದ ಶಕ್ತಿವಿಶಿಷ್ಟಾದ್ವೈತ ಸೃಷ್ಟಿಯನ್ನು ಹೇಳುವ ಶ್ಲೋಕವೊಂದನ್ನು ಮಾತ್ರ ಇಲ್ಲಿ ಕೊಟ್ಟಿದೆ:

ವಿಶ್ವೋತ್ತರೋತ್ತರ ವಿಚಿತ್ರಮನೋರಥಸ್ಯ ಯಸ್ಯೈಕ ಶಕ್ತಿಶಕಲೇ ಸಕಲಃ ಸಮಾಪ್ತಃ ।
ಅಧ್ವಾನಮಧ್ವಪತಿಮಧ್ವವಿದೋ ವದಂತಿ ತಸ್ಮೈ ನಮಸ್ಸಕಲಲೋಕವಿಲಕ್ಷಣಾಯ ॥

ಈ ಶ್ಲೋಕವನ್ನು ಬ್ರಹ್ಮಸೂತ್ರದಲ್ಲಿನ ೨-೧-೩೧ ಸೂತ್ರದ ಶ್ರೀಕಂಠಭಾಷ್ಯದಲ್ಲಿಯೂ, ಅದೇ ಸೂತ್ರದ ಶ್ರೀಕರಭಾಷ್ಯದಲ್ಲಿಯೂ ಶಿವಶಕ್ತಿಯ ಒಂದಂಶದಿಂದಲೇ ಜಗತ್ತಾಗಿರುವುದನ್ನು ತಿಳಿಸುವ ಆಧಾರವಾಗಿ ತೆಗೆದುಕೊಳ್ಳಲ್ಪಟ್ಟಿದೆ. ಶ್ರೀಕಂಠಭಾಷ್ಯದಲ್ಲಿ ಅನೇಕ ಆಧಾರಗಳು ಪುರಾಣದವಾಗಿವೆ. ಇವುಗಳಲ್ಲಿ ಎಷ್ಟು ಶಿವಮಹಾಪುರಾಣದವೆಂಬುದು ವಿಚಾರಾರ್ಹವಾಗಿದೆ. ಅದ್ವೈತಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುವ ಶ್ರೀಕಂಠ ಶಿವಾಚಾರ್ಯರು ಮೋಕ್ಷದಲ್ಲಿ ಸಾರೂಪ್ಯವನ್ನು ಹೇಳಿ ಐಕ್ಯವನ್ನು ಹೇಳದಿರುವುದಕ್ಕೆ ಅವರಿಗೆ ಪರಮ ಆಧಾರವಾದ ಶಿವಮಹಾ ಪುರಾಣದಲ್ಲಿ "ಮುಕ್ತಃ ಶಿವಸಮೋ ಭವೇತ್" ಎಂದು ಹೇಳಿರುವುದೇ ಕಾರಣವಾಗಿರ ಬೇಕು. ಗ್ರಂಥವಿಸ್ತಾರಭಯದಿಂದ ಶಿವಮಹಾಪುರಾಣವು ಶ್ರೀಕಂಠ ಶಿವಾದ್ವೈತಕ್ಕೂ ಸಿದ್ಧಾಂತ ಶಿಖಾಮಣಿಗೂ ಹೇಗೆ ಹಿನ್ನೆಲೆಯಾಗಿದೆಯೆಂಬುದನ್ನು ತೋರಿಸುವ ಕಾರ್ಯವನ್ನು ಇಲ್ಲಿ ಕೈಗೊಂಡಿಲ್ಲ. ಇಚ್ಛಾಜ್ಞಾನಕ್ರಿಯಾಶಕ್ತಿಗಳು ಜಗತ್‌ಸೃಷ್ಟಿಯಲ್ಲಿ ಹೇಗೆ ಕಾರ್ಯಮಾಡುವುವು ಎಂಬುವೇ ಮೊದಲಾದ ವಿಷಯಗಳು ಈ ಮಹಾಪುರಾಣದಲ್ಲಿ ವಿವರಿಸಲ್ಪಟ್ಟಿವೆಯೆಂದು ಇಲ್ಲಿ ಹೇಳಿದರೆ ಸಾಕೆನಿಸುವುದು.

ಶ್ರೀಕಂಠ ಶಿವಾಚಾರ್ಯರ ಗುರುಗಳಾದ ಶ್ವೇತಾಚಾರ್ಯರು ಮಹಾಪಾಶುಪತ ಜ್ಞಾನ ನಿಧಿಗಳ ಪರಂಪರೆಯವರೆಂದು ಉಲ್ಲೇಖಿಸಲ್ಪಟ್ಟಿರುವ ಶ್ವೇತಾಚಾರ್ಯರಲ್ಲವೆಂದು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಅವರ ಗ್ರಂಥದ ೯ನೆಯ ಪುಟದಲ್ಲಿ ಹೇಳಿದ್ದಾರೆ. ಶ್ರೀಕಂಠರ ಮತದ ನಿರ್ಣಯದಿಂದ ಶ್ರೀಕಂಠರ ಗುರುಗಳು ಮಹಾಪಾಶುಪತಾಚಾರ್ಯರಾದ ಶ್ವೇತಾ ಚಾರ್ಯರೇ ಆಗಿರಬೇಕು ಎಂದಾಗುವುದು. ಅವರ ಕಾಲನಿರ್ಣಯವು ಶ್ರೀಕಂಠ ಶಿವಾಚಾರ್ಯರ ಕಾಲನಿರ್ಣಯವನ್ನು ಅವಲಂಬಿಸುತ್ತದೆ. ಆಜೀವಪರ್ಯಂತ ಪಾಶುಪತವ್ರತವನ್ನು ಆಚರಿಸುವ ದೀಕ್ಷೆಯನ್ನು ಮಹಾಪಾಶುಪತರಾದ ಶ್ವೇತಾಚಾರ್ಯರಿಂದ ಪಡೆದು ಲಿಂಗಧಾರಿಗಳಾಗಿ ಶ್ರೀಕಂಠ ಶಿವಾಚಾರ್ಯರು ವರ್ಣಾಶ್ರಮ ಧರ್ಮಗಳ ಕಟ್ಟುನಿಟ್ಟುಗಳಿಗೆ ಮೀರಿದ ಅತ್ಯಾಶ್ರಮಿ ಗಳಾಗಿದ್ದರು.

## ಶ್ರೀಕಂಠ ಶಿವಾಚಾರ್ಯರ ದೇಶ-ಕಾಲಾದಿ ವಿಚಾರಗಳು

ಶ್ರೀಕಂಠ ಶಿವಾಚಾರ್ಯರ ಕಾಲ-ದೇಶ-ವರ್ತಮಾನಾದಿಗಳನ್ನು ನಿಷ್ಕರ್ಷಿಸಲು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಬಹಳ ಪ್ರಯತ್ನವನ್ನು ಮಾಡಿದ್ದಾರೆ. ಈ ವಿಷಯವು ಅಪ್ಪಯ್ಯ ದೀಕ್ಷಿತರ ಕಾಲದಿಂದಲೇ ಚರ್ಚೆಯಲ್ಲಿದ್ದು, ನಿರ್ಧರಿಸಲು ಸುಲಭವಲ್ಲವಾದುದಾಗಿದೆ. ಶ್ರೀ ರಾಮಾನುಜರ ಸಿದ್ಧಾಂತಕ್ಕೂ, ಶ್ರೀಕಂಠಸಿದ್ಧಾಂತಕ್ಕೂ ಬಹಳ ಸಾಮ್ಯವಿರುವುದರಿಂದ ಯಾರದು ಮೊದಲು ಬರೆದದ್ದು ಎಂಬ ಪ್ರಶ್ನೆಯನ್ನು ಬಿಡಿಸುವಲ್ಲಿ ಬಹಳ ಬಿಸಿಯು ಎದ್ದಿದೆ. ಇಬ್ಬರೂ ದೊಡ್ಡ ವಿದ್ವಾಂಸರು ಮತ್ತು ಆಚಾರ್ಯಪುರುಷರು; ಒಬ್ಬರು ಮತ್ತೊಬ್ಬರ ಭಾಷ್ಯ ವನ್ನು ನೋಡಿ, ನೋಡಿಲ್ಲದಂತೆ ಕಳವಿನಿಂದ ವಿಷಯಗಳನ್ನು ಗ್ರಹಿಸಿ ಬರೆಯುವ ಕೆಳಮಟ್ಟದ

ವ್ಯಕ್ತಿಗಳಲ್ಲ. ಆದುದರಿಂದ ಇವರಿಬ್ಬರ ಭಾಷ್ಯಕ್ಕೂ ಮೂಲವಾದ ಬೋಧಾಯನ ವೃತ್ತಿಯನ್ನು ಇಬ್ಬರೂ ಅನುಸರಿಸಿರುವುದರಿಂದ ಇಬ್ಬರ ಗ್ರಂಥಗಳಲ್ಲಿಯೂ ಸಮೀಪವಾದ ಸಾಮ್ಯವು ಕಂಡು ಬರುವುದೆಂಬುದೇ ಸರಿಯಾದ ಉತ್ತರ. ಆದರೆ ಈ ಉತ್ತರವನ್ನು ಕೊಡಲು ಅವರಿಬ್ಬರೂ ಒಂದೇ ಕಾಲದವರೆನ್ನಬೇಕಾಗುವುದಿಲ್ಲ. ಇವರಿಬ್ಬರಲ್ಲಿ ಯಾರೊಬ್ಬರಾದರೂ ಬಹಳ ಹಿಂದೆಯೇ ಭಾಷ್ಯವನ್ನು ಬರೆದಿದ್ದರೂ ಆ ಭಾಷ್ಯವು ಬೇರೆ ಕಾಲ, ಬೇರೆ ದೇಶಗಳಲ್ಲಿ ಇದ್ದ ಇನ್ನೊಬ್ಬರಿಗೆ ಗೊತ್ತಿಲ್ಲದಿರಬಹುದು. ಶ್ರೀಕಂಠ ಶಿವಾಚಾರ್ಯರೂ ಶ್ರೀ ರಾಮಾನುಜಾಚಾರ್ಯರೂ ಒಂದೇ ಕಾಲದವರೆನ್ನುವ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ಅಭಿಪ್ರಾಯಕ್ಕೆ ಸರಿಯಾದ ಕಾರಣಗಳಿವೆಯೆನ್ನಲಾಗುವುದಿಲ್ಲ. ಶಂಕರದಿಗ್ವಿಜಯದಲ್ಲಿ ನೀಲಕಂಠ ಶಿವಾಚಾರ್ಯರೆಂಬ ಆಚಾರ್ಯರು ಶ್ರೀ ಶಂಕರಾಚಾರ್ಯರೊಡನೆ ವಾದ ಮಾಡಿದರೆಂದೂ, ಹರದತ್ತಾಚಾರ್ಯರು ಅವರ ಶಿಷ್ಯರೆಂದೂ ಹೇಳಿದೆ. ಶ್ರೀಕಂಠ ಶಿವಾಚಾರ್ಯರೆಂದೂ, ನೀಲಕಂಠ ಶಿವಾಚಾರ್ಯರೆಂದೂ ಕರೆಯಲ್ಪಡುತ್ತಿರುವ ಭಾಷ್ಯಕಾರರ, ಶಿವನ ಶಕ್ತಿಯು ಜಗತ್ಕಾರಣವೆಂಬುದರಂತಹ ವಾದವು ಶ್ರೀ ಶಂಕರಾಚಾರ್ಯರ ಬೃಹದಾರಣ್ಯಕ ಭಾಷ್ಯದಲ್ಲಿ ಖಂಡಿಸಲ್ಪಟ್ಟಿರುವುದರಿಂದ ಇವುಗಳಲ್ಲಿ ಮೊದಲನೆಯದಕ್ಕೆ ಸಮರ್ಥನೆಯು ದೊರೆಯುತ್ತದೆ. ಹರದತ್ತಾಚಾರ್ಯರು 'ಶ್ರೀಕಂಠಭಾಷ್ಯಸಮರ್ಥ' ಎಂಬ ಗ್ರಂಥವನ್ನು ಬರೆದಿರುವುದರಿಂದ ಎರಡನೆಯ ಮಾತಿಗೆ ಸಮರ್ಥನೆ ದೊರೆಯುತ್ತದೆ. ಈ ಕಾಲಕ್ಕಿಂತಲೂ ಮುಂದೆ ಶ್ರೀಕಂಠ ಶಿವಾಚಾರ್ಯರಿದ್ದರೆಂಬುದಕ್ಕೆ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಯಾವ ಸಮರ್ಪಕವಾದ ಕಾರಣಗಳನ್ನೂ ಕೊಟ್ಟಿಲ್ಲ. ಆದುದರಿಂದ ಈ ವಿಷಯಗಳು ವಿಚಾರಾರ್ಹವಾಗಿವೆ.

ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಅವರ ಗ್ರಂಥದ ೧೨ನೆಯ ಪುಟದಲ್ಲಿ ಹೀಗೆ ಈ ವಿಷಯವನ್ನು ಪ್ರಾರಂಭ ಮಾಡುತ್ತಾರೆ:

Very little is known of Srikantha's place, period or parentage. The *Shankara Digvijaya* ascribed to Madhvacharya mentions a Srinkantha who was the head of a Matha in Gokarnam in the west coast. According to that work he was a theist and Haradatta was one of his pupils; in disputation with Shankara, Srikantha owned himself defeated and renounced his theism; thus Srikantha was an elder contemporary of Shankara. Unfortunately this work is unreliable even in respect of its authorship. The work jumbles together a number of writers of various periods without any consideration for genuine chronology. The alleged contemporaneity of Shankara and Haradatta is difficult to reconcile with the dates usually assigned to the two, as the latter is believed to have died in 878 A.D., while the former passed away as early as 820 A.D.

ಇಂದೂ ಸಹಾ, ಹಿಂದಿನ ಗ್ರಂಥಕಾರರ ಕಾಲಗಳನ್ನು ಸರಿಯಾಗಿ ತಿಳಿಯದಿರುವೆವೆಂದ ಮೇಲೆ ಶಂಕರದಿಗ್ವಿಜಯ ಗ್ರಂಥಕಾರರು ಬೇರೆಬೇರೆಕಾಲದ ಕೆಲವರನ್ನು ಒಂದೇ ಕಾಲದವರೆಂದು ಭಾವಿಸಿದ್ದುದು ಆಶ್ಚರ್ಯವಲ್ಲ. ಆದರೆ ಶಂಕರದಿಗ್ವಿಜಯದಲ್ಲಿ ಬರೆದಿರುವುದೆಲ್ಲ ತಪ್ಪೆಂದು ಸ್ಪಷ್ಟವಾಗಿ ತಿಳಿದ ಹೊರತು ಅದರಲ್ಲಿ ಹೇಳಿರುವುದನ್ನು ಗಣನೆಗೇ ತೆಗೆದುಕೊಳ್ಳದಿರುವುದು ಸರಿಯಲ್ಲ. ಶ್ರೀ ಶಂಕರಾಚಾರ್ಯರು ಅವರ ತಾರುಣ್ಯದಲ್ಲಿಯೇ ಇಹಲೋಕ ಯಾತ್ರೆಯನ್ನು

ಕ್ರಿ.ಶ. ೮೨೦ ರಲ್ಲಿ ಮುಗಿಸಿಕೊಂಡರೆ, ಅವರ ಹಿರಿಯ ಸಮಕಾಲೀನರೆಂದು ಹೇಳಿರುವ ಶ್ರೀಕಂಠ ಶಿವಾಚಾರ್ಯರ ಶಿಷ್ಯರಾದ ಹರದತ್ತಾಚಾರ್ಯರು ಕ್ರಿ.ಶ. ೮೭೮ ರಲ್ಲಿ ಎಂದರೆ, ಶ್ರೀ ಶಂಕರಾಚಾರ್ಯರು ಕಾಲವಾದ ೫೮ ವರ್ಷಗಳ ತರುವಾಯ ಕಾಲವಾದರೆಂಬುದರಲ್ಲಿ, ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಭಾವಿಸಿರುವಂತೆ, ಅಸಂಗತವಾದುದೇನೂ ಇಲ್ಲ. ಅಲ್ಲದೆ ಶ್ರೀ ಶಂಕರಾಚಾರ್ಯರು ಕಾಲವಾದುದು ಕ್ರಿ.ಶ. ೮೨೦ ರಲ್ಲಿ ಎಂಬುದು ತಪ್ಪೆಂದು ತೋರಿಸಲು ಶ್ರೀ ಶಾಸ್ತ್ರಿಗಳು ಪ್ರಯತ್ನಿಸಿಲ್ಲ. ಆದರೆ ಹರದತ್ತಾಚಾರ್ಯರು ಕಲಿಯುಗದಲ್ಲಿ ೩೯೭೯ ವರ್ಷಗಳು ಕಳೆದಮೇಲೆ ವಿಲಂಬಿಸಂವತ್ಸರದ ಪುಷ್ಯಮಾಸದ ಶುಕ್ಲಪಕ್ಷಪಂಚಮಿ ಶುಕ್ರವಾರ ಕಾಲವಾದರೆಂದು ತಿಳಿದುಬಂದಿದೆ, ಇದು ೧-೧-೮೭೯ ನೆಯ ಗುರುವಾರಕ್ಕೆ ಸರಿಹೋಗುತ್ತದೆಯೇ ಹೊರತು ಅಂದು ಶುಕ್ರವಾರವಾಗುವುದಿಲ್ಲ, ಎಂಬುದು ಶ್ರೀ ಶಾಸ್ತ್ರಿಗಳ ಆಕ್ಷೇಪ. ಪಂಚಮಿಯು ಗುರುವಾರ ಮತ್ತು ಶುಕ್ರವಾರ ಬೆಳಗ್ಗೆ ಸಹಾ ಇರಬಹುದಷ್ಟೆ. ಏನೇ ಆಗಲೀ ಪುಷ್ಯ ಶುಕ್ಲ ಪಂಚಮಿ ಶುಕ್ರವಾರ ಬರುವ ವರ್ಷವನ್ನು ಹುಡುಕಿಕೊಂಡು ಹೋಗಿ ೧೧೧೯ ನೆಯ ಇಸವಿಯಲ್ಲಿ ಹರದತ್ತಾಚಾರ್ಯರು ಕಾಲವಾದರೋ ಏನೋ ಎಂದು ಶ್ರೀ ಶಾಸ್ತ್ರಿಗಳು ಅನುಮಾನಿಸುವುದು ಸರಿಯಲ್ಲ. ಶ್ರೀ ಹಯವದನರಾಯರು ಹೇಳುವಂತೆ: "The shifting of the date of death of Haradatta from 879 A.D. to 1119 A.D. on the grounds mentioned by Suryanarayana Sastry cannot prove acceptable." ಆದುದರಿಂದ ಶ್ರೀ ಶಂಕರಾಚಾರ್ಯರು ಕ್ರಿ.ಶ. ೮೨೦ ರಲ್ಲೂ, ಶ್ರೀ ಹರದತ್ತಾಚಾರ್ಯರು ಕ್ರಿ.ಶ. ೮೭೯ ರಲ್ಲೂ ಕಾಲವಾದರೆಂಬುದನ್ನು ಒಪ್ಪಿಕೊಳ್ಳಬೇಕಾಗುವುದು.

ಹರದತ್ತ ಶಿವಾಚಾರ್ಯರೂ ಶ್ರೀಕಂಠ ಶಿವಾಚಾರ್ಯರೂ ಒಂದೇ ಸಿದ್ಧಾಂತದವರೆಂಬುದನ್ನು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಅವರ ಗ್ರಂಥದಲ್ಲಿ ತೋರಿಸಿದ್ದಾರೆ. ಶ್ರೀಕಂಠ ಶಿವಾಚಾರ್ಯರು ಹರದತ್ತಾಚಾರ್ಯರ ಅನುಯಾಯಿಗಳು ಎಂಬುದನ್ನು ಶ್ರೀಯುತರು ನಂಬುವುದಿಲ್ಲ. ಅವರು ಅದನ್ನು ತಿರಸ್ಕರಿಸಲು ಅನೇಕ ಕಾರಣಗಳನ್ನು ಕೊಡಲು ಅವರ ಗ್ರಂಥದ ೪೦ ನೆಯ ಪುಟದಿಂದ ಪ್ರಾರಂಭಿಸಿದ್ದಾರೆ. "One hears and continues to hear of a commentary on *Srikanthabhashya* written by Haradatta and this if found will reverse the position of the two" ಎಂದು ಹೇಳಿದ್ದಾರೆ. ಅದೇ ಗ್ರಂಥದ ೧೭ ನೆಯ ಪುಟದಲ್ಲಿ "ಶ್ರೀಕಂಠಭಾಷ್ಯ ಸಮರ್ಥ" ಎಂಬ ಈ ಗ್ರಂಥದ ಅನೇಕ ಪ್ರತಿಗಳನ್ನು ತಾವು ನೋಡಿರುವುದಾಗಿ ಡಾ॥ ವಿ. ವಿ. ರಮಣ ಶಾಸ್ತ್ರಿಗಳು ಹೇಳಿದರೆಂದೂ, ಇತರರೂ ಈ ಗ್ರಂಥವಿರುವುದನ್ನು ಸಮರ್ಥಿಸಿರುವರೆಂದೂ ಹೇಳಿದ್ದಾರೆ. ಡಾ॥ ವಿ. ವಿ. ರಮಣ ಶಾಸ್ತ್ರಿಗಳವರಂತಹ ವಿಮರ್ಶಕರ ಮಾತನ್ನು ತಿರಸ್ಕರಿಸಲು ಕಾರಣವಿಲ್ಲ. ಹಾಗೆಂದಮೇಲೆ ಶ್ರೀಕಂಠ ಶಿವಾಚಾರ್ಯರ ಶಿಷ್ಯರು ಅಥವಾ ಅನುಯಾಯಿಗಳು ಹರದತ್ತ ಶಿವಾಚಾರ್ಯರು, ಎಂದಾಯಿತು. ಷಡಧ್ವ ಮೊದಲಾದ ವಿಷಯಗಳ ಪ್ರತಿಪಾದನೆಯಲ್ಲಿ ಶ್ರೀಕಂಠ ಶಿವಾಚಾರ್ಯರ ಹೇಳಿಕೆಯನ್ನು ಆಧಾರಗಳಿಂದ ಹರದತ್ತ ಶಿವಾಚಾರ್ಯರು ಸಮರ್ಥಿಸಿರುವುದನ್ನು ನೋಡಿದರೆ ಹರದತ್ತ ಶಿವಾಚಾರ್ಯರಿಗಿಂತ ಶ್ರೀಕಂಠ ಶಿವಾಚಾರ್ಯರು ಮೊದಲಿಗರೆಂಬುದಕ್ಕೆ ಸಮರ್ಥನೆ ಬರುವುದೆಂಬುದನ್ನು ಹೇಳಿ, ಇದೇ ತರದ ಇತರ ಸಮರ್ಥನೆಗಳನ್ನು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಕೊಟ್ಟಿದ್ದಾರೆ. ಅದರಂತೆ ಹರದತ್ತಾಚಾರ್ಯರ ಅನುಯಾಯಿಗಳು ಶ್ರೀಕಂಠ ಶಿವಾಚಾರ್ಯರು ಎಂಬುದಕ್ಕೆ ಯಾವ ಕಾರಣವನ್ನೂ ಕೊಟ್ಟಿಲ್ಲ. ಹರದತ್ತಾಚಾರ್ಯರ

ಶಿಷ್ಯರು ಶ್ರೀಕಂಠ ಶಿವಾಚಾರ್ಯರು ಎಂದು ಯಾರೂ ಖಚಿತವಾಗಿ ಹೇಳಿಲ್ಲ. ಹರದತ್ತಾಚಾರ್ಯರು ಚತುರ್ವೇದ ತಾತ್ಪರ್ಯ ನಿರ್ಣಯದಲ್ಲಿ ಹೇಳಿರುವುದು ಅದಕ್ಕೆ ಅನುಸಾರವಾಗಿರುವ ಶ್ರೀಕಂಠ ಶಿವಾಚಾರ್ಯರ ಮತವೇ ಆಗಿದೆ—ಎಂದು ಅಪ್ಪಯ್ಯ ದೀಕ್ಷಿತರು ಹೇಳಿರುವುದರ ಮೇಲೆ ಹರದತ್ತಾಚಾರ್ಯರ ಕಾಲದನಂತರ ಶ್ರೀಕಂಠ ಶಿವಾಚಾರ್ಯರು ಇದ್ದರೆಂದು ಕೆಲವರು ಊಹಿಸುತ್ತಾರೆ. ಇದಕ್ಕೆ ಉತ್ತರವನ್ನು ಶಾಸ್ತ್ರಿಗಳೇ ಕೊಟ್ಟಿದ್ದಾರೆ. ಮೇಲ್ಕಂಡ ಮಾತನ್ನು ಅಪ್ಪಯ್ಯ ದೀಕ್ಷಿತರು ಹೇಳುವಾಗ ಅವರ ಮನಸ್ಸಿನಲ್ಲಿ ಕಾಲನಿರ್ಣಯವು ಇತ್ತೆಂದು ಹೇಳಲಾಗುವುದಿಲ್ಲವೆಂದು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ. "It is not improbable that this following Anuvritti stands for nothing more than affinity in thought" ಎಂದು ಹೇಳಿ ಶ್ರೀ ಶಾಸ್ತ್ರಿಗಳು ಹರದತ್ತಾಚಾರ್ಯರು ಶ್ರೀಕಂಠ ಶಿವಾಚಾರ್ಯರಿಗಿಂತ ಮೊದಲಿದ್ದವರು ಎಂದು ಹೇಳುವುದು ಸರಿಯಲ್ಲವೆಂಬುದಕ್ಕೆ ಕಾರಣಗಳನ್ನು ಕೊಟ್ಟಿದ್ದಾರೆ. ಹರದತ್ತಾಚಾರ್ಯರು 'ಶ್ರೀಕಂಠಭಾಷ್ಯ ಸಮರ್ಥ' ಗ್ರಂಥವನ್ನು ಬರೆದಿರುವರೆಂಬುದಕ್ಕೆ ಅಂತಹ ಗ್ರಂಥದ ಅನೇಕ ಪ್ರತಿಗಳನ್ನು ನೋಡಿದ ಉದ್ದಾಮ ವ್ಯಕ್ತಿಗಳ ಸಾಕ್ಷ್ಯವಿರುವುದರಿಂದ, ಹರದತ್ತಾಚಾರ್ಯರು ಶ್ರೀಕಂಠ ಶಿವಾಚಾರ್ಯರ ಶಿಷ್ಯರೆಂಬುದರಲ್ಲಿ ಸಂದೇಹವಿಲ್ಲ. ಹರದತ್ತಾಚಾರ್ಯರು ಕ್ರಿ.ಶ. ೮೭೮ ರಲ್ಲಿ ಕಾಲವಾದುದರಿಂದ ಅವರ ಗುರುಗಳಾದ ಶ್ರೀಕಂಠ ಶಿವಾಚಾರ್ಯರು ಕ್ರಿ.ಶ. ೮೨೦ ರಲ್ಲಿ ಕಾಲವಾದ ಶ್ರೀ ಶಂಕರಾಚಾರ್ಯರ ಕಾಲದವರೆಂದಾಯಿತು.

ಶಾಂಕರಭಾಷ್ಯದನಂತರ ಶ್ರೀಕಂಠಭಾಷ್ಯವೂ, ತದನಂತರ ಶ್ರೀ ರಾಮಾನುಜಭಾಷ್ಯವೂ ಬರೆಯಲ್ಪಟ್ಟಿರುವುದೆಂಬ ಅಪ್ಪಯ್ಯ ದೀಕ್ಷಿತರ ವಾದವನ್ನೂ, ಶ್ರೀಕಂಠಭಾಷ್ಯವು ಶ್ರೀ ಶಾಂಕರ ಭಾಷ್ಯಕ್ಕೂ ಶ್ರೀ ರಾಮಾನುಜಭಾಷ್ಯಕ್ಕೂ ಮಧ್ಯವರ್ತಿಯಾಗಿದೆಯೆ ಎಂಬ ಪ್ರಶ್ನೆಯ ಪೂರ್ವಾಪರವಾದ ವಿಷಯಗಳನ್ನೂ ಗಣನೆಗೆ ತಂದುಕೊಂಡು, ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು "On purely logical merits Srikantha seems to occupy a position midway between those of Shankara and Ramanuja" ಎಂದು ಹೇಳಿರುವುದು ಗಮನಾರ್ಹವಾಗಿದೆ. ಆದರೆ ಈ ವಿಚಾರದಲ್ಲಿ ಗಮನಕ್ಕೆ ತೆಗೆದುಕೊಳ್ಳಬೇಕಾದ ವಿಷಯಗಳ ವ್ಯಾಪ್ತಿಯು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಗಣನೆಗೆ ತೆಗೆದುಕೊಂಡಿರುವುದಕ್ಕಿಂತಲೂ ಹೆಚ್ಚಾಗಿದೆ. ಶ್ರೀ ಶಂಕರಾಚಾರ್ಯರ ಜಗನ್ಮಿಥ್ಯಾವಾದವು ಒಂದು ದಿಕ್ಕಾದರೆ ಶ್ರೀ ಮಧ್ವಾಚಾರ್ಯರ ಜಗತ್‌ಸತ್ಯವನ್ನು ಹೇಳುವ ದ್ವೈತವಾದವು ಎದುರು ದಿಕ್ಕೆನ್ನಬಹುದು. ಈ ಮಧ್ಯೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಂತ ಹಂತವಾಗಿ ನಡೆದ ಬದಲಾವಣೆಗಳು ಆಯಾ ಆಚಾರ್ಯರ ಕಾಲನಿರ್ಣಯಕ್ಕೆ ಸಹಾಯಕವಾಗಿವೆ. ಸರ್ವವೂ ಶೂನ್ಯವೇ ಎನ್ನುವ ಬೌದ್ಧಸಿದ್ಧಾಂತವು ಗಗನ ಕುಸುಮ ಪರಿಮಳದಾಚಿನದು ಎನ್ನುವಂತಿದ್ದರೆ ಅದನ್ನು ಹಿಂಬಾಲಿಸಿದ ಅನಿರ್ವಾಚ್ಯವೇ ಆದ ಶ್ರೀ ಶಂಕರಾಚಾರ್ಯರ ಜಗನ್ಮಿಥ್ಯಾವಾದವು ಗಗನ ಕುಸುಮದಷ್ಟು ಅಗ್ರಾಹ್ಯವಾದುದು. ಶ್ರೀ ಶಂಕರಾಚಾರ್ಯರಂತೆ ಅದ್ವೈತವನ್ನೇ ಹೇಳಿದರೂ ಜಗತ್ತು ಮಿಥ್ಯವೆಂದು ಹೇಳದೆ ಇರುವ ಶ್ರೀ ಶ್ರೀಕಂಠ ಶಿವಾಚಾರ್ಯರ ನಿಲುವು ಮುಂದಿನ ಮೆಟ್ಟಲು. ಶ್ರೀ ಶ್ರೀಕಂಠ ಶಿವಾಚಾರ್ಯರ ನಿಲುವು ಶ್ರೀ ಶಂಕರಾಚಾರ್ಯರ ನಿಲುವೆಂದೇ ಅಪ್ಪಯ್ಯ ದೀಕ್ಷಿತರು ಸಾಧಿಸಲು ಅವಕಾಶವಿರುವಷ್ಟು ಸಮೀಪವರ್ತಿಯಾಗಿದೆ, ಶ್ರೀ ಶಂಕರಾಚಾರ್ಯರ ನಿಲುವಿಗೆ ಶ್ರೀ ಶ್ರೀಕಂಠ ಶಿವಾಚಾರ್ಯರ ನಿಲುವು. ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಶ್ರೀ ಶಂಕರಾ

ಚಾರ್ಯರ ಭಾಷ್ಯಕ್ಕೂ ಶ್ರೀ ಶ್ರೀಕಂಠ ಶಿವಾಚಾರ್ಯರ ಭಾಷ್ಯಕ್ಕೂ ಇರುವ ಅನೇಕ ಹೋಲಿಕೆಗಳನ್ನು ಉಲ್ಲೇಖಿಸಿರುವರು. ಆದರೆ ಶ್ರೀ ರಾಮಾನುಜಾಚಾರ್ಯರು ಅವರ ಭಾಷ್ಯದ ಪ್ರಾರಂಭದಲ್ಲಿಯೇ ಶ್ರೀ ಶಂಕರಾಚಾರ್ಯರ ನಿಲುವನ್ನು ಅತಿಶಯವಾಗಿ ಖಂಡಿಸಿದ್ದಾರೆ. ಶ್ರೀ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತದಲ್ಲಿ ಅದ್ವೈತವು ಮುಖ್ಯವಾಗಿಯೂ, ದ್ವೈತವು ಗೌಣವಾಗಿಯೂ ಪ್ರತಿಪಾದಿಸಲ್ಪಟ್ಟಿದೆ; ಆದರೆ ರಾಮಾನುಜಭಾಷ್ಯದಲ್ಲಿ ಅದ್ವೈತವು ಗೌಣವಾಗಿಯೂ, ದ್ವೈತವು ಪ್ರಾಮುಖ್ಯವಾಗಿಯೂ ಪ್ರತಿಪಾದಿಸಲ್ಪಟ್ಟಿದೆ. ದಂಡಪುರುಷನಿಗೂ ದಂಡಕ್ಕೂ ಇರುವ ತೋರಿಕೆಯ ಅದ್ವೈತವನ್ನು ನಿರಾಕರಿಸಿ, ದ್ವೈತವನ್ನೇ ಪ್ರತಿಪಾದಿಸುವ ಶ್ರೀ ಮಧ್ವಾಚಾರ್ಯರ ನಿಲುವು ಕೊನೆಯ ಹಂತವು. ಶ್ರೀ ಶಂಕರಾಚಾರ್ಯರ ಅದ್ವೈತದ ನಿಲುವಿಗೆ ಶ್ರೀ ಶ್ರೀಕಂಠರ ನಿಲುವು ಸಮೀಪವರ್ತಿಯಾಗಿರುವಂತೆ, ಶ್ರೀ ರಾಮಾನುಜರ ನಿಲುವು ಶ್ರೀ ಮಧ್ವಾಚಾರ್ಯರ ದ್ವೈತದ ನಿಲುವಿಗೆ ಸಮೀಪವರ್ತಿಯಾಗಿದೆ. ಆದುದರಿಂದ ಶ್ರೀ ಶಂಕರರೂ ಶ್ರೀ ಶ್ರೀಕಂಠರೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ಕಾಲದವರೆನ್ನಬಹುದಾದರೆ, ಶ್ರೀ ರಾಮಾನುಜರೂ ಶ್ರೀ ಮಧ್ವಾಚಾರ್ಯರೂ ಆ ಮುಂದಿನ ಕಾಲದಲ್ಲಿ ಸ್ವಲ್ಪ ಹೆಚ್ಚುಕಡಮೆ ಒಂದೇ ಕಾಲದವರೆನ್ನಬಹುದು.

ಅದ್ವೈತದಿಂದ ವಿಶಿಷ್ಟಾದ್ವೈತದ ಮೂಲಕ ವೈಷ್ಣವರು ದ್ವೈತದ ಕಡೆಗೆ ಹಂತಹಂತವಾಗಿ ಜರುಗಿ, ಜಗನ್ಮಿಥ್ಯಾವಾದದಿಂದ ಜಗತ್‌ಸತ್ಯವಾದಕ್ಕೆ ತಿರುಗಿದಂತೆ, ಶೈವರು ಜಗನ್ಮಿಥ್ಯಾವಾದದಿಂದ ಜಗತ್‌ಸತ್ಯವಾದದ ಕಡೆಗೆ ಹರಿದಾಗಲೂ ಅದ್ವೈತಸಿದ್ಧಾಂತವನ್ನೇ ಬಲಪಡಿಸಿದಂತೆ ಕಾಣುತ್ತದೆ. ಇವೆರಡು ಮಾರ್ಗಗಳಲ್ಲಿಯೂ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ಮುಖ್ಯವಾದ ಮಧ್ಯ ನಿಲ್ದಾಣವಾಗಿದೆ. ಅದ್ವೈತದಿಂದ ವೈಷ್ಣವದ್ವೈತವಾದದ ಕಡೆಗೆ ಹೋಗುವಾಗ ಶ್ರೀಕಂಠಸಿದ್ಧಾಂತವು ಹೇಗೆ ಮಧ್ಯವರ್ತಿ ನಿಲ್ದಾಣವಾಗಿದ್ದಿತೆಂಬುದನ್ನು ಹಿಂದೆ ತೋರಿಸಲಾಯಿತು. ಈಗ ಶೈವವು ಜಗನ್ಮಿಥ್ಯಾವಾದದಿಂದ ಜಗತ್‌ಸತ್ಯವಾದದ ಕಡೆಗೆ ಹರಿದಾಗ ಶ್ರೀಕಂಠಸಿದ್ಧಾಂತದ ಸ್ಥಾನವೇನೆಂಬುದನ್ನು ನೋಡುವ. "**ಸರ್ವಂ ಸ್ವಲಕ್ಷಣಂ ಸ್ವಲಕ್ಷಣಂ, ಕ್ಷಣಿಕಂ ಕ್ಷಣಿಕಂ, ದುಃಖಂ ದುಃಖಂ, ಶೂನ್ಯಂ ಶೂನ್ಯಂ**" ಎಂದು ಹೇಳುವ ಬೌದ್ಧರ ಸರ್ವಶೂನ್ಯ ವಾದದಿಂದ ಸತ್ಯದ ಕಡೆಗೆ ಮುಂದಿನ ಹೆಜ್ಜೆ ಶ್ರೀ ಶಂಕರರ ಬ್ರಹ್ಮಸತ್ಯ ವಾದವು. "**ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ**" ಎಂದರೆ ಬ್ರಹ್ಮವು ಸತ್ಯವಾದರೂ ಜಗತ್ತು ಮಿಥ್ಯವೇ ಎಂದು ಹೇಳುವ ಶ್ರೀ ಶಂಕರರ ಸಿದ್ಧಾಂತಕ್ಕಿಂತಲೂ ಮುಂದಿನ ಹೆಜ್ಜೆ ಶಿವಾಭಿನ್ನವಾದ ಶಕ್ತಿಯೇ ಚಿದಚಿತ್ ಪ್ರಪಂಚವೆಂದು ಜಗತ್‌ಸತ್ಯವನ್ನು ಪ್ರತಿಪಾದಿಸುವ ಶ್ರೀಕಂಠಸಿದ್ಧಾಂತ. ಚಿದಚಿತ್ತುಗಳು ಪರಶಿವಬ್ರಹ್ಮದ ಶರೀರವೆಂದು ಹೇಳುವ ಶ್ರೀಕಂಠ ಶಿವಾದ್ವೈತಕ್ಕಿಂತಲೂ ಮುಂದಿನ ಹೆಜ್ಜೆ ೯ನೆಯ ಶತಮಾನದ 'ಶ್ರೀಕಂಠ ಭಾಷ್ಯ ಸಮರ್ಥ' ಗ್ರಂಥವನ್ನು ಬರೆದ ಹರದತ್ತಾಚಾರ್ಯರ ನಿಲುವು. ಇದರ ಮುಂದಿನ ಹೆಜ್ಜೆ, ಶ್ರೀಕಂಠಭಾಷ್ಯದಲ್ಲಿನ 'ಪರಿಣಾಮಾತ್' ಸೂತ್ರದ ಭಾಷ್ಯವನ್ನು ಭಟ್ಟಭಾಸ್ಕರ ಭಾಷ್ಯದಲ್ಲಿ ಹೇಳಿರುವುದರೊಡನೆ, ಅಪ್ಪಯ್ಯ ದೀಕ್ಷಿತರ ಶಿವಾರ್ಕಮಣಿಯಲ್ಲಿ ಹೋಲಿಸಿರುವುದರಿಂದ ವ್ಯಕ್ತವಾಗುವಂತೆ, ಶ್ರೀಕಂಠಭಾಷ್ಯದ ನಿಲುವನ್ನು ಶಿವಶಕ್ತಿಯ ವಿಷಯದಲ್ಲಿ ಮುಂದುವರಿಸಿರುವ ಹತ್ತನೆಯ ಶತಮಾನದ ಭಟ್ಟಭಾಸ್ಕರರ ನಿಲುವು. ಶಿವಾದ್ವೈತವನ್ನೇ ಪ್ರತಿಪಾದಿಸುವುವಾದರೂ ಮೋಕ್ಷದಲ್ಲಿ ಸಾರೂಪ್ಯವನ್ನು ಹೇಳುವ ಈ ಎಲ್ಲ ಸಿದ್ಧಾಂತಗಳಿಗಿಂತಲೂ ಮೋಕ್ಷದಲ್ಲಿ ಶಿಖಿಕರ್ಪೂರ ನ್ಯಾಯದಂತೆ ಸಂಪೂರ್ಣ ಐಕ್ಯವನ್ನು ಹೇಳುವ ದಕ್ಷಿಣದ ವೀರಶೈವ ಸಿದ್ಧಾಂತ ಮತ್ತು ಉತ್ತರದ ಕಾಶ್ಮೀರಶೈವಸಿದ್ಧಾಂತ ಇವು ಕೊನೆಯ ಹೆಜ್ಜೆಯೆನ್ನಬಹುದು.

"Since on purely logical merits Srikantha seems to occupy a position between those of Shankara and Ramanuja, it is possible to consider him as marking a transition from the one to the other" ಎಂದು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಹೇಳಿರುವುದರಲ್ಲಿ ಅರ್ಥವಿದೆ. ಯಾವ ದೃಷ್ಟಿಯಿಂದ ನೋಡಿದರೂ ಶ್ರೀ ಶ್ರೀಕಂಠ ಶಿವಾಚಾರ್ಯರು ಶ್ರೀ ಶಂಕರಾಚಾರ್ಯರ ಕಾಲದಲ್ಲಿದ್ದು ಅವರೊಡನೆ ವಾದಮಾಡಿದರೆಂಬ ಜನಜನಿತವಾದ ನಂಬುಗೆಯನ್ನು ತಿರಸ್ಕರಿಸಲು ಯಾವ ಕಾರಣವಾದರೂ ಇಲ್ಲ. ಶಾಂಕರ ಭಾಷ್ಯಕ್ಕೂ ರಾಮಾನುಜ ಭಾಷ್ಯಕ್ಕೂ ವಿಪರೀತ ವ್ಯತ್ಯಾಸಗಳಿವೆಯಷ್ಟೆ. ಅಪ್ಪಯ್ಯ ದೀಕ್ಷಿತರು ತೋರಿಸಿರುವಂತೆ ಶಾಂಕರಭಾಷ್ಯಕ್ಕೂ ಶ್ರೀಕಂಠಭಾಷ್ಯಕ್ಕೂ ಅಷ್ಟೇನು ವ್ಯತ್ಯಾಸವಿಲ್ಲದುದಕ್ಕೆ ಸಮಕಾಲೀನ ವಾತಾವರಣವೇ ಕಾರಣವಾಗಿರಬೇಕು. ಆದರೂ ಭಿನ್ನವ್ಯಕ್ತಿಗಳು ಬರೆದ ಭಾಷ್ಯ ಗಳಲ್ಲಿ ವ್ಯತ್ಯಾಸವಿದೇ ಇರುವುದು.

ಶ್ರೀ ರಾಮಾನುಜಾಚಾರ್ಯರಾಗಲೀ ಶ್ರೀ ಶ್ರೀಕಂಠ ಶಿವಾಚಾರ್ಯರಾಗಲೀ ಒಬ್ಬರ ಭಾಷ್ಯವನ್ನು ಮತ್ತೊಬ್ಬರು ನೋಡಿದ್ದರೆ ಅದನ್ನು ಖಂಡಿಸದೆ ಬಿಡುತ್ತಿರಲಿಲ್ಲವೆಂಬುದರಲ್ಲಿ ಸತ್ಯವಿದೆ. ಶ್ರೀ ಶ್ರೀಕಂಠ ಶಿವಾಚಾರ್ಯರು ಶ್ರೀ ಶಂಕರಾಚಾರ್ಯರ ಕಾಲದವರಾದುದರಿಂದ ಮುಂದೆ ಬರೆಯಲ್ಪಟ್ಟ ಶ್ರೀಭಾಷ್ಯವು ಅವರ ಗಮನಕ್ಕೆ ಬಂದಿದ್ದಿತೆನ್ನಲಾಗುವುದಿಲ್ಲವಷ್ಟೆ. ಶ್ರೀ ರಾಮಾನುಜರ ಗಮನಕ್ಕೆ ಕರ್ಣಾಟಕ ದೇಶದಲ್ಲೇ ನೆಲಸಿದ ಶ್ರೀ ಶಂಕರಾಚಾರ್ಯರ ಭಾಷ್ಯವು ಬಂದಿದ್ದಿತಾದರೂ ತಮಿಳು ದೇಶದಲ್ಲಿ ಪ್ರಚಾರದಲ್ಲಿದ್ದ ಶ್ರೀಕಂಠಭಾಷ್ಯವು ಅವರ ಗಮನಕ್ಕೆ ಬಂದಿರಲಿಕ್ಕಿಲ್ಲ. ಏಕೆಂದರೆ ಅವರು ಚೋಳರ ಉಪಟಳದಿಂದ ತಮಿಳು ದೇಶವನ್ನು ತ್ಯಜಿಸಿ ಕರ್ನಾಟಕದಲ್ಲಿ ನೆಲಸಬೇಕಾಯಿತು. ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳು ಹೇಳು ವಂತೆ, ಶ್ರೀ ರಾಮಾನುಜರ ಮತ್ತು ಶ್ರೀ ಆನಂದತೀರ್ಥರ ಭಾಷ್ಯಗಳ ವಿಷಯವು ಮಾಧವಾ ಚಾರ್ಯರ ಸರ್ವದರ್ಶನ ಸಂಗ್ರಹದಲ್ಲಿ ಹೇಳಲ್ಪಟ್ಟಿದ್ದರೂ ಶ್ರೀಕಂಠಭಾಷ್ಯ ವಿಷಯವು ಅದರಲ್ಲಿ ಹೇಳಲ್ಪಟ್ಟಿಲ್ಲವಾಗಿ ಆ ಭಾಷ್ಯವು ಮಾಧವಾಚಾರ್ಯರ ಕಾಲದಲ್ಲಿಯೇ ಪ್ರಸಿದ್ಧವಾಗಿರಲಿಲ್ಲ ವೆಂದಾಯಿತು. ಹಾಗೆಂದಮೇಲೆ ಮಾಧವಾಚಾರ್ಯರಿಗಿಂತಲೂ ಹಿಂದಿನವರಾದ ಶ್ರೀ ರಾಮಾನುಜರಿಗೆ ಶ್ರೀಕಂಠಭಾಷ್ಯವಿಷಯವು ಗೊತ್ತಿಲ್ಲದಿರುವುದರಲ್ಲಿ ಆಶ್ಚರ್ಯವಿಲ್ಲ. ಒಬ್ಬರ ಭಾಷ್ಯವು ಮತ್ತೊಬ್ಬರಿಗೆ ಗೊತ್ತಿದ್ದರೆ ಅವರು ಅದನ್ನು ಖಂಡಿಸದೆ ಬಿಡುತ್ತಿರಲಿಲ್ಲವೆಂಬ ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ತೀರ್ಮಾನವು ಸರಿಯಾದುದೇ; ಆದರೆ ಅವರೀರ್ವರೂ ಸಮಕಾಲೀನರಾಗಿದ್ದುದರಿಂದಲೇ ಒಬ್ಬರ ಭಾಷ್ಯವು ಇನ್ನೊಬ್ಬರಿಗೆ ತಿಳಿದಿರಲಿಲ್ಲವೆಂಬ ಅವರ ವಾದವು ಸರಿಯಾದುದಲ್ಲ. ಅವರಲ್ಲಿ ಯಾರೋ ಒಬ್ಬರು ಮತ್ತೊಬ್ಬರ ಕಾಲಕ್ಕೆ ಮುಂದಿನವ ರಾಗಿದ್ದು ಹಿಂದಿನವರ ಭಾಷ್ಯವನ್ನು ಓದಿ ತಮ್ಮ ಭಾಷ್ಯವನ್ನು ಬರೆಯಲು ಉಪಯೋಗಿಸಿ ಕೊಂಡರು ಎಂಬ ಬಿಸಿಯಾದ ವಾದಗಳ ವಾತಾವರಣವನ್ನು ಉಪಶಮನಮಾಡಲು, ಅವರಿಬ್ಬರೂ ಒಂದೇ ಕಾಲದವರೆಂಬ ಮಧ್ಯಸ್ಥ ವಾದವನ್ನು ಮುಂದೆಮಾಡಿ, ಅದನ್ನು ಸಿದ್ಧ ಪಡಿಸಲು ಅನೇಕ ಕಾರಣಗಳನ್ನು ಈ ಮಧ್ಯಸ್ಥ ವಾದಕ್ಕೆ ಹೊಂದಿಸಿಕೊಳ್ಳಲು ಶ್ರೀ ಸೂರ್ಯ ನಾರಾಯಣ ಶಾಸ್ತ್ರಿಗಳು ಶ್ರಮಪಟ್ಟಂತೆ ಕಾಣುತ್ತದೆ. ಒಬ್ಬರ ಭಾಷ್ಯವನ್ನು ಮತ್ತೊಬ್ಬರು ನೋಡಿ ಬರೆಯಲಿಲ್ಲವೆಂಬ ಅವರ ವಾದವು ಸರಿಯಾದರೂ ಈ ಹಿಂದೆ ಹೇಳಿದಂತೆ ಒಬ್ಬರ ಭಾಷ್ಯವು ಇನ್ನೊಬ್ಬರಿಗೆ ತಿಳಿಯದಿರಲು ಅವರು ಒಂದೇ ಕಾಲದವರಾಗಬೇಕಾದ ಅವಶ್ಯಕತೆಯಿಲ್ಲ. ಶಂಕರದಿಗ್ವಿಜಯದಲ್ಲಿ ಶ್ರೀಕಂಠ ಶಿವಾಚಾರ್ಯರು ಶ್ರೀ ಶಂಕರರೊಡನೆ ವಾದಮಾಡಿದರೆಂದೂ,

ಹರದತ್ತಾಚಾರ್ಯರು ಅವರ ಶಿಷ್ಯರೆಂದೂ ಹೇಳಿರುವುದನ್ನು ನಂಬದಿರಲು ಸರಿಯಾದ ಕಾರಣಗಳಿಲ್ಲ. ಇದನ್ನು ನಂಬಲಿ, ಬಿಡಲಿ; ಶ್ರೀಕಂಠಭಾಷ್ಯಸಮರ್ಥ ಗ್ರಂಥವನ್ನು ಬರೆದುದಲ್ಲದೆ ಇತರ ಗ್ರಂಥಗಳಲ್ಲಿ ಶ್ರೀಕಂಠಸಿದ್ಧಾಂತವನ್ನು ಮುಂದುವರಿಸಿದ ಒಂಭತ್ತನೆಯ ಶತಮಾನದ ಹರದತ್ತಾಚಾರ್ಯರು ಶ್ರೀಕಂಠ ಶಿವಾಚಾರ್ಯರ ಶಿಷ್ಯರೆಂಬುದು ಒಪ್ಪತಕ್ಕುದಾಗಿದೆ.

ಶ್ರೀ ರಾಮಾನುಜಾಚಾರ್ಯರಿಗೆ ಬೋಧಾಯನವೃತ್ತಿಯು ಸಿಕ್ಕದೆಹೋದುದರಿಂದ, ಅದನ್ನು ಸಂಪಾದಿಸಲು ಅವರು ಕಾಶ್ಮೀರ ದೇಶಕ್ಕೆ ಹೋಗಬೇಕಾಯಿತು ಎಂಬ ವಿಷಯವು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ಗ್ರಂಥದ ೬೮ ನೆಯ ಪುಟದ ಅಡಿಟಿಪ್ಪಣಿಯಿಂದ ತಿಳಿದು ಬರುತ್ತದೆ. ಈ ವೃತ್ತಿಯು ಪ್ರಚಾರದಲ್ಲಿದ್ದ ಕಾಶ್ಮೀರವು ಶೈವಸಂಪ್ರದಾಯಕ್ಕೆ ಪ್ರಸಿದ್ಧವಾದ ದೇಶ. ಅಲ್ಲಿ ೮–೯ ನೆಯ ಶತಮಾನಗಳಲ್ಲಿ ದ್ವೈತ-ಶೈವ ಸಂಪ್ರದಾಯಕ್ಕೆ ಅನುಸಾರವಾಗಿ ಶೈವ ತಂತ್ರಗಳನ್ನು ವ್ಯಾಖ್ಯಾನಮಾಡುತ್ತಿದ್ದುದಾಗಿಯೂ, ಅವನ್ನು ಅದ್ವೈತಪರವಾಗಿ ಕ್ಷೇಮರಾಜನು ವ್ಯಾಖ್ಯಾನಮಾಡಲು ಪ್ರಾರಂಭಿಸಿದುದಾಗಿಯೂ ಅವನ ಶ್ಲೋಕಗಳ ಆಧಾರದಿಂದಲೇ ಚಟರ್ಜಿ ಯವರ 'ಕಾಶ್ಮೀರ ಶೈವಿಸಂ' ಗ್ರಂಥದ ೧೦ ನೆಯ ಪುಟದಲ್ಲಿ ಹೇಳಿದೆ. ಶ್ರೀ ಶ್ರೀಕಂಠ ಶಿವಾಚಾರ್ಯರು, ಹಿಂದೆ ಶೈವ ಆಗಮಗಳನ್ನು ದ್ವೈತಪರವಾಗಿ ವ್ಯಾಖ್ಯಾನಮಾಡುತ್ತಿದ್ದವರಿದ್ದ ರೆಂದು ಹೇಳಿರುವುದನ್ನು ನೋಡಿದರೆ ಅವರು ಕಾಶ್ಮೀರದಿಂದ ದಕ್ಷಿಣ ದೇಶಕ್ಕೆ ಬಂದರೋ ಎಂದೆನಿಸುತ್ತದೆ. ಅಘೋರ ಶಿವಾಚಾರ್ಯರ ಮಹೋತ್ಸವವಿಧಿಯ ಅಂತ್ಯಭಾಗದಲ್ಲಿ ಅವರ ಪೂರ್ವಾಚಾರ್ಯರಲ್ಲಿ ಒಬ್ಬರಾದ ಶ್ರೀಕಂಠಶಿವದೇಶಿಕರೆಂಬುವರು ಗೌಡದೇಶದಿಂದ ಬಂದು ದಾಗಿ ಹೇಳಿದೆ; ಇವರು ಶ್ರೀಕಂಠ ಶಿವಾಚಾರ್ಯರಲ್ಲದಿರಬೇಕು. ಉತ್ತರ ದೇಶದಿಂದ ದಕ್ಷಿಣ ದೇಶಕ್ಕೆ ಶಿವಾಚಾರ್ಯರು ಬರುತ್ತಿದ್ದುದು ಶಾಸನಗಳಿಂದ ತಿಳಿದುಬರುವುದು. ಆದುದರಿಂದ ಶ್ರೀಕಂಠ ಶಿವಾಚಾರ್ಯರು ಕಾಶ್ಮೀರದಿಂದಲೋ, ಗೌಡದೇಶದಿಂದಲೋ ಬಂದಿದ್ದರೂ ಹೆಚ್ಚಲ್ಲ. ಶಿವಶಕ್ತಿಯರು ಅಭೇದವೆಂಬ ವಾದವು ತಾಂತ್ರಿಕರಾದ ಬಂಗಾಳದವರಲ್ಲೂ ಕಾಶ್ಮೀರ ದವರಲ್ಲೂ ವಿಶೇಷವಾಗಿದ್ದು, ಶ್ರೀ ಶ್ರೀಕಂಠ ಶಿವಾಚಾರ್ಯರ ಮೇಲೆ ಪ್ರಭಾವ ಬೀರಿರಬೇಕು. ಭೇದಾಭೇದವಾದವೂ ಸಹಾ ಕಾಶ್ಮೀರಶೈವರಲ್ಲಿ ಇದ್ದಿತೆಂಬ ಸಂಗತಿಯು 'ಕಾಶ್ಮೀರ ಶೈವಿಸಂ' ಗ್ರಂಥದ ೫ ನೆಯ ಪುಟದಿಂದ ತಿಳಿದುಬರುವುದು. ಒಂದು ರೀತಿಯಲ್ಲಿ ಭೇದವನ್ನು ಹೇಳುವ ಶ್ರುತಿಗಳನ್ನೂ, ಮತ್ತೊಂದು ರೀತಿಯಲ್ಲಿ ಅಭೇದವನ್ನು ಹೇಳುವ ಶ್ರುತಿಗಳನ್ನೂ ಹೊಂದಿಸುವ ಶೈವ ವಿಶಿಷ್ಟಾದ್ವೈತವು ಕಾಶ್ಮೀರದ ಬೋಧಾಯನವೃತ್ತಿಯಲ್ಲಿ ಇದ್ದುದನ್ನು ಶ್ರೀ ಶ್ರೀಕಂಠ ಶಿವಾಚಾರ್ಯರು ಅನುಸರಿಸಿರುವಂತೆ ಕಾಣುತ್ತದೆ. ಆದರೆ ಬೋಧಾಯನ ವೃತ್ತಿಯು ಉಪಲಬ್ಧವಿಲ್ಲ; ಅದರಲ್ಲಿ ಏನಿದೆಯೊ ತಿಳಿಯದು. ಶರೀರಶರೀರಿ ಭಾವ ವಿಷಯ ದಲ್ಲೇ ಶ್ರೀ ರಾಮಾನುಜರಿಗೂ ಶ್ರೀಕಂಠರಿಗೂ ಇರುವ ಮುಖ್ಯ ಸಾಮ್ಯ. ಶಿವಾಗಮಗಳಲ್ಲಿ ಇಲ್ಲದ ವಿಷಯವಲ್ಲ ಇದು. ಶಿವಾಗಮಗಳ ಸಾರವಾದ ಶಿವಮಹಾಪುರಾಣದ ವಾಯವೀಯ ಸಂಹಿತೆಯಲ್ಲಿಯೇ "**ನಮಃ ಪ್ರಧಾನದೇಹಾಯ ಪ್ರಧಾನಕ್ಷೋಭಕಾರಿಣೇ । ತ್ರಯೋ ವಿಂಶತಿಭೇದೇನ ವಿಕೃತಾಯಾವಿಕಾರಿಣೇ ॥**" ಎಂದು ಹೇಳಿರುವುದರಲ್ಲಿ ಪರಶಿವನು ಚಿದಚಿಚ್ಛಕ್ತಿರೂಪಪ್ರಪಂಚವೇ ದೇಹವುಳ್ಳವನಾಗಿ ಎಂದರೆ ಶರೀರಶರೀರಿ ಸಂಬಂಧದಿಂದಿ ದ್ದರೂ (ಅದ್ವೈತವಾಗಿರುವುದರಿಂದ) ಅವಿಕಾರಿಯಾಗಿದ್ದಾನೆ ಎಂಬ ಭಾವವಿದೆ. ದಾಸಗುಪ್ತರು ಹೇಳುವಂತೆ "Srikantha's own interpretation of the Brahmasutra is based mainly on the views propounded in the Vayavi Samhita section of the Sivamaha-

purana''—*History of Indian Philosophy*, V-72. ಆದರೆ ವಾಯುವೀಯ ಸಂಹಿತೆಯಂತೆ —"**ಯಥಾ ಶಿವಸ್ತಥಾ ದೇವೀ····ಚಂದ್ರ ಚಂದ್ರಿಕಯೋರಿವ**'' ಶಿವಶಕ್ತಿಯರಲ್ಲಿ ಅದ್ವೈತವಿದೆ. "**ಶರೀರಂ ತ್ವಂ ಶಂಭೋಃ ಶಶಿಮಿಹಿರವಕ್ಷ್ಮೋರುಹಯುಗಂ**'' ಎಂಬ ಆನಂದಲಹರಿಯಲ್ಲಿನ ಶ್ರೀ ಶಂಕರರ ದೇವೀಸ್ತೋತ್ರದಲ್ಲಿ ಆಗಮಗಳ ಅದ್ವೈತ ಶರೀರಶರೀರಿ ಭಾವನೆಯಿದೆ. ಆದುದರಿಂದ ಶ್ರೀ ಶ್ರೀಕಂಠ ಶಿವಾಚಾರ್ಯರ ಶರೀರಶರೀರಿ ಭಾವ ಕಲ್ಪನೆಯಲ್ಲಿ ಅದ್ವೈತಕಲ್ಪನೆಯಿದೆ. ಶ್ರೀ ರಾಮಾನುಜರು ಶರೀರಶರೀರಿ ಕಲ್ಪನೆಯಲ್ಲಿ ದ್ವೈತ ಭಾವನೆಯನ್ನು ಬೆರೆಸಿ ಬರೆದುದು ಯಾವ ಆಧಾರದ ಮೇಲೆಯೋ ತಿಳಿಯದು. ಈ ಭಾಷ್ಯವು ಹೆಚ್ಚು ಪ್ರಸಿದ್ಧ ವಾದಮೇಲೆ ಶರೀರಶರೀರಿ ಭಾವನೆಯೆಂದರೆ ದ್ವೈತಭಾವನೆಯೇ ಎಂಬ ಭಾವನೆ ಹೆಚ್ಚಾಗಿ ಅದನ್ನು ಶೈವರು ತಿರಸ್ಕರಿಸಲು ಕಾರಣವಾಯಿತು. ಇದು ಹೇಗೇ ಇರಲಿ, ಶ್ರೀಕಂಠಭಾಷ್ಯ ದಲ್ಲಿನ ಅದ್ವೈತರೂಪವಾದ ಶರೀರಶರೀರಿ ಭಾವನೆಗೆ ಶಿವಾಗಮಗಳು ಮತ್ತು ವಾಯುವೀಯ ಸಂಹಿತೆಯು ಆಧಾರವಾಗಿವೆ. ದಾಸಗುಪ್ತರ ಪೂರ್ವೋಕ್ತ ಗ್ರಂಥದ ೧೮೧ನೆಯ ಪುಟದಲ್ಲಿ ಶ್ರೀಪತಿ ಪಂಡಿತರ ವಿಷಯದಲ್ಲಿ ಹೇಳಿದಂತೆ—"He further says that Puranas were composed by Siva even before the Vedas and that of all the Puranas the Sivamahapurana is the most authentic.'' ಶಿವಮಹಾಪುರಾಣವೇ ಆಧಾರವಾಗಿರುವ ಶ್ರೀಕಂಠ ಶ್ರೀಪತಿ ಪಂಡಿತರುಗಳ ಭಾಷ್ಯಗಳಲ್ಲಿ ಹೊಂದಾಣಿಕೆಯಿರುವುದರಲ್ಲಿ ಆಶ್ಚರ್ಯವಿಲ್ಲ.

ಶ್ರೀ ಶಂಕರಾಚಾರ್ಯರ ಅದ್ವೈತಸಿದ್ಧಾಂತಕ್ಕೂ ಶ್ರೀ ಶ್ರೀಕಂಠ ಶಿವಾಚಾರ್ಯರ ಅದ್ವೈತ ಸಿದ್ಧಾಂತಕ್ಕೂ ಇರುವ ಹೋಲಿಕೆಗಳನ್ನು ನೋಡಿದರೆ ಶ್ರೀ ಶ್ರೀಕಂಠ ಶಿವಾಚಾರ್ಯರೂ ಶ್ರೀ ಶಂಕರಾಚಾರ್ಯರೂ ಒಂದೇ ಕಾಲದ ವಾತಾವರಣದಲ್ಲಿ ಬಳೆದಂತೆ ಕಾಣುತ್ತದೆ. ಶ್ರೀ ಶಂಕರರು ಬಹಳ ಕಾಲ ಬದುಕಲಿಲ್ಲವೆನ್ನುವುದರಿಂದಲೂ, ಅವರು ಬಾಲ್ಯದಲ್ಲಿಯೇ ದೊಡ್ಡ ವಿದ್ವಾಂಸರಾಗಿದ್ದರೆಂದು ತಿಳಿಯಬರುವುದರಿಂದಲೂ ಅವರು ಅವರ ಭಾಷ್ಯವನ್ನು ಶ್ರೀ ಶ್ರೀಕಂಠ ಶಿವಾಚಾರ್ಯರ ಭಾಷ್ಯಕ್ಕಿಂತಲೂ ಮೊದಲೇ ಬರೆದಿರಬಹುದು. ಏನೇ ಆಗಲಿ, ಒಬ್ಬರ ನಿಲುವು ಇನ್ನೊಬ್ಬರಿಗೆ ಪರಿಚಯವಾಗಿದ್ದರೂ, ಒಬ್ಬರ ಸೂತ್ರಭಾಷ್ಯವನ್ನು ಮತ್ತೊಬ್ಬರು ನೋಡುವ ಮೊದಲೇ ಅವರು ಅವರ ಸೂತ್ರಭಾಷ್ಯವನ್ನು ಬರೆದಿರಬೇಕು. ಬೌದ್ಧರನ್ನು ಅವರ ವಾದ ದಂತಹ ವಾದದಿಂದಲೇ ಜಯಿಸಿ ಅಪರ ಹಿಡಿತದಿಂದ ಹಿಂದೂ ಧರ್ಮವನ್ನು ಉದ್ಧರಿಸಿದ ಶ್ರೀ ಶಂಕರರ ನಿಲುವನ್ನು ಪ್ರಚ್ಛನ್ನ ಬೌದ್ಧವಾದವೆಂದು ಅವರನಂತರ ಒಂದೆರಡು ಶತಮಾನ ಗಳವರೆಗೂ ಯಾರೂ ಉಗ್ರವಾಗಿ ಖಂಡಿಸಲಿಲ್ಲ; ಸಮಕಾಲೀನರಾದ ಶ್ರೀಕಂಠ ಶಿವಾಚಾರ್ಯರೂ ಅದನ್ನು ಉಗ್ರವಾಗಿ ಖಂಡಿಸಲಿಲ್ಲ. ಹತ್ತನೆಯ ಶತಮಾನದ ಭಾಸ್ಕರಾಚಾರ್ಯರು "**ಯೇತು ಬೌದ್ಧಮತಾವಲಂಬಿನೋ ಮಾಯಾವಾದಿನಸ್ತೇಪ್ಯನೇನ ನ್ಯಾಯೇನ ಸೂತ್ರಕಾರನ್ಯೇವ ನಿರಸ್ತವ್ಯೇದಿತವ್ಯಾಹ**'' ಎಂದು ಹೇಳಿ ಬೌದ್ಧಮತದವರಂತೆ ಹೇಳುವ ಆ ಮಾಯಾ ವಾದವು ಸೂತ್ರಕಾರನಿಗೆ ಒಪ್ಪಿಗೆಯಾದುದಲ್ಲವೆಂದು ಹೇಳಿದ್ದಾರೆ. ಎರಡು-ಮೂರು ಶತಮಾನಗಳ ನಂತರ ಇದ್ದ ಶ್ರೀ ರಾಮಾನುಜರಾದರೋ, ಶಾಂಕರಭಾಷ್ಯವನ್ನು ಅತ್ಯುಗ್ರವಾಗಿ ಖಂಡಿಸು ವುದರಿಂದಲೇ ಅವರ ಭಾಷ್ಯವನ್ನು ಪ್ರಾರಂಭಿಸಿದ್ದಾರೆ. ಶ್ರೀ ಶ್ರೀಕಂಠ ಶಿವಾಚಾರ್ಯರು ಖಂಡಿಸಿರುವ ಜಗನ್ಮಿಥ್ಯಾವಾದವು ಬೌದ್ಧರದಿರಬಹುದು ಅಥವಾ ಶ್ರೀ ಶಂಕರರದಾಗಿರಬಹುದು (See *Srikantha's Sivadvaita*, p. 10, footnote 11). ಈ ಆಚಾರ್ಯರಿಬ್ಬರೂ ಸಂಧಿಸಿ, ಅಭಿಪ್ರಾಯವಿನಿಮಯಮಾಡಿಕೊಂಡಿರಬಹುದು; ವಾದವಿವಾದಗಳಾಗಿ ಚರ್ಚಿಸಿರಬಹುದು.

ಏಕೆಂದರೆ ಶ್ರೀ ಶಂಕರಾಚಾರ್ಯರು ಅವರ ಬೃಹದಾರಣ್ಯಕದ ೩-೮-೧೨ರ ಭಾಷ್ಯದಲ್ಲಿ "ಅನ್ಯ ಅಕ್ಷರಸ್ಯ ಶಕ್ತಯ ಏತಾ ಇತಿ ವದಂತಿ। ಅನಂತ ಶಕ್ತಿಮದಕ್ಷರಮಿತಿ ಚ ॥" ಎಂದು ಹೇಳಿ ಪರಶಿವಾಭಿನ್ನವಾದ ಶಕ್ತಿಯಿಂದ ಜಗತ್ತು ಹೊರಹೊಮ್ಮಿತೆಂಬ ಸಿದ್ಧಾಂತವನ್ನು ಖಂಡಿಸಿದ್ದಾರೆ. ಶ್ರೀ ಶಂಕರರು ಖಂಡಿಸುತ್ತಿರುವ ಸಿದ್ಧಾಂತಗಳು ಯಾರಿಂದ ಪ್ರತಿಪಾದಿತವಾದುವು ಎಂಬುದನ್ನು ಅವರು ಹೇಳಿಲ್ಲವಾದರೂ, ಖಂಡಿಸಲ್ಪಟ್ಟಿರುವ ಸಿದಾಂತವು ಶ್ರೀ ಶ್ರೀಕಂಠ ಶಿವಾಚಾರ್ಯರಿಂದ ಪ್ರತಿಪಾದಿಸಲ್ಪಟ್ಟಿರುವುದೆಂಬುದು ಅವರ ಭಾಷ್ಯದಿಂದ ತಿಳಿದುಬರುವುದು; ಮತ್ತೆ ಯಾರಿಂದಲೂ ಅದು ಆ ಹಿಂದೆ ಪ್ರತಿಪಾದಿಸಲ್ಪಟ್ಟಿರುವಂತೆ ಕಂಡುಬಂದಿಲ್ಲ.

ಶ್ರೀ ಶಂಕರಾಚಾರ್ಯರಿಗೂ ಶ್ರೀ ಶ್ರೀಕಂಠ ಶಿವಾಚಾರ್ಯರಿಗೂ ವಾದವಿವಾದಗಳಾಗಿ ಶ್ರೀ ಶ್ರೀಕಂಠ ಶಿವಾಚಾರ್ಯರು ಸೋತುಹೋಗಿ ಶ್ರೀ ಶಂಕರಾಚಾರ್ಯರ ಶಿಷ್ಯರಾಗಿ ಹೋಗಿದ್ದರೆ ಸುರೇಶ್ವರಾಚಾರ್ಯರಂತೆ ಶಾಂಕರಸಿದ್ಧಾಂತವನ್ನು ಪ್ರತಿಪಾದಿಸುವ ಗ್ರಂಥಗಳನ್ನು ಅವರು ಬರೆಯುತ್ತಿದ್ದರು; ಅಥವಾ ಅವರ ಭಾಷ್ಯವನ್ನು ಶಾಂಕರಸಿದ್ಧಾಂತಕ್ಕೆ ಅನುಸಾರವಾಗಿ ಬರೆಯುತ್ತಿದ್ದರು; ಆದರೆ, ಹಾಗೆ ಮಾಡಿರುವುದಿಲ್ಲ. ಆದರೂ ವಾದವಿವಾದಗಳಾಗಿ ಶ್ರೀ ಶಂಕರಾಚಾರ್ಯರೇ ಗೆದ್ದರೆಂಬುದಾಗಿ ಶಂಕರಾನುಯಾಯಿಗಳು ಹೇಳುತ್ತಿದ್ದಂತೆ ಕಾಣುತ್ತದೆ. 'ಶ್ರೀಕಂಠಭಾಷ್ಯ ಸಮರ್ಥ' ಗ್ರಂಥವನ್ನು ಹರದತ್ತ ಶಿವಾಚಾರ್ಯರು ಬರೆಯಲು ಈ ಹೇಳಿಕೆಯೇ ಕಾರಣವಾಗಿರಬಹುದು. ಜಗತ್ಸೃಷ್ಟಿಗೆ ಪರಾಶಿವಭಿನ್ನವಾದ ಶಕ್ತಿಯೇ ಕಾರಣವೆಂಬ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ಶ್ರೀ ಶಂಕರಾಚಾರ್ಯರ ತರ್ಕಬುದ್ಧಿಗೆ ಸರಿಹೋಗಿರಲಿ, ಇಲ್ಲದಿರಲಿ ಅದು ಅವರ ಹೃದಯದ ಮೇಲೆ ಪರಿಣಾಮ ಮಾಡದಿರಲಿಲ್ಲ. ಪರಶಿವಾಭಿನ್ನಳಾದ ಶಕ್ತಿಯೇ ಅವರ ಹೃದಯದಲ್ಲಿ ನೆಲಸಿ ಸಕಾಲದಲ್ಲಿ ಆ ಸಿದ್ಧಾಂತವನ್ನು ಹೊರಹೊಮ್ಮಿಸಿದಾಗ ಅದು ಆನಂದಲಹರಿಯ ರೂಪದಲ್ಲಿ ಹೊರಹೊಮ್ಮಿತು. ಶ್ರೀ ಶಂಕರಾಚಾರ್ಯಕೃತ ಆನಂದಲಹರಿಯ ಮೊದಲನೆಯ ಶ್ಲೋಕದಲ್ಲಿಯೇ ಅದರ ಚಿಲುಮೆಯಿದೆ:

ಶಿವಶ್ಶಕ್ತ್ಯಾ ಯುಕ್ತೋ ಯದಿಭವತಿ ಶಕ್ತಃ ಪ್ರಭವಿತುಂ ।
ನ ಚೇದೇವಂ ದೇವೋ ನ ಖಲು ಕುಶಲಃ ಸ್ಪಂದಿತುಮಪಿ ॥
ಅತಸ್ತ್ವಾಮಾರಾಧ್ಯಾಂ ಹರಿಹರವಿರಿಂಚಾದಿಭಿರಪಿ ।
ಪ್ರಣಂತುಂ ಸ್ತೋತುಂ ವಾ ಕಥಮಕೃತಪುಣ್ಯಃ ಪ್ರಭವತಿ ॥

ಇದರ ಕನ್ನಡ ಅನುವಾದವಿದು:

ಕಂದ ॥ ಶಕ್ತಿವಿಶಿಷ್ಟಂ ಸೃಜಿಪನ ।
ಶಕ್ತಂ ಶಕ್ತಿರಹಿತಂ ಶಿವಂ ಸ್ಪಂದಿಸಲುಂ ॥
ಶಕ್ತರೆ ವಿಧಿಹರಿಹರನುತ ।
ಶಕ್ತಿಯೆ, ತವನುತಿಗೆ ನತಿಗೆ ಪುಣ್ಯವಿಹೀನರ್ ? ॥

ಪರಶಿವಾಭಿನ್ನವಾದ ಶಕ್ತಿಯಿಂದಲೇ ಹೊರಹೊಮ್ಮಿದ ಹರಿಹರವಿಧಿಗಳಿಂದ ಆ ಶಕ್ತಿಯು ಆರಾಧಿಸಲ್ಪಡುವಳು. ಇಂತಹ ಶಕ್ತಿಯಿಂದ ವಿಶಿಷ್ಟನಾದ ಹೊರತು, ಸೃಷ್ಟಿಕಾರ್ಯದ ಮೊದಲನೆಯ ಹಂತವಾದ ಸ್ಪಂದಕ್ರಿಯೆಯು ಸಹಾ ಶಿವನಲ್ಲಿ ಆಗುವುದಿಲ್ಲ ಎಂದು ಇದರ ಅಭಿಪ್ರಾಯ. ಶಕ್ತಿಯಿಲ್ಲದೆ ಶಿವನು ಅಲುಗನೆಂದಮೇಲೆ ಸೃಷ್ಟಿಕಾರ್ಯವೆಲ್ಲಿ ಬಂದಿತು? ಶ್ರೀ ಶಂಕರಾಚಾರ್ಯರು ಹೀಗೆ, ಶಕ್ತಿವಿಶಿಷ್ಟ ಶಿವನೇ ಜಗತ್ಕಾರಣವೆಂದು ಹೇಳಿ, ಶಕ್ತಿಯು

ಪರಿಣಮಿಸಿ ಜಗತ್ತಾಗುವುದೆಂದು 'ಮನಸ್ತ್ವಂ' ಎಂದು ಮೊದಲಾಗುವ ಶ್ಲೋಕದಲ್ಲಿ ಹೇಳಿದ್ದಾರೆ. ಶ್ರೀಕಂಠರ ಶಿವಾದ್ವೈತವಾಗಲೀ ಅದರ ಪರಿಷ್ಕೃತ ಸಿದ್ಧಾಂತವಾದ ಶಕ್ತಿವಿಶಿಷ್ಟಾದ್ವೈತವೆಂದು ಪ್ರಸಿದ್ಧವಾದ ವೀರಶೈವ ಸಿದ್ಧಾಂತವಾಗಲೀ ಇದಕ್ಕಿಂತಲೂ ಮುಂದೆ ಹೋಗಿಲ್ಲ; ಮುಂದೆ ಹೋಗಬಹುದಾದುದೇನೂ ಇಲ್ಲ.

ಶ್ರೀಕಂಠ ಶಿವಾಚಾರ್ಯರು ಶ್ರೀ ಶಂಕರಾಚಾರ್ಯರ ಕಾಲದವರಾಗಿರಲಿ, ಅಲ್ಲದಿರಲಿ; ಅವರು ಶ್ರೀ ರಾಮಾನುಜರ ಕಾಲದವರಾಗಿರಲಿ, ಅಲ್ಲದಿರಲಿ; ಅದು ಮಹತ್ವದ ವಿಷಯವಲ್ಲ. ಆದರೆ ಹನ್ನೊಂದು-ಹನ್ನೆರಡನೆಯ ಶತಮಾನದಲ್ಲಿ ಪರಿಷ್ಕೃತವಾದ ವೀರಶೈವ ಶಿವಾದ್ವೈತದ ಹಿನ್ನೆಲೆಯು ಶ್ರೀಕಂಠ ಶಿವಾದ್ವೈತವೆಂಬುದು ಮಹತ್ವದ ವಿಷಯವಾಗಿದೆ.

## ವೀರಶೈವ ಶುದ್ಧಿ ಸಂಘಟನೆಯ ಕಾಲದವರೆಗೆ ಆಧ್ಯಾತ್ಮಿಕ ಪ್ರಗತಿ

ವೀರಶೈವ ಆಧ್ಯಾತ್ಮಿಕದ ನಿಲುವು ಸಿದ್ಧಾಂತ ಶಿಖಾಮಣಿಯಲ್ಲಿ ಒಮ್ಮುಖವಾಗುವ ಮೊದಲು, ಲಿಂಗಿ ಪಾಶುಪತರ ದ್ವೈತ ಸಿದ್ಧಾಂತದಿಂದ ಹಿಡಿದು ದೇವರದಾಸಿಮಯ್ಯನ ಕಾಲಕ್ಕಿಂತಲೂ ಹಿಂದಿನ ಪುರಾತನರ "ಕಡಲೊಳಗಣ ಬೊಬ್ಬುಳಿಕೆ ಕಡಲೊಳಳಿವಂತೆ" ದ್ವೈತ ಭಾವನೆಯ ಲೇಶವೂ ಉಳಿಯದ ಐಕ್ಯಸಿದ್ಧಾಂತದವರೆಗಿನ ವೈವಿಧ್ಯತೆಯನ್ನು ಪಡೆದಿದ್ದಿತಷ್ಟೆ. ಈ ತರದ ಮೋಕ್ಷ ಭಾವನೆಗಳಲ್ಲಿ, ಶಿವಮಹಾಪುರಾಣದಲ್ಲಿನ ಸಾರೂಪ್ಯ ಕಲ್ಪನೆಯು ಶ್ರೀಕಂಠ ಭಾಷ್ಯದಲ್ಲಿ ಸಿದ್ಧಾಂತೀಕರಿಸಲ್ಪಟ್ಟು ಪ್ರಸಿದ್ಧವಾಗಿದ್ದಂತೆ ತೋರುವುದು. ಇದೇ ನಿಲುವೇ ಆ ಭಾಷ್ಯದ ಕಾರಿಕೆಯಾದ ಕ್ರಿಯಾಸಾರದಲ್ಲಿಯೂ ಶ್ರೀಕರಭಾಷ್ಯದಲ್ಲಿಯೂ ಕಂಡುಬರುವುದೆಂದು ತೋರಿಸಲಾಯಿತು. ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಪದಗಳೊಡನೆ ಸಾಯುಜ್ಯ ಪದವು ಉಪಯೋಗಿಸಲ್ಪಟ್ಟಾಗ ಆ ಪದಕ್ಕೆ ಆ ಪದಗಳ ಅರ್ಥಕ್ಕಿಂತ ಬೇರೆಯಾದ ಅರ್ಥವು ಇರುವುದಾದರೂ, ಸಾಲೋಕ್ಯವನ್ನೋ, ಸಾಮೀಪ್ಯವನ್ನೋ, ಸಾರೂಪ್ಯವನ್ನೋ ಹೇಳುವವರು ಸಹಾ ತಮ್ಮ ನಿಲುವನ್ನು ಸಾಯುಜ್ಯವೆಂದೇ ಕರೆಯುವುದು ಸಾಮಾನ್ಯವಾಗಿದೆ. ಉದಾಹರಣೆಗಾಗಿ ಕೊನೆಯ ಸೂತ್ರದ ಶ್ರೀಕಂಠಭಾಷ್ಯದಲ್ಲಿ "ಉಕ್ತಂ ಬ್ರಾಹ್ಮಣಸ್ಸಾದೃಶ್ಯಂ ಸಾಯುಜ್ಯಂ ಮುಕ್ತಾನಾಂ ಭೋಗಾದಿ ಸಾಧರ್ಮ್ಯಾತ್" ಎಂದು ಹೇಳಿರುವುದರಲ್ಲಿ ಸಾಯುಜ್ಯವೆಂಬ ಪದದಿಂದ ಸಾರೂಪ್ಯವೇ ಅಭಿಪ್ರೇತವಾಗಿರುವುದು. ಆದುದರಿಂದ ಸಾಯುಜ್ಯ ಪದಪ್ರಯೋಗದಿಂದಲೇ ಶಿಖಿಕರ್ಪೂರನ್ಯಾಯದಂತಹ ಐಕ್ಯವು ಅಭಿಪ್ರಾಯವೆಂದು ತಿಳಿಯಲಾಗದು. ಸ್ವರೂಪೈಕ್ಯವೆಂದರೂ ಅಂತಹ ಐಕ್ಯವೆಂದು ಭಾವಿಸಬಾರದು. ಶಿವಮಹಾಪುರಾಣದಲ್ಲಿ "ಮಲಶ್ಚಿಚ್ಛಾದಕೋ ನೈಜೋ ವಿಶುದ್ಧಶ್ಶಿವತಾಸ್ವತಃ" ಎಂದು ಹೇಳಿದೆ. ಜೀವನ ಸ್ವರೂಪವು ಶಿವಸದೃಶರೂಪವೆ; ಚಿತ್ತು ಮಲದಿಂದ ಆವೃತವಾಗುವುದರಿಂದ ಜೀವನ ನಿಜರೂಪು ಮರೆಯಾಗುವುದು. ೪-೪-೨೦ ನೆಯ ಸೂತ್ರದ ಶ್ರೀಕಂಠಭಾಷ್ಯದಲ್ಲಿ "ನಿಖಿಲಮಲ ಸಂಪರ್ಕರಹಿತ ನಿರತಿಶಯ ಮಂಗಲಾಸ್ಪದತ್ವರೂಪಂ ಶಿವಸದೃಶ ಸ್ವಭಾವತ್ವಂ" ಎಂದು ಹೇಳಿದೆ. ಆದುದರಿಂದ ಜೀವನು ಮಲಸಂಪರ್ಕರಹಿತನಾದರೆ ಶಿವಸದೃಶ ರೂಪವನ್ನು ಪಡೆವನು. ಹೀಗೆ ಜೀವನು ಸ್ವಸ್ವರೂಪವಾದ ಶಿವಸದೃಶರೂಪವನ್ನು ಪಡೆದರೆ ಆರೂಪವೂ ಶಿವನ ರೂಪವೂ ಒಂದೆಯಾಗಿರುವುದರಿಂದ ಸ್ವರೂಪೈಕ್ಯವಾಗುವುದು. ಹೀಗೆ ಜೀವನು ಸ್ವಸ್ವರೂಪವನ್ನು ಪಡೆದು ಸ್ವರೂಪೈಕ್ಯವನ್ನು ಹೊಂದಲು ನಿತ್ಯ ತೃಪ್ತತ್ವವುಂಟಾಗಿ ಶಿವಸದೃಶ ಸ್ವಾತಂತ್ರ್ಯವು ದೊರೆಯುವುದೆಂಬುದು ಮೇಲಿನ ಶ್ರೀಕಂಠಭಾಷ್ಯಭಾಗದಲ್ಲಿ ಮುಂದುವರಿದು ಹೀಗೆ ಹೇಳಿರುವುದರಿಂದ ತಿಳಿದು

ಬರುವುದು: "ನಿರತಿಶಯ ಸ್ವರೂಪಾನಂದಾನುಭವೈಕರಸಿಕತಯಾ ಸ್ವಾತ್ಮಾರಾಮತ್ವೇನ ನಿತ್ಯತೃಪ್ತತ್ವಂ.... ಅತೋ ಮುಕ್ತಸ್ಯ ಶಿವಸದೃಶಸ್ಯ ಸ್ವಾತಂತ್ರ್ಯಂ ಯುಕ್ತಮೇವ." ಜೀವನಿಗೆ ಮಲಾಪಹರಣವಾಗಿ ಸ್ವಸ್ವರೂಪವು ಎಂದರೆ ಶಿವಸದೃಶವಾದ ತನ್ನ ನಿಜಸ್ವರೂಪವು ದೊರೆಯಲು ಶಿವಂಕರನಾದ ಶಿವನ ಕರುಣೆಯಾಗಬೇಕು. ಕೊನೆಯ ಸೂತ್ರದ ಶ್ರೀಕರಭಾಷ್ಯದಲ್ಲಿ ಹೇಳಿರುವುದಾದರೂ ಇದೇ: "ಶಿವಂಕರ ಇತ್ಯತ್ರ ಭ್ರಮರಕೀಟನ್ಯಾಯೇನ ಶಿವಂಕರೋತೀತಿ ಶಿವಂಕರ ಇತಿ ವ್ಯುತ್ಪತ್ತ್ಯಾ ಭಕ್ತಾನಾಂ ಸ್ವಸ್ವರೂಪಪ್ರದಾಯಕತ್ವಂ ದರ್ಶಿತಂ" ಇದರಲ್ಲಿ ಭ್ರಮರಕೀಟ ನ್ಯಾಯವನ್ನು ಹೇಳಿರುವುದರಿಂದ ಸಾದೃಶ್ಯವೇ ಅಭಿಪ್ರೇತವಿರುವುದು; ಏಕೆಂದರೆ, ಕೀಟವು ತಾನು ಧ್ಯಾನಿಸುವ ಭ್ರಮರದಂತಹ ಮತ್ತೊಂದು ಭ್ರಮರವಾಗುವುದೇ ಹೊರತು ನೀರಿನಲ್ಲಿ ನೀರು ಬೆರೆದಂತೆ ತಾನು ಧ್ಯಾನಿಸಿದ ಭ್ರಮರದಲ್ಲಿ ಐಕ್ಯವಾಗುವುದಿಲ್ಲ.

ಶ್ರೀಕರಭಾಷ್ಯದ 'ಜಗದ್ವ್ಯಾಪಾರವರ್ಜ್ಯಂ' ಎಂದು ಮೊದಲಾಗುವ ಸೂತ್ರದ ಭಾಷ್ಯದಲ್ಲಿ ಮುಕ್ತರಲ್ಲಿ ಕೆಲವರು ಪರಮಾತ್ಮನ ಅಂತರಂಗವನ್ನು ಸೇರಿ ಜಗತ್ಸೃಷ್ಟ್ಯಾದಿಗಳನ್ನು ಮಾಡಬಲ್ಲರೆಂದೂ ಹಾಗೆ ಮಾಡಲಾರದ ಇತರ ಮುಕ್ತರಿಗೆ ಮಾತ್ರ ಈ ಸೂತ್ರವು ಅನ್ವಯಿಸುವುದೆಂಬ ಪೂರ್ವಪಕ್ಷವನ್ನು ಹೇಳಿ, ಈ ನಿಲುವು ಸರಿಯಲ್ಲವೆಂದೂ ಪರಶಿವನಿಗೆ ಮೀಸಲಾದ ಸೃಷ್ಟಿ ಕಾರ್ಯವನ್ನು ಯಾವ ಮುಕ್ತನೂ ಮಾಡಲಾರನೆಂದೂ ಸಿದ್ಧಾಂತಮಾಡಲಾಗಿದೆ. ಆದುದರಿಂದ ಮೋಕ್ಷದಲ್ಲಿ ಶಿವಸಾದೃಶ್ಯವೇ ಆಗುವುದೆಂಬುದು ಶ್ರೀಕರಭಾಷ್ಯದ ನಿಲುವೆಂದಾಯಿತು. ೨-೧-೨೧ ನೆಯ ಸೂತ್ರದ ಶ್ರೀಕರಭಾಷ್ಯದಲ್ಲಿ "ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಿದ್ಧಕಲ್ಯಾಣ ವಿಭೂತೇಃ ಸ್ವಾಭಾವಿಕ ಜೀವಭಾವ ನಿವೃತ್ತಿಪೂರ್ವಕ ಶಿವತ್ವ ಪ್ರಾಪ್ತಿ ರೂಪ ಕೈವಲ್ಯವಿಭೂತೇಶ್ಚ ದರ್ಶನಾಚ್ಚ ಚತುರ್ವಿಧ ಮುಕ್ತಿ ಪ್ರತಿಪಾದಕಂ ಸರ್ವ ಶಾಸ್ತ್ರಂ ಪ್ರಮಾಣಮೇವ" ಎಂದು ಹೇಳಿ ಈ ನಾಲ್ಕು ವಿಧ ಮುಕ್ತಿಗಳು 'ಅಧಿಕಾರ ತಾರತಮ್ಯೇನ ಸರ್ವಮುಪಾದೇಯಂ'—ಎಂದರೆ ಅಧಿಕಾರ ತಾರತಮ್ಯದಿಂದ ದೊರೆಯುವುದೆಂಬುದಕ್ಕೆ ಆಧಾರವನ್ನು ಕೊಡಲಾಗಿದೆ. ಇವುಗಳಲ್ಲಿ ಸಾಲೋಕ- ಸಾಮೀಪ್ಯ ಸಾರೂಪ್ಯಗಳು ಜೀವಭಾವವು ಪೂರ್ಣವಾಗಿ ಅಳಿಯದ ಕಲ್ಯಾಣವಿಭೂತಿಯೆಂದೂ, ಸಾಯುಜ್ಯವು ಜೀವ ಭಾವವು ಅಳಿದ ಕೈವಲ್ಯವಿಭೂತಿಯೆಂದೂ ವಿಭಾಗಮಾಡಲಾಗಿದೆ. ಶಿವಮಹಾಪುರಾಣದಿಂದ ಕ್ರಿಯಾಸಾರದಲ್ಲಿ ಉದ್ಧೃತವಾಗಿರುವ ಶ್ಲೋಕಗಳಲ್ಲಿನ, ತೃತೀಯೋಪದೇಶದ ೩೩೧ ರಿಂದ ೩೩೭ ನೆಯ ಶ್ಲೋಕಗಳಲ್ಲಿ ಸಾಲೋಕ್ಯಾದಿ ಮೋಕ್ಷಗಳ ಸ್ವರೂಪವು ಹೇಳಲ್ಪಟ್ಟಿದೆ. ಕರ್ಮ ಮೊದಲುಗೊಂಡು ಪ್ರಕೃತ್ಯಂತವಾದುದೆಲ್ಲವೂ ವಶವಾದರೆ ಮೋಕ್ಷವಾಗುವುದು. ಇವುಗಳಲ್ಲಿ ಕರ್ಮ ಮಾತ್ರ ವಶವಾದರೆ ಸಾಲೋಕ್ಯ ಮೋಕ್ಷವಾಗುವುದು; ತನ್ಮಾತ್ರೆಗಳು ವಶವಾದರೆ ಸಾಮೀಪ್ಯ ಮೋಕ್ಷವಾಗುವುದು; ಅಹಂಕಾರವು ವಶವಾದರೆ ಸಾರೂಪ್ಯ ಮೋಕ್ಷವು ದೊರೆಯುವುದು; ಪ್ರಕೃತಿಯು ವಶವಾದರೆ ಸಾಯುಜ್ಯವು ದೊರೆಯುವುದು. ಪ್ರಕೃತಿ ವಶದಿಂದ ಜೀವ ಭಾವವೆಲ್ಲವೂ ವಶವಾದಂತಾಗುವುದಷ್ಟೆ; ಜೀವಭಾವವು ಹೋಗಿ ಶಿವಭಾವವು ಬರುವುದರಿಂದಲೇ ಇದಕ್ಕೆ ಕೈವಲ್ಯವಿಭೂತಿಯೆಂದೂ ಉಳಿದವಕ್ಕೆ ಕಲ್ಯಾಣವಿಭೂತಿಯೆಂದೂ ಶ್ರೀಕರ ಭಾಷ್ಯದಲ್ಲಿ ಹೇಳಿರಬೇಕು. ಅದು ಹೇಗೇ ಇರಲಿ, ಸಾಯುಜ್ಯ ಮುಕ್ತಿಯೆಂದರೇನೆಂಬುದನ್ನು ಕ್ರಿಯಾಸಾರದ ೩೩೬, ೩೩೭ ನೆಯ ಶ್ಲೋಕಗಳಲ್ಲಿ ಹೇಳಿದೆ:

> ಪುನರ್ಮಹಾಪ್ರಸಾದೇನ ಪ್ರಕೃತಿರ್ವಶಮೇಷ್ಯತಿ ।
> ಶಿವಸ್ಯ ಮಾನಸೈಶ್ವರ್ಯಂ ತದಾ ಲಬ್ಧಂ ಭವೇತ್ ಸ್ವತಃ ॥

ಸರ್ವಜ್ಞಾದ್ಯಂ ಶಿವೈಶ್ವರ್ಯಂ ಲಬ್ಧ್ವಾ ಸ್ವಾತ್ಮನಿ ರಾಜತೇ ।
ತತ್ ಸಾಯುಜ್ಯಮಿತಿ ಪ್ರಾಹುರ್ವೇದಾಗಮ ಪರಾಯಣಾಃ ॥

ಶಿವನ ಮಾನಸೈಶ್ವರ್ಯವೂ, ಸರ್ವಜ್ಞತ್ವಾದಿಗಳೂ, ಶಿವೈಶ್ವರ್ಯವೂ ಸಾಯುಜ್ಯದಿಂದ ದೊರೆಯುವವೆಂದು ಹೇಳಿರುವುದರಿಂದ ಕೈವಲ್ಯ ವಿಭೂತಿಯೆನಿಸಿದ ಸಾಯುಜ್ಯವೆಂದರೂ ಕೆಲವು ಸಿದ್ಧಿಗಳನ್ನು ಪಡೆವ ಶಿವಸದೃಶರೂಪವೇ ಹೊರತು, ಶಿಖಿಕರ್ಪೂರನ್ಯಾಯದಂತೆ ದೊರೆಯುವ ಸಂಪೂರ್ಣ ಐಕ್ಯವಲ್ಲವೆಂದಾಯಿತು. ಶ್ರೀಕರಭಾಷ್ಯವನ್ನೂ ಶ್ರೀಕಂಠಭಾಷ್ಯವನ್ನೂ ತುಲನಾತ್ಮಕ ದೃಷ್ಟಿಯಿಂದ ವಿಮರ್ಶಿಸಿದುದರಲ್ಲಿ ಕಂಡುಬಂದಿರುವ ಹೋಲಿಕೆಗಳನ್ನು ಹೇಳಲಾಯಿತು; ಹೆಚ್ಚು ವಿಮರ್ಶೆಯಿಂದ—ಕೆಲವರು ಪಂಡಿತರು ಹೇಳುವಂತೆ—ಶ್ರೀಕರಭಾಷ್ಯದಲ್ಲಿ ಶಿಖಿಕರ್ಪೂರ ನ್ಯಾಯದಂತಹ ಮೋಕ್ಷವು ಸಹಾ ಹೇಳಲ್ಪಟ್ಟಿರುವುದು ಸಿದ್ಧವಾದರೆ, ಶ್ರೀಕರಭಾಷ್ಯವು ಶ್ರೀಕಂಠ ಭಾಷ್ಯದ ನಿಲುವಿಗಿಂತಲೂ ಮುಂದೆ ಒಂದು ಹೆಜ್ಜೆಯನ್ನು—ಸಿದ್ಧಾಂತ ಶಿಖಾಮಣಿಗೆ ಅನುಸಾರ ವಾಗಿ, ಇಟ್ಟಿದೆಯೆಂದು ಹೇಳಬೇಕಾಗುವುದು. ಆದರೆ ಒಂದೇ ವಿಧವಾದ ಮಾತುಗಳಲ್ಲಿ ಒಂದೇ ವಿಧವಾದ ಅಭಿಪ್ರಾಯಗಳನ್ನು ಒಬ್ಬರೇ ಬರೆದಂತಿರುವ ಇತರ ಹೋಲಿಕೆಗಳು ಉಳಿದು, ಶ್ರೀಕಂಠ ಶಿವಾಚಾರ್ಯರೂ, ಶ್ರೀಪತಿ ಪಂಡಿತರೂ, ನೀಲಕಂಠರೂ ಒಂದೇ ಮತದವರೆಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಶ್ರೀಕಂಠಭಾಷ್ಯದಲ್ಲಿ ಹೇಳಿರುವ ಅಹಂಗ್ರಹೋಪಾಸನೆಯೆಂಬ ಮೋಕ್ಷಸಾಧನಕ್ಕೆ ತಕ್ಕ ಮೋಕ್ಷವೆಂದರೆ ಸಂಪೂರ್ಣ ಐಕ್ಯವೇ. ಭೃಂಗಕೀಟನ್ಯಾಯವು ಸಾರೂಪ್ಯಕ್ಕೆ ಹೊಂದುವುದಾದರೂ ಎಲ್ಲರಿಗೂ ಮಾನ್ಯವಾದ 'ಯಥಾ ನದ್ಯಃ' ಎಂಬ ಆಧಾರವು ಜಲದಲ್ಲಿ ಜಲವು ಬೆರೆದು "ವಿಭಾಗೇನ ನ ದೃಶ್ಯತೇ" ಎಂಬಂತೆ ಆಗುವ ಸಂಪೂರ್ಣ ಐಕ್ಯಕ್ಕೆ ಸ್ವಾರಸ್ಯವಾಗಿ ಹೊಂದುವಂತೆ, ಸಮುದ್ರದ ನೀರಿನ ರೂಪವನ್ನು ನದಿಯ ನೀರು ಹೊಂದುವುದೆಂದು ಹೇಳಿ, ಸಾರೂಪ್ಯಕ್ಕೆ ಆಧಾರವಾಗಿ ತೆಗೆದುಕೊಳ್ಳಲು ಹೊಂದುವುದಿಲ್ಲ. ವೀರಶೈವರ ಸಂಘಟನೆಯಾಗಿ, ಹಿಂದೆ ಅವರಲ್ಲಿದ್ದ ವಿವಿಧ ಮೋಕ್ಷಸ್ವರೂಪದ ನಿಲುವುಗಳಲ್ಲಿ ಸರ್ವರಿಗೂ ಮಾನ್ಯವಾದ ನಿಲುವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಆರಿಸಿಕೊಳ್ಳುವಾಗ ಸಂಪೂರ್ಣ ಐಕ್ಯವನ್ನೇ ಆರಿಸಿ ಕೊಳ್ಳಲಾಯಿತು. ಇದಕ್ಕೆ ಕಾರಣಗಳನ್ನು ಮುಂದೆ ಕೊಡಲಾಗುವುದು.

## ಚಿದಚಿದ್‌ವಸ್ತುಗಳು ಶಕ್ತಿಯ ಪರಿಣಾಮವೇ ಎಂಬ ವೀರಶೈವ ಸಿದ್ಧಾಂತವು ವಿಜ್ಞಾನದ ಒರೆಗೆ ನಿಲ್ಲುವುದು

ವಿಜ್ಞಾನಕ್ಕೂ ವೇದಾಂತಕ್ಕೂ, ಕೈಯ ಗಂಟೆಗೂ ಕನಸಿನ ಗಂಟೆಗೂ ಇರುವಷ್ಟು ವ್ಯತ್ಯಾಸವಿದೆಯೆಂಬ ಭಾವನೆಯಿದ್ದಿತು. ಇಂದು ಆ ಅಂತರವಿಲ್ಲ; ಈಗ ವಿಜ್ಞಾನವು ನಿಂತಲ್ಲಿ ವೇದಾಂತವು ಪ್ರಾರಂಭವಾಗಿ ಅವು ಒಂದಕ್ಕೊಂದು ಪೂರಕವಾಗಿರುವುವೆಂಬ ಭಾವನೆ ಬಂದಿದೆ. ಚಿದಚಿದ್‌ವಸ್ತುಗಳು ಶಕ್ತಿಯ ಪರಿಣಾಮವೆಂದು ತೋರಿಸಲು *Science and Reality* (a new interpretation of the universe and its evolution by John M. Lawson) ಎಂಬ ಗ್ರಂಥದಿಂದ ಕೆಳಗೆ ಕಂಡ ಆಧಾರವನ್ನು ಕೊಡಲಾಗಿದೆ:

It is now generally accepted that matter is resolvable into energy, that the fundamental "particles"—the electrons, protons, neutrons and positrons

—of which atoms are built up are "energy particles" and that light, X-rays, gamma-rays and other forms of radiation consist of energy-quanta or protons.......If matter is resolvable into energy, then, the fundamental "particles", the neutrons, electrons and protons from which atoms are built up, may be regarded as centres or spheres of energy.......It is inferred that these fundamental "energy-particles" must have been derived or evolved from a real form of existence, behind phenomena, which must be of the nature of real energy (whatever that may be) and may be identified with Ether. This real energy may be called Cosmic Energy. Cosmic Energy is to be regarded as an immaterial form of existence whose real nature we cannot know.....

Life is an activity of the nature of mind which manifests itself in all living matter.......mind in a simpler and more rudimentary form is associated with the atoms and molecules of inorganic matter......in the course of evolution living matter was elaborated from inorganic matter only when the conditions became suitable.......Sir Jagadis Bose, for example, showed experimentally that metals, like plants and animal tissues, could respond to stimuli, and that such response could, as in the case of plants and animal tissues, be inhibited by poisoning or anæsthetization. In the interaction between atoms, molecules, electrons and protons, may not the attractive and other forces, which act through the ether, and for which science can give no fundamental explanation, represent active responses to stimuli and be initiated and directed by inherent mind?....It is to be inferred that a directive and organising activity of the general nature of mind has been associated with the evolving entities from the beginning of evolution, and therefore that it must be associated with the cosmic energy of ether from which the fundamental "particles" were derived. Hence the real existence *immediately* behind phenomena, which may simply be called the ether, is to be conceived as Cosmic Energy directed and controlled by Cosmic Mind. This is as far as scientific inference can go. This real existence immediately behind phenomena need not be considered as the ultimate existence. The problem of ultimate existence must be left to the philosophors......There are no doubt many who rejecting a dualistic philosophic theory, and preferring to think of ultimate reality as being of the nature of mind, rather than of matter or energy, would arrive still more speculatively at the conception of an Absolute Infinite but impersonal or suprapersonal Mind as the origin and support of the universe. On this theory of existence, the ether would be conceived to have been a creation of *thought* and *will* in the Absolute Mind, and, since this creation of mind was permanent and enduring, mind must be conceived as sustaining it, so that the process of evolution might have started and continued in it in some such way as has been described.

ಮೇಲೆ ಹೇಳಿದುದರ ಮಥಿತಾರ್ಥವಿದು—ಪ್ರಪಂಚದಲ್ಲಿನ ವಸ್ತುಗಳೆಲ್ಲವೂ ಶಕ್ತಿರೂಪಕ್ಕೆ ಪರಿವರ್ತನವಾಗತಕ್ಕವು. ಪರಮಾಣುಗಳಲ್ಲಿನ ನ್ಯೂಟ್ರಾನ್, ಎಲೆಕ್ಟ್ರಾನ್, ಪ್ರೋಟಾನ್ ಮೊದಲಾದುವು ಶಕ್ತಿಯ ಕೇಂದ್ರಗಳು; ಬೆಳಕಿನ ಕಿರಣ, ಯಕ್ಸ್‌ರೇ ಕಿರಣ ಮೊದಲಾದ ಕಿರಣ ಗಳಲ್ಲಿಯೂ ಶಕ್ತಿಯೇ ಇರುವುದು. ಇವುಗಳೆಲ್ಲಕ್ಕೂ ಆಧಾರವಾಗಿರುವ ಅಖಂಡ ಶಕ್ತಿಯು ವ್ಯಾಪಿಸಿದೆ. ಇದನ್ನು ಕಾಸ್ಮಿಕ್ ಯನರ್ಜಿಯೆನ್ನಬಹುದು. ಇದು ಭೌತಿಕ ಮಟ್ಟಕ್ಕಿಂತಲೂ ಮೇಲಿನದು. ಚೈತನ್ಯವೂ ಮತ್ತು ಮನಸ್ಸೂ ಜೀವಿಗಳಲ್ಲಿ ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕಂಡು ಬರುವುವು; ಗಿಡಮರಗಳಲ್ಲೂ, ನಿರ್ಜೀವವಸ್ತುವೆಂದು ಭಾವಿಸಲ್ಪಟ್ಟಿರುವ ಲೋಹ ಕಲ್ಲು ಮಣ್ಣುಗಳಲ್ಲಿಯೂ ಅಸ್ಪಷ್ಟವಾದ ಚೈತನ್ಯವೂ ಮನಸ್ಸೂ ಇವೆಯೆಂಬುದನ್ನು ಮಾನ್ಯ ಬೋಸರು ತೋರಿಸಿದ್ದಾರೆ. ಆದುದರಿಂದ ಇವುಗಳೆಲ್ಲವನ್ನೂ ಒಳಗೊಂಡ ಕಾಸ್ಮಿಕ್ ಯನರ್ಜಿಗೆ ಆಧಾರವಾಗಿ ಅದನ್ನು ನಿಯಮನಗೊಳಿಸುವ ಶಕ್ತಿ ಚೈತನ್ಯವಿರಬೇಕೆಂದಾಯಿತು. ಇದನ್ನು ಕಾಸ್ಮಿಕ್ ಮೈಂಡ್ ಎನ್ನಬಹುದು. ಇಲ್ಲಿನವರೆಗೆ ಹೇಳಿದ ಮಾತು ಇಂದಿನ ವಿಜ್ಞಾನದಿಂದ ನಿರ್ಧರಿಸಬಹುದಾದ ಮಾತು. ಇದರ ಮುಂದಿನ ಮಾತು ವೇದಾಂತದ ಸೀಮೆಗೆ ಸೇರಿದುದು. ಚಿದಚಿತ್ ಪ್ರಪಂಚಕ್ಕೆ ಭಿನ್ನವಾದ ಪರಮಾತ್ಮನಿರುವನೆಂಬುದನ್ನು ಒಪ್ಪದ ಅದ್ವೈತಿಗಳು ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಅಖಂಡ ಚೈತನ್ಯದ ಲೀಲೆಯಿಂದ ಅದರಲ್ಲಿ ಚಿದಚಿತ್ ಪ್ರಪಂಚವು ಹೊರಹೊಮ್ಮಿತೆನ್ನುವುದಕ್ಕೆ ಅಡ್ಡಿಯಿಲ್ಲ. ಹೀಗೆ ಹೇಳಿರುವುದರಲ್ಲಿ ವೇದಾಂತ ಸೀಮೆಯಲ್ಲಿ ಸೇರಿಸಿರುವ ಪರಶಿವ ಬ್ರಹ್ಮವನ್ನು ಬಿಟ್ಟರೂ ಕಾಸ್ಮಿಕ್ ಮೈಂಡ್ ಎಂದು ಹೇಳಿರುವ ಅಖಂಡ ಶಿವಶಕ್ತಿಯ ರೂಪವಾದ ಕಾಸ್ಮಿಕ್ ಯನರ್ಜಿ ಎಂದು ಕರೆದಿರುವ ಪ್ರಕೃತಿಯಿಂದ ಚಿದಚಿತ್ ಪ್ರಪಂಚವಾಗಿರುವುದರಿಂದ ಚಿದಚಿತ್ ಪ್ರಪಂಚವೆಲ್ಲವೂ ಶಕ್ತಿಯ ಪರಿಣಾಮವೆಂಬ ವೀರಶೈವ ಸಿದ್ಧಾಂತವು ಇಂದಿನ ವಿಜ್ಞಾನದಿಂದ ಸಿದ್ಧವಾಗಬಹುದಾದ ಸಿದ್ಧಾಂತವಾಗಿದೆ. ಧ್ಯಾನ ಯೋಗಾನುಗತರು ಶಕ್ತಿವಿಶಿಷ್ಟ ಶಿವನನ್ನು ನೋಡಿರುವ ಮಾತು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿದೆ. ಆದರೂ ಶಕ್ತಿಯನ್ನು ನಿಯಮನಗೊಳಿಸುವ ಶಕ್ತಿಮಾನ್ ಇರಬೇಕೆಂಬುದು ಲೌಕಿಕ ವಿಚಾರಕ್ಕೂ ನಿಲುಕುವ ಮಾತೇ ಸರಿ.

## ಪ್ರಣವಸೃಷ್ಟಿ

ಇಂದಿನ ವಿಜ್ಞಾನದಿಂದ ವೀರಶೈವರ ಸೃಷ್ಟಿ ಕಲ್ಪನೆಯು ಸಮರ್ಥನೆಗೊಳ್ಳುವುದೆಂಬು ದನ್ನು ಹೆಚ್ಚು ಸ್ಪಷ್ಟಮಾಡುವ ಮೊದಲು, ವೀರಶೈವ ಸಿದ್ಧಾಂತದಂತೆ ಹೇಗೆ ಶಕ್ತಿಯು ಪರಶಿವ ಬ್ರಹ್ಮದಿಂದ ಹೊರಹೊಮ್ಮಿ ಭೌತಿಕ ಸೃಷ್ಟಿಯಾಗಿ ಪರಿಣಮಿಸುವುದೆಂಬುದನ್ನು ವಿವರಿಸ ಬೇಕಾಗುವುದು. ವೀರಶೈವ ಸಿದ್ಧಾಂತದ ಪ್ರಕಾರ ಪರಶಿವಬ್ರಹ್ಮವು ನಾದಬಿಂದು ಕಲಾತೀತ ವಾದುದು. ಪರಶಿವಬ್ರಹ್ಮದಲ್ಲಿ ಸೃಷ್ಟಿಯ ಲೀಲೆ ತೋರಲು ನಾದ-ಬಿಂದು-ಕಲೆಗಳು ಹೊರ ಹೊಮ್ಮುವುವು. ನಾದವೆಂಬುದು ಓಂ ಓಂ ಎನ್ನುವ ಶಬ್ದರೂಪವಾದುದು. ಸೃಷ್ಟಿ-ಸ್ಥಿತಿ-ಲಯ ಕಾರಣಗಳಾದ ಅಕಾರ-ಉಕಾರ-ಮಕಾರಗಳು ಓಂಕಾರದಲ್ಲಿವೆ. ಶಿವಮಹಾಪುರಾಣದಲ್ಲಿರುವ ರುದ್ರಸಂಹಿತೆಯಲ್ಲಿಯೂ ಇದೇ ತೆರದ ಸೃಷ್ಟಿಕ್ರಮವು ಹೇಳಿದೆ.

ಓಂಕಾರವೇ ಚಿದಚಿದ್ ಪ್ರಪಂಚರೂಪವಾಗಿ ಪರಿಣಮಿಸಿದೆ—ಎಂಬ ಸಿದ್ಧಾಂತವು ಹೊಸದಲ್ಲ. ಇದನ್ನು ಉಪನಿಷತ್ತುಗಳಲ್ಲಿಯೂ ಕಾಣಬಹುದು. ಓಂಕಾರವೇ ಶಬ್ದಬ್ರಹ್ಮ,

ಅದನ್ನು ಬ್ರಹ್ಮದ ಶಬ್ದಪ್ರತೀಕವೆನ್ನುವರು. ಜಗತ್ತಿನಲ್ಲಿರುವುದೆಲ್ಲ ಅ ಉ ಮಕಾರಗಳಿಂದ ಕೂಡಿದ ಓಂಕಾರವೇ ಎಂದು ಮಾಂಡೂಕ್ಯೋಪನಿಷತ್ತಿನಲ್ಲಿ ಹೇಳಿದೆ:

> ಓಮಿತ್ಯೇದಕ್ಷರಮಿದಂ ಸರ್ವಂ, ತಸ್ಯೋಪವ್ಯಾಖ್ಯಾನಂ ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ । ಯಚ್ಚಾನ್ಯತ್ ತ್ರಿಕಾಲಾತೀತಂ ತದಪ್ಯೋಂಕಾರ ಏವ ॥ ೧ ॥
> ಸರ್ವಂ ಹ್ಯೇತದ್ ಬ್ರಹ್ಮ ॥ ೨ ॥

ಇದು ಸರ್ವವೂ ಓಂಕಾರವೆಂಬ ಅಕ್ಷರವೇ. ಇದರ ವ್ಯಾಖ್ಯಾನವೇನೆಂದರೆ—ಹಿಂದಿನದು, ಇಂದಿನದು, ಮುಂದಿನದು ಅದೇನೇನಿದೆಯೋ ಅದು ಸರ್ವವೂ, ಅಲ್ಲದೆ ತ್ರಿಕಾಲಾತೀತ ವಾದುದೂ, ಎಲ್ಲವೂ ಓಂಕಾರವೇ; ಎಲ್ಲವೂ ಪರಬ್ರಹ್ಮವೇ ಎಂದು ಮಾಂಡೂಕ್ಯೋಪನಿಷತ್ತಿನ ಪ್ರಾರಂಭದಲ್ಲಿಯೇ ಹೇಳಿದೆ. ಅದರ ಕೊನೆಯ ಖಂಡದಲ್ಲಿ "ಅಮಾತ್ರಃ, ಚತುರ್ಥಃ, ಅವ್ಯವಹಾರ್ಯಃ, ಪ್ರಪಂಚೋಪಶಮಃ, ಶಿವಃ, ಅದ್ವೈತಃ, ಏವಂ ಓಂಕಾರಃ" ಎಂದೂ ಹೇಳಿದೆ. ಆದುದರಿಂದ ಓಂಕಾರವು ಪರಶಿವಬ್ರಹ್ಮದ ವರ್ಣಪ್ರತೀಕವೆನ್ನಬಹುದು. "ಸೋಽಯಮಾತ್ಮಾಽಧ್ಯಕ್ಷರಮೋಂಕಾರೋಽಧಿಮಾತ್ರಂ ಪಾದಾ ಮಾತ್ರಾ ಅಕಾರ ಉಕಾರ ಮಕಾರ ಇತಿ." ಓಂಕಾರವು ಪರಶಿವಬ್ರಹ್ಮದ ವರ್ಣಪ್ರತೀಕವೆಂದೂ, ಅಕಾರ ಉಕಾರ ಮಕಾರಗಳಿಂದ ಕೂಡಿದುದೆಂದೂ ಈ ಉಪನಿಷತ್ತು ಹೇಳುತ್ತದೆ. ಪರಶಿವಬ್ರಹ್ಮ ದಿಂದ ಹೊರಹೊಮ್ಮುವ ನಾದಬಿಂದು ಕಲೆಗಳಿಗೂ ಈ ಓಂಕಾರದ ಅ, ಉ, ಮ ಅಕ್ಷರ ಗಳಿಗೂ ಸಂಬಂಧವನ್ನು ಕರಣಹಸಿಗೆಯಲ್ಲಿ ಹೀಗೆ ಹೇಳಿದೆ:

> ಅಕಾರಪ್ರಣವವೇ ಚಿನ್ನಾದ ಸ್ವರೂಪವಾಗಿಪ್ಪುದು; ಆ ಚಿನ್ನಾದವು ತಾನೆಂತಾದ್ದೆಂದರೆ— 'ಯಥಾ ದೀರ್ಘಘಂಟಾನಿನಾದವತ್' ಎಂದು ಹೇಳುತ್ತಿಹುದಾದಕಾರಣ····ಪಂಚಲೋಹದ ಮಣಿವಿನ ತೂಕದ ಭಾರಿ ಘಂಟೆಯ ನಾಲಗೆಯನ್ನು ಹಿಡಿದು ಜಡಿದು ತೂಗಿಬಿಟ್ಟಲ್ಲಿ ಅದು ಹ್ಯಾಗೆ ಓಂ, ಓಂ, ಓಂ ಎಂದು ಘೋಷಿಸುತ್ತಿಹುದೋ ಅಂತಪ್ಪುದೊಂದು ಸುನಾದಘೋಷವುಳ್ಳದ್ದೇ ಅಕಾರಪ್ರಣವವೆಂಬುದೀಗ ಅಕಾರವೇ ನಾದವು. ಉಕಾರಪ್ರಣವವೇ ಚಿದ್ಬಿಂದು ಸ್ವರೂಪ ವಾಗಿಪ್ಪುದು; ಆ ಚಿದ್ಬಿಂದು ತಾನೆಂತಾದ್ದೆಂದೊಡೆ—'ಯಥಾ ಸುವರ್ಣತೈಲ ಧಾರವತ್' ಎಂದು ಹೇಳುತ್ತಿಹುದಾದ ಕಾರಣ····ಪ್ರಾತಃಕಾಲದಲ್ಲಿ ಸೂರ್ಯನ ಕಿರಣ, ಸುವರ್ಣದ ಪ್ರಕಾಶ, ತೈಲದ ರಂಗು—ಈ ತ್ರಿವಿಧವೂ ಕೂಡಿ ಜ್ವಲತ್ ಸ್ತಂಭಾಯಮಾನವಾಗಿ ಬೆಳಗು ತ್ತಿಹುದೋ, ಅಂತಪ್ಪುದೊಂದು ಚಿದ್ಬಿಂದು ಪ್ರಕಾಶವನ್ನುಳ್ಳದ್ದೇ ಉಕಾರಪ್ರಣವ. ಮಕಾರ ಪ್ರಣವವೇ ಚಿತ್ಕಳಾ ಸ್ವರೂಪವಾಗಿರುತ್ತಿಹುದು. ಆ ಚಿತ್ಕಳೆಯೆಂಬುದು ತಾನೆಂತಾದ್ದೆಂದೊಡೆ— 'ಯಥಾ ಅರುಣ ಪ್ರಕಾಶವತ್' ಎಂದು ಹೇಳುತ್ತಿಹುದಾದ ಕಾರಣ ಒಂದಾನೊಂದು ಮಧ್ಯಾಹ್ನ ಕಾಲದ ಚಂಡಸೂರ್ಯಕೋಟಿಗಳ ಪ್ರಕಾಶವನ್ನು ಕೀಳ್ಪಡಿಸಿ ಬೆಳಗಲ್ಪಟ್ಟ ಮಹಾ ಪ್ರಕಾಶವನ್ನುಳ್ಳದ್ದೇ ಮಕಾರಪ್ರಣವ."

"ಜನ್ಯವಾಗುವಂತಹ ಸಮಸ್ತಕ್ಕೆಯುಂ ಇಂಬಾದ ನಾದ ಉದಯಿಸುವುದಕ್ಕೆ ನಿರವ ಯವದಲ್ಲಿ ಒಂದೂ ಸಾಧನೆಯಿಲ್ಲದೆ ತನ್ನಿಂದ ತಾನೇ ಉಂಟಾದ ಲೀಲೆಯೊಂದುಂಟು···· ಅದರಲ್ಲಿ ತೋರಿದ ಲೀಲೆಯೇ ನೆನಹು; ಅದೇ ಅದುರು. ಆದುರಿದ ಮಾತ್ರದಿಂ ಅತಿ ಸೂಕ್ಷ್ಮ ನಾದಘೋಷವುಂಟಾಗುವುದು····ಲೀಲೆ ಜಗತ್ಸೃಷ್ಟಿ ಕಾರಣ" ಎಂದು ಕರಣ ಹಸಿಗೆಯಲ್ಲಿಯೇ ಹೇಳಿದುದನ್ನು ಮೇಲೆ ಹೇಳಿದುದರೊಡನೆ ಓದಿ, ಗ್ರಹಿಸಿ, ಮನನಮಾಡಿ ಕೊಂಡರೆ, ವೀರಶೈವ ಸಿದ್ಧಾಂತದಂತೆ ಸೃಷ್ಟಿ ಲೀಲಾವೈಭವವು ಕಣ್ಣಮುಂದೆ ಮಿಂಚಿದಂತಾಗು ತ್ತದೆ.—ಪ್ರಶಾಂತ ವಾತಾವರಣ, ಇದ್ದಕ್ಕಿದ್ದಂತೆಯೇ ಸೃಷ್ಟಿವೈಭವದ ನೆನಹು 'ಅದೇ ಅದುರು'

(Vibration). ಆದುರಿದ ಮಾತ್ರದಿಂದ ಅತಿ ಸೂಕ್ಷ್ಮ ನಾದಘೋಷ,—ಯಥಾ ದೀರ್ಘಘಂಟಾ ನಿನಾದವತ್; ಹಾಗೆಯೇ ಬೆಳಗಿನ ಬೆಳಗು—ಯಥಾ ಸುವರ್ಣತೈಲ ಧಾರವತ್; ಹಾಗೆಯೇ ಮಧ್ಯಾಹ್ನ ಚಂಡಸೂರ್ಯ ಪ್ರಕಾಶದ ಉಷ್ಣ. ಆದುರುವುದು, ಶಬ್ದ, ಬೆಳಗು, ಬಿಸಿ ಇವೆಲ್ಲವೂ ಶಕ್ತಿಯ ವಿವಿಧ ರೂಪಗಳೆಂಬುದು ಭೌತಿಕಶಾಸ್ತ್ರವನ್ನೋದುವ ಇಂದಿನ ವಿದ್ಯಾರ್ಥಿಗೂ ತಿಳಿದ ವಿಷಯ. ಹಾಗೆಯೇ ಇವು ಒಂದರಿಂದ ಒಂದು ಆಗುವುವೆಂಬುದನ್ನೂ ಭೌತಿಕಶಾಸ್ತ್ರದ ವಿದ್ಯಾರ್ಥಿಯು ಬಲ್ಲನು. ಇಂತಹ ಆದುರುವಿಕೆ, ಶಬ್ದ, ಬೆಳಗು, ಬಿಸಿ, ಇವುಗಳಿಂದ ಪ್ರಾರಂಭ ವಾಗುವುದು ಸೃಷ್ಟಿ.

## ಶಕ್ತಿವಿಶಿಷ್ಟ ಶಿವನಿಂದ ಜಗತ್ತು ಸೃಷ್ಟಿಯಾಗುವುದು ವಿಜ್ಞಾನದ ಒರೆಗೆ ಸಿಗುವುದು

ಜಗತ್ಕಾರಣವಾದ ಪರಬ್ರಹ್ಮವೇನೆಂಬುದನ್ನು ತಿಳಿಯಲು ತೈತ್ತರೀಯ ಉಪನಿಷತ್ತು ಕೆಲವು ವಿವರಣೆಗಳನ್ನು ಕೊಟ್ಟಿದೆ. ಆ ವಿವರಣೆಗಳನ್ನು ಈ ಮಂತ್ರದಿಂದ ತಿಳಿಯಬಹುದು:

> ಯತೋವಾ ಇಮಾನಿ ಭೂತಾನಿ ಜಾಯಂತೇ। ಯೇನ ಜಾತಾನಿ ಜೀವಂತಿ। ಯತ್ ಪ್ರಯಂತ್ಯಭಿಸಂವಿಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ ॥ (ತೈ. ೩-೧)

ಯಾವುದರಿಂದ ಈ ಭೂತಗಳು ಹುಟ್ಟಿದವೋ, ಹುಟ್ಟಿದ ಮೇಲೆ ಯಾವುದರ ಬಲದಿಂದ ಅವು ಜೀವಿಸುವುವೋ ಮತ್ತು ಯಾವುದರ ಕಡೆಗೆ ಸಾಗಿ ಕೊನೆಗೆ ಯಾವುದರಲ್ಲಿ ಅವು ಲಯ ಹೊಂದುವವೋ ಅದೇ ಬ್ರಹ್ಮವೆಂಬುದು ಈ ಮಂತ್ರದ ಅಭಿಪ್ರಾಯ. ಇಂದಿನ ವಿಜ್ಞಾನ ಶಾಸ್ತ್ರದ ರೀತಿಯಲ್ಲಿ ಈ ವಿವರಗಳ ದೃಷ್ಟಿಯಿಂದ ಯಾವುದು ಅಂತಹ ಬ್ರಹ್ಮವೆಂಬುದನ್ನು ನೋಡುವ. ಯಾವುದಾದರೊಂದು ಪದಾರ್ಥವನ್ನು ತೆಗೆದುಕೊಂಡರೂ ಸಾಧಾರಣವಾಗಿ ಅದರಲ್ಲಿ ಜಲವಿದ್ದೇ ಇರುವುದು. ಆ ಜಲವನ್ನು ಪರೀಕ್ಷೆಗೆ ಒಳಗುಮಾಡುವ.—ಸ್ವಲ್ಪ ಜಲವನ್ನು ವಿದ್ಯುಚ್ಛಕ್ತಿಯಿಂದ ವಿಭಾಗಮಾಡಿದರೆ ಆ ಜಲವೇ ಇಲ್ಲದಂತಾಗಿ ಆಮ್ಲಜನಕವೂ ಜಲಜನಕವೂ ಹೊರಹೊಮ್ಮುವುವು. ಆಮ್ಲಜನಕವನ್ನೋ ಜಲಜನಕವನ್ನೋ ವಿಭಜಿಸಿದರೆ ಅವುಗಳ ಅಣು ಗಳು (Elements) ಆಗುವುವು. ಆ ಅಣುಗಳನ್ನು ವಿಭಜಿಸಿದರೆ ಪರಮಾಣುಗಳು (Atoms) ಆಗುವುವು. ಆ ಪರಮಾಣುಗಳನ್ನು ವಿಭಜಿಸಿದರೆ ಹೈಡ್ರೋಜನ್ ಬಾಂಬು ಸಿಡಿದಾಗ ಆಗುವ ಅದ್ಭುತ ಶಬ್ದವೂ, ಪ್ರಕಾಶವೂ, ಬಿಸಿಯೂ ಹೊರಹೊಮ್ಮುವುದು. ಪೃಥ್ವಿಯಲ್ಲಿರುವ ಯಾವ ಭೂತವನ್ನು ವಿಭಜಿಸಿದರೂ ಇದೇ ರೀತಿಯ ಅನಂತ ಶಕ್ತಿಯು ಹೊರಹೊಮ್ಮುವುದು. ಜಲಜನಕ ವನ್ನೂ ಆಮ್ಲಜನಕವನ್ನೂ ಹಿಂದೆ ಅವು ಜಲದಲ್ಲಿದ್ದ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯಿಂದ ಕೂಡಿಸಿದರೆ ಜಲವಾಗುವುದಷ್ಟೆ. ಹಾಗೆಯೇ ಶಕ್ತಿಯಿಂದ ಹೈಡ್ರೋಜನ್ ಮತ್ತು ಜಲಜನಕದ ಅಣುಗಳೂ ಅವುಗಳಿಂದ ಪರಮಾಣುಗಳೂ ಅವುಗಳಿಂದ ಭೂತಗಳೂ ಉತ್ಪತ್ತಿಯಾಗುವು ವೆಂಬುದು ಸ್ಪಷ್ಟ. ಮೇಲೆ ಹೇಳಿದ ತೈತ್ತರೀಯ ಶ್ರುತಿಯನ್ನು ಅನ್ವಯಿಸಿದರೆ—ಶಕ್ತಿಯಿಂದಲೇ ಎಲ್ಲ ಭೂತಗಳು ಹುಟ್ಟಿದವು, ಅವುಗಳಲ್ಲಿ ಶಕ್ತಿಯು ಅಡಗಿರುವುದರಿಂದಲೇ ಅವು ಉಳಿದು ಕೊಂಡಿರುವುವು, ಕಡೆಗೆ ಅವು ಶಕ್ತಿಯ ಕಡೆಗೆ ಸಾಗಿ ಶಕ್ತಿಯಲ್ಲಿ ಅಡಗುವವು ಎಂದು ಹೇಳು ವುದು ಸರಿಯಾಗುವುದು. ಈ ದೃಷ್ಟಿಯಿಂದ ಶಕ್ತಿಯೇ ಪರಬ್ರಹ್ಮವೆಂಬುದನ್ನು ತೈತ್ತರೀಯ ಶ್ರುತಿಯ ಒರೆಗೆ ಹಚ್ಚುವುದರಿಂದ ಆಗುವ ನಿರ್ಧಾರ. ಇದರಿಂದ ಶಕ್ತಿಯೇ ಪರಬ್ರಹ್ಮವೆನ್ನುವ ಶಾಕ್ತಮತದ ನಿಲುವು ವಿಜ್ಞಾನದ ಒರೆಗೆ ಸಿಕ್ಕಿದಂತಾಯಿತು. ಆದರೆ ಶಕ್ತಿಯೆಂದಮೇಲೆ

ಶಕ್ತಿವಂತನೊಬ್ಬನಿರಬೇಕಷ್ಟೆ. ಆ ಶಕ್ತಿವಿಶಿಷ್ಟನೇ ಶಿವನೆಂಬುದು ವೀರಶೈವ ಸಿದ್ಧಾಂತ. ಹೀಗೆ ವೀರಶೈವ ಸಿದ್ಧಾಂತವು ವಿಜ್ಞಾನಶಾಸ್ತ್ರದ ಒರೆಗೆ ಸಿಗುವುದು. ಎಲ್ಲವೂ ಶಕ್ತಿಯ ಪರಿಣಾಮವೇ.

ಮನಸ್ತ್ವಂ ವ್ಯೋಮ ತ್ವಂ ಮರುದಸಿ ಮರುತ್ ಸಾರಥಿರಸಿ
ತ್ವಮಾಪಸ್ತ್ವಂ ಭೂಮಿಸ್ತ್ವಯಿ ಪರಿಣತಾಯಾಂ ನ ಹಿ ಪರಂ
ತ್ವಮೇವ ಸ್ವಾತ್ಮಾನಂ ಪರಿಣಮಯಿತುಂ ವಿಶ್ವವಪುಷಾ
ಚಿದಾನಂದಾಕಾರಂ ಶಿವಯುವತಿಭಾವೇನ ಬಿಭೃಷೇ

ಎಂಬುದು ಶ್ರೀ ಶಂಕರಾಚಾರ್ಯರು ಆನಂದಲಹರಿಯಲ್ಲಿ ಹೇಳಿದ ಪರಿಣಾಮ ವಾದ.

ತ್ರಿಪುರಾಪರಮಾಶಕ್ತಿರಾದ್ಯಾ ಭೂತಾ ಮಹೇಶ್ವರೀ
ಸ್ಥೂಲ ಸೂಕ್ಷ್ಮ ವಿಭಾಗೇನ ತ್ರೈಲೋಕ್ಯೋತ್ಪತ್ತಿ ಮಾತೃಕಾ
ಕಬಲೀಕೃತನಿಶ್ಶೇಷ ತತ್ವಗ್ರಾಮಸ್ವರೂಪಿಣೀ
ಯಸ್ಯಾಂ ಪರಿಣತಾಯಾಂ ತು ನ ಕಿಂಚಿದ್‌ಪರಿಶಿಷ್ಯತೇ

ಎಂದು ಚತುಶ್ಶತಿಯಲ್ಲಿ ಹೇಳಿದೆ. ಪಂಚಭೂತಗಳು, ಮನಸ್ಸೇ ಮೊದಲಾದ ಅಂತಃಕರಣ ಗಳು ಎಲ್ಲವೂ ಪರಶಿವಶಕ್ತಿಸ್ವರೂಪವೇ ಆಗಿರುವುವಲ್ಲದೆ, ಅವು ಆ ಶಕ್ತಿಯಲ್ಲಿಯೇ ಹುಟ್ಟಿ ಆ ಶಕ್ತಿಯಲ್ಲಿಯೇ ಲಯವಾಗುವುವೆಂಬುದು ಈ ಶ್ಲೋಕಗಳ ಭಾವ. ಹೀಗೆ, ಪ್ರಪಂಚವೆಲ್ಲವೂ ಶಕ್ತಿಯ ಪರಿಣಾಮವೆಂಬ ವೀರಶೈವರ ನಿಲುವು ಇಂದಿನ ವಿಜ್ಞಾನಾನುಸಾರವಾಗಿದೆ. ಪ್ರಲಯ ದಲ್ಲಿ ಪ್ರಪಂಚವೆಲ್ಲವೂ ಕ್ಷೋಭೆಗೊಂಡು ವಿಭಜಿಸಿ ಶಕ್ತಿರೂಪವಾದರೆ ಸೃಷ್ಟಿಯಲ್ಲಿ ಶಕ್ತಿಯು ಪ್ರಪಂಚರೂಪವಾಗಿ ಮತ್ತೆ ರೂಪುಗೊಳ್ಳುವುದು.

## ಪ್ರಲಯತಾಂಡವ ನರ್ತನ

ಪ್ರಲಯವಿಕ್ಷೋಭಕಲ್ಪನೆಯೇ ಪ್ರಲಯತಾಂಡವ ನರ್ತನದಲ್ಲಿದೆ:

ಮಹೀಪಾದಾಘಾತಾದ್ ವ್ರಜತಿ ಸಹಸಾ ಸಂಶಯಪದಂ
ಪದಂ ವಿಷ್ಣೋರ್ಭ್ರಾಮ್ಯದ್ ಭುಜಪರಿಘರುಗ್ಣ ಗ್ರಹಗಣಃ
ಮುಹುರ್ದ್ಯೌರ್ದೌಸ್ಥ್ಯಂ ಯಾತ್ಯನಿಭೃತ ಜಟಾತಾಡಿತ ತಟಾ
ಜಗದ್ ರಕ್ಷಾಯೈತ್ವಂ ನಟಸಿ ನನು ವಾಮೈವ ವಿಭುತಾ

ತಾಂಡವ ನಟನಕಾಲದಲ್ಲಿ ನಟರಾಜನ ಪದಾಘಾತದಿಂದ ಅಳಿವು ಉಳಿವುಗಳ ಸಂಶಯ ವುಂಟಾಗಿ ಭೂಮಿ ಅಲ್ಲಾಡಿಹೋಯಿತಂತೆ; ಭುಜಪರಿಘಾಘಾತ ಗ್ರಹಗಣಗಳು ಆಕಾಶದಲ್ಲಿ ಪರಿಭ್ರಮಣಕ್ಕೊಳಗಾದುವಂತೆ. ಜಡೆಗಳ ತಾಡನದಿಂದ ಸ್ವರ್ಗವು ಮತ್ತೆ ಮತ್ತೆ ಅವಹೇಳನ ಕ್ಕೊಳಗಾಯಿತಂತೆ. ಜಗದ್‌ರಕ್ಷಣಾರ್ಥವಾದ ನಟನದಲ್ಲಿ ಆದುದು ಹೀಗೆ, ಎಂದಮೇಲೆ ಪ್ರಳಯ ತಾಂಡವ ನಟನದಲ್ಲಾಗುವ ಕ್ಷೋಭೆಯು ಅವರ್ಣನೀಯವಲ್ಲವೆ!

ಪ್ರಳಯಕಾಲದ ರುದ್ರತಾಂಡವವಾರಂಭವಾಯಿತೆನ್ನುವ. ಆಗ ಆಗುವ ಅದುರುವಿಕೆ (Vibration) ಜಗತ್ತನ್ನು ಧೂಳೀಕರಣ ಮಾಡಲು. "ಲೋಕಾವಿಕಲಂ......ಹರಂ ಸಂಕ್ಷುಭ್ಯೇಸಂ ಭಜತಿ ಭಸಿತೋದ್ಧೂಲನ ವಿಧಿಂ" ಎಂದು ಆನಂದಲಹರಿಯಲ್ಲಿ ಹೇಳಿ ದಂತಾಗುವುದು. "ತಪನಶಶಿಕೋಟಿ ದ್ಯುತಿಧರಂ ಶಂಭುಂ" ಎಂದು ವರ್ಣಿಸಲ್ಪಟ್ಟ ಹರನು "ಯದಾ ಲೋಕೇ ಲೋಕಾನ್ ದಹತಿ ಮಹತಿ ಕ್ರೋಧ ಕಲಿತೇ" ಎಂಬಂತೆ ಕ್ರೋಧಾಗ್ನಿಯಿಂದ ಲೋಕವನ್ನು ಸುಡುತ್ತಿರಲಾಗಿ "ತಟಿಲ್ಲೇಖಾತನ್ವೀಂ" ಎಂದು

ವರ್ಣಿಸಲ್ಪಟ್ಟಿರುವ ಪರಶಿವ ಶಕ್ತಿಯಿಂದ ವಿದ್ಯುಚ್ಛಕ್ತಿಯು ಮಿಂಚಿನ ರೂಪದಲ್ಲಿ ಹೊರಹೊಮ್ಮುವುದು. ಕರಣಹಸಿಗೆಯಲ್ಲಿ ಹೇಳಿದಂತೆ ಮಕಾರಪ್ರಣವರೂಪ ಚಿಕ್ಕಳೆಯು "**ಮಧ್ಯಾಹ್ನ ಕಾಲದ ಚಂಡಸೂರ್ಯಕೋಟಿ ಪ್ರಕಾಶವುಂಟಾಗಿ**" ಅಣುಗಳು ಸಿಡಿದು ಪರಮಾಣುಗಳಾಗಿ, ಅವು ಸರಗೊಳಿಸಿದ ಅಣುಬಾಂಬು ಸಿಡಿದಂತೆ (Chain reaction) ಸಿಡಿದು ಎಲ್ಲವೂ ಶಕ್ತಿರೂಪವಾಗಿ ಪರಿಣಮಿಸುವುದು. ಆಗ ಶ್ರೀ ಶಂಕರಾಚಾರ್ಯರ ಆನಂದಲಹರಿಯಲ್ಲಿ ಹೇಳಿದಂತೆ:

ವಿರಂಚಿಃ ಪಂಚತ್ವಂ ವ್ರಜತಿ ಹರಿರಾಪ್ನೋತಿ ವಿರತಿಂ
ವಿನಾಶಂ ಕೀನಾಶೋ ಭಜತಿ ಧನದೋ ಯಾತಿ ನಿಧನಂ
ವಿತಂದ್ರೀ ಮಾಹೇಂದ್ರೀ ವಿತತಿರಪಿ ಸಂಮೀಲಿತ ದೃಶಾ
ಮಹಾಸಂಹಾರೇಽಸ್ಮಿನ್ ವಿಹರತಿ ಸತಿ ತ್ವತ್ಪತಿರಸೌ

ಈ ಮಹಾ ಸಂಹಾರದಲ್ಲಿ ತ್ರಿಗುಣಜನಿತರಾದ ತ್ರಿಮೂರ್ತಿಗಳೂ, ಯಮ ಕುಬೇರ ಮಾಹೇಂದ್ರಾದಿ ದೇವತೆಗಳೂ ಸಹಾ ನಾಶವಾಗಿ ಶಿವಶಕ್ತಿಯರು ಮಾತ್ರವೇ ವಿಹರಿಸುವರು. ಕಡೆಗೆ ಪ್ರಶಾಂತ ವಾತಾವರಣವುಂಟಾಗಿ "**ಯಥಾ ಸುವರ್ಣತೈಲ ಧಾರವತ್ .... ಜ್ವಲತ್ ಸ್ತಂಭಾಯಮಾನವಾಗಿ ಬೆಳಗುತ್ತಿಹುದು**" ಮಹಾಲಿಂಗದ ಉಕಾರ ಪ್ರಣವರೂಪದ ಚಿದ್ಬಿಂದುವು; ಅಕಾರ ಪ್ರಣವರೂಪವಾದ ನಾದವು "**ಯಥಾ ಘಂಟಾ ನಿನಾದವತ್**" ಓಂ, ಓಂ, ಓಂ ಎಂದು ಸುನಾದಘೋಷದಿಂದ ಘೋಷಿಸುತ್ತಿರುವುದು. ಆ ಪ್ರಶಾಂತ ವಾತಾವರಣದಲ್ಲಿ ಸ್ಮರಣೆ ಸೂಕ್ಷ್ಮವಾಗುತ್ತಿರಲು, ಅದುರು (Vibration) ಅಡಗುತ್ತಿರಲು ಉಲುಹು (Sound) ಉಡುಗುತ್ತಿರಲು ಓಂಕಾರಪ್ರತೀಕವಾದ ಮಹಾಲಿಂಗವು ನಿಷ್ಕಲ ಬ್ರಹ್ಮವಾಗಿ, ನಿಷ್ಕಲಬ್ರಹ್ಮವು ಶೂನ್ಯಲಿಂಗವಾಗಿ, ಶೂನ್ಯಲಿಂಗವು ನಿರಂಜನಬ್ರಹ್ಮವಾಗಿ, ನಿರಂಜನಬ್ರಹ್ಮವು ನಿರವಯಲಿಂಗವಾಗಿ ನಾದಬಿಂದು ಕಲಾತೀತವಾಗಿ ನಿಶ್ಶಬ್ದವಾಗಿ ಶಕ್ತಿಯೆಲ್ಲ ಪರಶಿವಬ್ರಹ್ಮದಲ್ಲಿ ಅಡಗಿ ಸಚ್ಚಿದಾನಂದಸ್ವರೂಪವು ತಾನೇತಾನಾಗಿರುವುದು.

## ಸೃಷ್ಟಿವೈಭವ ದರ್ಶನ

ಇನ್ನು ಸೃಷ್ಟಿವೈಭವವನ್ನು ನೋಡುವ. ವಾಯವೀಯಸಂಹಿತೆಯಲ್ಲಿ ಹೇಳಿದಂತೆ:

ಅನುಲೋಮ್ಯಾತ್ ತಥೈತೇಷಾಂ ಪ್ರಾತಿಲೋಮ್ಯೇನ ಸಂಹೃತಿಃ

ಅನುಲೋಮಕ್ರಮದಿಂದ ಸೃಷ್ಟಿಯಾದರೆ ಪ್ರತಿಲೋಮಕ್ರಮದಿಂದ ಪ್ರಲಯವಾಗುವುದು. ಪ್ರಲಯದ ತಿರುವುಮುರುವು ಸೃಷ್ಟಿಯೆಂದಾಯಿತು. ವಾಯವೀಯಸಂಹಿತೆಯಲ್ಲಿಯೇ ಹೇಳಿದಂತೆ:

ಅಹರಂತೇ ಪ್ರಲೀಯಂತೇ ರಾತ್ರ್ಯಂತೇ ವಿಶ್ವಸಂಭವಃ

ಎಂದರೆ ಪರಮೇಶ್ವರನ ಹಗಲಿನ ಅಂತ್ಯವೇ ಪ್ರಲಯ; ಅವನ ರಾತ್ರಿಯ ಅಂತ್ಯವೇ ಸೃಷ್ಟಿ. ಪರಮೇಶ್ವರನ ರಾತ್ರಿ ಮುಗಿದು ಅರುಣೋದಯವೇ ಸೃಷ್ಟಿ.

ನಾದಬಿಂದು ಕಲಾತೀತವಾಗಿ ನಿಶ್ಶಬ್ದವಾಗಿ ಶಕ್ತಿಯೆಲ್ಲ ಪರಶಿವಬ್ರಹ್ಮದಲ್ಲಿ ಅಡಗಿ ಸಚ್ಚಿದಾನಂದ ಸ್ವರೂಪವಾದ ನಿರವಯವ ಲಿಂಗವು ತಾನು ತಾನೆಯಾಗಿರುವುದು ಸೃಷ್ಟಿಗೆ ಮೊದಲು. ಈ ನಿರವಯವ ಲಿಂಗದಲ್ಲಿ ಸೃಷ್ಟಿಲೀಲಾವೈಭವವು ತೋರುವುದು. "ಅದರಲ್ಲಿ ತೋರಿದ ಲೀಲೆಯೇ ನೆನಹು; ಅದೇ ಅದುರು; ಅದುರಿದ ಮಾತ್ರದಲ್ಲಿ ಅತಿ ಸೂಕ್ಷ್ಮ ನಾದಘೋಷ

ವುಂಟಾಗುವುದು.'' ಇದೇ ಆಕಾರ ಪ್ರಣವರೂಪವಾದ ಚಿನ್ನಾದ. "ಆ ಚಿನ್ನಾದವು ತಾನೆಂತಾದ್ದೆಂದರೆ—**ಯಥಾ ದೀರ್ಘಘಂಟಾ ನಿನಾದವತ್**—ಎಂದು ಹೇಳುತ್ತಿಹುದಾದ ಕಾರಣ ಒಂದಾನೊಂದು ಘಟಕಸ್ಥಾನದಲ್ಲಿ ಕಟ್ಟಿರ್ದ ಪಂಚಲೋಹದ ಮಣವಿನತೂಕದ ಭಾರಿ ಘಂಟೆಯ ನಾಲಗೆಯನ್ನು ಹಿಡಿದು ಜಡಿದು ತೂಗಿಬಿಟ್ಟಲ್ಲಿ ಅದು ಹ್ಯಾಂಗೋಹಾಂಗೆ ಓಂ, ಓಂ, ಓಂ ಎಂದು ಘೋಷಿಸುತ್ತಿಹುದು.'' ಇನ್ನು ಸೃಷ್ಟಿಯ ಅರುಣೋದಯವಾಗಿ ಉಕಾರ ಪ್ರಣವ ಚಿದ್ಬಿಂದುವು ಹೊರಹೊಮ್ಮುವುದು. "ಈ ಚಿದ್ಬಿಂದುವೆಂಬುದು ತಾನೆಂಥಾದ್ದೆಂದೊಡೆ—**ಯಥಾ ಸುವರ್ಣ ತೈಲಧಾರವತ್**—ಎಂದು ಹೇಳುತ್ತಿಹುದಾದಕಾರಣ, ಒಬ್ಬಾಳೊಬ್ಬ ರಾಜಸ್ತ್ರೀಯಳು ನವರತ್ನ ಖಚಿತವಾದ ಸುವರ್ಣದ ಗಿಂಡಿಯಲ್ಲಿ ಕಮ್ಮೆಣ್ಣೆಯಂ ತುಂಬಿಕೊಂಡು ಏಳುನೆಲೆಯ ಚಿನ್ನ ದುಪ್ಪರಿಗೆಯ ಲೋವೆಯ ಮೇಲೆ ನಿಂದು ಪ್ರಾತಃಕಾಲದಲ್ಲಿ ಕೆಳಕ್ಕೆ ಧಾರೆಗಟ್ಟಿ ಎರೆಯಲು ಸೂರ್ಯನ ಕಿರಣ, ಸುವರ್ಣದ ಪ್ರಕಾಶ, ತೈಲದ ರಂಗು ಈ ತ್ರಿವಿಧವೂ ಕೂಡಿ ಜ್ವಲತ್ ಸ್ತಂಭಾಯಮಾನವಾಗಿ ಝುಗಝುಗಿಸಿ ಬೆಳಗುತ್ತಿಹುದು.''* ಸೃಷ್ಟಿಯ ಈ ಬೆಳಗಿನನಂತರ ಮಕಾರಪ್ರಣವರೂಪವಾದ ಚಿತ್ಕಳೆಯು ಹೊರಹೊಮ್ಮುವುದು. ಈ "ಚಿತ್ಕಳೆಯೆಂಬುದು ತಾನೆಂಥಾದ್ದೆಂದೊಡೆ—**ಯಥಾ ಅರುಣಪ್ರಕಾಶವತ್**—ಎಂದು ಹೇಳುತ್ತಿಹುದಾದ ಕಾರಣ ಮಧ್ಯಾಹ್ನ ಕಾಲದ ಚಂಡ ಸೂರ್ಯಕೋಟಿಗಳ ಪ್ರಕಾಶವನ್ನು ಕೀಳ್ಪಡಿಸಿ ಬೆಳಗಲ್ಪಟ್ಟ ಮಹಾ ಪ್ರಕಾಶವುಳ್ಳದ್ದು.'' ಒಬ್ಬ ಸೂರ್ಯನ ಮಧ್ಯಾಹ್ನದ ಬಿಸಿಯು ಸಾಮಾನ್ಯ; ಆದರೆ ಅಂತಹ ಕೋಟಿ ಸೂರ್ಯರ ಪ್ರಕಾಶಕ್ಕೂ ಮಿಗಿಲಾದುದರಿಂದ ಆಗುವ ಬಿಸಿಯು ಅಸಾಧ್ಯವಾದುದು. ಇದರಿಂದ ಶಕ್ತಿಯು ಪಂಚಸಾದಾಖ್ಯ ಪಂಚಕಲಾದಿ ರೂಪಗಳಲ್ಲಿ ಹೊರಹೊಮ್ಮಿ ಪಂಚಭೂತಗಳಾಗಿ ಪಂಚೀಕರಣದಿಂದ ತತ್ವೋದಯವಾಗಿ ಸೃಷ್ಟಿಯು ಹೊರಹೊಮ್ಮುವುದು.

ಶಿವಮಹಾಪುರಾಣದಲ್ಲಿನ ವಾಯವೀಯಸಂಹಿತೆಯ ಉತ್ತರಭಾಗದಲ್ಲಿ ಹೀಗೆ ಹೇಳಿದೆ:

ಶಿವೇಚ್ಛಯಾ ಪರಾಶಕ್ತಿಃ ಶಿವತತ್ವೈಕತಾಂ ಗತಾ ।
ತತಃ ಪರಿಸ್ಫುರತ್ಯಾದೌ ಸರ್ವೇ ತೈಲಂ ತಿಲಾದಿವ ॥ ೪–೧೮ ॥

ತತಃ ಕ್ರಿಯಾಖ್ಯಯಾ ಶಕ್ತ್ಯಾ ಶಕ್ತೌ ಶಕ್ತಿಮದುತ್ಥಯಾ ।
ತಸ್ಯಾಂ ವಿಕ್ಷೋಭ್ಯಮಾಣಾಯಾಮಾದೌ ನಾದಃ ಸಮುದ್ಭಭೌ ॥ ೪–೧೯ ॥

ಪರಶಿವಾಭಿನ್ನವಾದ ಶಕ್ತಿಯು ಪರಶಿವಬ್ರಹ್ಮದಿಂದ ಹೊರಹೊಮ್ಮಿ ಪ್ರಕಾಶಗೊಳ್ಳುವುದು. ಆ ಶಕ್ತಿಯಿಂದ ನಾದವು ಹೊರಹೊಮ್ಮುವುದು. ರುದ್ರಸಂಹಿತೆಯ ಸೃಷ್ಟಿಖಂಡದ ಅಷ್ಟಮೋಧ್ಯಾಯದಲ್ಲಿ ಹೇಳಿದಂತೆ '**ನಾದೋವ್ಯೈ ಶಬ್ದಲಕ್ಷಣಃ ಓಮೋಮಿತಿ...... ಸುವ್ಯಕ್ತಃ ಪ್ಲುತಲಕ್ಷಣಃ.**' ನಾದವೆಂದರೆ ಓಂ ಓಂ ಎಂದುಲಿವ ದೀರ್ಘವಾದ ಸುವ್ಯಕ್ತ ಶಬ್ದಧ್ವನಿಯು. "**ನಾದಾದ್ ವಿನಿಃಸೃತೋ ಬಿಂದುಃ; ಬಿಂದೋರ್ದೇವಸ್ಸದಾಶಿವಃ**'' ಎಂದು ಹೇಳುತ್ತ ವಾಯವೀಯಸಂಹಿತೆಯು ಮುಂದುವರಿಯುವುದು; ನಾದದಿಂದ ಬಿಂದುವು ಹೊರಹೊಮ್ಮುವುದು, ಬಿಂದುವಿನಿಂದ ಸದಾಶಿವತತ್ತ್ವವು ಹೊರಹೊಮ್ಮುವುದು ಎಂದು ಅರ್ಥ. ಬಿಂದುವೆಂಬುದು ಸತ್ ಎನಿಸಿಕೊಳ್ಳುವ ಜಗತ್ತಿನ ಮೂಲರೂಪಕ್ಕೆ ಮೂಲವಾಗಿ ಸ್ಫುಟಗೊಳ್ಳು

---

* ಸೃಷ್ಟಿಯ ಅರುಣೋದಯದ ಈ ತೆರದ ಅನುಭವವನ್ನು ಚರ್ಮಚಕ್ಷುವಿನಿಂದ ಸ್ವಲ್ಪಮಟ್ಟಿಗಾದರೂ ನೋಡಬೇಕೆನ್ನುವವರು ಡಾರ್ಜಿಲಿಂಗ್ ಬಳಿ ಇರುವ ಟೈಗರ್‌ಹಿಲ್ ಮೇಲೆ ಬೆಳಗಿನ ಝಾಮುದಲ್ಲಿ ನಿಂತು ಅಧಃಪಾತಾಳದಿಂದ ಪೂರ್ವ ದಿಙ್ಮಂಡಲದಲ್ಲಿ ಹೊರಹೊಮ್ಮುವ ಮನೋಹರವಾದ ಸುವರ್ಣ ವರ್ಣದ ವಿವಿಧ ರೂಪಗಳನ್ನು ನೋಡಿ ತನ್ಮಯರಾಗಬೇಕು.

ತ್ತಿರುವ ತತ್ತ್ವ. ಇದರಿಂದ ಹೊರಹೊಮ್ಮುವುದು ಸಾದಾಖ್ಯವೆಂಬ ಪರ್ಯಾಯನಾಮವುಳ್ಳ ಸದಾಶಿವತತ್ತ್ವ; ಸತ್ ಎಂದು ಕರೆಯಿಸಿಕೊಳ್ಳಲು ಪ್ರಾರಂಭವಾಗುವ ಸ್ಥಿತಿ ಸಾದಾಖ್ಯತತ್ತ್ವದಲ್ಲಿದೆ. ಇನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದಂತೆ ಭೋಕ್ತೃ ಭೋಗ್ಯಪ್ರೇರಕರೂಪವಾಗಿ ಸೃಷ್ಟಿಯು ಇದರಿಂದ ಮುಂದುವರಿಯುವುದು. ಒಟ್ಟಿನಲ್ಲಿ, ಪ್ರಪಂಚದಲ್ಲಿ ಇರುವುದೆಲ್ಲವೂ ಶಕ್ತಿಯಿಂದಲೇ ಹೊರಹೊಮ್ಮಿ ಆ ಶಕ್ತಿಯಲ್ಲಿಯೇ ಅದು ಲಯವಾಗುವುದು ಎಂಬ ವೀರಶೈವ ಸಿದ್ಧಾಂತವು ಇಂದಿನ ವಿಜ್ಞಾನಕ್ಕೆ ಸಮ್ಮತವಾದುದು.

## ಅಚಿತ್ ಎಂಬುದರಲ್ಲಿಯೂ ಚಿತ್

ಪರಶಿವಾಭಿನ್ನವಾದ ಚಿಚ್ಛಕ್ತಿಯಿಂದಲೇ ಚಿತ್ ಮತ್ತು ಅಚಿತ್ ಪ್ರಪಂಚವು ಹೊರಹೊಮ್ಮುವುದೆಂಬ ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತವು ವೀರಶೈವ ಸಿದ್ಧಾಂತಕ್ಕೆ ಅನುಸಾರವಾಗಿದೆ. ಶ್ರೀಕಂಠ ಶಿವಾಚಾರ್ಯರು ಮಂಡಿಸಿರುವ ಈ ಸಿದ್ಧಾಂತವನ್ನು ತಮಿಳು ಶೈವಸಿದ್ಧಾಂತದವರು ಖಂಡಿಸಿರುವುದು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ಗ್ರಂಥದಿಂದ ತಿಳಿದುಬರುತ್ತದೆ. ಅದು ಹೀಗಿದೆ:

"For him the world both intelligent and non-intelligent (chit as well as achit) is the result of the transformation of Chit-Sakti the Lord's energy which as Intelligence and Bliss is non-different from himself. Thus we have two results both unacceptable to the Siddhantins: (1) The world is the result of the transformation of the Lord (for between Sakti and possessor thereof there is non-difference); (2) the non-intelligent world consisting of bodies, instruments and objects of enjoyment is derived from the same principle as the enjoying souls. To constitute one principle out of Maya and Chit-Sakti is repugnant to the Siddhanta."

—*Srikantha's Sivadvaita*, p. 23.

ಚಿತ್ ಶಕ್ತಿಯಿಂದ ಅಚಿತ್ ಪ್ರಪಂಚವು ಹೊರಹೊಮ್ಮುವುದು ಹೇಗೆ ಸಾಧ್ಯ ಎಂಬುದು ತಮಿಳು ಶೈವ ಸಿದ್ಧಾಂತಿಗಳ ಆಕ್ಷೇಪ. **"ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾಕ್ಷರಾತ್ ಸಂಭವತೀಹ ವಿಶ್ವಂ"** ಎಂದರೆ ಜೀವಂತನಾದ ಮನುಷ್ಯನಲ್ಲಿ ಜೀವವಿಲ್ಲದೆ ಇರುವ ಕೂದಲುಗಳು ಹುಟ್ಟುವಂತೆ ಚೈತನ್ಯಯುತವಾದ ಪರಬ್ರಹ್ಮದಲ್ಲಿ ಅಚಿತ್ ಪ್ರಪಂಚವು ಹುಟ್ಟುವುದೆಂಬ ಮುಂಡಕೋಪನಿಷತ್ತಿನ ಶ್ರುತಿಯನ್ನು ಮೇಲಿನ ಆಕ್ಷೇಪಕ್ಕೆ ಉತ್ತರವಾಗಿ ಹೇಳುವುದುಂಟು. ಆದರೆ ವೀರಶೈವ ಸಿದ್ಧಾಂತದ ಉತ್ತರವು ಹೆಚ್ಚು ಸಮರ್ಪಕವಾಗಿದೆ. ಸಿದ್ಧಾಂತ ಶಿಖಾಮಣಿಯಲ್ಲಿ **"ಅತ್ಯಂತಗೂಢ ಚೈತನ್ಯಂ ಜಡಮವ್ಯಕ್ತಮುಚ್ಯತೇ"** ಎಂದು ಹೇಳಿದೆ. ನಾವು ಅಚಿತ್ ಎಂದು ಕರೆವುದರಲ್ಲಿ ಚೈತನ್ಯವಿಲ್ಲವೆಂದಲ್ಲ. ಅದರಲ್ಲಿ ಚೈತನ್ಯವು ಗೂಢವಾಗಿದೆ ಅಷ್ಟೆ. ಸಿದ್ಧಾಂತ ಶಿಖಾಮಣಿಯಲ್ಲಿನ ಈ ಮಾತು ವಿಜ್ಞಾನದೃಷ್ಟಿಯಿಂದ ಮಹತ್ವವಾದುದಾಗಿದೆ. ಗಿಡ ಮರ ಬಳ್ಳಿಗಳಲ್ಲಿ ಜೀವವಿರುವುದನ್ನು ಮಾನ್ಯ ಬೋಸರು ಸಿದ್ಧಾಂತಪಡಿಸಿರುವುದು ಸುಪ್ರಸಿದ್ಧ ವಿಷಯ. ಇನ್ನು ಲೋಹಗಳಲ್ಲಿಯೂ ಗೂಢಚೈತನ್ಯವಿರುವುದೆಂದು ಈಚೆಗೆ ವಿಜ್ಞಾನಿಗಳು ಸಿದ್ಧಾಂತಮಾಡಿದ್ದಾರೆ. ಲೋಹಗಳನ್ನು ಒಂದೇ ಸಮನಾಗಿ ಯಂತ್ರಗಳಲ್ಲಿ ಉಪಯೋಗಿಸಿದಾಗ ಅವುಗಳಿಗೆ ಆಯಾಸವು (Fatigue) ತೋರಿ

ತೋಂದರೆಯಾಗುವುದೆಂಬುದು ಈಚಿಗೆ ಸಿದ್ಧಾಂತವಾಗಿದೆ. ವಿದ್ಯುಚ್ಛಕ್ತಿಯನ್ನು ವಿವಿಧ ವಸ್ತುಗಳಲ್ಲಿ ಹರಿಯಬಿಟ್ಟರೆ ಕೆಲವು ವಸ್ತುಗಳಲ್ಲಿ ಹೆಚ್ಚಾಗಿಯೂ ಕೆಲವುಗಳಲ್ಲಿ ಏನೂ ಇಲ್ಲವೇ ಇಲ್ಲವೆನ್ನುವಷ್ಟು ಕಡಮೆಯಾಗಿಯೂ ಹರಿಯುವಂತೆ ಚೈತನ್ಯವು ಬೇರೆ ಬೇರೆ ವಸ್ತುಗಳಲ್ಲಿ ಹೆಚ್ಚುಕಡಮೆಯಾಗಿ ಹರಿಯುವುದೆನ್ನಬಹುದು. ಅಚೇತನ ವಸ್ತುಗಳು ಎಂದು ನಾವು ಹೇಳುವ ವಸ್ತುಗಳಲ್ಲಿಯೂ ಗೂಢಚೈತನ್ಯವಿರುವುದೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿರುವುದು ಮೇಲಿನ ತಮಿಳು ಶೈವಸಿದ್ಧಾಂತದ ಆಕ್ಷೇಪಕ್ಕೆ ಉತ್ತರವನ್ನು ಒದಗಿಸಿರುವುದಲ್ಲದೆ ಈ ಉತ್ತರವು ಇಂದಿನ ವಿಜ್ಞಾನದ ನಿಲುವಿಗೆ ಅನುಸಾರವಾಗಿದೆ.

"In the phenomenal world there is nothing absolutely conscious nor absolutely unconscious....In the mineral world *chit* manifests as the lowest form of sentiency, evidenced by reflex response to stimulus and that physical consciousness is called in the West atomic memory. The sentiency of plants is more developed, though it is, as Chakrapani says in the *Bhanumati* a dormant consciousness"—*The Serpent Power*, p. 30.

ಹೀಗೆ ವೀರಶೈವ ಸಿದ್ಧಾಂತದಂತೆ, ಸೂರ್ಯ ಚಂದ್ರ ಭೂಮಿ ಸಮುದ್ರ ಮೊದಲಾದವುಗಳೂ ಮನುಷ್ಯರೂ ಪ್ರಾಣಿಗಳೂ ವೃಕ್ಷಗಳೂ—ಒಟ್ಟನಲ್ಲಿ ಚರಾಚರಾತ್ಮಕ ಪ್ರಪಂಚವೆಲ್ಲವೂ ಶಕ್ತಿಯ ರೂಪವೇ ಆದರೆ, ಪ್ರಪಂಚದಲ್ಲಿ ಸೂರ್ಯ ಚಂದ್ರಾದಿಗಳಲ್ಲಿಯೂ ಪ್ರಾಣಿಗಳಲ್ಲಿಯೂ ಆಗುವ ಚಲನವಲನಗಳು ಒಂದಕ್ಕೊಂದು ಸಂಬಂಧಿಸಿರಬೇಕಷ್ಟೆ. ೧೯೬೩ನೆಯ ಇಸವಿಯ ಜೂನ್ ತಿಂಗಳ ರೀಡರ್ಸ್ ಡೈಜೆಸ್ಟಿನ ೫೫ನೆಯ ಪುಟದಲ್ಲಿನ "Outer Space and Tides of Life" ಎಂಬ ಗಹನವಾದ ಲೇಖನವನ್ನು ಓದಿ ನೋಡಿದರೆ, ಮೇಲೆ ಹೇಳಿದ ಸಂಬಂಧದ ಅರಿವಾಗುವುದು. ಅದರಲ್ಲಿ ಕಪ್ಪೆಚಿಪ್ಪಿನ ಪ್ರಾಣಿಗಳ ಚಿಪ್ಪುಗಳ ಬಡಿತಕ್ಕೂ ಸಮುದ್ರದ ಉಬ್ಬರವಿಳಿತಗಳಿಗೂ ಇರುವ ಸಂಬಂಧವನ್ನು ಪರೀಕ್ಷಿಸಿ ಮೇಲೆ ಹೇಳಿದ ರೀತಿಯ ಸಂಬಂಧವಿರುವುದೆಂಬುದನ್ನು ನಿರ್ಧರಿಸಿರುವುದಾಗಿ ತಿಳಿದುಬಂದಿದೆ. ಅದರಲ್ಲಿ ಹೇಳಿದಂತೆ:

"Almost all plants and animals have special cycles of behaviour linked to outside forces. And in recent years numerous studies have indicated that man, too, is influenced by cycles. His temperature and blood pressure rise and fall at regular intervals. His moods and energy follow regular swings."

ಫಲಿತಾಂಶವೇನೆಂದರೆ, ಜಗತ್ತೆಲ್ಲವೂ ಶಕ್ತಿಯ ಪರಿಣಾಮವೆಂಬ ವೀರಶೈವ ಸಿದ್ಧಾಂತವು ಭೌತಿಕಶಾಸ್ತ್ರದ ಒರೆಗೆ ನಿಲ್ಲುವಂತೆಯೇ ಸಸ್ಯಪ್ರಾಣಿಶಾಸ್ತ್ರಗಳ ಒರೆಗೂ ನಿಲ್ಲುವುದು.

## ವೀರಶೈವ ಸಿದ್ಧಾಂತ ಸ್ವರೂಪ ನಿರ್ಣಯ

ವೀರಶೈವರ ಶುದ್ಧಿ ಸಂಘಟನೆಗೆ ಮೊದಲು ಅಲಿಂಗಿಗಳಲ್ಲಿ ಹೇಗೆಯೋ ಹಾಗೆಯೇ ಲಿಂಗಿಗಳಲ್ಲಿ ಮತಭೇದವಿದ್ದಿತೆಂದು ಹಿಂದೆಯೇ ಹೇಳಲಾಗಿದೆ. ಶಿಖಿಕರ್ಪೂರನ್ಯಾಯದಂತೆ ಸಂಪೂರ್ಣ ಐಕ್ಯವೇ ವೀರಶೈವರ ಅಂತಿಮ ನಿಲುವೆಂದು ವೀರಶೈವ ಶರಣರು ಸಿದ್ಧಾಂತೀಕರಿಸುವ ಮೊದಲು ಮೋಕ್ಷ ಸ್ವರೂಪ ವಿಷಯದಲ್ಲೂ ಲಿಂಗಿಗಳಲ್ಲಿ ಭಿನ್ನಾಭಿಪ್ರಾಯವಿದ್ದಿತು. ಕೆಲವರು

ಸಾಲೋಕ್ಯವನ್ನೂ, ಕೆಲವರು ಸಾಮೀಪ್ಯವನ್ನೂ ಕೆಲವರು ಸಾರೂಪ್ಯವನ್ನೂ ಉಳಿದವರು ಸಾಯುಜ್ಯವನ್ನೂ ಅಂತಿಮ ಮೋಕ್ಷವನ್ನಾಗಿ ಅವರವರ ಸಿದ್ಧಾಂತದ ನಿಲುವಿಗನುಸಾರವಾಗಿ ಪ್ರತಿಪಾದಿಸುತ್ತಿದ್ದರು. ಇವೆಲ್ಲ ಗತಿಗಳೂ ಸಾಧ್ಯವೆಂಬುದರಲ್ಲಿ ಸಂದೇಹವಿಲ್ಲ. ಅವರವರ ಭಾವನೆಗೆ ತಕ್ಕಂತೆ, ಅವರವರ ಸಾಧನೆಗಳಿಗೆ ತಕ್ಕಂತೆ ಅವರವರಿಗೆ ಮೋಕ್ಷವು ಲಭಿಸುವುದೆನ್ನುವುದರಲ್ಲಿ ತಪ್ಪೇನು?

ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ವಃ ಕಾಮಯತೇ ಯಾಂಶ್ಚ ಕಾಮಾನ್ ।
ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ ಭೂತಿ ಕಾಮಃ ॥

ಎಂದು ಹೇಳುವ ಮುಂಡಕೋಪನಿಷತ್ತಿನ ಶ್ರುತಿಯು ಮೇಲೆ ಹೇಳಿದುದನ್ನು ಸಮರ್ಥಿಸುತ್ತದೆ. ಸಿದ್ಧಾಂತ ಶಿಖಾಮಣಿಯಲ್ಲಿ ಭಕ್ತಮಾಹೇಶ ಸ್ಥಲಗಳಲ್ಲಿ ಅದ್ವೈತವು ನಿರಾಕರಿಸಲ್ಪಟ್ಟು (ಸಿ.ಶಿ., ೧೦-೩೮) ದ್ವೈತ ಭಕ್ತಿಯೇ ಹೇಳಲ್ಪಟ್ಟಿರುವುದರಿಂದ 'ಮುಕ್ತಃ ಶಿವಸಮೋ ಭವೇತ್' ಎಂದೇ ಹೇಳಿದೆ. ಏಕೆಂದರೆ ದ್ವೈತ ಭಕ್ತಿಯಲ್ಲಿಯೇ ಅಂತ್ಯವಾಗುವುದಾದರೆ ಅದ್ವೈತ ಜ್ಞಾನದಿಂದ ಸಿದ್ಧಿಸುವ ಐಕ್ಯವನ್ನು ಸಾಧಿಸಲಾಗುವುದಿಲ್ಲ. ಆದರೆ ಭಕ್ತಿಯು ಬಲಿದು ಜ್ಞಾನದಲ್ಲಿ ಪರಿಣಮಿಸಿದಾಗ ಶಿವಯೋಗಿಗೆ ಆಗುವುದು ಸಂಪೂರ್ಣ ಐಕ್ಯವೇ. ವೀರಶೈವ ಸಿದ್ಧಾಂತವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಸಿದ್ಧಾಂತೀಕರಿಸಿದಾಗ ವೀರಶೈವ ಐಕ್ಯಸ್ಥಲದ ಅಂತಿಮ ನಿಲುವು ಸಂಪೂರ್ಣ ಐಕ್ಯವೆಂದು ಸಿದ್ಧಾಂತೀಕರಿಸಿದುದು ಗಮನಾರ್ಹವಾದ ಮಾತು.

ಸರ್ವಾತ್ಮನಿ ಪರೇ ತತ್ತ್ವೇ ಭೇದಶಂಕಾ ವಿವರ್ಜಿತೇ ।
ಜ್ಞಾತ್ರಾದಿ ವ್ಯವಹಾರೋತ್ಥಂ ಕುತೋ ಜ್ಞಾನಂ ವಿಭಾವ್ಯತೇ ॥—ಸಿ.ಶಿ., ೨೦—೫೫

ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।
ಪರಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥—ಸಿ.ಶಿ., ೨೦—೬೧

ಜ್ಞಾತೃತ್ವಾದಿತ್ರಿಪುಟಿಯಳಿದು ಐಕ್ಯವಾಗುವುದು ವಿಭಾಗೇನ ನ ದೃಶ್ಯತೇ ಎಂದಿಲ್ಲಿ ಹೇಳಿರುವುದಕ್ಕೂ ಅವಿಭಾಗೇನ ದೃಷ್ಟತ್ವಾತ್ ಎಂಬ ಬ್ರಹ್ಮಸೂತ್ರಕ್ಕೂ ಅನುಸಾರವಾಗಿದೆ.

ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ನಾಲ್ಕು ವಿಧವಾದ ಮೋಕ್ಷಗಳಲ್ಲಿ ಒಂದೊಂದನ್ನು ಲಿಂಗಿಗಳಲ್ಲಿ ಒಂದೊಂದು ಶಾಖೆಯವರು ಹಿಂದೆ ಆರಿಸಿಕೊಂಡಿದ್ದರೂ, ಶುದ್ಧಿ ಸಂಘಟನೆಗೊಳಗಾದ ವೀರಶೈವರೆಲ್ಲರ ಸಿದ್ಧಾಂತವಾಗಿ ಸಾಯುಜ್ಯವನ್ನೇ ಏಕೆ ಆರಿಸಿಕೊಂಡರು ಎಂಬ ಪ್ರಶ್ನೆಯು ಏಳುವುದು. ಶ್ರೀ ರಾಮಾನುಜರು ಹೇಳಿರುವಂತೆ ಚಿದಚಿತ್ತುಗಳು ಈಶ್ವರನ ಶರೀರವೇ ಎಂದು ಹೇಳುವುದರಲ್ಲಿಯೇ ಶ್ರೀ ಶ್ರೀಕಂಠ ಶಿವಾಚಾರ್ಯರು ನಿಲ್ಲದೆ, ಆ ಚಿದಚಿತ್ತುಗಳು ಶಿವಾಭಿನ್ನವಾದ ಶಕ್ತಿಯೇ ಎಂದು ಹೇಳಿ ಶಿವಾದ್ವೈತವನ್ನೇ ಹೇಳಿರುವರು. ಆದರೂ, ಸೂತ್ರ ೪, ೧, ೩ ರ ಶ್ರೀಭಾಷ್ಯದಂತೆ ಬ್ರಹ್ಮವನ್ನು ಶರೀರಶರೀರಿಭಾವನೆಯಿಂದ ಧ್ಯಾನಮಾಡೆನ್ನದೆ, ವೀರಶೈವ ಸಿದ್ಧಾಂತದಂತೆ ಅಹಂಗ್ರಹೋಪಾಸನೆಯಿಂದ ಉಪಾಸನೆ ಮಾಡಬೇಕೆಂದು ಅವರು ಹೇಳಿರುವರಾದರೂ, ಮೋಕ್ಷದಲ್ಲಿ ಸಂಪೂರ್ಣ ಐಕ್ಯವನ್ನು ಹೇಳದೆ ಸಾರೂಪ್ಯವನ್ನು ಹೇಳಿರುವುದು ಅಸಮರ್ಪಕವಾಗಿದೆ. ಇದು ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳ ಪೂರ್ವೋಕ್ತ ಗ್ರಂಥದ ಕೊನೆಯ ಅಧ್ಯಾಯದಲ್ಲಿ ಕೊಟ್ಟಿರುವ ಕಾರಣಗಳಿಂದ ತಿಳಿದುಬರುವುದು. ವಿಸ್ತಾರ ಭಯದಿಂದ ಹೆಚ್ಚಿಗೆ ಬರೆಯದೆ, ಶ್ರೀಕಂಠ ಶಿವಾಚಾರ್ಯರ ಸಿದ್ಧಾಂತದ ಸಾರೂಪ್ಯ ವಿಷಯದಲ್ಲಿ ಶ್ರೀ ಶಾಸ್ತ್ರಿಗಳು ಹೇಳಿರುವ ಕೆಲವು ಆಕ್ಷೇಪಗಳನ್ನು ಇಲ್ಲಿ ಕೊಡಲಾಗಿದೆ:

What difference in individuality is there to justify any distinction among them? It may be said that at least that as between the Lord and the souls there is this difference that the latter do not engage in the five-fold activity. But the limitation is arbitrary. Since the released soul has no ruler, who is there to dictate to it, 'Thus for shalt thou go and no further?.... No.... kind of activity seems called far in the state of release. How then do the liberated souls differ from stones and sticks except in the reputed possession of intelligence. Their life is spent not in service, nor even in constantly singing the glory of the Lord. Absorption in the Absolute is by far preferable to this static existence, where individuality persists but to no purpose..... multiplicity without distinction is inconceivable. What then are the distinctions and how are they caused?....If they are physically limited, the predication of pervasiveness becomes unintelligible....One may go further and say that the whole notion of plurality of perfect Beings, who are independent and coexistent is unintelligible; for as Bradley would say, the plurality is necessarily related by the relation at least of separation.—(*Shivadvaita of Srikantha*, Chapter VII). It will always be a difficulty for the non-dualist to conceive duality in substance along with non-dualism in essence. —*Introduction to Pratyabhigna Hrdayam.*

ಪರಶಿವ ಬ್ರಹ್ಮವೆಂಬ ಚೈತನ್ಯ ಸಾಗರದ ಜೀವಿಗಳೆಂಬ ಅಂಶಗಳು, ಮೋಡಗಳಂತೆ ನದಿಗಳಂತೆ ಬೇರೆ ಬೇರೆಯಾಗಿ ಜಗತ್ತಿನಲ್ಲಿ ಬಾಳಿ ಪರಶಿವಬ್ರಹ್ಮಚೈತನ್ಯಸಾಗರವನ್ನು ಸೇರಿದಮೇಲೆ, ಅವುಗಳನ್ನು ಪ್ರತ್ಯೇಕಿಸುವ ಡಡಗಳಿಲ್ಲದೆ ನೀರಿನಲ್ಲಿ ನೀರು ಬೆರೆದಂತೆ ಒಂದಾಗಬಹುದಲ್ಲದೆ ಅವುಗಳಲ್ಲಿ ವೈವಿಧ್ಯತೆ ಉಳಿಯಲಾರದು. ಆದ್ದರಿಂದ ಶುದ್ಧಿ ಸಂಘಟನೆಗೊಳಗಾದ ವೀರಶೈವ ಸಿದ್ಧಾಂತವು, ಸಂಪೂರ್ಣ ಐಕ್ಯವನ್ನು ಸಾರುವ ಸಾಯುಜ್ಯವೇ ಅಂತಿಮ ಮೋಕ್ಷಸ್ವರೂಪವೆಂಬುದನ್ನು ಎಲ್ಲ ವೀರಶೈವರ ಸಿದ್ಧಾಂತವಾಗಿ ಆರಿಸಿಕೊಂಡುದರಲ್ಲಿ ಅರ್ಥವಿದೆ. ಇದು ೮–೯ನೆಯ ಶತಮಾನಗಳಿಂದ ರೂಪಿಸಲ್ಪಟ್ಟ ಶರಣರ ಸಿದ್ಧಾಂತವೆಂಬುದನ್ನು ಹಿಂದೆ ತೋರಿಸಲಾಗಿದೆ. ಶಿವಾದ್ವೈತಮಂಜರಿಯಲ್ಲಿಯೂ 'ನಿರ್ಭಾರವೋ ನಿಜಲಿಂಗೈಕ್ಯಃ ಶಿಖಿಕರ್ಪೂರ ಯೋಗವತ್' ಎಂದು ಹೇಳಿರುವುದರಿಂದ ಮೋಕ್ಷದಲ್ಲಿ ಸಂಪೂರ್ಣ ಐಕ್ಯವನ್ನೇ ಹೇಳಿದೆ. 'ವಿಭಾಗೇನ ನ ದೃಶ್ಯತೇ' ಎಂದು ಹೇಳುವ ಸಿದ್ಧಾಂತ ಶಿಖಾಮಣಿಯ ನಿಲುವಾದರೂ ಇದೇ.

## ಷಟ್‌ಸ್ಥಲ ಸಿದ್ಧಾಂತವು

## ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಸಿದ್ಧಾಂತಗಳನ್ನೊಳಗೊಂಡಿದೆ

ಶ್ರೀ ಶಂಕರಾಚಾರ್ಯರ ಸಿದ್ಧಾಂತದಂತೆಯೇ, ವೀರಶೈವ ಸಿದ್ಧಾಂತದ ಪ್ರಕಾರ ಮೋಕ್ಷದ ಸ್ವರೂಪವು ಅಭೇದವೇ; ಆದರೆ, ಶ್ರೀ ಶಂಕರಾಚಾರ್ಯರು, ದೀಪಹಚ್ಚಿ ಬೆಳಕಾದ ಕೂಡಲೇ ವಸ್ತುದರ್ಶನವಾಗುವಂತೆ, ತತ್ವಮಸ್ಯಾದಿ ವಾಕ್ಯಗಳಿಂದ ಹಚ್ಚಿದ ಜ್ಞಾನದೀಪದಿಂದ ಅಜ್ಞಾನಾಂಧಕಾರವು ಹೋದ ಕೂಡಲೆ ಮೋಕ್ಷವಾಗುವುದು ಎನ್ನುವರು; ಇದಕ್ಕೆ ವಿರುದ್ಧವಾಗಿ ಮೋಕ್ಷ ಶಿಖರವನ್ನು ಹಂತಹಂತವಾಗಿ ಹತ್ತಬೇಕೆನ್ನುವುದು ವೀರಶೈವ ಸಿದ್ಧಾಂತ. ಅಂಗನು

ಎಂದರೆ ಜೀವನು ಏರುವ ಮೋಕ್ಷ ಸೋಪಾನಗಳು ತ್ಯಾಗಾಂಗ, ಭೋಗಾಂಗ ಮತ್ತು ಯೋಗಾಂಗ. **"ತನುಗುಣವಳಿದಲ್ಲಿ ತ್ಯಾಗಾಂಗ, ಲಿಂಗದೊಡನೆ ಸಕಲ ಸುಖಂಗಳಂ ಭೋಗಿಸುವಲ್ಲಿ ಭೋಗಾಂಗ, ನಿಜದಲ್ಲಿ ಬೆರೆಯುಲು ಯೋಗಾಂಗ"** ಎಂಬ ವಚನ ಭಾಗದಿಂದ ಇವುಗಳ ಸೂಕ್ಷ್ಮ ಸ್ವರೂಪವನ್ನು ಅರಿಯಬಹುದು. ಈ ಪ್ರತಿಯೊಂದು ಹಂತ ದಲ್ಲಿಯೂ ಎರಡೆರಡು ಮೆಟ್ಟುಗಳಿರುವುವು. ತ್ಯಾಗಾಂಗದಲ್ಲಿ ಭಕ್ತ ಮತ್ತು ಮಾಹೇಶವೆಂಬ ಸ್ಥಲಗಳೇ ಈ ಮೆಟ್ಟುಗಳು. ಪ್ರಸಾದಿ-ಪ್ರಾಣಲಿಂಗಿ ಎಂಬ ಸ್ಥಳಗಳು ಭೋಗಾಂಗದಲ್ಲಿಯೂ, ಶರಣ-ಐಕ್ಯ ಸ್ಥಳಗಳು ಯೋಗಾಂಗದಲ್ಲಿಯೂ ಇರುವುವು. ಈ ಆರೂ ಸೇರಿ ಷಟ್‌ಸ್ಥಲ ವಾಯಿತು. ಒಮ್ಮೆಯೇ ಅದ್ವೈತಗಿರಿಗೆ ಹಾರುವೆನೆಂಬುದನ್ನು ವೀರಶೈವರು ಒಪ್ಪರು. ಜ್ಞಾನ ಒಂದೇ ಸಾಲದು. ಭಕ್ತಿಯ ಆವೇಶವು ಹೆಚ್ಚಿದಂತೆ ಅದು ಜ್ಞಾನ ವೈರಾಗ್ಯಗಳಲ್ಲಿ ಪರಿಣಾಮ ವಾಗಬೇಕು. ತ್ಯಾಗಾಂಗದಲ್ಲಿ ದ್ವೈತ ಪ್ರಕ್ರಿಯೆಯನ್ನೂ, ಭೋಗಾಂಗದಲ್ಲಿ ವಿಶಿಷ್ಟಾದ್ವೈತ ಪ್ರಕ್ರಿಯೆಯನ್ನೂ, ಯೋಗಾಂಗದಲ್ಲಿ ಅದ್ವೈತ ಪ್ರಕ್ರಿಯೆಯನ್ನೂ ನೋಡಬಹುದು.

ತ್ಯಾಗಾಂಗದಲ್ಲಿ ದ್ವೈತ ಭಕ್ತಿಯು ದಾಸೋಹಂ ಭಾವನೆಯ ರೂಪದಲ್ಲಿರುವುದು. ಭಕ್ತ ಸ್ಥಲದ ಭಕ್ತಿಯಲ್ಲಿ ಶ್ರದ್ಧೆಯೂ, ಮಹೇಶ ಸ್ಥಳದ ಭಕ್ತಿಯಲ್ಲಿ ನಿಷ್ಠೆಯೂ ಬಳೆಯುವುವು. **"ಪರಸ್ತ್ರೀಸಂಗನಿರ್ಮುಕ್ತಃ ಪರದ್ರವ್ಯಪರಾಙ್ಮುಖಃ; ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶಪಂಜರಃ"** ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಮಹೇಶಸ್ಥಲದ ಮಟ್ಟವನ್ನು ಏರಿದವನು ವರ್ಣಿಸಲ್ಪಟ್ಟಿರುವನು. ಆದರೆ ಭಕ್ತಿಯು ಪಾರವಶ್ಯದಲ್ಲಿ ದ್ವೈತ ಭಾವನೆಯಿದೆ. ಈ ಸ್ಥಿತಿಯಲ್ಲಿ ಶಿವಜೀವರಿಗಿರುವುದು ಅದ್ವೈತವಲ್ಲ; ಭೇದಜ್ಞಾನವೂ ಸ್ವಾಮಿ-ಭೃತ್ಯ ಸಂಬಂಧವೂ, ಇರುವುವೆಂಬುದು ಸಿದ್ಧಾಂತ ಶಿಖಾಮಣಿಯಲ್ಲಿ ಮಾಹೇಶ್ವರ ಸ್ಥಲವನ್ನು ವರ್ಣಿಸಿ ರುವ ಶ್ಲೋಕಗಳಿವುಗಳಿಂದ ತಿಳಿಯುವುದು :

ಪ್ರೇರಕಂ ಶಂಕರಂ ಬುದ್ಧ್ವಾ ಪ್ರೇರ್ಯಮಾತ್ಮಾನಮೇವ ಚ ।
ಭೇದಾತ್ತಂ ಪೂಜಯೇನ್ನಿತ್ಯಂ ನ ಚಾದ್ವೈತ ಪರೋ ಭವೇತ್ ॥ ೧೦–೩೯ ॥

ಪತಿಃ ಸಾಕ್ಷಾನ್ಮಹಾದೇವಃ ಪಶುರೇಷ ತದಾಶ್ರಯಃ ।
ಅನಯೋಃ ಸ್ವಾಮಿಭೃತ್ಯತ್ವಮಭೇದೇ ಕಥಮಿಷ್ಯತೇ ॥ ೧೦–೪೦ ॥

ಹೀಗೆ ಶಿವನು ಸ್ವಾಮಿಯೆಂದೂ ತಾನು ಭೃತ್ಯನೆಂದೂ ದ್ವೈತಭಾವನೆಯಿಂದ ಮುಮುಕ್ಷುವು ಲಿಂಗಜಂಗಮ ಪೂಜಾನಿರತನಾಗಿರಬೇಕಾದುದರಿಂದ ಇಲ್ಲಿನ ಮೋಕ್ಷಕಲ್ಪನೆಯಲ್ಲಿ ಶಿವ ಸಮಾನತೆಯೇ ಹೇಳಲ್ಪಟ್ಟಿದೆ. **"ಮುಕ್ತಃ ಶಿವಸಮೋ ಭವೇತ್" (ಸಿ.ಶಿ., ೯–೧೪).** ಹೀಗೆ ತ್ಯಾಗಾಂಗದಲ್ಲಿ ದ್ವೈತಸಿದ್ಧಾಂತದ ನಿಲುವು ಕಂಡುಬರುತ್ತದೆ.

ಭೋಗಾಂಗದಲ್ಲಿ ವಿಶಿಷ್ಟಾದ್ವೈತಿಗಳ ಶರಣಾಗತಿಯೂ ಪ್ರಪತ್ತಿಯೂ ಕಂಡುಬರುವುವು :

ಶರಣ್ಯಃ ಸರ್ವಭೂತಾನಾಂ ಶಂಕರಃ ಶಶಿಶೇಖರಃ ।
ಸರ್ವಾತ್ಮನಾ ಪ್ರಪನ್ನಸ್ತಂ ಶರಣಾಗತ ಉಚ್ಯತೇ ॥—ಸಿ.ಶಿ., ೧೧–೫೭

ಪ್ರಪನ್ನ ಪಾರಿಜಾತಸ್ಯ ಶಿವಸ್ಯ ಪರಮಾತ್ಮನಃ ।
ಪ್ರಪತ್ತ್ಯಾ ಕಿಂ ನ ಜಾಯೇತ ಪಾಪಿನಾಮಪಿ ದೇಹಿನಾಂ ॥—ಸಿ.ಶಿ., ೧೧–೬೧

ಇವೇ ಮೊದಲಾದ ಅನೇಕ ಶ್ಲೋಕಗಳಲ್ಲಿ ಪ್ರಪತ್ತಿಯು ಹೇಳಲ್ಪಟ್ಟಿದೆ. ವಿಶಿಷ್ಟಾದ್ವೈತ ಸಿದ್ಧಾಂತದ ಆಚರಣೆಯಲ್ಲಿ ಪ್ರಮುಖಸ್ಥಾನವನ್ನು ಪಡೆದಿರುವ ಪ್ರಪತ್ತಿಯು ಭೋಗಾಂಗದಲ್ಲಿ

ಹೇಳಲ್ಪಟ್ಟಿರುವುದಲ್ಲದೆ, ಶಿವಾದ್ವೈತ ಸಿದ್ಧಾಂತದಲ್ಲಿ ವಿಶಿಷ್ಟಾದ್ವೈತದ ನಿಲುವು ಅಂತರ್ಗತವಾಗಿಲ್ಲವೆನ್ನಲಾಗುವುದಿಲ್ಲ. ಶಿವಾದ್ವೈತ ದರ್ಶನದ ಆಧಾರವಿದನ್ನು ಹಿಂದೊಮ್ಮೆ ಕೊಟ್ಟಿರುವುದನ್ನು ಸುಲಭವಾಗಿ ನೋಡಿಕೊಳ್ಳುವಸಲುವಾಗಿ ಮತ್ತೆ ಇಲ್ಲಿ ಕೊಟ್ಟಿದೆ:

> ಶಿವಾದ್ವೈತಮಿತ್ಯತ್ರ ಶಿವಶ್ಚ ಶಿವಶ್ಚ ಶಿವೌ ತಯೋರದ್ವೈತಂ ಇತಿ । ವ್ಯುತ್ಪತ್ತಿ ಬಲಲಬ್ಧಂ ಪ್ರಥಮ ಶಿವಪದಂ ಸೂಕ್ಷ್ಮಚಿದಚಿದ್‌ರೂಪ ಶಕ್ತಿವಿಶಿಷ್ಟ ಬ್ರಹ್ಮಬೋಧಕಂ ಭವತಿ; ಅಪರಂ ಶಿವಪದಂ ಸ್ಥೂಲ ಚಿದಚಿದ್‌ರೂಪಶಕ್ತಿವಿಶಿಷ್ಟ ಜೀವಬೋಧಕಂ ಭವತಿ.

ಹೀಗೆ ತ್ಯಾಗಾಂಗದಲ್ಲಿ ದ್ವೈತಸಿದ್ಧಾಂತದ ನಿಲುವೂ, ಭಕ್ತಿಯಿಂದ ಕೂಡಿದ ಉಪಾಸನೆಯ ಆಚರಣೆಯೂ ಇದ್ದರೆ, ಭೋಗಾಂಗದಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತದ ನಿಲುವೂ ಶರಣಾಗತಿ ಪ್ರಪತ್ತಿಗಳೇ ಮುಖ್ಯವಾಗಿರುವ ಆಚರಣೆಯೂ ಇರುವುವು. ಆದರೆ ಯಾವುದಾದರೊಂದು ಮತದ ನಿಲುವು ಅಂತ್ಯಸ್ಥಿತಿಯಲ್ಲಿ ಶಿವಜೀವರ ಸಂಬಂಧವನ್ನು ಕುರಿತುದೇ ಆದುದಷ್ಟೆ. ಯೋಗಾಂಗವೆನಿಸಿದ ಕೊನೆಯಸ್ಥಿತಿಯಲ್ಲಿ ಅದ್ವೈತದ ನಿಲುವೂ ಜ್ಞಾನವೇ ಪ್ರಧಾನವಾಗಿ ಉಳ್ಳ ಆಚರಣೆಯೂ ಕಂಡುಬರುವುದನ್ನು ಸಿದ್ಧಾಂತ ಶಿಖಾಮಣಿಯಲ್ಲಿಯೇ ನೋಡಬಹುದು:

> ಜ್ಞಾನಂ ಪರಶಿವಾದ್ವೈತಪರಿಪಾಕ ವಿನಿಶ್ಚಯಃ ।
> ಯೇನ ಸಂಸಾರಸಂಬಂಧ ವಿನಿವೃತ್ತಿರ್ಭವೇತ್ ಸತಾಂ ॥—ಸಿ.ಶಿ., ೧೬–೩೦
>
> ಶಿವೋಽಹಮಿತಿ ಯಸ್ಯಾಸ್ತಿ ಭಾವನಾ ಸರ್ವಗಾಮಿನೀ ।
> ತಸ್ಯ ದೇಹೇನ ಸಂಬಂಧಃ ಕಥಂ ಸ್ಯಾದಮಿತಾತ್ಮನಃ ॥—ಸಿ.ಶಿ., ೧೮–೩೭

ಇಂತಹ ಶಿವಾದ್ವೈತ ಜ್ಞಾನದಿಂದ ಆಗುವ ಐಕ್ಯದ ಸ್ಥಿತಿಯನ್ನು ಹೀಗೆ ಉಲ್ಲೇಖಿಸಿದೆ:

> ತ್ವಂತಾಽಹಂತಾ ವಿನಿರ್ಮುಕ್ತೇ ನಿರ್ವಿಕಲ್ಪೇ ಚಿದಂಬರೇ ।
> ಏಕೀಭೂತಸ್ಯ ಸಿದ್ಧಸ್ಯ ಭಾವಾಭಾವಕಥಾ ಕುತಃ ॥—ಸಿ.ಶಿ., ೨೦–೫೩

ವಚನೋಪನಿಷತ್ತಿನಲ್ಲಿಯಾದರೂ ಕಾಣುವ ಮೋಕ್ಷದ ಕಲ್ಪನೆಯು ಇದೇ:

> ಲಿಂಗವೆನ್ನೆ, ಲಿಂಗೈಕ್ಯವೆನ್ನೆ; ಸಂಗವೆನ್ನೆ, ನಿಸ್ಸಂಗವೆನ್ನೆ; ಆಯಿತ್ತೆನ್ನೆ, ಆಗದೆನ್ನೆ; ನೀನೆನ್ನೆ, ನಾನೆನ್ನೆ; ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನಲಿಂಗೈಕ್ಯವಾದ ಬಳಿಕ ಮತ್ತೇನೂ ಎನಲೊಲ್ಲದೆ ಇದ್ದೆನು.
>
> ತನುಬಯಲು ನಿರವಯವದೊಳಡಗಿತ್ತು; ಮನಬಯಲು ನಿರವಯವದೊಳಡಗಿತ್ತು; ಭಾವಬಯಲು ನಿರವಯವದೊಳಡಗಿತ್ತು; ಬಯಲು ಬಯಲ ಬೆರಸಿ ಬಯಲೇ ಆಯಿತ್ತು. ಕೂಡಲ ಚೆನ್ನಸಂಗಯ್ಯನೆಂಬ ನುಡಿಯಡಗಿತ್ತು.

ಇನ್ನೊಂದು ರೀತಿಯಲ್ಲಿ ಇದನ್ನು ಮನಗಾಣಿಸಬಹುದು. ದ್ವೈತಿಗಳ ಭಕ್ತಿಪಾರವಶ್ಯತೆಯನ್ನೂ, ವಿಶಿಷ್ಟಾದ್ವೈತಿಗಳ ಶರಣಾಗತಿಪ್ರಪತ್ತಿಗಳನ್ನೂ, ಶಂಕರಾದ್ವೈತಿಗಳ ಜ್ಞಾನವನ್ನೂ, ಯೋಗಸಿದ್ಧರ ಯೋಗವನ್ನೂ ಸದಾಚರಣೆಯೆಂಬ ಕರ್ಮಮಾರ್ಗದಲ್ಲಿ ಸಮನ್ವಯಗೊಳಿಸಿ, ಮೂರು ಮಟ್ಟಗಳಲ್ಲಿ, ಆರು ಮೆಟ್ಟುಗಳಲ್ಲಿ ಜೀವನೆಂಬ ಚೈತನ್ಯಪ್ರವಾಹವು ಪರಶಿವಚೈತನ್ಯ ಸಾಗರವನ್ನು ಸೇರಲು ಅನುಗೊಳಿಸಿದ ಷಟ್‌ಸ್ಥಲ ಸಿದ್ಧಾಂತ ಯೋಜನೆಯು ವೀರಶೈವ ಶರಣರ ಮಹತ್ಕಾರ್ಯವಾಗಿದೆ. ಸಮುದ್ರದ ನೀರು ಮೋಡವಾಗಿ ಮಳೆಯಾಗಿ ನದಿಯಾಗಿ ಹರಿಯುವಾಗ ಸಮುದ್ರಕ್ಕಿಂತಲೂ ಬೇರೆಯೆ; ಆ ನದಿಯು ಸಮುದ್ರವನ್ನು ಸೇರುವಾಗ ಅದರ ಅಂಗವಿದು ಎಂಬಂತೆ ಸೇರಿ ಸೇರದಂತಿರುವುದು; ನದಿಯ ನೀರು ಸಮುದ್ರದ ನೀರಿನಲ್ಲಿ ಸೇರಿಹೋಗಿ ಸಮರಸವಾದಾಗ ಸಂಪೂರ್ಣ ಐಕ್ಯವೇ ಆಗಿಹೋಗುವುದು. ದ್ವೈತ,

ವಿಶಿಷ್ಟಾದ್ವೈತ, ಅದ್ವೈತ ಲಕ್ಷಣಗಳೆಲ್ಲವನ್ನೂ ಇಲ್ಲಿ ನೋಡಬಹುದು. ಆದುದರಿಂದಲೇ "ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽಸ್ತಂ ಗಚ್ಛಂತಿ" ಎಂಬುದರಲ್ಲಿನ ಉಪಮಾನವನ್ನು ಉಪನಿಷತ್ತು ಆರಿಸಿಕೊಂಡುದು. ಚೈತನ್ಯಸಾಗರದ ಅಂಶವಾದ ಜೀವನು ಇಹಸಂಸಾರದೆಶೆಯಲ್ಲಿ ಚೈತನ್ಯಸಾಗರದಿಂದ ಬೇರೆಯೇ ಎನ್ನಬಹುದು. ಈ ಚೈತನ್ಯದ ಪ್ರವಾಹಕ್ಕೂ ಚೈತನ್ಯಸಾಗರಕ್ಕೂ ಬಹು ದೂರ. ಈ ಸ್ಥಿತಿಯಲ್ಲಿ ದ್ವೈತಭಕ್ತಿಯೇ ಅವನಿಗೆ ಮುಕ್ತಿಮಾರ್ಗ. ಅದರಲ್ಲಿ ನಡೆಯಲು 'ಮಾಗೃಧಃ ಕಸ್ಯಸ್ವಿದ್ಧನಂ' ಎಂಬ ಭಾವನೆಯಿಂದ ಪರಧನ ಪರಸತಿಯರಿಗಾಸೆಪಡದೆ, ಹೊನ್ನು ಹೆಣ್ಣು ಮಣ್ಣುಗಳು ತನ್ನದೆಂಬ ಮಮತೆಯ ರೂಪದ ತನುಗುಣವನ್ನು ತ್ಯಾಗಮಾಡಿ ತ್ಯಾಗಾಂಗದಲ್ಲಿ ತೇರ್ಗಡೆಯನ್ನು ಹೊಂದಬೇಕು. ಈ ಭಕ್ತಿಮಾರ್ಗದಲ್ಲಿ 'ಶ್ರದ್ಧೆ' ಹೆಚ್ಚಿ, 'ನಿಷ್ಠೆ' ಬಳೆದು, ಮುಂದಿನ ಮಟ್ಟವಾದ ಭೋಗಾಂಗದ ಮಟ್ಟವನ್ನು ಸೇರುವನು. ಇಷ್ಟರಲ್ಲಿ ಎಲ್ಲವೂ ತನ್ನದೆಂಬ ಭಾವನೆ ತೊಲಗಿ ನಿರಹಂಭಾವನೆಯಿಂದ, ಎಲ್ಲವೂ ಶಿವನದು ಎಂಬ ಭಾವನೆ ಬಳೆದು, ಅವನ ಪ್ರಸಾದರೂಪವಾಗಿ 'ತೇನ ತ್ಯಕ್ತೇನ ಭುಂಜೀಥಾಃ' ಎಂಬ ಭಾವನೆಯಿಂದ ಭೋಗಗಳನ್ನೆಲ್ಲ ಅನುಭವಿಸುತ್ತ "ಯದ್ಯತ್‌ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ" ಎನ್ನುವಂತಾಗಬೇಕು. ಇದರಿಂದ ಪರಶಿವಬ್ರಹ್ಮದ ಸಾನ್ನಿಧ್ಯದ ಪ್ರಭಾವವು ಜೀವನ ಮೇಲೆ ಬಿದ್ದು, ಬಳೆಯುತ್ತಿರುವ ಭಕ್ತಿಯಲ್ಲಿ 'ಅವಧಾನ' ಎಂದರೆ ಎಚ್ಚರಿಕೆಯುಂಟಾಗುವುದು. ತಾನು ಅಂಗ, ಶಿವನು ಅಂಗಿ, ಶಿವನೇ ತನ್ನ ಇಂದ್ರಿಯಗಳ ಒಳ ಇಂದ್ರಿಯ, ಪ್ರಾಣದೊಳಗಣಪ್ರಾಣ, "ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ ವಾಚೋಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ" ಎಂಬ ಭಾವನೆ ಬಳೆದು ಭಕ್ತಿಯಲ್ಲಿ ಶಿವನ 'ಅನುಭಾವ'ವಾಗುವುದು. ಆಗ ಶಿವಾನುಭಾವವು ಹೆಚ್ಚಿ 'ಯೋಗಾಂಗ'ದ ಮಟ್ಟದಲ್ಲಿರುವನು. ಇಲ್ಲಿ ದ್ವೈತಭಾವನೆಯು ಅಳಿದುಹೋಗಿ ಸತಿಪತಿ ನ್ಯಾಯದಂತೆ ಜೀವಶಿವರ ಹೊಂದಾಣಿಕೆಯ ಅರಿವಾಗಿ ಸವಿಕಲ್ಪ ಸಮಾಧಿಯಲ್ಲಿ 'ಆನಂದ' ಉದಿಸುವುದು. ಹೀಗೆ ಅರಿದ ಅರಿವು ಕರಿಗೊಂಡು ನಿರ್ವಿಕಲ್ಪ ಸಮಾಧಿಯಲ್ಲಿ ಜೀವಶಿವರು 'ಸಮರಸ'ವಾಗುವುದನ್ನು ಹೀಗೆ ವರ್ಣಿಸಿರುವರು :

> ನಿರ್ವಿಕಲ್ಪ ನಿಜದೊಳಗೆ ನಿರಹಂಭಾವದಲಿರ್ದ ನೋಡಯ್ಯಾ. ನೋಡಿಹೆನೆಂದೊಡೆ, ನೋಡಲಿಲ್ಲ! ಕೇಳಿಹೆನೆಂದೊಡೆ ಕೇಳಲಿಲ್ಲ! ಘನ ನಿರಂಜನದ ಬೆಳಗನೇನೆಂಬೆ ಗುಹೇಶ್ವರಾ!

ಜೀವವೆಂಬ ಚಿತ್‌ಪ್ರವಾಹವು ಭಕ್ತಿಯ ಸೋಪಾನದಲ್ಲಿ ಹಂತಹಂತವಾಗಿ ಹರಿದು, ಪರಶಿವ ಬ್ರಹ್ಮವೆಂಬ ಚೈತನ್ಯಸಮುದ್ರವನ್ನು ಸೇರಿ ಸಮರಸವಾಗಿ ಐಕ್ಯವಾಗುವುದು.

> ವಿಶ್ವಾಸದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವದೊಳಗಣ ಅರಿವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸ ಭಾವವನೈದಿದೊಡೆ ಐಕ್ಯಸ್ಥಲ ಗುಹೇಶ್ವರಾ.

## ಅಷ್ಟಾವರಣ ಯೋಜನೆ

ಜೀವನ ಮೋಕ್ಷಯಾತ್ರೆಯನ್ನು ಕ್ಷೇತ್ರಯಾತ್ರೆಗೂ ಹೋಲಿಸಬಹುದು. ಈ ಯಾತ್ರೆಗೆ ಮಾರ್ಗದರ್ಶಕನು ಬೇಕು. ಅಡ್ಡದಾರಿಗೆ ಹೋಗಗೊಡದ ಸತ್ಸಹವಾಸವು ಬೇಕು. ಮಮತೆಯೆಂಬ ಹಸಿವು, ತಾಪತ್ರಯವೆಂಬ ಬಾಯಾರಿಕೆ, ಅಷ್ಟಮದಗಳೆಂಬ ದುಷ್ಟ ಮೃಗಗಳು,

ವಿಷಯಗಳೆಂಬ ಕಳ್ಳಕಾಕರ ಹಾವಳಿಗಳಿಂದ ರಕ್ಷಣೆಯಾಗಬೇಕು. ಇವೆಲ್ಲವನ್ನು ಒದಗಿಸುವುದು ಅಷ್ಟಾವರಣ. ಜೀವನೆಂಬ ಯಾತ್ರಿಕನಿಗೆ 'ಗುರು'ವೆಂಬ ಮಾರ್ಗದರ್ಶಕನು 'ಲಿಂಗ'ವೆಂಬ ಕ್ಷೇತ್ರವನ್ನು ಸೇರಲು ಮಾರ್ಗದರ್ಶಕನಾಗಿರುವನು; 'ಜಂಗಮ' ಎಂಬ ಸತ್ಸಹವಾಸವು, ಯಾತ್ರಿಕನು ಅಡ್ಡದಾರಿ ಹಿಡಿಯದಂತೆ ನೋಡಿಕೊಳ್ಳಲಿರುವುದು. ಪಶುಪಕ್ಷಿಸುತಾಲಯಗಳ ಕಡೆಗೆ ಮನವನ್ನು ಸೆಳೆದು ಪ್ರಕ್ಷುಬ್ಧಗೊಳಿಸುವ ಮಮತೆಯೆಂಬ ಹಸಿವನ್ನು ಕಳೆದು ಪ್ರಶಾಂತ ಸ್ಥಿತಿಯನ್ನು 'ಪ್ರಸಾದ'ವು ಉಂಟುಮಾಡುತ್ತಿರಲು, ತಾಪತ್ರಯವೆಂಬ ಬಾಯಾರಿಕೆಯನ್ನು 'ಪಾದೋದಕವು' ಪರಿಹರಿಸುವುದು. ಅತ್ತಲಿತ್ತ ಬಳುಕದಂತೆ ತಡೆದು ಮನವನ್ನು ಲಿಂಗ ಕ್ಷೇತ್ರವತ್ತಲೇ ಏಕಾಗ್ರಗೊಳಿಸುವ 'ಮಂತ್ರವು' ನೇರವಾಗಿ ಕ್ಷೇತ್ರದ ಕಡೆಗೆ ಸಾಗಿಸುವುದು. ಅಷ್ಟಮದಗಳೆಂಬ ದುಷ್ಟ ಮೃಗಗಳ ಮತ್ತು ವಿಷಯಗಳೆಂಬ ಕಳ್ಳಕಾಕರ ಹಾವಳಿಗೆ ಒಳಗಾಗದಂತೆ 'ವಿಭೂತಿ ರುದ್ರಾಕ್ಷಿ'ಗಳೆಂಬ ಆಯುಧಗಳನ್ನು ಧರಿಸಿ ಅಂಗವೆಂಬ ಯಾತ್ರಿಕನು ಲಿಂಗಕ್ಷೇತ್ರವನ್ನು ಸುಸೂತ್ರವಾಗಿ ಸೇರುವನು.

## ದಾಸಗುಪ್ತರ ಹೇಳಿಕೆಯಲ್ಲಿನ ಸಂದೇಹದ ಪರಿಹಾರ

ಮಾನ್ಯ ದಾಸಗುಪ್ತರ '*History of Indian Philosophy*' ಎಂಬ ಗ್ರಂಥದ ಐದನೆಯ ವಿಭಾಗದಲ್ಲಿ ವೀರಶೈವ ಸಿದ್ಧಾಂತ ವಿಷಯದಲ್ಲಿ ಅವರಾಡಿರುವ ಕೆಲವು ಮಾತುಗಳು ಸಂದೇಹಕ್ಕೆ ಎಡೆಗೊಡುವುವು. ಉದಾಹರಣೆಗಾಗಿ; ವೀರಶೈವ ಪದದ ಅರ್ಥವೇನೆಂಬುದರ ವಿಷಯವಾಗಿ ಅವರು ಹೇಳಿರುವ ಮಾತುಗಳು ಸರಿ ಎನಿಸುವುದಿಲ್ಲ. ವೀರಶೈವ ಪದದ ಸಂಕೇತವನ್ನು ೯ನೆಯ ಪುಟದಲ್ಲಿ ಕೊಡಲಾಗಿದೆ. ಅವರು ಹೇಳುವುದರಲ್ಲಿ ಒಪ್ಪಿಗೆಗೆ ಅರ್ಹವಾಗದುದನ್ನೆಲ್ಲ ಇಲ್ಲಿ ವಿಚಾರಕ್ಕೊಳಗುಮಾಡಲಾಗುವುದಿಲ್ಲ. ಆದರೆ ಷಟ್‌ಸ್ಥಲ ವಿಷಯದಲ್ಲಿ ಅವರು ಹೇಳಿರುವ ಮಾತುಗಳು ಅನೇಕರಿಗೆ ತೋರಿರಬಹುದಾದ ಸಂದೇಹಗಳನ್ನು ಬಲಪಡಿಸುವುದರಿಂದ ಒಂದೆರಡು ಮಾತು ಆ ವಿಷಯದಲ್ಲಿ ಅವಶ್ಯವೆನಿಸುವುದು. ಅವರು ಹೇಳುವ ಮಾತುಗಳಿವು:

The sthalas have not been the same in the various authoritative works. The concepts of these sthalas are also different and they are sometimes used in different meanings. In some works sthala is used to denote the six nerveplexes in the body or the six centres from which the power of God is manifested in different ways. Sometimes they are used to denote the important natural elements such as earth, fire, air, etc.

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯವೆಂಬ ಷಟ್‌ಸ್ಥಲಗಳಲ್ಲಿ ಉಪಾಸನೆಗೊಳ್ಳುವ ಶಿವಚೈತನ್ಯವನ್ನು ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗವೆನ್ನುವೆವಷ್ಟೆ. ಹಾಗೆಯೇ ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಆತ್ಮ ಇವುಗಳಿಗೆ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳನ್ನೇ ಸಂಬಂಧಿಸುತ್ತೇವೆ. ಇವುಗಳಿಗೆ ಕ್ರಮವಾಗಿ ಗಂಧ, ರಸ, ರೂಪು, ಸ್ಪರ್ಶ, ಶಬ್ದ, ತೃಪ್ತಿ ಇವುಗಳನ್ನು ಅರ್ಪಿಸಬೇಕೆನ್ನುತ್ತೇವೆ. ಇವುಗಳೇ ಕ್ರಮವಾಗಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ ಚಕ್ರಗಳಲ್ಲಿ ಇರುವುದಾಗಿ ಹೇಳುತ್ತೇವೆ. ಹೀಗೆ ಮೇಲೆ ಹೇಳಿದ ಷಟ್‌ಸ್ಥಳಗಳಿಗೆ ಸಂಬಂಧಪಟ್ಟ

ಆರು ಲಿಂಗಗಳನ್ನು ಮತ್ತೆ ಪೃಥಿವ್ಯಾದಿ ಭೂತಗಳಿಗೂ, ಆಧಾರಾದಿ ಚಕ್ರಗಳಿಗೂ ಸಂಬಂಧಿಸಿದಂತೆ ವೀರಶೈವರು ಹೇಳುವುದು ಮಾನ್ಯ ದಾಸಗುಪ್ತರ ಸಂದೇಹಕ್ಕೆ ಕಾರಣವಾಗಿದೆ.

ಹೀಗೆ ಹೇಳುವುದರಲ್ಲಿ ಅರ್ಥವಿದೆಯೆ, ಒಂದಕ್ಕೊಂದಕ್ಕೆ ಸಂಬಂಧವಿದೆಯೆ, ಇಲ್ಲವೆ ಅರ್ಥವಿಲ್ಲದೆ ಬೇರೆ ಬೇರೆ ಗ್ರಂಥಗಳಲ್ಲಿ ಬೇರೆ ಬೇರೆ ಹೇಳಿದ ಅಪಲಾಪವೋ ಇದು, ಎಂಬುದು ವಿಚಾರಾರ್ಹವಾಗಿದೆ. ಇದನ್ನು ತಿಳಿಯಲು ವೀರಶೈವ ಸಿದ್ಧಾಂತದ ಇತರ ವಿಷಯಗಳ ಅರಿವು ಅವಶ್ಯವಾಗುವುದು. ವೀರಶೈವ ಸಿದ್ಧಾಂತದಂತೆ ಸದಾಶಿವನ ಸದ್ಯೋಜಾತಾದಿ ಪಂಚಮುಖಗಳು ಆಚಾರಲಿಂಗವೇ ಮೊದಲಾದ ಐದು ಲಿಂಗಗಳ ಪ್ರಕಾಶವು. ಆಚಾರ ಲಿಂಗದಿಂದ ಪೃಥ್ವಿ ತತ್ವವೂ, ಗುರುಲಿಂಗದಿಂದ ಜಲತತ್ವವೂ, ಶಿವಲಿಂಗದಿಂದ ಅಗ್ನಿತತ್ವವೂ, ಜಂಗಮಲಿಂಗದಿಂದ ವಾಯುತತ್ವವೂ, ಪ್ರಸಾದಲಿಂಗದಿಂದ ಆಕಾಶತತ್ವವೂ—ಇವುಗಳಿಗೆ ಮೂಲವಾದ ಮಹಾಲಿಂಗ ದಿಂದ ಆತ್ಮತತ್ವವೂ ಆವಿರ್ಭವಿಸುವುವು. ಪೃಥ್ವಿಯ ಗುಣ ಗಂಧ, ಜಲದ ಗುಣ ರಸ, ಅಗ್ನಿಯ ಗುಣ ರೂಪ, ವಾಯುವಿನ ಗುಣ ಸ್ಪರ್ಶ, ಆಕಾಶದ ಗುಣ ಶಬ್ದ. ಇವುಗಳನ್ನು ಅಜ್ಞಾನಿಯು ಪದಾರ್ಥರೂಪವಾಗಿ ನಾಸಿಕ, ಜಿಹ್ವೆ, ನೇತ್ರ, ತ್ವಕ್ಕು, ಕರ್ಣಗಳಲ್ಲಿ ಅನುಭವಿಸುವನು. ಆದರೆ ನಾಸಿಕಾದಿಗಳಲ್ಲಿ ಗಂಧಾದಿಗಳನ್ನು ಗ್ರಹಿಸುವ ಚೈತನ್ಯಗಳೇ ಕ್ರಮವಾಗಿ ಆಚಾರ ಲಿಂಗವೇ ಮೊದಲಾದ ಐದು ಲಿಂಗಗಳೆಂದೂ, ಇದೆಲ್ಲದರಿಂದ ಆಗುವ ತೃಪ್ತಿಯು ಮಹಾ ಲಿಂಗಕ್ಕೆ ಅರ್ಪಿತವೆಂದೂ ಷಟ್‌ಸ್ಥಲ ಜ್ಞಾನಿಯು ಬಲ್ಲನಾಗಿ, ಅವುಗಳನ್ನು ಆಯಾ ಲಿಂಗಗಳಿಗೆ ಅರ್ಪಿಸಿ ಪ್ರಸಾದರೂಪವಾಗಿ ಅವನ್ನು ಭೋಗಿಸುವನು. ಆದಕಾರಣವೇ ಘ್ರಾಣ (ನಾಸಿಕ), ಜಿಹ್ವೆ, ಚಕ್ಷು, ತ್ವಕ್, ಶ್ರೋತ್ರ ಮತ್ತು ಹೃದಯ ಇವು ಕ್ರಮವಾಗಿ ಆಚಾರಲಿಂಗ, ಗುರು ಲಿಂಗ, ಶಿವಲಿಂಗ, ಚರ(ಜಂಗಮ) ಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳ ಮುಖ ವಾಗಿರುವುವು.

ಘ್ರಾಣಸ್ಯ ಘ್ರಾಣಮಾಚಾರ ಲಿಂಗಸ್ಯ ಮುಖಮುಚ್ಯತೇ ।
ಜಿಹ್ವಾಯಾಶ್ಚ ತಥಾ ಜಿಹ್ವಾ ಗುರುಲಿಂಗಮುಖಂ ಭವೇತ್ ॥
ಚಕ್ಷುಷಶ್ಚ ತಥಾ ಚಕ್ಷುಶ್ಶಿವಲಿಂಗಮುಖಂ ಭವೇತ್ ।
ತ್ವಚಸ್ತ್ವಕ್ ಚರರೂಪಸ್ಯ ಲಿಂಗಸ್ಯ ಮುಖಮುಚ್ಯತೇ ॥
ಮುಖಂ ಪ್ರಸಾದಲಿಂಗಸ್ಯ ಶ್ರೋತ್ರಂ ಶ್ರೋತ್ರಸ್ಯ ಕಥ್ಯತೇ ।
ಹೃದಯಂ ಹೃದಯಸ್ಯೈವ ಮಹಾಲಿಂಗಮುಖಂ ಭವೇತ್ ॥

ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನಸ್ಸು, ಸುಜ್ಞಾನ ಮತ್ತು ಸದ್ಭಾವಗಳು ಭಕ್ತಾದಿ ಗಳಿಗೆ ಕ್ರಮವಾಗಿ ಮೇಲ್ಕಂಡ ಷಡ್ಲಿಂಗಗಳ ಅರ್ಪಣೆಗೆ ತಕ್ಕ ಹಸ್ತಗಳೆನಿಸಿರುವುವು.

ಭಕ್ತನು ಸುಚಿತ್ತಹಸ್ತದಿಂದ ನಾಸಿಕಮುಖದಲ್ಲಿ ಗಂಧಪದಾರ್ಥವನ್ನು ಆಚಾರಲಿಂಗಕ್ಕೂ
ಮಹೇಶನು ಸುಬುದ್ಧಿಹಸ್ತದಿಂದ ಜಿಹ್ವೆಯಮುಖದಲ್ಲಿ ರಸಪದಾರ್ಥವನ್ನು ಗುರುಲಿಂಗಕ್ಕೂ
ಪ್ರಸಾದಿಯು ನಿರಹಂಕಾರಹಸ್ತದಿಂದ ಚಕ್ಷುಮುಖದಲ್ಲಿ ರೂಪುಪದಾರ್ಥವನ್ನು ಶಿವಲಿಂಗಕ್ಕೂ
ಪ್ರಾಣಲಿಂಗಿಯು ಸುಮನಹಸ್ತದಿಂದ ತ್ವಕ್‌ಮುಖದಲ್ಲಿ ಸ್ಪರ್ಶಪದಾರ್ಥವನ್ನು ಜಂಗಮಲಿಂಗಕ್ಕೂ
ಶರಣನು ಸುಜ್ಞಾನಹಸ್ತದಿಂದ ಶ್ರೋತ್ರಮುಖದಲ್ಲಿ ಶಬ್ದಪದಾರ್ಥವನ್ನು ಪ್ರಸಾದಲಿಂಗಕ್ಕೂ
ಐಕ್ಯನು ಸದ್ಭಾವಹಸ್ತದಿಂದ ಹೃದಯಮುಖದಲ್ಲಿ ತೃಪ್ತಿಪದಾರ್ಥವನ್ನು ಮಹಾಲಿಂಗಕ್ಕೂ

ಅರ್ಪಿಸುವನು. ಹೀಗೆ ಅರ್ಪಣದಿಂದ ಅರ್ಪಿತವಾದ ಪದಾರ್ಥಗಳೆಲ್ಲವೂ ಲಿಂಗಪ್ರಸಾದ ಗಳಾಗಿಯೇ ಪರಿಣಮಿಸುವುವು. ಮನುಷ್ಯನು ಅನುಭವಿಸುವ ಅನುಭವಗಳೆಲ್ಲವೂ ಈ ಆರು

ಮಾರ್ಗಗಳಲ್ಲೇ. ಆದುದರಿಂದ ಈ ಆರು ಮಾರ್ಗಗಳಲ್ಲಿ ಎಲ್ಲವೂ ಲಿಂಗಗಳಿಗೆ ಅರ್ಪಿತವಾದ ವೆಂದಮೇಲೆ ಅವೆಲ್ಲವೂ ಶಿವಾರ್ಪಿತವಾಗಿಯೇ ಅನುಭವಿಸಲ್ಪಡುವುವು. ಆದರಿಂದ ಕರ್ಮ ಲೇಪನವೇ ಆಗುವುದಿಲ್ಲ. ಅನುಭವವಾಗುವ ಭೋಗಗಳೆಲ್ಲವೂ ಲಿಂಗಾರ್ಪಣಕ್ಕೆ ತಕ್ಕುವಾಗಿರ ಬೇಕಾದುದರಿಂದ ಅರ್ಪಣಾರ್ಹವಲ್ಲದುದನ್ನು ಅನುಭವಿಸಲಾಗುವುದಿಲ್ಲ. ನೋಡಬಾರದುದನ್ನು ನೋಡಲಾಗುವುದಿಲ್ಲ. ಕೇಳಬಾರದುದನ್ನು ಕೇಳಲಾಗುವುದಿಲ್ಲ. ಹೀಗೆಯೇ ಉಳಿದ ಭೋಗ ಗಳು ಭೋಗಾರ್ಹವಲ್ಲವಾದರೆ ಭೋಗಿಸಲಾಗುವುದಿಲ್ಲ. **" ನೆಲ ತಳವಾರನಾದೊಡೆ ಕಳ್ಳಂಗೆ ಹೋಗಲೆಡೆಯುಂಟೆ? ಸರ್ವಾಂಗಲಿಂಗಿಗೆ ಅನರ್ಪಿತವುಂಟೆ? "** ಎಂಬಂತಾಗಿ ಷಟ್‌ಸ್ಥಲ ಜ್ಞಾನಿಯು ಸರ್ವಾಂಗಲಿಂಗಿಯಾಗುವನು.

ಇನ್ನು ಷಟ್‌ಚಕ್ರಗಳಿಗೂ ಷಟ್‌ಸ್ಥಲಗಳಲ್ಲಿನ ಲಿಂಗಗಳಿಗೂ ಸಂಬಂಧವೇನು ನೋಡುವ:

ಮಹೀಂ ಮೂಲಾಧಾರೇ ಕಮಪಿ ಮಣಿಪೂರೇ ಹುತವಹಂ
ಸ್ಥಿತಂ ಸ್ವಾಧಿಷ್ಠಾನೇ ಹೃದಿ ಮರುತಮಾಕಾಶಮುಪರಿ
ಮನೋಽಪಿ ಭ್ರೂಮಧ್ಯೇ ಸಕಲಮಪಿ ಭಿತ್ವಾ ಕುಲಪಥಂ
ಸಹಸ್ರಾರೇ ಪದ್ಮೇ ಸಹ ರಹಸಿ ಪತ್ಯಾ ವಿಹರಸೇ

ಎಂದು ಶ್ರೀ ಶಂಕರಾಚಾರ್ಯಕೃತ ಸೌಂದರ್ಯಲಹರಿಯಲ್ಲಿ ಹೇಳಿರುವ ಶ್ಲೋಕದಿಂದ ಮೂಲಾ ಧಾರಾದಿ ಆರು ಚಕ್ರಗಳಲ್ಲಿ ಕ್ರಮವಾಗಿ ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಮತ್ತು ಮನಸ್ಸುಗಳು ಇರುವುವೆಂದು ತಿಳಿದುಬರುವುದು. ಹಿಂದೆ ಹೇಳಿದಂತೆ ಪೃಥ್ವಿಯೇ ಮೊದಲಾದ ಈ ಆರು ತತ್ವಗಳು ಆಚಾರಾದಿ ಲಿಂಗಗಳಿಂದ ಹೊರಹೊಮ್ಮಿದುವಾದುದರಿಂದ ಈ ಲಿಂಗಗಳು ಆಯಾ ಚಕ್ರಗಳಲ್ಲಿರುವುವೆಂಬುದು ಸ್ಪಷ್ಟ. ಶಿವಯೋಗಕ್ಕೆ ಸಂಬಂಧಪಟ್ಟ ಈ ಕ್ಲಿಷ್ಟ ವಿಷಯ ವನ್ನು ಬೆಳೆಸದೆ, ಮಾನ್ಯ ದಾಸಗುಪ್ತರು ಹೇಳಿರುವ ಪೃಥ್ವಿ ಅಗ್ನಿ ವಾಯು ಮೊದಲಾದವುಗಳಿಗೂ ಷಡ್ಲಿಂಗಗಳಿಗೂ ಷಟ್‌ಚಕ್ರಗಳಿಗೂ, ಷಟ್‌ಸ್ಥಲಗಳಿಗೂ ಸಂಬಂಧವಿರುವುದೆಂಬುದನ್ನು ಮಾತ್ರ ತಿಳಿಸಲಾಯಿತು.

## ಸ್ವತಂತ್ರಯುಗ – ವಿಚಾರ ಸ್ವಾತಂತ್ರ್ಯ

ಹನ್ನೆರಡನೆಯ ಶತಮಾನವನ್ನು ಸ್ವತಂತ್ರಯುಗವೆಂದು ಕರೆಯುವುದುಂಟು. Scholars have designated the twelfth century as the Swatantra Yuga of Karnataka, *i.e.*, an era of freedom that is the hallmark of modernism in Karnataka and Basavesvara was the Arch-initiator of this epoch of freedom, "The Swatantra Yuga Deekshaguru"—*Directory*, p. xi, *The Makers of Modern Karnataka*. ಹನ್ನೆರಡನೆಯ ಶತಮಾನದಲ್ಲಿ ಅನೇಕ ವಿಷಯಗಳಲ್ಲಿ ಹಿಂದಿನಿಂದ ಬಂದ ಮುಗ್ಧ ಪದ್ಧತಿಗಳೆಂಬ ಸಂಕೋಲೆಗಳಿಂದ ಬಿಡಿಸಿಕೊಳ್ಳಲು ಬಸವೇಶ್ವರಾದಿ ಪ್ರಮಥರ ಮಾರ್ಗದರ್ಶನದಲ್ಲಿ ಜನತೆಯು ಪ್ರಯತ್ನಮಾಡಿ ಸ್ವತಂತ್ರತೆಯನ್ನು ಗಳಿಸಿತು. ಇವುಗಳಲ್ಲೆಲ್ಲ ಮುಖ್ಯವಾದುದೆಂದರೆ **ವಿಚಾರಸ್ವಾತಂತ್ರ್ಯ**. ಯೂರೋಪಿನಲ್ಲಿ ಕೆಲವುಕಾಲ ವಿಚಾರ ಸ್ವಾತಂತ್ರ್ಯವಿರಲೇ ಇಲ್ಲ. ಬೈಬಲ್ಲಿನಲ್ಲಿ ಹೇಳಿರುವ ಸೃಷ್ಟಿಕ್ರಮದಂತೆ ಸೃಷ್ಟಿಯಾಗದೆ, ಬೇರೆ ರೀತಿಯಲ್ಲಿ ಸೃಷ್ಟಿಯಾಯಿತೆಂದು ವಿಜ್ಞಾನಿ ಯಾರಾದರೂ ಹೇಳಿದರೆ ಅವನು ಶಿಕ್ಷೆಗೊಳಗಾಗು ತ್ತಿದ್ದನು. ಆ ತರದ ದುಃಸ್ಥಿತಿ ಭಾರತದಲ್ಲಿರಲಿಲ್ಲ. ಆದರೆ ವೇದದಲ್ಲೋ ಶಾಸ್ತ್ರದಲ್ಲೋ ಹೇಳಿರು ವುದಕ್ಕೆ ವಿರುದ್ಧವಾಗಿ ಏನನ್ನಾದರೂ ಹೇಳಿದರೆ, ಹಾಗೆ ಹೇಳಿದವನು ಜನರ ಅವಹೇಳನಕ್ಕೆ

ಒಳಗಾಗುತ್ತಿದ್ದನು; ಈಗಲೂ ಆ ಸ್ಥಿತಿ ಸ್ವಲ್ಪಮಟ್ಟಿಗಾದರೂ ಇದೆ. ಹಿಂಸಾತ್ಮಕವಾದ ಯಜ್ಞಯಾಗಾದಿಗಳು ವಿಧ್ಯುಕ್ತವಾದುವೇ ಆದರೂ ಹಿಂಸಾತ್ಮಕವಾದುದರಿಂದ ಅವು ಆಚರಣೆಯಲ್ಲಿಲ್ಲ. ಆದರೆ ಅವು ಆಚರಣೀಯವಲ್ಲವೆಂದು ಹೇಳುವುದು ಅಬ್ರಾಹ್ಮಣ್ಯವೆನಿಸುವುದು. ಅಧರ್ಮವಾದುದು ವೇದದಲ್ಲಿರಲಿ ಶಾಸ್ತ್ರದಲ್ಲಿರಲಿ ಅದು ಅಧರ್ಮವೆ. ಬುದ್ಧನು ಈ ತೆರದ ವಿಷಯಗಳಲ್ಲಿ ತನ್ನ ಅನುಯಾಯಿಗಳಿಗೆ ಹೇಳಿದ ಮಾತು ಚಿನ್ನದ ಅಕ್ಷರಗಳಲ್ಲಿ ಬರೆಯಲು ಅರ್ಹವಾಗಿದೆ.

ತಾಪಾತ್ ಛೇದಾಚ್ಚ ನಿಕಷಾತ್ ಸುವರ್ಣಮಿವ ಪಂಡಿತೈಃ ।
ಪರೀಕ್ಷ್ಯ ಭಿಕ್ಷವೋ ಗ್ರಾಹ್ಯಂ ನ ತು ಮದ್ವಾಕ್ಯ ಗೌರವಾತ್ ॥

ಚಿನ್ನವನ್ನು ಬೆಂಕಿಯಲ್ಲಿ ಕಾಯಿಸಿ, ಕತ್ತರಿಸಿ, ಒರೆಹಚ್ಚಿ ಪರೀಕ್ಷಿಸುವಂತೆ ನನ್ನ ಮಾತನ್ನು ಪಂಡಿತರು ಪರೀಕ್ಷಿಸಿ ಪರಿಗ್ರಹಿಸಬೇಕಲ್ಲದೆ ನಾನು ಹೇಳಿದುದೆಂಬ ಗೌರವದಿಂದಲೇ ಪರಿಗ್ರಹಿಸಬಾರದೆಂದು ಬುದ್ಧನು ಹೇಳಿದನು. ಯಜ್ಞವಿಷಯದಲ್ಲೂ ವರ್ಣಾಶ್ರಮ ವಿಷಯದಲ್ಲೂ ಅವನು ಸ್ವತಂತ್ರವಾಗಿ ಆಲೋಚಿಸಿ ಹೇಳಿದ ಮಾತು ಹೀಗೆ ಪರೀಕ್ಷಿಸಲ್ಪಟ್ಟು ಒಪ್ಪಿತವಾಯಿತು. ಆದರೆ ಬುದ್ಧನು ಹಿಂದೂಧರ್ಮದವನಲ್ಲ. ಬಸವಾದಿ ಪ್ರಮಥರೂ ರೇಣುಕಾದಿ ಆಚಾರ್ಯರೂ ಹಿಂದೂಧರ್ಮವನ್ನು ಬಿಡದೆ ವಿಚಾರಸ್ವಾತಂತ್ರ್ಯವನ್ನು ಗಳಿಸಿಕೊಟ್ಟರು. ಆದುದರಿಂದ ಇದರಲ್ಲಿ ಹೆಚ್ಚು ಹಿರಿಮೆ ಇದೆ. ಹಿಂಸೆಯಿಂದ ಕೂಡಿದ ಕರ್ಮಗಳಿಂದ ದೇವರೊಲಿಯುವುದಿಲ್ಲವೆಂಬುದು ಅನೇಕರಿಗೆ ಹೊಳೆಯಿತಾದರೂ, ಅವರು ಹಿಂಸಾತ್ಮಕ ಯಜ್ಞವನ್ನು ಕೈಬಿಟ್ಟರೇ ಹೊರತು, ಅದು ತಪ್ಪು ಎನ್ನುವ ಧೈರ್ಯ ಮಾಡಲಿಲ್ಲ; ಯಜ್ಞಯಾಗಗಳನ್ನು ಬಿಡಲಾರದವರು ಪಿಷ್ಟ ಪಶುಗಳನ್ನಾದರೂ ಬಲಿಕೊಟ್ಟರು. ಏಕೆಂದರೆ ವೇದದಲ್ಲಿ ಹೇಳಿರುವುದನ್ನು ಹೇಗಾದರೂ ನಡೆಸಿದಂತಾಗಬೇಕು. ಜೈನರು ಪಿಷ್ಟಪಶುವನ್ನು ಬಲಿಕೊಡುವುದೂ ಪಾಪವೆಂದು ತೋರಿಸಲು ಅನೇಕ ಕಥೆಗಳನ್ನು ಕಟ್ಟಿರುವುದನ್ನು ನೋಡಿದರೆ, ಈ ಪದ್ಧತಿಯು ಬಹಳ ಹೆಚ್ಚಾಗಿದ್ದಂತೆ ಕಾಣುತ್ತದೆ. ಈ ವಿಷಯದಲ್ಲಿ ಶುದ್ಧಿಸಂಘಟನೆಯ ಕಾಲದಲ್ಲಿ ವೀರಶೈವ ಮುಂದಾಳುಗಳು ನೇರವಾದ ಧೈರ್ಯವಾದ ನಿಲುವನ್ನು ತಾಳಿದರು. ವೇದಗಳಲ್ಲಿ ವಿಧಿಸಲ್ಪಟ್ಟಿದ್ದರೂ ಪಶು ಯಜ್ಞವು ನಿಷೇಧಿಸಲ್ಪಟ್ಟಿತು. ಯಾವ ವಿಷಯವೇ ಆಗಿರಲಿ ವೇದದಲ್ಲಿ ಹೇಳಿರಲಿ, ಆಗಮಗಳಲ್ಲಿ ಹೇಳಿರಲಿ, ಸರಿಯಲ್ಲದುದನ್ನು ಹೇಳಿದ್ದರೆ ಅದನ್ನು ಬಲವಾದ ಮಾತುಗಳಿಂದ ಖಂಡಿಸಿದರು. ಆದರೆ ಉಳಿದ ಹೆಚ್ಚಿನ ಭಾಗವನ್ನೆಲ್ಲ ಮಾನ್ಯಮಾಡಿ ತಾವು ವೈದಿಕರೆಂದೂ ಆಗಮಾನುಯಾಯಿಗಳೆಂದೂ ಹೇಳಿಕೊಳ್ಳಲು ಹಿಂಜರಿಯಲಿಲ್ಲ.

## ವಾಕ್‌ಸ್ವಾತಂತ್ರ್ಯ

ವಾದಗ್ರಸ್ಥ ಸದಾಚಾರ ವಿಚಾರವಿನಿಮಯಕ್ಕಾಗಿಯೂ ಅವರವರ ಶಿವಯೋಗಾನುಭವಗಳ ವಿಚಾರವಿನಿಮಯಕ್ಕಾಗಿಯೂ ಅನುಭವಮಂಟಪವು ಏರ್ಪಟ್ಟಿತು. ಅಂತರ್ಲಿಂಗಧಾರಿಯಾದರೆ ಸಾಲದೆ, ಬಹಿರ್ಲಿಂಗಧಾರಣೆಯೂ ಅವಶ್ಯವೆ, ಲಿಂಗ ಹೋದರೆ ಪ್ರಾಣಘಾತ ಮಾಡಿಕೊಳ್ಳಬೇಕೇ ಇವೇ ಮೊದಲಾದ ವಿಷಯಗಳು ಚರ್ಚೆಗೆ ಬರುತ್ತಿದ್ದವು. ಅವರವರಿಗೆ ತೋರಿದುದನ್ನು ಹೇಳುವ ಅಧಿಕಾರವು ಪ್ರತಿಯೊಬ್ಬರಿಗೂ ಇದ್ದಿತು. ಎಲ್ಲರ ಅಭಿಪ್ರಾಯವೂ ವ್ಯಕ್ತವಾದ ಮೇಲೆ ತೀರ್ಮಾನವು ನಿರ್ಧರಿಸಲ್ಪಡುತ್ತಿದ್ದಿತು. ಇನ್ನೊಂದು ರೀತಿಯಲ್ಲಿಯೂ ವಾಕ್ ಸ್ವಾತಂತ್ರ್ಯವಿದ್ದಿತೆನ್ನಬಹುದು. ಸಂಸ್ಕೃತವೇ ಮತವಿಚಾರಗಳಿಗೆ ಸರಿಯಾದ ಭಾಷೆಯೆಂಬ ಭಾವನೆ ಮೊದಲಿಂದಲೂ ಇದ್ದಿತು. ತಾವಾಡುವ ಮಾತೃಭಾಷೆಯೇ ಸಂಸ್ಕೃತಕ್ಕಿಂತಲೂ

ಹೆಚ್ಚು ಉಪಯೋಗವಾದುದೆಂದು ತಿಳಿದುಬಂದುದರಿಂದ ಮಾತೃಭಾಷೆಯಲ್ಲಿಯೇ ಅವರವರ ಅಭಿಪ್ರಾಯಗಳನ್ನು ಮಂಡಿಸುವ ವಾಕ್‌ಸ್ವಾತಂತ್ರ್ಯವು ಬಳಕೆಗೆ ಬಂದಿತು.

## ವೃತ್ತಿಸ್ವಾತಂತ್ರ್ಯ

ಇಂದು ಭಾರತದೇಶದ ಸಂವಿಧಾನದಲ್ಲಿ ಜನರೆಲ್ಲರಿಗೂ ವೃತ್ತಿಸ್ವಾತಂತ್ರ್ಯವು ಕೊಡಲ್ಪಟ್ಟು ಅದರ ರಕ್ಷಣೆಯ ಭಾರವು ವಹಿಸಲ್ಪಟ್ಟದೆ. ಹನ್ನೆರಡನೆಯ ಶತಮಾನದವರೆಗೆ ವಂಶಪಾರಂಪರ್ಯವಾಗಿ ಬಂದ ಕಸಬುಗಳನ್ನು ಅವರವರು ನಡೆಸಿಕೊಂಡು ಬರಬೇಕಾಗಿದ್ದಿತಲ್ಲದೆ, ಕೆಲವು ಕಸಬುಗಳು ಗೌರವಯುತವಾದುವೆಂದೂ ಕೆಲವು ಕೆಳಮಟ್ಟದವೆಂದೂ ಭಾವಿಸಲ್ಪಟ್ಟದ್ದವು. ಶರಣರ ಸಿದ್ಧಾಂತದ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಯೂ ಅವನವನಿಗೆ ಬೇಕಾದ ಕಸಬನ್ನು ಆರಿಸಿಕೊಳ್ಳಬಹುದಾಗಿತ್ತು; ಅಲ್ಲದೆ ಕಸಬುಗಳಲ್ಲಿ ಇದು ಮೇಲು ಇದು ಕೀಳು ಎಂಬ ಭಾವನೆ ಖಂಡಿಸಲ್ಪಟ್ಟಿತು. ಪ್ರತಿಯೊಬ್ಬನಿಗೂ ಒಂದೊಂದು ಕಾಯಕವಿರಲೇಬೇಕಾಗಿದ್ದಿತು. ಆದರೆ ಅಂದಿಗಂದಿಗೆ ಸಾಕಾಗುವಷ್ಟು ದ್ರವ್ಯದ ಸಂಪಾದನೆಗೆ ಅವಕಾಶವಿದ್ದಿತೇ ಹೊರತು ಧನಶೇಖರಣೆಯು ಶರಣನಿಗೆ ನಿಷೇಧಿಸಲ್ಪಟ್ಟಿತ್ತು.

> "ಕಾರಿಯಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ."

## ಸ್ತ್ರೀಸ್ವಾತಂತ್ರ್ಯ

ಸ್ತ್ರೀಯರು ಶೂದ್ರರ ಸಮಾನವೆಂದು ಭಾವಿಸಲ್ಪಟ್ಟು ವೈದಿಕ ಮಾರ್ಗಕ್ಕೆ ಅನಧಿಕಾರಿಗಳಾಗಿದ್ದರು. ಆಗಮಗಳಲ್ಲಿ ಅವರ ಸ್ಥಾನವು ಸ್ವಲ್ಪ ಉತ್ತಮವಾದರೂ ಅವರಿಗೆ ಕೆಲವು ನಿರ್ಬಂಧಗಳಿದೇ ಇದ್ದುವು. ಶಿವಮಹಾಪುರಾಣದಲ್ಲಿರುವ ವಾಯವೀಯ ಸಂಹಿತೆಯ ಉತ್ತರ ಭಾಗದಲ್ಲಿ ಸ್ತ್ರೀಯರಿಗೆ ಶಿವಸಂಸ್ಕಾರವನ್ನು ಪಡೆಯಲು ಕೆಲವು ನಿರ್ಬಂಧಗಳಿವೆ:

> ನಾಧಿಕಾರಃ ಸ್ವತೋ ನಾರ್ಯಃ ಶಿವಸಂಸ್ಕಾರಕರ್ಮಣಿ ।
> ನಿಯೋಗಾದ್ ಭರ್ತರಸ್ತ್ಯೇವ ಭಕ್ತಿಯುಕ್ತಾ ಯದೀಶ್ವರೇ ॥ ೧೫-೬೦ ॥
>
> ತಥೈವ ಭರ್ತೃಹೀನಾಯ ಪುತ್ರಾದೇರಭ್ಯನುಜ್ಞಯಾ ।
> ಅಧಿಕಾರೋ ಭವತ್ಯೇವ ಕನ್ಯಾಯಾಃ ಪಿತುರಾಜ್ಞಯಾ ॥ ೧೫-೬೩ ॥

ಸ್ತ್ರೀಯರಿಗೆ ಸಂಸ್ಕಾರವನ್ನು ಪಡೆಯಲು ಅಧಿಕಾರವೇ ಇಲ್ಲವೆನ್ನುವುದಕ್ಕಿಂತ ಪತಿ ಪಿತೃ ಪುತ್ರಾದಿಗಳ ಅಪ್ಪಣೆಯನ್ನು ಪಡೆದು ಶಿವಸಂಸ್ಕಾರವನ್ನು ಪಡೆಯಬಹುದೆಂದು ಇಲ್ಲಿ ಹೇಳಿರುವುದು ಉತ್ತಮವೆ. ಆದರೆ ವೀರಶೈವರು ಇದಕ್ಕಿಂತ ಮುಂದೆ ಹೋಗಿ ಸ್ತ್ರೀಗೆ ಸಂಸ್ಕಾರವನ್ನು ಪಡೆಯಲು ಯಾವ ನಿರ್ಬಂಧವನ್ನೂ ಹಾಕದಿದ್ದುದು ಸ್ವಾಗತಾರ್ಹವಾಗಿದೆ. **"ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ"** ಎಂದು ಶರಣರು ಹೇಳಿರುವರು ಶಿವಪೂಜೆಯನ್ನು ಪತಿಯು ತಡೆದರೆ ಸತಿಯ ಕರ್ತವ್ಯವೇನು ಎಂಬುದು ಕಠಿಣವಾದ ಪ್ರಶ್ನೆ. ಈ ಪ್ರಶ್ನೆಯನ್ನು ಅಕ್ಕನವರು ಬಿಡಿಸಬೇಕಾಯಿತು. ಸತಿಯು ಇಹಲೋಕದ ಪತಿಯನ್ನು ತ್ಯಜಿಸಬೇಕೋ ಪರಲೋಕದ ಪತಿಯನ್ನು ತ್ಯಜಿಸಬೇಕೋ ಎಂಬ ಪ್ರಶ್ನೆಯನ್ನು ಅಕ್ಕಮಹಾದೇವಿಯರು ತೀರ್ಮಾನಿಸಬೇಕಾಯಿತು. ಪರಲೋಕದ ಪತಿಯ ಪರವಾಯಿತು ಅವರ ತೀರ್ಮಾನ; ಇದನ್ನು ಶರಣರು ಒಪ್ಪಿದರು. ಸ್ತ್ರೀಸ್ವಾತಂತ್ರ್ಯವೂ ಇದಕ್ಕಿಂತಲೂ ಮುಂದೆ ಹೋಗಲಾರದು.

## ಅಸ್ಪೃಶ್ಯರಿಗೂ ಶೂದ್ರರಿಗೂ ಎಲ್ಲರಿಗೂ ಮೋಕ್ಷಾಧಿಕಾರ ಸ್ವಾತಂತ್ರ್ಯ

ಅಸ್ಪೃಶ್ಯರ ಮಾತಂತಿರಲಿ, ಶೂದ್ರರಿಗೇನೆ ಅಧ್ಯಾತ್ಮ ಜ್ಞಾನವನ್ನು ಪಡೆವ ಹಕ್ಕಿರಲಿಲ್ಲ. ಅಷ್ಟೇಕೆ? ಶ್ರೀ ಶಂಕರಾಚಾರ್ಯರು "ಮೋಕ್ಷಪ್ರಾಪ್ತಿರ್ನತ್ಸಸಂನ್ಯಾಸಿನಃ" ಎಂದರೆ ಸಂನ್ಯಾಸಿಯಾಗಿಲ್ಲದವರಿಗೆ ಮೋಕ್ಷವಾಗುವುದಿಲ್ಲವೆಂದೇ ಹೇಳಿದ್ದಾರೆ. "ನ ಶೂದ್ರಸ್ಯಾಧಿಕಾರಃ" ಎಂಬ ಪ್ರಕರಣವನ್ನು ಶ್ರೀ ಶಂಕರಾಚಾರ್ಯರು ಅವರ ಸೂತ್ರಭಾಷ್ಯದಲ್ಲಿ ಶೂದ್ರರಿಗೆ ಅಧಿಕಾರವಿಲ್ಲದುದನ್ನು ಸ್ಪಷ್ಟಮಾಡಿದ್ದಾರೆ. ರಾನಡೆಯವರ ಉಪನಿಷತ್ ರಹಸ್ಯದಲ್ಲಿ ಹೇಳಿದಂತೆ—"ಉಪನಿಷತ್ತುಗಳ ಪ್ರಕಾರ ಬ್ರಾಹ್ಮಣ ಅಥವಾ ಕ್ಷತ್ರಿಯ ಇವುಗಳಲ್ಲಿ ಯಾವುದೇ ವರ್ಣಕ್ಕೆ ಅಧ್ಯಾತ್ಮ ಜ್ಞಾನದ ಗುತ್ತಿಗೆ ಕೊಟ್ಟತ್ತೆಂದು.... ಹೇಳುವುದು ಹಾಸ್ಯಾಸ್ಪದವಾಗುವುದು. ಅರ್ವಾಚೀನಕಾಲದಂತೆಯೇ ಅಧ್ಯಾತ್ಮ ಜ್ಞಾನದಲ್ಲಿ ಮುಂದೆ ಹೋಗುವ ಅಧಿಕಾರವು ಅವನವನ ಯೋಗ್ಯತೆಯ ಮೇರೆಗೆ ಸಮಾಜದಲ್ಲಿ ಪ್ರತಿಯೊಂದು ಉಚ್ಚ ನೀಚ ವ್ಯಕ್ತಿಗೂ ಇತ್ತೆಂದು ಹೇಳಬಹುದು." ಮಹಾಭಾರತದ ನಿಲುವಾದರೂ ಇದೇ.

"ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ ।
ಶ್ರುತೇನ ಶ್ರೋತ್ರಿಯಶ್ಚೈವ, ಬ್ರಹ್ಮಂ ಚರತಿ ಬ್ರಾಹ್ಮಣಃ" ॥

ಎಂದು ನುಡಿದ ನುಡಿಯನ್ನು ನಡೆಯಲ್ಲಿ ತಂದ ಹಿರಿಮೆ ಬಸವಾದಿ ಪ್ರಮಥರಿಗೂ ರೇಣುಕಾದಿ ಆಚಾರ್ಯರಿಗೂ ಸೇರಿದುದು. ಬಸವೇಶ್ವರರಿಂದಾದ ಈ ಸುಧಾರಣೆಗಳ ವಿಷಯವಾಗಿ ಹಲವು ಮಾನ್ಯರು ಬರೆದಿರುವ ಲೇಖನ ಭಾಗಗಳನ್ನು ಕೊಟ್ಟು ಈ ವಿಷಯವನ್ನು ಮುಗಿಸಬಹುದು.

It was the distinctive feature of his mission that while illustrious, religious and social reformers in India before him had each laid his emphasis on one or other items of religious and social reform, either subordinating more or less other items to it, or ignoring them altogether, Basava sketched and boldly tried to work out a large and comprehensive programme of social reform with the elevation and independence of womanhood as its guiding point.

Neither social conferences which are annually held in these days in several parts of India, nor Indian social reformers, can improve upon that programme as to the essentials. As was in substance remarked by the late Sir James Campbell, whose knowledge of Indian History, customs and manners was almost phenomenal, the present-day social reformer in India is but speaking the language and seeking to enforce the mind of Basava—*Times of India*, 17–5–1918.

Whatever legend may say about Basava, the fact is pretty clear that he was the first Indian free thinker. He may be called as the Luthor of India—*Arther Miles*.

"It is no exaggeration to say that the message of Basava is like a reservoir into which all previous thoughts flowed in and all later thoughts flowed out. Kind like Buddha, simple like Mahavir, gentle like Jesus, bold like Mohammed, Basava strikes us almost as a wonder of creation. But what

attracts us most to him are those teachings of him in which he anticipated the greatest of modern thinkers—Karl Marx and Mahatma Gandhi."
—*Prof K. S. Srikantan.*

ಹೀಗೆ ಪ್ರಗತಿಪರವಾದ ಅನೇಕ ಸುಧಾರಣೆಗಳನ್ನು ಬಸವಾದಿ ಪ್ರಮಥರು ಕಾರ್ಯರೂಪಕ್ಕೆ ತಂದುದರಿಂದ, ಸಂಪ್ರದಾಯ ಶರಣರು ಇಂತಹ ಸುಧಾರಣೆಗಳಿಗೊಳಗಾದ ವೀರಶೈವ ಧರ್ಮವು ವೈದಿಕ ಧರ್ಮವಲ್ಲವೆಂದೂ, ಅದು ಹಿಂದೂಧರ್ಮವೇ ಆಗಲಾರದೆಂದೂ ಆಕ್ಷೇಪಿಸಿದರು. ಈ ಆಕ್ಷೇಪಗಳು ಸರಿಯಾದುವೆ ಎಂಬುದೀಗ ವಿಚಾರಾರ್ಹವು.

## ವೀರಶೈವರು ಹಿಂದುಗಳೆ?

ವೀರಶೈವರು ಹಿಂದುಗಳೆ? ವೈದಿಕರೆ?— ಎಂಬ ಪ್ರಶ್ನೆಗಳಿಗೆ ಈಚೀಚೆಗೆ ಕೆಲವರು ಪ್ರಾಮುಖ್ಯತೆಯನ್ನು ಕೊಟ್ಟಿರುವುದುಂಟು. ಅವರಲ್ಲಿ ದಿವಂಗತ ಪ್ರೊಫೆಸರ್ ಸಾಖರೆಯವರು ಪ್ರಮುಖರೆನ್ನಬಹುದು. ಲಿಂಗಧಾರಣ ಚಂದ್ರಿಕೆಯ ಅವರ ದೀರ್ಘವಾದ ಹಾಗೂ ಉಪಯುಕ್ತವಾದ ಮುನ್ನುಡಿಯಲ್ಲಿ "Lingayat religion fundamentally differs from Hindu religion" ಎಂದು ಹೇಳಿರುವುದು, ಆ ಗ್ರಂಥಕ್ಕೆ ಒಂದು ಕುಂದು ಎಂದೇ ಹೇಳಬೇಕಾಗುತ್ತದೆ. ಶ್ರೀಯುತ ಸಾಖರೆಯವರು ಹಿಂದೂಧರ್ಮವೆಂದರೇನೆಂಬುದನ್ನಾಗಲೀ ವೈದಿಕಧರ್ಮವೆಂದರೇನೆಂಬುದನ್ನಾಗಲೀ "ಇದಮಿತ್ಥಂ" ಎನ್ನುವಂತೆ ನಿಷ್ಕರ್ಷಿಸಲಾಗುವುದಿಲ್ಲವೆಂದಿರುವರು. ಹಿಂದೂಧರ್ಮವೆಂದರೇನೆಂಬುದನ್ನೂ, ವೈದಿಕಧರ್ಮವೆಂದರೇನೆಂಬುದನ್ನೂ ನಿಷ್ಕರ್ಷಿಸದೆ ವೀರಶೈವವು ಹಿಂದೂಧರ್ಮವಲ್ಲವೆಂದೂ, ವೈದಿಕಧರ್ಮವಲ್ಲವೆಂದೂ ಹೇಳಿರುವುದು ಇವರ ತೀರ್ಮಾನದ ಮುಖ್ಯವಾದ ದೋಷ. ಪ್ರೊ॥ ಸಾಖರೆಯವರ ಗ್ರಂಥದಲ್ಲಿನ ಇತರ ವಿಷಯಗಳನ್ನು ಮೆಚ್ಚಿಕೊಂಡಿರುವ ಇಂದಿನ ರಾಷ್ಟ್ರಾಧ್ಯಕ್ಷರಾದ ರಾಧಾಕೃಷ್ಣನ್‌ರವರು ಹೀಗೆ ಹೇಳಬೇಕಾಯಿತು: "As the Lingayat religion accepts the authoritativeness of the Agamas and repudiates the distinctions of caste, it is said to be non-Hindu. I am afraid that this is taking a somewhat narrow view of the spirit of Hinduism." ಮದರಾಸ್ ವಿಶ್ವವಿದ್ಯಾಲಯದ ಡಾ॥ ಸಿ. ಕುನ್ಹನ್‌ರಾಜರವರು ಹೀಗೆ ಹೇಳಿರುವರು: "I am not quite sure whether you have been just to the presentation of what you call Hinduism." ಇತರ ವಿಷಯಗಳಲ್ಲಿ ಈ ಗ್ರಂಥವನ್ನು ಮೆಚ್ಚಿಕೊಂಡಿರುವ ಮಾನ್ಯರು ಇದೊಂದು ವಿಷಯದಲ್ಲಿ ಭಿನ್ನಾಭಿಪ್ರಾಯವನ್ನು ಹೊರಗೆಡಹಲು ಹಿಂಜರಿಯದಿರುವುದು ಗಮನಾರ್ಹವಾಗಿದೆ.

## ವೀರಶೈವರು ಅವೈದಿಕರೆ?

ವೇದಗಳು ನಾಲ್ಕೆಂದು ಪ್ರಸಿದ್ಧವಾದರೂ ಋಗ್ವೇದವೇ ಉಳಿದವುಗಳಿಗೆ ಮೂಲ. ಇದರಲ್ಲಿ ಗೋಧನ, ಯುದ್ಧದಲ್ಲಿ ವಿಜಯ ಮೊದಲಾದ ಐಹಿಕಫಲಗಳಿಗಾಗಿ ಇಂದ್ರಾದಿ ದೇವತೆಗಳನ್ನು ಪ್ರಾರ್ಥಿಸುವ ಮಂತ್ರಗಳಿರುವುವು. ಇವುಗಳು ಸ್ವರ್ಗಾದಿ ಫಲಗಳನ್ನು ಪಡೆಯಲು ಮಾಡುವ ಯಜ್ಞಗಳಲ್ಲಿ ಪಠಿಸಲ್ಪಡುವುವು. ಇದರಿಂದ ಫಲವು ದೊರೆಯಲು ಈ ಮಂತ್ರಗಳನ್ನು ಸ್ವರಸಹಿತವಾಗಿ ಅಧ್ಯಯನ ಮಾಡಬೇಕು. ಇದೇ ಮಂತ್ರಗಳೇ ಸಾಮವೇದದಲ್ಲಿದ್ದರೂ ಅವುಗಳಿಗೆ ಸಾಮವೇದದ ಸ್ವರಗಳಿರುವುವು. ಯಜುರ್ವೇದದಲ್ಲಿ ಯಜ್ಞಯಾಗಾದಿ

ಗಳನ್ನು ಮಾಡುವ ವಿಧಿಗಳು ಇರುವುವು. ಈ ವೇದದಲ್ಲಿರುವ ಮಂತ್ರಗಳೂ ಋಗ್ವೇದದಲ್ಲಿರುವವೇ. ಅಥರ್ವವೇದವು ಮೊದಲು ಮೊದಲು ಯಜ್ಞಯಾಗಾದಿಗಳಲ್ಲಿ .ಉಪಯೋಗವಿಲ್ಲವೆಂಬ ದೃಷ್ಟಿಯಿಂದ ಅದಕ್ಕೆ ಪ್ರಾಶಸ್ತ್ಯವಿರಲಿಲ್ಲ. ಉಳಿದ ಮೂರು ವೇದಗಳಿಗೆ "ತ್ರಯೀ" ಎಂದು ಹೆಸರು; ವೇದವೆಂದರೆ ಈ ತ್ರಯೀ ಧರ್ಮದವರ ಪ್ರಕಾರ ಮಂತ್ರಬ್ರಾಹ್ಮಣಗಳು ಮಾತ್ರ. ಪೂರ್ವಮೀಮಾಂಸಾ ಶಾಸ್ತ್ರವು ಇವರದೆ. ಸಾಯಣರು "**ಮಂತ್ರಬ್ರಾಹ್ಮಣಾತ್ಮಕತ್ವಂ ತಾವದದುಷ್ಟಂ ಲಕ್ಷಣಂ**" ಎಂದು ಅವರ ಭಾಷ್ಯದ ಭೂಮಿಕೆಯಲ್ಲಿ ಹೇಳಿರುವರು. ಮಂತ್ರಬ್ರಾಹ್ಮಣಗಳನ್ನೊಳಗೊಂಡ ಶಬ್ದರಾಶಿಯೇ ವೇದವೆಂದು ವೇದಲಕ್ಷಣವನ್ನು ಖಚಿತವಾಗಿ ಹೇಳಿದ್ದಾರೆ. ಹೀಗೆ ಹೇಳಿರುವುದು ಆಪಸ್ತಂಬ ಮಹರ್ಷಿಯ ಯಜ್ಞಪರಿಭಾಷಾಸೂತ್ರದಲ್ಲಿ "**ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮಿತಿ**" ಎಂದು ಹೇಳಿರುವುದಕ್ಕೆ ಅನುಸಾರವಾಗಿದೆ. ಹೀಗೆ ಹೇಳಿರುವುದರಲ್ಲಿ ಉಪನಿಷತ್ತುಗಳೆಂಬ ವೇದಾಂತಭಾಗವನ್ನು ಸೇರಿಸದಿರುವುದು ಗಮನಾರ್ಹವಾಗಿದೆ. ಮಹಾಮಹೋಪಾಧ್ಯಾಯ ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರಿಂದ ರಚಿತವಾದ ಹಿಂದೂದರ್ಶನಸಾರದಿಂದ ಈ ವಿಷಯದ ಮೇಲೆ ಬೆಳಕನ್ನು ಚೆಲ್ಲಬಹುದು.

"ಪೂರ್ವಕಾಲದಲ್ಲಿ ವೈದಿಕಮತವೂ ಔಪನಿಷದಮತವೂ ಸ್ವತಂತ್ರಗಳಾಗಿ ಶುದ್ಧವಾಗಿ ಮಿಶ್ರವಿಲ್ಲದೆ ಇದ್ದುವು. ಆಗ ಪರಸ್ಪರ ನಿಂದಾವಾದಗಳು ಬಹಳವಾಗಿದ್ದವು. ವೇದವಾದರತರು ಕುರುಡರಾಗಿ, ಮೂಢರಾಗಿ, ಕಾಮುಪರವಶರಾಗಿ, ಸ್ವರ್ಗಕ್ಕಿಂತಲೂ ಬೇರೆ ಪುರುಷಾರ್ಥವಿಲ್ಲವೆಂದು ವಾದಿಸುತ್ತ, ಮೋಕ್ಷವನ್ನು ನಿಂದಿಸುತ್ತ ನಾಸ್ತಿಕರಾಗಿ ಇರುತ್ತಾರೆಂದು ಉಪನಿಷತ್ತು, ಭಗವದ್ಗೀತಾ ಮೊದಲಾದ ಗ್ರಂಥಗಳಲ್ಲಿ ತ್ರಯೀಧರ್ಮವೆಂಬ ಶುದ್ಧವೈದಿಕಮತವನ್ನು ನಿಂದಿಸಿರುತ್ತದೆ. ಉಪನಿಷತ್ತುಗಳೆಲ್ಲವೂ ಕಟ್ಟುಕಥೆಗಳು, ಅವುಗಳಿಗೆ ಅರ್ಥವೇ ಇಲ್ಲವೆಂದು ಶುದ್ಧವಾದ ಔಪನಿಷದಮತವನ್ನು ಪ್ರಾಚೀನ ಮೀಮಾಂಸಕರು ನಿಂದಿಸುತ್ತಿದ್ದರು. "ವೇದೋಷರಾ ವೇದಾಂತಾಃ" ವೇದಾಂತಗಳು ಬಂಜರ ಭೂಮಿಗಳೆಂದರ್ಥ. ನಮ್ಮ ಪೂರ್ವಾಚಾರ್ಯರುಗಳು ಈ ಅಂಶವನ್ನು ಖಂಡಿಸಿ ವೇದಾಂತಾರಂಭವನ್ನು ಸಮರ್ಥಿಸಿರುತ್ತಾರೆ"—(ಪುಟ ೧೭೩).

ಹೀಗೆ ಪೂರ್ವಮೀಮಾಂಸಕರು ಮಂತ್ರಬ್ರಾಹ್ಮಣಾತ್ಮಕವಾದುದೇ ವೇದವೆನ್ನುವುದಾದರೆ ಉಪನಿಷತ್ತುಗಳಲ್ಲಿ ತದ್ವಿರುದ್ಧವಾದ ಅಭಿಪ್ರಾಯವಿರುವುದು ಆಶ್ಚರ್ಯವಲ್ಲ. ಪರಬ್ರಹ್ಮ ಸಾಕ್ಷಾತ್ಕಾರವನ್ನುಂಟುಮಾಡುವ ಉಪನಿಷದ್‌ಜ್ಞಾನವೇ ಪರತರವಾದುದು ಎಂದರೆ ಶ್ರೇಷ್ಠವಾದುದೆಂದೂ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಮತ್ತು ವೇದಾಂಗಗಳು ಅಪರಜ್ಞಾನ ಎಂದರೆ ಕೀಳಾದ ಜ್ಞಾನವೆಂದೂ ಮುಂಡಕೋಪನಿಷತ್ತಿನಲ್ಲಿ ಹೇಳಿದೆ:

> "ತತ್ರಾಪರಾ । ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ।
> ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ ಅಥಪರಾ ।
> ಯಯಾ ತದಕ್ಷರಮಧಿಗಮ್ಯತೇ"

ಛಾಂದೋಗ್ಯೋಪನಿಷತ್ತಿನ "ಶೌವಉದ್ಗೀತ"ದಲ್ಲಿ ಯಜ್ಞಯಾಗಾದಿಗಳನ್ನು ಮಾಡುವವರನ್ನು ನಾಯಿಗಳಿಗೆ ಹೋಲಿಸಿದೆ. ಮುಂಡಕೋಪನಿಷತ್ತಿನಲ್ಲಿ ಯಜ್ಞಗಳನ್ನು ನಂಬುವುದು ಒಡಕು ದೋಣಿಗಳನ್ನು ನಂಬಿದಂತೆ ಎಂದು ಹೇಳಿದೆ. ಯಜ್ಞಯಾಗಾದಿಗಳನ್ನು ಹಳಿಯುವ ಮಂತ್ರಗಳಲ್ಲಿ ಇದೊಂದು:

"ಇಷ್ಟಾಪೂರ್ತಂ ಮನ್ಯಮಾನಾವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ ।
ನಾಕಸ್ಯಪೃಷ್ಠೇ ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ ॥"
—ಮುಂ., ೨–೧೦

ಭಗವದ್ಗೀತೆಯಲ್ಲಿಯಾದರೂ ಇದೇ ತರದ ಶ್ಲೋಕಗಳಿವೆ:

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥—ಭ.ಗೀ., ೨–೪೨

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥ —ಭ.ಗೀ., ೯–೨೧

ಅಶಾಶ್ವತವಾದ ಸ್ವರ್ಗಫಲಕ್ಕಾಗಿ ಕರ್ಮಗಳನ್ನು ಮಾಡುತ್ತ ಇದನ್ನು ಬಿಟ್ಟರೆ ಬೇರೆ ಏನೂ ಇಲ್ಲವೆಂದು ಹೇಳುವ ತ್ರಯಿಧರ್ಮದವರನ್ನು ಅವಿಪಶ್ಚಿತಃ ಎಂದರೆ ದಡ್ಡರು ಎಂದು ಮೇಲಿನ ಆಧಾರಗಳಲ್ಲಿ ಹೇಳಿದೆ. ಯಾವಜ್ಜೀವವೂ ಸ್ವರ್ಗಾದಿ ಫಲಗಳನ್ನು ಪಡೆಯಲು ಯಜ್ಞಯಾಗಾದಿ ಕರ್ಮಗಳನ್ನು ಮಾಡುತ್ತಲೇ ಇರಬೇಕೆಂದು ವಿಧಿಸಿದೆಯೆಂದು ಹೇಳುವ, ಈ ಕರ್ಮಠರಾದ ತ್ರಯೀಧರ್ಮದವರ ವಾದವನ್ನು ಬ್ರಹ್ಮಸೂತ್ರಗಳಾಗಲೀ ಅವುಗಳಿಗೆ ಭಾಷ್ಯವನ್ನು ಬರೆದಿರುವ ಶ್ರೀ ಶಂಕರಾದಿ ಆಚಾರ್ಯರಾಗಲೀ ಒಪ್ಪುವುದಿಲ್ಲ. ಯಜ್ಞಯಾಗಾದಿಗಳನ್ನು ಮಾಡುವ ವೈದಿಕರು ಈಗ ಇಲ್ಲವೆಂದೇ ಹೇಳಬೇಕು. ವಚನಶಾಸ್ತ್ರರಹಸ್ಯದ ಪುಟ ೨೬ರಲ್ಲಿ ಮಾನ್ಯ ದಿವಾಕರರು ಹೇಳಿದಂತೆ "ವೇದೋಪನಿಷತ್ತುಗಳು ಒಂದೇ ಶ್ರುತಿಯ ಪೂರ್ವೋತ್ತರ ಭಾಗಗಳಿದ್ದರೂ, ವೇದಗಳಲ್ಲಿ ಪ್ರಧಾನವಾದ ಕಾಮ್ಯಕರ್ಮ ಮತ್ತು ಸ್ವರ್ಗೇಚ್ಛೆ ಇವುಗಳನ್ನು ಉಪನಿಷತ್ತುಗಳು ಬಲವಾಗಿ ಖಂಡಿಸಿದ್ದರಿಂದ ಮುಂದೆ ಯಜ್ಞಯಾಗಾದಿ ಕರ್ಮಗಳಿಗೆ ಗೌಣತ್ವವು ಬಂದಿತು ಮತ್ತು ತತ್ವಜ್ಞಾನ ಹಾಗೂ ಉಪಾಸನೆ ಇವುಗಳೇ ಪ್ರಧಾನವಿದ್ದ ಜ್ಞಾನಮಾರ್ಗವು ಹೆಚ್ಚು ಪ್ರಚಾರಗೊಂಡಿತು. ಪಶುವಧಕ್ಕೆ ಕಾರಣವಾಗುವ ಯಜ್ಞಯಾಗಾದಿಗಳನ್ನು ತಡೆಯಲಿಕ್ಕೆ ಜ್ಞಾನಮಾರ್ಗವು ಸಹಾಯಕವಾದಂತೆ, ಪೂರ್ಣ ಅಹಿಂಸೆಯನ್ನುಪದೇಶಿಸುವ ಜೈನ ಬುದ್ಧಮತಗಳು ಎಷ್ಟೋಮಟ್ಟಿಗೆ ಕಾರಣವಾದುವು." ಇನ್ನು ಪಶುಹಿಂಸೆಗೆ ಕಾರಣವಾದ ಯಜ್ಞಯಾಗಾದಿಗಳನ್ನು ನಿರ್ನಾಮಮಾಡುವ ಕಾರ್ಯವು ಕನ್ನಡ ಉಪನಿಷತ್ತುಗಳೆಂದು ಮಾನ್ಯ ದಿವಾಕರರಿಂದ ಹೊಗಳಲ್ಪಟ್ಟ ವಚನವಾಙ್ಮಯದಿಂದಾಯಿತೆನ್ನಬಹುದು.

"ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು ಎಲೆ ಹೋತೇ ಅಳು ಕಂಡೆಯಾ! ವೇದವನೋದಿದವರ ಮುಂದೆ ಅಳು ಕಂಡೆಯಾ! ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ! ನೀನು ಅತ್ತುದಕ್ಕೆ ತಕ್ಕುದಮಾಡುವ ಕೂಡಲಸಂಗಮದೇವಾ."

ಎಂದು ಕಂಬನಿ ಸುರಿಸುವ ಬಸವೇಶ್ವರರ ವಚನವು ನಿಷ್ಕರುಣಿಗಳಾದ ವೇದವಾದರತರಾದ ಕರ್ಮಠರನ್ನು ಭಗವದ್ಗೀತೆಯಷ್ಟು ಕಠಿಣವಾಗಿ ನಿಂದಿಸಿಲ್ಲ. ನಾರದ ಭಕ್ತಿಸೂತ್ರಗಳಲ್ಲಿನ ೪೯ನೆಯ ಸೂತ್ರದಲ್ಲಿ "ವೇದಾನಪಿ ಸಂನ್ಯಸ್ಯತಿ" ಎಂದು ಹೇಳಿದೆ. ಗೀತೋಪನಿಷತ್ತೇ ಮೊದಲಾದುವುಗಳಲ್ಲಿ ಮಾಡಿದ ಯಜ್ಞಯಾಗಾದಿಗಳ ಖಂಡನೆಯನ್ನು ಮುಂದುವರಿಸಿದ ಮಾತ್ರಕ್ಕೇ ವೀರಶೈವವನ್ನು ಅವೈದಿಕವೆಂದೂ ಹಿಂದೂಧರ್ಮವಲ್ಲವೆಂದೂ ಹೇಳುವುದು ಸರಿಯೆಂದರೆ ಗೀತೋಪನಿಷತ್ತುಗಳನ್ನೂ ಮತ್ತು ನಾರದ ಭಕ್ತಿಸೂತ್ರವನ್ನೂ ಅವೈದಿಕವೆಂದೂ, ಹಿಂದೂಧರ್ಮವಲ್ಲವೆಂದೂ ಹೇಳುವುದು ಸರಿಯೆನ್ನಬೇಕಾಗುವುದು. ವೇದವಾದರತರಾದ ತ್ರಯೀಧರ್ಮದ ಕರ್ಮಠರು ಹೇಳುವಂತೆ ವೇದವೆಂದರೆ ಯಜ್ಞಯಾಗಾದಿಗಳಿಗೆ ಉಪಯೋಗವಾಗುವ ಮಂತ್ರಬ್ರಾಹ್ಮಣ ಮಾತ್ರವಲ್ಲ. ಪರಬ್ರಹ್ಮದ ವಿಷಯವನ್ನು ಬೋಧಿಸುವ ನಾಸದೀಯ

ಸೂಕ್ತವೇ ಮೊದಲಾದ ಸೂಕ್ತಗಳೂ, ಉಪನಿಷತ್ತೂ ಸಹಾ ವೇದವೇ. ಬೃಹದಾರಣ್ಯಕ ಉಪನಿಷತ್ತು (೨–೪–೧೦) ಈ ವಿಷಯದಲ್ಲಿ ಎಷ್ಟು ವಿಶಾಲವಾದ ದೃಷ್ಟಿಯನ್ನು ತೆಗೆದುಕೊಂಡಿದೆ ಯೆಂಬುದು ಗಮನಾರ್ಹ:

> " ಮಹತೋಽಭೂತಸ್ಯ ನಿಃಶ್ವಸಿತಮೇತದ್ ಯದ್ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ನಿಶ್ವಸಿತಾನಿ "

ಋಗ್ವೇದಾದಿ ವೇದಗಳೊಳಗೆ ಉಪನಿಷತ್ತು ಸೇರಿಲ್ಲದಂತೆ ಅವನ್ನು ಬೇರೆ ಬೇರೆಯಾಗಿ ಇಲ್ಲಿ ಹೇಳಿದ್ದರೂ, ಉಪನಿಷತ್ತು ಇತಿಹಾಸ ಪುರಾಣಗಳು ಸಹಾ ವೇದಗಳಂತೆಯೇ ಪರಮಾತ್ಮನ ನಿಶ್ವಸಿತವೆಂದೇ ಮೇಲಿನ ಮಂತ್ರದಲ್ಲಿ ಹೇಳಿದೆ. ಈಚೆಗಂತೂ ಉಪನಿಷತ್ತೆಂದರೆ ವೇದದ ಭಾಗವೆಂದೇ ಪರಿಗಣಿಸಲ್ಪಟ್ಟು, ಅದು ವೇದಾಂತವೆಂದೇ ಪ್ರಸಿದ್ಧವಾಗಿದೆ. ಯಜ್ಞಯಾಗಗಳ ವಿಧಿಯನ್ನು ಹೇಳುವ ಬ್ರಾಹ್ಮಣಗಳನ್ನು ಬಿಟ್ಟು ಉಳಿದ ವೇದದ ಭಾಗಗಳಲ್ಲಿ ಬಸವೇಶ್ವರಾದಿ ಶರಣರಿಗಿರುವ ಗೌರವವನ್ನು ಈ ಬಸವೇಶ್ವರವಚನಗಳಿಂದ ತಿಳಿಯಬಹುದು:

> 'ಸೋಮಃ ಪವತೇ' ಎಂಬ ಶ್ರುತಿಯನರಿತು ಶಿವನೇಕೋದೇವ ರುದ್ರನದ್ವಿತೀಯನೆಂದು ನಂಬುವುದು ಕಾಣಿರಣ್ಣ; 'ಭರ್ಗೋದೇವಸ್ಯ ಧೀಮಹಿ' ಎಂದುದಾಗಿ ಕೂಡಲಸಂಗಮನಲ್ಲದಿಲ್ಲೆಂದುದು ವೇದ.
>
> ಓಂ ದ್ಯಾವಾ ಭೂಮೀ ಜನಯನ್ ದೇವ ಏಕಃ; 'ಏಕೋ ಹಿ ರುದ್ರೋ ನದ್ವಿತೀಯಾಯತಸ್ಥುಃ' ಎಂದು ನಂಬಿರುವುದು ಕಾಣಿರಣ್ಣ; 'ಚಕಿತಮಭಿಧತ್ತೇ' ಎಂದು ಶ್ರುತಿ ಸಾರುತ್ತೈದಾವೆ. ಶ್ರುತಿತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯಾ, ಘನಕ್ಕೆ ಘನಮಹಿಮನ, ಮನಕ್ಕಗೋಚರನ, ಅಣೋರಣೀಯಾನ್ ಮಹತೋ ಮಹೀಯನ, ಮಹದಾಸಿ ಕೂಡಲಸಂಗಮದೇವನ.
>
> ವಿಶ್ವತೋ ಚಕ್ಷು ನೀನೇ ದೇವಾ; ವಿಶ್ವತೋ ಮುಖ ನೀನೇ ದೇವಾ; ವಿಶ್ವತೋ ಬಾಹು ನೀನೇ ದೇವಾ, ಕೂಡಲಸಂಗಮದೇವಾ.

ವೇದವಾದರತರಾದ ನಿರೀಶ್ವರ ಮೀಮಾಂಸಕರನ್ನು ಹಳಿಯುವಾಗಲೂ ಶ್ರೀ ಬಸವೇಶ್ವರರು ವೇದದ ಆಧಾರವನ್ನೇ ತೆಗೆದುಕೊಂಡಿದ್ದಾರೆ. ಅವರ ಮೂಗನ್ನು ಕುಯ್ಯಲು ಅವರು ಆರಿಸಿಕೊಂಡಿರುವ ಹರಿತವಾದ ಕತ್ತಿಯಾದರೂ ವೇದಮಂತ್ರವೇ.

> 'ಈಶ್ವರ ಸದ್ಭಾವೇ ಕಿಂ ಪ್ರಮಾಣಂ?' ಎಂಬ ಮೀಮಾಂಸಕನ ಮೂಗನ್ನು ಕುಯ್ಯಲು
>
> " ವಿಶ್ವತಶ್ಚಕ್ಷುರುತ ವಿಶ್ವತೋಮುಖೋಃ ವಿಶ್ವತೋಬಾಹುರುತ ವಿಶ್ವತಸ್ಪಾತ್
> ಸಬಾಹುಭ್ಯಾಂ ಧಮತಿ ಸಂಪ್ರತತ್ರೈರ್ದ್ಯಾವಾ ಭೂಮಿಾ ಜನಯನ್ ದೇವ ಏಕಃ "
>
> ಎಂಬ ಸುರುಗಿಯಲಿರಿದು ವೈಶೇಷಿಕ ಎಂಬ ಇಟ್ಟಿಗೆಯಲೊರಸಿ ಕೂಡಲಸಂಗಯ್ಯನೆಂಬ ಕನ್ನಡಿಯ ತೋರುವೆನು.

ಶೂದ್ರನು ಬ್ರಾಹ್ಮಣನಾಗಬೇಕಾದರೂ ಶ್ರೀ ಬಸವೇಶ್ವರರು ವೇದಮಂತ್ರದಿಂದಲಲ್ಲದೆ ಆಗದೆಂಬರು.

> ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ····
> " ಭರ್ಗೋದೇವ " ಎಂಬ ಮಂತ್ರವಲ್ಲದೆ ಮತ್ತೇನೂ ಮಾಡಲಾಗದು

ಎಂಬುದು ಬಸವೇಶ್ವರರ ವಚನ. ಹೀಗೆ ಬಸವಾದಿ ಪ್ರಮಥರ ನಿಲುವು ವೇದೋಪನಿಷತ್ತುಗಳ ವಿಷಯದಲ್ಲಿ ಎರಡು ತೆರವಾಗಿರುವುದು. ವೇದವೆಂದರೆ ಯಜ್ಞಯಾಗಾದಿ ಕರ್ಮಗಳನ್ನು ವಿಧಿಸುವು

ದಾವುದೋ ಅದು ಎಂಬ ಮೀಮಾಂಸಕರ ದೃಷ್ಟಿಯಿಂದ ಅದರ ವಿಷಯವಾಗಿ ಹೇಳುವಾಗ ವಚನಕಾರರು ವೇದವನ್ನು ತೆಗಳುವರು. ಪರಾತ್ಪರತತ್ವವನ್ನು ಬೋಧಿಸುವ ಸಂಹಿತೆಯಲ್ಲಿನ ಮಂತ್ರಗಳು ಅಥವಾ ಉಪನಿಷತ್ತಿನ ಮಂತ್ರಗಳು ಎಂಬ ದೃಷ್ಟಿಯಿಂದ ವೇದಗಳನ್ನು ಉಲ್ಲೇಖಿಸುವಾಗ ಅದನ್ನು ಅವರು ಗೌರವಿಸುವರು. ವೀರಶೈವರ ಮೊದಲನೆಯ ಆಧಾರ ಗ್ರಂಥವಾದ ಸಿದ್ಧಾಂತ ಶಿಖಾಮಣಿಯಲ್ಲಿಯೇ ಲಿಂಗಧಾರಣೆಯನ್ನು ಋಗ್ವೇದಾದಿ ವೇದಗಳ ಮಂತ್ರಗಳಿಂದ ಸಿದ್ಧಾಂತಮಾಡಲಾಗಿದೆ. ಅವುಗಳಲ್ಲಿ ಇದೊಂದು ಶ್ಲೋಕ:

ಋಗಿತ್ಯಾಹ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಂ ॥

ಶ್ರೀ ಬಸವೇಶ್ವರಾದಿ ವಚನಕಾರರಂತೆ ಆಚಾರ್ಯ ಶ್ರೀ ರೇಣುಕರೂ ಯಜ್ಞಯಾಗಾದಿ ಗಳನ್ನು ಒಪ್ಪರು. "ಶಿವಾರ್ಚಾ ಕರ್ಮ ವಿಜ್ಞೇಯಂ ಬಾಹ್ಯಂ ಯಾಗಾದಿ ನೋಚ್ಯತೇ" ಎಂದು ಸಿದ್ಧಾಂತ ಶಿಖಾಮಣಿಯಲ್ಲಿಯೇ ಹೇಳಿದೆ.

ರಾನಡೆಯವರು ಅವರ ಉಪನಿಷದ್ರಹಸ್ಯದಲ್ಲಿ ಹೇಳಿದಂತೆ "ಋಗ್ವೇದ ಸೂಕ್ತಗಳಲ್ಲಿ ಕಂಡುಬರುವ ಆ ನಿರ್ಮಲ ಭಾವವು ಬ್ರಾಹ್ಮಣ ಕಾಲದಲ್ಲಿ ಅದೆಂತು ಮಲಿನವಾಯಿತೆಂಬುದು ತಿಳಿಯದ ಮಾತು." ಹೀಗಿರುವಲ್ಲಿ ವೀರಶೈವರು ನಿರ್ಮಲ ಭಾವವಿಲ್ಲದ ಮಲಿನವಾದ ಬ್ರಾಹ್ಮಣ ಗ್ರಂಥಗಳಲ್ಲಿನ ಯಜ್ಞಯಾಗಗಳನ್ನು ತ್ಯಜಿಸಿ, ನಿರ್ಮಲವಾದ ಸಂಹಿತೆಯ ಸೂಕ್ತ ಗಳನ್ನೂ, ಉಪನಿಷತ್ತಿನಲ್ಲಿನ ವೇದಾಂತವನ್ನೂ ಗ್ರಹಿಸಿದುದರಲ್ಲಿ ಆಶ್ಚರ್ಯವೇನಿದೆ? ಇನ್ನು, ವೀರಶೈವರು ಯಜ್ಞೋಪವೀತವನ್ನು ಧರಿಸಲು ತಿರಸ್ಕರಿಸಿದುದು ಸರಿಯೇ ಎಂಬ ಪ್ರಶ್ನೆಯು ಉಳಿದಿದೆ. ಯಜ್ಞೋಪವೀತವೆಂದರೆ ಯಜ್ಞದಲ್ಲಿ ಧರಿಸುವ ಉಪವೀತ, ವಸ್ತ್ರ ಎಂದಾಗುವುದು. ಲೋಕಮಾನ್ಯ ತಿಲಕರ 'ಓರಾಯಿ' ಗ್ರಂಥದಲ್ಲಿ ವಿವರಿಸಿರುವ ಯಜ್ಞೋಪವೀತದ ಅರ್ಥವೂ, ಆಶ್ವಲಾಯನ ಗೃಹ್ಯಸೂತ್ರಗಳಲ್ಲಿ ತಂತುಮಯ ಜನಿವಾರದ ಧಾರಣೆಯು ಹೇಳಲ್ಪಟ್ಟಿಲ್ಲ ವೆಂಬುದೂ, ಯಜ್ಞಗಳ ಪ್ರಾಬಲ್ಯವು ಕಡಮೆಯಾದಂತೆಲ್ಲ ಯಜ್ಞದಲ್ಲಿ ಧರಿಸುತ್ತಿದ್ದ ಉಪವೀತವು ಮೂರೆಳೆ ದಾರವಾಯಿತೇ ಎಂಬುದೂ ವಿಚಾರಾರ್ಹವಿಷಯಗಳಾಗಿರಬಹುದು. ಆದರೆ ೧೮೨ನೆಯ ಪುಟದಲ್ಲಿ ಹೇಳಿದಂತೆ ಯಜ್ಞೋಪವೀತ ಧಾರಣೆಯು ವೇದದಲ್ಲಿ ವಿಧಿಸಲ್ಪಟ್ಟಿಲ್ಲವಾಗಿ ಯಜ್ಞೋಪವೀತವನ್ನು ಧರಿಸದಿರುವ ಮಾತ್ರಕ್ಕೆ ವೀರಶೈವರು ವೈದಿಕರಲ್ಲವೆನ್ನಲಾಗುವುದಿಲ್ಲ. ಆದುದರಿಂದ ಹೆಚ್ಚು ವಿಚಾರವು ಅನವಶ್ಯ. ವೀರಶೈವರು ವೇದದ ಸಂಹಿತೆಯಲ್ಲಿನ ಮಂತ್ರ ಗಳನ್ನೂ, ಉಪನಿಷತ್ತಿನ ಉಪದೇಶವನ್ನೂ ಆಧಾರವಾಗಿಟ್ಟುಕೊಂಡು ಬ್ರಾಹ್ಮಣಗಳಲ್ಲಿ ಹೇಳಿರುವ ಯಜ್ಞಯಾಗಾದಿಗಳನ್ನು ತ್ಯಜಿಸಿದುದರಲ್ಲಿ ಅರ್ಥವಿದೆ, ನ್ಯಾಯವಿದೆ; ಇದು ಗೀತೆ, ಉಪನಿಷತ್ತು, ಬ್ರಹ್ಮಸೂತ್ರ ಮೊದಲಾದ ಆಧಾರಗ್ರಂಥಗಳಲ್ಲಿ ಅನುಸರಿಸಿದ, ತ್ರಿಮತಾ ಚಾರ್ಯರು ಅನುಸರಿಸಿದ ಮಾರ್ಗಕ್ಕೆ ಅನುಸಾರವಾಗಿದೆ. ಆದುದರಿಂದ ವೀರಶೈವರು ಅವೈದಿಕ ರೆಂದಾಗಲೀ, ಹಿಂದುಗಳಲ್ಲವೆಂದಾಗಲೀ ಹೇಳುವುದು ಸರಿಯಲ್ಲ.

## ವೀರಶೈವರು ಆಗಮಾನುಯಾಯಿಗಳಾದುದರಿಂದ ಹಿಂದುಗಳಲ್ಲವೆ?

ವೀರಶೈವರು ಆಗಮಾನುಯಾಯಿಗಳು ಎಂದು ಹೇಳುವುದು ಸರಿಯಾದ ಮಾತೇ. ಆದರೆ ಆಗಮಾನುಯಾಯಿಗಳಾದ ಮಾತ್ರಕ್ಕೇ ಅವರನ್ನು ಅವೈದಿಕರೆನ್ನಲಾಗುವುದಿಲ್ಲ. ಉಪನಿಷತ್ತು

ಗಳಿಗೇ ಗೌರವವನ್ನು ಕೊಡದ ತ್ರಯೀ ವಿದ್ಯದ ಕರ್ಮಠವೈದಿಕರು ಆಗಮಗಳಿಗೆ ಮಾನ್ಯತೆಯನ್ನು ಕೊಡದಿದ್ದುದು ನಿಜ. ಆಗಮಾನುಯಾಯಿಗಳಾದ ಶಾಕ್ತರು ತಿರುಗಿಬಿದ್ದು **"ವೇದ ಶಾಸ್ತ್ರಪುರಾಣಾನಿ ಸಾಮಾನ್ಯಗಣಿಕಾ ಇವ । ಯಾ ಪುನಃ ಶಾಂಭವೀ ವಿದ್ಯಾ ಗುಪ್ತಾ ಕುಲವಧೂರಿವ"** ಎಂದು ಮೊದಲಾಗಿ ವೈದಿಕಾನುಯಾಯಿಗಳನ್ನು ಹೀಯಾಳಿಸಿದ್ದೂ ನಿಜವಿರಬಹುದು. ಆದರೆ ಹಿಂದೂಧರ್ಮವು ಸನಾತನ ಕಾಲದಿಂದಲೂ ಉಳಿದು ನಿಂತಿರುವುದು ಅದರ ಸಹಿಷ್ಣುತೆಯಿಂದಲೆನ್ನಬೇಕು. ಯಾವುದರಲ್ಲಿ ಒಳ್ಳೆಯದಿದ್ದರೂ ಅದನ್ನು ತನ್ನದಾಗಿ ಮಾಡಿಕೊಳ್ಳುವ ಶಕ್ತಿ ಅದಕ್ಕೆ ಇದೆ. ಆಗಮಗಳಲ್ಲಿದ್ದ ಮಾನ್ಯ ವಿಷಯಗಳನ್ನು ವೈದಿಕ ಧರ್ಮವು ಮಾನಿಸಿತು. ವೈಷ್ಣವ ಆಚಾರ್ಯರು ವೈಷ್ಣವಾಗಮಗಳು ವೈದಿಕವೆಂದು ಅವನ್ನು ಮಾನಿಸಿದರು. ಶೈವ ಆಚಾರ್ಯರು ಶೈವ ಆಗಮಗಳನ್ನು ವೈದಿಕವೆಂದು ಗೌರವಿಸಿದರು. ಶ್ರೀ ಶಂಕರಾಚಾರ್ಯರ ಮಠಗಳಲ್ಲೆಲ್ಲ ಶ್ರೀಚಕ್ರವನ್ನು ಸ್ಥಾಪಿಸಿದ್ದಾರೆ. ಸೌಂದರ್ಯ ಲಹರಿಯ ಒಂದು ಭಾಗವಾದ ಆನಂದಲಹರಿಯಲ್ಲಿ ಶ್ರೀಚಕ್ರದ್ದ ವಿಷಯವು ಬರುತ್ತದೆ. ಇದು ಶ್ರೀ ಶಂಕರಾಚಾರ್ಯರಿಂದ ರಚಿತವಾದ ಗ್ರಂಥ. ಶ್ರೀಚಕ್ರಪೂಜಾಧುರೀಣರಾದ ಶ್ರೀ ಶಂಕರರು ಶಾಕ್ತರಲ್ಲಿ ಸಮಯಮತಾನುಯಾಯಿಗಳೆಂಬುದರಲ್ಲಿ ಸಂದೇಹಕ್ಕೆ ಕಾರಣವಿಲ್ಲ. ಮಾನ್ಯ ರಾಧಾಕೃಷ್ಣನ್‌ರವರ ಇಂಡಿಯನ್ ಫಿಲಾಸಫಿಯಲ್ಲಿ ಹೇಳಿದಂತೆ, "Shankara was a professed shakta and his Advaitic exposition of the Vedanta, though overtly independent of the shakta Agamas, is influenced by Tantric theories and his discipline by Tantric practices." ಉಳಿದ ಆಚಾರ್ಯ ಶ್ರೇಷ್ಠರಲ್ಲಿ ಒಬ್ಬರಾದ ನೀಲಕಂಠರೆಂದೂ, ಶ್ರೀಕಂಠರೆಂದೂ ಪ್ರಸಿದ್ಧರಾದವರು **"ವಯಂ ತು ವೇದಶಿವಾಗಮಯೋಃ ಭೇದಂ ನ ಪಶ್ಯಾಮಃ"** ಎಂದರೆ ತಮಗೆ ವೇದಾಗಮಗಳಲ್ಲಿ ವ್ಯತ್ಯಾಸವೇ ಕಾಣುವುದಿಲ್ಲವೆಂದು ಹೇಳಿದ್ದಾರೆ. ಪ್ರಸಿದ್ಧ ವಿದ್ವಾಂಸರಾದ ಅಪ್ಪಯ್ಯ ದೀಕ್ಷಿತರ ನಿಲುವಾದರೂ ಇದೇ. ಹೀಗೆ ವೈದಿಕರಾದ ಆಚಾರ್ಯರೆಲ್ಲರೂ ಆಗಮಗಳನ್ನು ಮನ್ನಿಸುವರೆಂದಮೇಲೆ ಆಗಮಾನುಯಾಯಿಗಳಾದ ಮಾತ್ರಕ್ಕೇ ವೀರಶೈವರು ಅವೈದಿಕರೂ, ಹಿಂದುಗಳಲ್ಲದವರೂ ಹೇಗೆ ಆದಾರು?

ಈಗ ಹಿಂದೂದೇಶದಲ್ಲಿ ವೈದಿಕ ಧರ್ಮವು ನಾಮಾವಶೇಷವಾಗಿ ಹೋಗಿದೆ. ಈಗಿರುವುದು ಆಗಮಿಕ ಧರ್ಮವೆಂಬುದು ಎಲ್ಲರೂ ಒಪ್ಪಿದ ಮಾತು. ಮಾನ್ಯ ರಾಧಾಕೃಷ್ಣನ್‌ರವರ ಇಂಡಿಯನ್ ಫಿಲಾಸಫಿಯಲ್ಲಿ ಹೇಳಿದಂತೆ, "The living Hindu religion of today from the Cape Comorine to the remotest corners of Tibet is essentially Tantric." ಪಿ.ಟಿ.ಎಸ್. ಐಯ್ಯಂಗಾರ್ಯರ *History of Tamils* ಎಂಬ ಗ್ರಂಥದಲ್ಲಿ ಹೇಳಿದಂತೆ, "The religion as practised today by the Hindus is almost entirely based on the Agamas and has little or nothing to do with the Vedas." ಆದುದರಿಂದ ವೀರಶೈವರು ಆಗಮಾನುಯಾಯಿಗಳಾದ ಮಾತ್ರಕ್ಕೇ ಅವರು ಹಿಂದುಗಳಲ್ಲವೆನ್ನಲಾಗುವುದಿಲ್ಲ.

## ವರ್ಣಾಶ್ರಮ ಧರ್ಮಗಳನ್ನೂ ಸ್ತ್ರೀಪುರುಷ ತಾರತಮ್ಯವನ್ನೂ ವೀರಶೈವರು ಒಪ್ಪದ ಮಾತ್ರಕ್ಕೇ, ಅವರು ಹಿಂದುಗಳಲ್ಲವೆ?

ಪುರೋಹಿತರು, ಪೌರೋಹಿತ್ಯವನ್ನು ಹಣಗಳಿಸಲು ಉತ್ತಮವಾದ ಒಂದು ಕಸಬನ್ನಾಗಿ ಮಾಡಿಕೊಳ್ಳುವ ಮೊದಲು, ವೇದಗಳ ಕಾಲದಲ್ಲಿ ಜಾತಿಭೇದಗಳಿರಲಿಲ್ಲ. ಆತ್ಮಜ್ಞಾನವನ್ನು

ಪಡೆಯಲು ತಪಸ್ಸನ್ನಾಚರಿಸುವವರು ಬ್ರಾಹ್ಮಣರಾಗುತ್ತಿದ್ದರು. ಬಾಹುಬಲದಿಂದ ಜೀವಿಸುವವರು ಕ್ಷತ್ರಿಯ ವೃತ್ತಿಯನ್ನು ಕೈಗೊಳ್ಳುತ್ತಿದ್ದರು. ಸಾಮಾನ್ಯ ಜನರು ವ್ಯವಸಾಯ ಮಾಡುತ್ತ ವೈಶ್ಯರೆನಿಸಿಕೊಂಡಿದ್ದರು. ವೈಶ್ಯಪದವು ಒಂದು ಜಾತಿ ವಾಚಕಪದವಾಗಿರಲಿಲ್ಲ; ಆರ್ಯರೆಲ್ಲರನ್ನೂ ಸಾಮಾನ್ಯವಾಗಿ ವೈಶ್ಯರೆಂದೇ ಕರೆಯುತ್ತಿದ್ದರು. ಮಾನ್ಯ ರಾಧಾಕೃಷ್ಣನ್‌ರವರ ಇಂಡಿಯನ್ ಫಿಲಾಸಫಿಯಲ್ಲಿ ಹೇಳಿದಂತೆ—The original Aryans all belonged to one class, every one being a priest and soldier, trader and tiller of the soil. There was no privileged order of priests. The complexity of life led to a division of classes among the Aryans. Though, to start with, each could offer sacrifices to gods without anybody's mediation, priesthood and aristocracy separated themselves from the proletariat. Originally the term Vaishya referred to the whole people. ಬಾಹುಬಲದಿಂದ ಕ್ಷತ್ರಿಯನಾದವನು ತಪಸ್ಸನ್ನಾಚರಿಸಿ ಬ್ರಹ್ಮರ್ಷಿಯಾಗಬಹುದಾಗಿದ್ದಿತು. ವಿಶ್ವಾಮಿತ್ರನ ಉದಾಹರಣೆಯು ಪ್ರಸಿದ್ಧವಾಗಿದೆ. ವಿಶ್ವಾಮಿತ್ರನಂತಹ ಅನೇಕ ಕ್ಷತ್ರಿಯ ಮಂತ್ರದ್ರಷ್ಟಾರರು ಋಗ್ವೇದದ ಅನೇಕ ಋಕ್ಕುಗಳಿಗೆ ಋಷಿಗಳಾಗಿದ್ದಾರೆ. ಅಷ್ಟೇಕೆ, ದಾಸಸ್ತ್ರೀಯ ಪುತ್ರನಾದ ಕವಷನೆಂಬ ಋಷಿಯು ಋ. ೧೦ ಅ.ಸೂ. ೩೦ ರಿಂದ ೩೪ ಕ್ಕೆ ಋಷಿಯು. ಛಲಂದನ, ವತ್ಸ, ಸಂಕೀಲ ಎಂಬುವ ಋಷಿಗಳು ವೈಶ್ಯರು. ಸ್ತ್ರೀಯರಿಗೂ ಪುರುಷರಂತೆ ಬ್ರಹ್ಮಜ್ಞಾನಿಗಳಾಗಲು ಅವಕಾಶವಿತ್ತು. ಘೋಷಾ ಎಂಬ ಸ್ತ್ರೀಯು ಋಗ್ವೇದದ ಹತ್ತನೆಯ ಮಂಡಲ ೩೯–೪೦ ಮತ್ತು ೪೧ ನೆಯ ಸೂಕ್ತಗಳ ನಿರ್ಮಾತ್ರಿಯಾಗಿದ್ದಾಳೆ. ಮಂತ್ರದ್ರಷ್ಟೃಗಳಾದ ಸ್ತ್ರೀಯರಿಗೆ ಋಷಿಕಾ ಎಂದು ಹೆಸರು; ಇವರಲ್ಲಿ ಮೂರು ಪಂಗಡಗಳು. ಬೃಹದ್ದೇವತೆಯಲ್ಲಿ ಈ ಮೂರು ಗುಂಪಿನ ಸ್ತ್ರೀಯರ ಹೆಸರುಗಳನ್ನು ಕೊಟ್ಟಿದೆ. ಮೊದಲನೆಯ ಗುಂಪಿನವರಿವರು:

"ಘೋಷಾ ಗೋಧಾ ವಿಶ್ವವಾರಾ ಅಪಲೋಪನಿಷನ್ನಿಷತ್ ।
ಬ್ರಹ್ಮ ಜಾಯಾ ಜುಹುರ್ನಾಮ ಅಗಸ್ತ್ಯಸ್ಯ ಸ್ವಸಾ ದಿತಿಃ"

ಇನ್ನು ಅಗಸ್ತ್ಯ, ವಶಿಷ್ಠ, ಪರಾಶರ, ವೇದವ್ಯಾಸ ಮೊದಲಾದವರ ಚರಿತ್ರೆಗಳನ್ನು ವಿವೇಚಿಸಲೇಕೆ? ಆದುದರಿಂದಲೇ ನದಿಯ ಮೂಲವನ್ನೂ ಋಷಿಯ ಮೂಲವನ್ನೂ ವಿಚಾರಿಸಬಾರದೆಂಬುದು ನಾಣ್ಣುಡಿಯಾಗಿದೆ. ಒಟ್ಟಿನಲ್ಲಿ ಜನ್ಮಕ್ಕೆ ಜಾತಿಗೆ ಪ್ರಾಮುಖ್ಯತೆಯನ್ನು ಕೊಡದೆ ಬ್ರಹ್ಮಜ್ಞಾನಿಯೇ ಬ್ರಾಹ್ಮಣನೆಂಬ ಜಾಣನುಡಿಗೆ ಗೌರವ ಕೊಡಬೇಕು. ಈ ಆದರ್ಶವನ್ನು ಶ್ರೀ ಬಸವೇಶ್ವರರು ಎತ್ತಿ ಹಿಡಿದು ಸನಾತನ ಧರ್ಮವನ್ನು ಉದ್ಧರಿಸಲು ಯತ್ನಿಸಿದರು.

ಸಪ್ತಧಾತು ಸಮಂ ಪಿಂಡಂ, ಸಮಯೋನಿ ಸಮುದ್ಭವಂ ।
ಆತ್ಮಜೀವ ಸಮುತ್ಪನ್ನಂ ವರ್ಣಾನಾಂ ಕಿಂ ಪ್ರಯೋಜನಂ? ॥

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ? ಇದು ಕಾರಣ, ಕೂಡಲಸಂಗಮದೇವಾ ಅಂಗಸ್ಥಲವನರಿದವನೇ ಕುಲಜನು.

ಇನ್ನು ಉಪನಿಷತ್ಕಾಲದ ಸ್ಥಿತಿಯನ್ನು ನೋಡುವ. ರಾನಡೆಯವರ ಉಪನಿಷದ್ರಹಸ್ಯದಲ್ಲಿ ಹೇಳಿದಂತೆ—"ಬ್ರಾಹ್ಮಣ ಅಥವಾ ಕ್ಷತ್ರಿಯ ಇವುಗಳಲ್ಲಿ ಯಾವುದೋ ವರ್ಣಕ್ಕೆ ಅಧ್ಯಾತ್ಮ ಜ್ಞಾನದ ಗುತ್ತಿಗೆ ಕೊಟ್ಟಿತೆಂದು ಹೇಳುವುದು ಹಾಸ್ಯಾಸ್ಪದವಾಗುವುದು. ಅರ್ವಾಚೀನಕಾಲ

ದಲ್ಲಿರುವಂತೆಯೇ ಅಧ್ಯಾತ್ಮ ಜ್ಞಾನದಲ್ಲಿ ಅಧಿಕಾರವು ಅವನವನ ಯೋಗ್ಯತೆಯ ಮೇರೆಗೆ ಸಮಾಜದಲ್ಲಿ ಪ್ರತಿಯೊಂದು ಉಚ್ಚ ನೀಚ ವೃತ್ತಿಗೂ ಇತ್ತೆಂದು ಹೇಳಬಹುದು........ ಮೈತ್ರೇಯಿಯು ಆಧ್ಯಾತ್ಮಿಕ ಜ್ಞಾನದ ಪಿಪಾಸೆಯಿದ್ದ ಸ್ತ್ರೀವರ್ಗಕ್ಕೆ ಸೇರಿದವಳು; ವಾಗ್ಯುದ್ಧದಲ್ಲಿ ನಿಷ್ಣಾತಳಾದ ಗಾರ್ಗಿಯು ಸ್ತ್ರೀಯರ ಅಧಿಕಾರಗಳಿಗಾಗಿ ಹೆಣಸಾಡುವ ಉಪನಿಷತ್ ಕಾಲದ ಹೆಣ್ಣುಗಲಿಯು.'' ಹೀಗೆ ಉಪನಿಷತ್ಕಾಲದಲ್ಲಿ ಜಾತಿ ಜಾತಿಗೂ ತಾರತಮ್ಯವಿರಲಿಲ್ಲವೆಂಬುದೂ ಸ್ತ್ರೀಪುರುಷರಿಗೆ ಸಮಾನವಾದ ಅಧಿಕಾರವಿತ್ತೆಂಬುದೂ ಸ್ಪಷ್ಟವಾಗಿದೆ.

"ಸ್ತ್ರೀ-ಶೂದ್ರಾದಿಕಗಳಿಗೂ ಮುಕ್ತಿ ಸಿಗುವುದು ಶಕ್ಯವೆಂದು ತಿಳಿದರೆ ಅವರಿಗೆ ಜ್ಞಾನ ಪ್ರಾಪ್ತಿಯಾಗಲಿಕ್ಕೆ ಸಾಧನವಾವುದೆಂಬುದನ್ನು ಹೇಳಲಿಕ್ಕೆ ಬೇಕು. ಬಾದರಾಯಣಾಚಾರ್ಯರು 'ವಿಶೇಷಾನುಗ್ರಹಶ್ಚ' (ವೇ. ಸೂ. ೩–೪–೩೮) ಎಂದರೆ, ಪರಮೇಶ್ವರನ ವಿಶೇಷಾನುಗ್ರಹವು ಅವರಿಗೆ ಸಾಧನವೆಂದು ಹೇಳುತ್ತಾರೆ. ಕರ್ಮಪರ ಭಕ್ತಿ ಮಾರ್ಗವೆಂಬುದೇ ಈ ವಿಶೇಷಾನುಗ್ರಹಾತ್ಮಕ ಸಾಧನವು.'' ಹೀಗೆ ಲೋಕಮಾನ್ಯ ತಿಲಕರು ಅವರ ಗೀತಾರಹಸ್ಯದ ೪೩೩ ನೆಯ ಪುಟದಲ್ಲಿ ಹೇಳಿರುವುದು ಬ್ರಹ್ಮಸೂತ್ರದ ನಿಲುವನ್ನು ತಿಳಿಸುತ್ತದೆ. ಭಗವದ್ಗೀತೆಯಲ್ಲಿ ಜನನದಿಂದ ವರ್ಣ ವ್ಯವಸ್ಥೆಯನ್ನು ಮಾಡದೆ ಸ್ವಭಾವಕ್ಕೆ ಅನುಸಾರವಾಗಿ ಸ್ವಧರ್ಮವನ್ನು ನಿಶ್ಚಯಿಸಿದೆ. "**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ**'' ಎಂದು ಗೀತೆಯಲ್ಲಿ ಹೇಳಿದೆ. ಗೀತೆಯ ಕೊನೆಯ ಅಧ್ಯಾಯದಲ್ಲಿ ಈ ವಿಷಯವು ಸ್ಪಷ್ಟೀಕರಿಸಲ್ಪಟ್ಟಿದೆ:

"ಬ್ರಾಹ್ಮಣ ಕ್ಷತ್ರಿಯ ವಿಶಾಂ ಶೂದ್ರಾಣಾಂ ಚ ಪರಂತಪ ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ ॥''

"To understand the implications of gospel of svadharma as taught in the Gita, we have to go, not to the traditional duties of the Aryan caste system, but to the depths of human nature. In a very suggestive passage, it connects svadharma with svabhava or the individuals' own nature" (*Cultural Heritage of India*, Vol. 1, p. 131).

ಗೀತಾರಹಸ್ಯದ ೪೩೩ ನೆಯ ಪುಟದಲ್ಲಿ ಲೋಕಮಾನ್ಯ ತಿಲಕರು ಭಕ್ತಿಮಾರ್ಗ ವಿಷಯವಾಗಿ ಹೇಳಿರುವುದು ಇಲ್ಲಿ ಸಂಗ್ರಾಹ್ಯ ವಿಷಯವಾಗಿದೆ:

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥

"ಎಲೈ ಪಾರ್ಥನೆ, ನನ್ನ ಆಶ್ರಯದಿಂದ ಸ್ತ್ರೀಯರು, ವೈಶ್ಯರು, ಶೂದ್ರರು ಅಥವಾ ಅಂತ್ಯಜಾದಿ ಪಾಪಯೋನಿಗಳು ಕೂಡ ಪರಮ ಸಿದ್ಧಿಯನ್ನು ಹೊಂದುತ್ತಾರೆ'' ಎಂದು ಈ ಮಾರ್ಗದ ವಿಶೇಷ ಗುಣವು ಗೀತೆಯಲ್ಲಿ ವರ್ಣಿಸಲ್ಪಟ್ಟಿದೆ (ಗೀ. ೯–೩೨). ಇದೇ ಶ್ಲೋಕವು ಮಹಾಭಾರತದಲ್ಲಿ ಅನುಗೀತೆಯಲ್ಲಿ ಪುನಃ ಬಂದಿದ್ದು (ಮ.ಭಾ. ಅಶ್ವ. ೧೯–೬೧) ವನಪರ್ವಾಂತರ್ಗತವಾದ ಬ್ರಾಹ್ಮಣವ್ಯಾಧಸಂವಾದದಲ್ಲಿ ಮಾಂಸ ವಿಕ್ರಯ ಮಾಡುವ ವ್ಯಾಧನು ಬ್ರಾಹ್ಮಣನಿಗೂ, ಶಾಂತಿ ಪರ್ವದಲ್ಲಿ ತುಲಾಧಾರನು ಅಂದರೆ ವ್ಯಾಪಾರಿಯು ಜಾಜಲಿಯೆಂಬ ಹೆಸರಿನ ಬ್ರಾಹ್ಮಣ ತಪಸ್ವಿಗೂ ಸ್ವಧರ್ಮದಂತೆ ನಿಷ್ಕಾಮ ಬುದ್ಧಿಯಿಂದ ನಡೆದೇ ಮೋಕ್ಷವು ಹೇಗೆ ಸಿಕ್ಕುತ್ತದೆಂಬುದರ ನಿರೂಪಣ ಮಾಡಿದರೆಂದು ಕಥೆಗಳು ಅವೆ (ಮ.ಭಾ. ವನ. ೨೦೬–೨೧೪; ಶಾಂ. ೨೬೦–೨೬೩). ಇದರ ಮೇಲಿಂದ ಯಾವನ ಬುದ್ಧಿಯು ಸಮವಾಯಿತೋ ಅವನೇ ಶ್ರೇಷ್ಠನು, ಅವನ ಹೋರೆಯು ಬಡಿಗತನವಿರಲಿ, ವ್ಯಾಪಾರವಿರಲಿ ಅಥವಾ ಅವನು ಕಟಗನಿರಲಿ; ಯಾವುದೇ ಮನುಷ್ಯನ

ಯೋಗ್ಯತೆಯು ಹೋರೆಯ ಮೇಲೆ ಅಥವಾ ಜಾತಿಯ ಮೇಲೆ ಅವಲಂಬಿಸಿರದೆ ಸರ್ವಸ್ವೀ ಅವನ ಅಂತಃಕರಣದ ಶುದ್ಧಿಯು ಮೇಲೆ ಅವಲಂಬಿಸಿರುತ್ತದೆಂದು ಭಗವಂತನ ಹೇಳೋಣವಿರುತ್ತ ದೆಂಬುದು ಸ್ಪಷ್ಟವಾಗುತ್ತದೆ. ಈ ಮೇರೆಗೆ ಸಮಾಜದೊಳಗೆ ಸರ್ವರಿಗೂ ಮೋಕ್ಷದ್ವಾರವು ತೆರೆದಿರುವುದರಿಂದ ಸಮಾಜದಲ್ಲಿ ಒಂದು ಪ್ರಕಾರದ ಜಾಗ್ರತಿಯೂ ಉತ್ಪನ್ನವಾಗುತ್ತದೆ; ಅದರ ಸ್ವರೂಪವು ಮಹಾರಾಷ್ಟ್ರದೊಳಗಿನ ಭಾಗವತ ಧರ್ಮದ ಇತಿಹಾಸದ ಮೇಲಿಂದ ಸಹಜವಾಗಿ ತಿಳಿದುಬರುವಂತೆ ಇದೆ. ಪರಮೇಶ್ವರನಿಗೆ ಸ್ತ್ರೀಯೂ ಅಷ್ಟೇ, ಚಂಡಾಲನೂ ಅಷ್ಟೇ, ಬ್ರಾಹ್ಮಣನೂ ಅಷ್ಟೇ; ದೇವರು ಭಾವನೆಗೆ ಬಾಯಿಬಿಡುವವನು; ಪ್ರತೀಕಕ್ಕಲ್ಲ; ಕರೀ-ಕೆಂಪು ಬಣ್ಣಕ್ಕಲ್ಲ; ಮತ್ತು ಸ್ತ್ರೀ ಪುರುಷಾದಿ ಅಥವಾ ಬ್ರಾಹ್ಮಣ ಚಂಡಾಲಾದಿ ಭೇದಗಳಿಗೂ ಅಲ್ಲ. ತುಕೋಬನು ಅನ್ನುವುದೇನೆಂದರೆ (ಗಾ. ೨೩೪೨–೫,೬)

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ । ಚಾಂಡಾಲಾಂ ಆಹೇ ಅಧಿಕಾರ ।
ಬಾಲೇಂ ನಾರೀ ನರ । ಅಧಿಕರೋಣಿ ವೇಶ್ಯಾಹೀ ॥ ''

ಹೀಗೆ ಗೀತೆಯಲ್ಲಿನ ಸಮತಾಭಾವವು ಅನುಗೀತೆಯಲ್ಲಿಯೂ, ಮಹಾಭಾರತಾದಿ ಗ್ರಂಥ ಗಳಲ್ಲಿಯೂ, ಭಾಗವತ ಧರ್ಮದಲ್ಲಿಯೂ ಮುಂದುವರಿದಿದೆ. ಸ್ತ್ರೀ-ಶೂದ್ರರ ಮಾತಂತಿರಲಿ, ಪಶ್ಚಾತ್ತಾಪದಿಂದ ಪರಮಾತ್ಮನನ್ನು ಮರೆಹೊಗುವ ಪಾಪಿಗಳಿಗೂ ಮೋಕ್ಷದ್ವಾರವು ತೆರೆದಿದೆ ಯೆಂದು ಮೇಲಿನ ಗೀತಾಶ್ಲೋಕವು ಹೇಳುವುದು ಶ್ರೀ ಬಸವೇಶ್ವರ ವಚನವಿದನ್ನು ನೆನಪಿಗೆ ತರುತ್ತದೆ:

"ಎಲವೋ ಪಾಪ ಕರ್ಮವ ಮಾಡಿದವನೇ! ಎಲವೋ ಬ್ರಹ್ಮಹತ್ಯವ ಮಾಡಿದವನೆ!
ಒಮ್ಮೆ ಶರಣೆನ್ನೆಲವೊ! ಒಮ್ಮೆ ಶರಣೆಂದರೆ ಪಾಪಗಳು ಓಡುವುವು."

ಹೀಗೆ ಸರ್ವ ಧರ್ಮಗಳಲ್ಲಿಯೂ ಸ್ತ್ರೀಪುರುಷರಲ್ಲಿಯೂ ಸಮಾನತೆಯನ್ನು ಶ್ರೀ ಬಸವೇಶ್ವರರು ತೋರಿಸಿದುದು ಸನಾತನ ಧರ್ಮಕ್ಕೆ ಅನುಸಾರವಾಗಿಯೇ ಇದೆ.

ಇನ್ನು ಶ್ರಿಮತದ ಆಚಾರ್ಯರು ಈ ವಿಷಯದಲ್ಲಿ ಯಾವ ನಿಲುವನ್ನು ತಾಳಿದರೋ ನೋಡುವ—ಆಚಾರ್ಯರುಗಳಲ್ಲಿ, ಎಲ್ಲ ಮತದವರೂ ಪರಮಾತ್ಮನಲ್ಲಿ ಶರಣುಹೊಗುವುದರಿಂದ ಮೋಕ್ಷವನ್ನು ಪಡೆಯಬಹುದೆಂದು ಮೊದಲು ಸಾರಿದ ಕೀರ್ತಿ ಶ್ರೀ ರಾಮಾನುಜಾಚಾರ್ಯರಿಗೆ ಸಲ್ಲುವುದು. ಮಹಾಮಹೋಪಾಧ್ಯಾಯ ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು ಹಿಂದೂದರ್ಶನಸಾರದ ವಿಶಿಷ್ಟಾದ್ವೈತ ಪ್ರಕರಣದಲ್ಲಿ ಹೇಳಿದಂತೆ, "ಸುಲಭವಾದ ಸರ್ವಾಧಿ ಕಾರವಾದ ಪ್ರಪತ್ತಿ ವಿದ್ಯಾಸಂಪ್ರದಾಯವು ಪರಾಂಕುಶ, ಪರಕಾಲ, ನಾಥಮುನಿ, ಯಾಮುನಮುನಿ, ರಾಮಾನುಜಮುನಿ ಮೊದಲಾದವರಿಂದ ಪ್ರಚಾರಿಸಲ್ಪಟ್ಟು, ಲೋಕ ಸಂಗ್ರಹವು ವಿಸ್ತರಿಸಲ್ಪಡುವುದಕ್ಕೆ ಅವಕಾಶವಾಯಿತು. ಇದಕ್ಕೆ ಜಾತಿ ಕುಲ ಗೋತ್ರ ವಿದ್ಯಾ ವೃತ್ತಿಕಾಲ ದೇಶ ವಿಶೇಷ ಮೊದಲಾದ ಯಾವ ನಿಯಮಗಳೂ ಬೇಕಾಗಿಲ್ಲ. ಮನುಷ್ಯ ಪಶು ಪಕ್ಷಿ ಮೃಗ ಪ್ರಪತ್ತಿ ಮಾರ್ಗದಿಂದ ಆಯಾ ಜನ್ಮದಲ್ಲೇ ಮೋಕ್ಷವನ್ನು ಹೊಂದಬಹುದು."

ಶ್ರೀ ರಾಮಾನುಜಾಚಾರ್ಯರು ಮೇಲಿನ ನುಡಿಗಳಲ್ಲಿನ ನಿಲುವನ್ನು ತಮ್ಮ ನಡೆಯಲ್ಲಿ ತೋರಿಸಿದರು. ೧೯೬೧ನೆಯ ಇಸವಿಯ ಡಿಶೆಂಬರ್ ತಿಂಗಳ "ಕಲ್ಯಾಣ" ಮಾಸಿಕದಲ್ಲಿ ಇದರ ವಿವರಣೆಯು ಹೀಗೆ ಇದೆ:

"ರಾಮಾನುಜಾಚಾರ್ಯರಿಗೆ ನಿತ್ಯ ನದಿ ಸ್ನಾನದ ಪರಿಪಾಠವಿತ್ತು— ವಾರ್ಧಿಕ್ಯದ ಮೂಲಕ ಶಿಷ್ಯರನ್ನು ಜತೆಮಾಡಿಕೊಂಡು ಅವರ ಹೆಗಲ ಮೇಲೆ ಕೈಯಿಟ್ಟು ಹೋದರೆ,

ಬರುವಾಗ ಶೂದ್ರಶಿಷ್ಯನ ಹೆಗಲ ಮೇಲೆ ಕೈಯಿಟ್ಟುಕೊಂಡು ಮರಳುತ್ತಿದ್ದರು. ಕೆಲ ಬ್ರಾಹ್ಮಣ ಶಿಷ್ಯರು ಆಚಾರ್ಯರ ಈ ವೃತ್ತಿಯನ್ನು ಕಂಡು ಅಬ್ರಾಹ್ಮಣ್ಯ ಎಂದರು. ಆಚಾರ್ಯರು ನಕ್ಕು ಹೇಳಿದರು: ಶರೀರದ ಮಲ ಕಳೆದುಕೊಂಡು ಶುದ್ಧನಾಗಿ ಮಠಕ್ಕೆ ಬಂದು ಪೂಜೆ ಮಾಡಲು ಮನಸ್ಸು ಮಡಿಯಾಗಬೇಡವೆ? ನಾವು ಉಚ್ಚಜಾತಿಯವರೆಂಬುದೂ ಮನಸ್ಸಿನ ಮೈಲಿಗೆ; ಅದನ್ನು ಕಳೆದುಕೊಳ್ಳಲು ಶೂದ್ರಶಿಷ್ಯನ ಹೆಗಲು ಅನುಸರಿಸಿ ಬರುವೆ.''

ಶ್ರೀ ರಾಮಾನುಜಾಚಾರ್ಯರ ಈ ನಿಲುವಿನ ವಿಷಯವಾಗಿ ಶ್ರೀ ಚಕ್ರವರ್ತಿ ರಾಜ ಗೋಪಾಲಾಚಾರ್ಯರು ಸಹಾ ಬರೆದಿರುವರು. ಮೇಲುಕೋಟೆಯಲ್ಲಿ ಬ್ರಾಹ್ಮಣೇತರ ಗುರುಗಳ ಮಠವೊಂದಿರುವುದೂ, ಅಲ್ಲಿನ ದೇವಸ್ಥಾನಕ್ಕೆ ಅಂತ್ಯಜರು ಪ್ರವೇಶಿಸಲು, ವರ್ಷಕ್ಕೆ ಮೂರು ದಿನ ದಲ್ಲಿಯಾದರೂ ಅವಕಾಶವಿರುವುದೂ ಈ ನಿಲುವಿನ ಸ್ಮಾರಕವಾಗಿದೆ. ಶ್ರೀ ರಾಮಾನುಜರು ವಿವಿಧ ಜಾತಿಗಳಲ್ಲಿ ತಾರತಮ್ಯವನ್ನು ತೋರಿಸದಿರುವಂತಹ ಉದಾರ ಭಾವನೆಯು ಮಾಧ್ವರಲ್ಲಿಯೂ ಕಂಡುಬರುವುದೆಂಬುದು ಪ್ರಸಿದ್ಧವಾದ ಕನಕದಾಸರ ಚರಿತ್ರೆಯಿಂದ ತಿಳಿದುಬರುವುದು. ಭಕ್ತಿಯೇ ಮೋಕ್ಷಕ್ಕೆ ದಾರಿಯೆನ್ನುವ ಈ ಮತಗಳಿಗೆ ಭಕ್ತಿಸೂತ್ರಗಳು ಮಾರ್ಗದರ್ಶಕವಾಗಿವೆ. ನಾರದೀಯ ಭಕ್ತಿಸೂತ್ರಗಳಲ್ಲಿ **"ನಾಸ್ತಿ ತೇಷು ಜಾತಿವಿದ್ಯಾರೂಪಕುಲಧನಕ್ರಿಯಾದಿ ಭೇದಃ"** ಎಂಬುದು ೭೨ನೆಯ ಸೂತ್ರ. ಭಕ್ತಿಮಾರ್ಗದಲ್ಲಿ ಜಾತಿ ವಿದ್ಯಾರೂಪಕುಲಧನ ಕ್ರಿಯಾದಿ ಭೇದಗಳಿಲ್ಲವೆಂಬುದೇ ಈ ಸೂತ್ರದ ಅಭಿಪ್ರಾಯ.

ಬೌದ್ಧಧರ್ಮವು ಪ್ರಾಬಲ್ಯಹೊಂದಿ ಭಾರತೀಯ ಸನಾತನ ಹಿಂದೂಧರ್ಮವು ಕ್ಷೀಣವಾಗು ತ್ತಿದ್ದಾಗ, ಅದನ್ನು ಉದ್ಧರಿಸಿದ ಹಿರಿಮೆ ಶ್ರೀ ಶಂಕರಾಚಾರ್ಯರದು. **"ಜೀವೋ ಬ್ರಹ್ಮೈವ ನಾಪರಃ"** ಎಂದರೆ ಜೀವನು ಬ್ರಹ್ಮನಲ್ಲದೆ ಬೇರೆಯಲ್ಲವೆಂದು ಸಾರಿದ ಶ್ರೀ ಶಂಕರಾ ಚಾರ್ಯರು ಜೀವಜೀವರಲ್ಲಿ ತಾರತಮ್ಯವನ್ನು ಜಾತಿಯ ಆಧಾರದ ಮೇಲೆ ಕಂಡುದು ಆಶ್ಚರ್ಯವೇನೋ ಅಹುದು. ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರ ಭಾಷ್ಯದಲ್ಲಿ, ಶೂದ್ರರು ವೇದಾಧ್ಯಯನವನ್ನು ಮಾಡಿದರೆ ಆಗುವ ಶಿಕ್ಷೆಯನ್ನು ಹೀಗೆ ವಿವರಿಸಿರುವುದು ನಿಜ— **"ಭವತಿ ಚ ವೇದೋಚ್ಚರಣೇ ಜಿಹ್ವಾಚ್ಛೇದೋ ಧಾರಣೇ ಶರೀರಭೇದ ಇತಿ."** ಅಲ್ಲದೆ ಶ್ರೀ ಶಂಕರಾಚಾರ್ಯರ ಸಿದ್ಧಾಂತದ ಪ್ರಕಾರ ಬ್ರಹ್ಮವಿದ್ಯೆಗೆ "ಕರ್ಮಕಾಂಡಸಿದ್ಧನಾದ ಸಚ್ಛ್ರೋತ್ರಿಯನೇ ಅಧಿಕಾರಿ". **"ನ ಜಾತಿ ಶೂದ್ರೋ ಜಾನುಶ್ರುತಿಃ"** ಎಂಬ ವಿಷಯುಕ ವಾದ ಶಾಂಕರಭಾಷ್ಯವು ಶೂದ್ರರಿಗಂತೂ ಬ್ರಹ್ಮವಿದ್ಯೆಗೆ ಸ್ವಲ್ಪವಾದರೂ ಅಧಿಕಾರವಿಲ್ಲ ವೆಂಬುದನ್ನು ಸ್ಪಷ್ಟಪಡಿಸುತ್ತದೆ. ಆದರೆ, ಪರಮ ಜ್ಞಾನಿಗಳಾದ ಶ್ರೀ ಶಂಕರಾಚಾರ್ಯರಿಗೆ ಈ ತಾರತಮ್ಯಭಾವವು ಸರಿಯಲ್ಲವೆಂಬುದು ಅನಿರೀಕ್ಷಿತವಾದ ರೀತಿಯಿಂದ ವ್ಯಕ್ತವಾಯಿತು. ಪಾಲ್ಗಡಲಲ್ಲಿರಲಿ, ಬಚ್ಚಲಿನಲ್ಲಿರಲಿ ಜಲವನ್ನು ಸೂರ್ಯನು ತನ್ನ ಕಿರಣಗಳಿಂದ ಸ್ವೀಕರಿಸಿ ಮಳೆಯ ರೂಪದಲ್ಲಿ ಎಲ್ಲ ಜನರಿಗೂ ಕೊಡುವಂತೆ, ಶ್ರೀ ಶಂಕರರು ಜ್ಞಾನವು ಚಂಡಾಲನಿಂದ ಬಂದರೂ ಅದನ್ನು ಸ್ವೀಕರಿಸಿ ಜಗತ್ತಿಗೆ ಉಪದೇಶಿಸಲು ಸಿದ್ಧರಾಗಿದ್ದರು.

ಕದಾಚಿಚ್ಛಂಕರಾಚಾರ್ಯಃ ಕಾಶೀಂ ಪ್ರತಿ ಪುರೀಂ ಯಯೌ ।
ಚಂಡಾಲರೂಪಿಣಂ ದೃಷ್ಟ್ವಾ ಗಚ್ಛ ಗಚ್ಛೇತಿ ಚಾಬ್ರವೀತ್ ॥
ಅನ್ನಮಯಾದನ್ನಮಯಮಥವಾ ಚೈತನ್ಯಮೇವ ಚೈತನ್ಯಾತ್ ।
ಯತಿವರ ದೂರೀಕರ್ತುಂ ವಾಂಛಸಿ ಕಿಂ ಬ್ರೂಹಿ ಗಚ್ಛ ಗಚ್ಛೇತಿ ॥
ಪ್ರತ್ಯಗ್‌ವಸ್ತುನಿ ನಿಸ್ತರಂಗ ಸಹಜಾನಂದಾವಬೋಧಾಂಬುಧೌ ।
ವಿಪ್ರೋಽಯಂ ಶ್ವಪಚೋಽಯಮಿತ್ಯಪಿ ಮಹಾನ್ ಕೋಽಯಂ ವಿಭೇದ ಭ್ರಮಃ ॥

ಕಿಂ ಗಂಗಾಂಬುಸಿ ಬಿಂಬಿತೇಽಂಬರಮಣೌ ಚಂಡಾಲವಾಟೀಪಯಃ ।
ಪೂರೇಚಾಂತರಮಸ್ತಿ ಕಾಂಚನಘಟೀ ಮೃತ್ಕುಂಭಯೋರ್ವಾಂಬರೇ ॥
ಜಾಗ್ರತ್‌ಸ್ವಪ್ನಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಂಭತೇ ।
ಯಾಬ್ರಹ್ಮಾದಿ ಪಿಪೀಲಿಕಾಂತ ತನುಷು ಪ್ರೋತಾ ಜಗತ್‌ಸಾಕ್ಷಿಣೀ ॥
ಸೈವಾಹಂ ನ ಚ ದೃಶ್ಯವಸ್ತ್ವಿತಿ ದೃಢಪ್ರಜ್ಞಾಪಿ ಯಸ್ಯಾಸ್ತಿ ಚೇತ್ ।
ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾಮನೀಷಾ ಮಮ ॥

ಶ್ರೀ ಕಾಶೀಕ್ಷೇತ್ರದಲ್ಲಿ ಹೋಗುತ್ತಿದ್ದಾಗ ಶ್ರೀ ಶಂಕರಾಚಾರ್ಯರು ಒಬ್ಬ ಚಂಡಾಲನನ್ನು ಕಂಡು 'ದೂರ ಹೋಗು, ದೂರ ಹೋಗು' ಎಂದರು. ಚಂಡಾಲನು ನಿಂದ ನೆಲದ ಮಹಿಮೆಯೋ ಅಥವಾ ಶಿವನೇ ಅವನ ರೂಪವಾಗಿ ಬಂದಿದ್ದನೋ! ಕಾಶೀಕ್ಷೇತ್ರವು ಹಿಂದಿನಿಂದಲೇ ಆರ್ಯದ್ರಾವಿಡ ಸಂಸ್ಕೃತಿಯಿಂದ ಬಳೆದುನಿಂದ ನಾಗರಿಕತೆಯ ಹಿರಿಮೆಯೊ! ಚಂಡಾಲನು ಮರುನುಡಿದನು. ನನ್ನ ದೇಹವು ತುಚ್ಛವೆಂದೋ ಅಥವಾ ನನ್ನ ಆತ್ಮವು ತುಚ್ಛವೆಂದೋ ನೀವು ನನ್ನನ್ನು ದೂರ ಹೋಗೆನ್ನುವುದು ಎಂದು ಅವನು ಪ್ರಶ್ನಿಸಿದನು. ನನ್ನ ನಿಮ್ಮ ದೇಹಗಳು ಅನ್ನಮಯವೇ ಆದುದರಿಂದ ಅನ್ನಮಯವಾದ ದೇಹಗಳಲ್ಲಿರುವ ರಕ್ತ ಮಾಂಸ ಮೂತ್ರ ಪುರೀಷವೇ ಮೊದಲಾದವುಗಳೆಲ್ಲ ಇಬ್ಬರ ದೇಹದಲ್ಲೂ ಇರುವುವು. ಇನ್ನು ನಮ್ಮ ದೇಹಗಳಲ್ಲಿರುವ ಆತ್ಮವನ್ನು ಕುರಿತು ನೀವು ಹೇಳುವುದಾದರೆ ಆತ್ಮವು ಚಿನ್ಮಾತ್ರವೆ. ಅದು ಆನಂದಸ್ವರೂಪವಾದುದು. ಆ ನಿಸ್ತರಂಗ ಚಿದಾನಂದ ಸಾಗರದಲ್ಲಿ ಇವನು ಬ್ರಾಹ್ಮಣನು ಇವನು ಚಂಡಾಲನು ಎಂದು ಹೇಳುವ ವಿಭೇದಭ್ರಮೆಗೆ ಅವಕಾಶವಿಲ್ಲವೆಂಬುದೇ ಚಂಡಾಲನ ವಾದ. ಒಬ್ಬನೇ ಸೂರ್ಯನು ಬೇರೆ ಬೇರೆ ನೀರಿನ ಪಾತ್ರೆಗಳಲ್ಲಿ ಪ್ರತಿಬಿಂಬಿಸಿ ಬೇರೆ ಬೇರೆಯಾಗಿ ಕಾಣುವಂತೆ ಒಬ್ಬ ಪರಬ್ರಹ್ಮನೇ ಬೇರೆ ಬೇರೆ ಅಂತಃಕರಣಗಳಲ್ಲಿ ಪ್ರತಿಬಿಂಬಿಸಿ ಬೇರೆ ಬೇರೆಯಾಗಿ ಕಾಣುವನೆಂಬುದು ಶಾಂಕರ ಸಿದ್ಧಾಂತ. ಆದುದರಿಂದ ಗಂಗೆಯಲ್ಲಿ ಪ್ರತಿಬಿಂಬಿಸಿದ ಸೂರ್ಯನೂ ಚಂಡಾಲನ ಅಂಗಳದ ನೀರಿನಲ್ಲಿ ಪ್ರತಿಬಿಂಬಿಸಿದ ಸೂರ್ಯನೂ ಬೇರೆಯೆ ಎಂದು ಚಂಡಾಲನು ಪ್ರಶ್ನಿಸಿದನು. ಎಲ್ಲ ಜೀವರುಗಳಲ್ಲಿರುವ ಆತ್ಮನು ಒಂದೆಯೆಂದು ತಾವೇ ಹೇಳಿರುವ ನುಡಿಗೂ ದೂರ ಹೋಗೆಂದು ಚಂಡಾಲನಿಗೆ ಹೇಳಿದ ತಮ್ಮ ನಡೆಗೂ ವ್ಯತ್ಯಾಸವನ್ನು ಶ್ರೀ ಶಂಕರಾಚಾರ್ಯರು ಮನಗಂಡರು. ಗುಣೈಕ ಪಕ್ಷಪಾತಿಗಳಾದ ಶ್ರೀ ಶಂಕರಾಚಾರ್ಯರು ಚಂಡಾಲನಲ್ಲಿದ್ದರೂ ಒಳ್ಳೆಯದನ್ನು ಸ್ವೀಕರಿಸಲು ಸಿದ್ಧರಾಗಿದ್ದ ಹಿರಿಯ ವ್ಯಕ್ತಿಗಳು. ಶ್ರೀ ಶಂಕರನೇ ಚಂಡಾಲರೂಪಿನಿಂದ ಬಂದು ತಮಗೆ ಉಪದೇಶಿಸಿದನೆಂದು ಭಾವಿಸಿ, ಬ್ರಹ್ಮ ಮೊದಲಾಗಿ ಇರುವೆ ಕೊನೆಯಾಗಿ ಇರುವ ಪ್ರಾಣಿಗಳಲ್ಲೆಲ್ಲಾ ವ್ಯಾಪಿಸಿರುವ ಪರಬ್ರಹ್ಮನೇ ತಾನೆಂದು ತಿಳಿದಿರುವನು ಚಂಡಾಲನಾಗಲೀ, ಬ್ರಾಹ್ಮಣನಾಗಲೀ ಅವನನ್ನು ಗುರುವೆಂದು ತಿಳಿಯುವುದಾಗಿ ಶ್ರೀ ಶಂಕರಾಚಾರ್ಯರು ಉದ್ಘೋಷಿಸಿದರು.

ಬಸವೇಶ್ವರಾದಿ ಶರಣರು ಜಾತಿ ಜಾತಿಗಳಲ್ಲಿ ತಾರತಮ್ಯವನ್ನು ತೋರಿಸದೆ ಗುಣದಿಂದ ತಾರತಮ್ಯವನ್ನು ಕಾಣುತ್ತಿದ್ದುದು ವೇದೋಪನಿಷತ್ತುಗಳಲ್ಲಿಯೂ, ಬ್ರಹ್ಮಸೂತ್ರ, ಭಗವದ್ಗೀತೆಗಳಲ್ಲಿಯೂ, ಪುರಾಣೇತಿಹಾಸಗಳಲ್ಲಿಯೂ, ನಾರದಾದಿ ಭಕ್ತಿಸೂತ್ರಗಳಲ್ಲಿಯೂ ಹೇಳಿರುವುದಕ್ಕೆ ಅನುಸಾರವಾಗಿಯೇ ಇದೆ; ಶ್ರೀ ಶಂಕರ ರಾಮಾನುಜಾದಿ ಆಚಾರ್ಯರ ನುಡಿಗಳಿಗೂ ಅನುಸಾರವಾಗಿದೆ. ಶರಣರು ಜಾತಿ ಕುಲಗಳನ್ನೂ, ಅವುಗಳಿಂದ ಬಂದಿರುವ ಕಸಬುಗಳನ್ನೂ

ಮಾನಿಸಲಿಲ್ಲವೆಂದಲ್ಲ. ಇವುಗಳಿಗೆ ಒಂದು ರೀತಿಯ ಪ್ರಾಮುಖ್ಯತೆಯೇ ಬಂದಿತು. ಏಕೆಂದರೆ ಪ್ರತಿಯೊಬ್ಬನೂ ತನ್ನ ಸಂಸಾರವನ್ನೂ ಚರತಿಂಥಿಣಿಯನ್ನೂ ಪೋಷಿಸಲು ಆವಶ್ಯಕವಾದ ಕಸಬನ್ನು ಮಾಡಲೇಬೇಕಾಗಿದ್ದಿತು. ಗೀತೆಯಲ್ಲಿ "ಯೋಗಃ ಕರ್ಮಸು ಕೌಶಲಂ" ಎಂದು ಹೇಳಿದಂತೆ ಶರಣರು ನಿಷ್ಕಾಮಕರ್ಮಕ್ಕೆ ಕಾಯಕವೆಂದು ಹೆಸರಿಟ್ಟಿದ್ದರು. ಆದುದರಿಂದ ಅವರವರ ಜಾತಿಯ ಕುಲಕಸಬೇ ಅನೇಕ ಶರಣರಿಗೆ ಅಡ್ಡಹೆಸರಾಗಿದ್ದಿತು. ಹಡಪದ ಅಪ್ಪಣ್ಣ, ಮಾದರ ಕೇತಯ್ಯ, ಜೇಡರ ದಾಸಿಮಯ್ಯ ಎಂಬಿವೇ ಮೊದಲಾದ ಹೆಸರುಗಳಿಂದ ಶರಣರು ಹೆಮ್ಮೆಯಿಂದ ಕರೆದುಕೊಳ್ಳುತ್ತಿದ್ದರು. ಆದರೆ ಅವರಲ್ಲಿ ಮೇಲು ಕೀಳೆಂಬ ಭಾವನೆಯಿರಲಿಲ್ಲ. ಆದುದರಿಂದ ಶ್ರೀ ಬಸವೇಶ್ವರರು ಎಲ್ಲಾ ಜಾತಿಯವರೂ ಒಂದೇ ಸಮ; ಗುಣಗಳಿಂದ ಹಿರಿಯ ಕಿರಿಯರೆನ್ನಬೇಕೇ ಹೊರತು ಜಾತಿಯಿಂದಲ್ಲವೆಂಬ ಮಾತನ್ನು ನುಡಿಯಿಂದ ನಡೆಗೆ ತಂದರು. ಈ ರೀತಿ ನಡೆದುದರಿಂದ ವೀರಶೈವರು ಭಾರತೀಯ ಸನಾತನ ಹಿಂದೂ ಧರ್ಮದಿಂದ, ಸಾಖರೆಯವರು ಹೇಳುವಂತೆ, ಹೊರಗಾಗರು. ಸೂಕ್ತ ಮಾರ್ಗದಿಂದ ಎಲ್ಲ ಜಾತಿಯವರೂ ಮೋಕ್ಷವನ್ನು ಪಡೆಯಲು ಅರ್ಹರು ಎಂದು ನುಡಿದು ನಡೆದ ಮಾತ್ರಕ್ಕೇ ಹಿಂದೂಧರ್ಮದಿಂದ ಹೊರಗಾಗುವುದಾದರೆ ಆ ರೀತಿ ನುಡಿದು ನಡೆದ ವೀರಶೈವದೊಂದಿಗೆ

> ಯಾ ಬ್ರಹ್ಮಾದಿ ಪಿಪೀಲಿಕಾಂತ ತನುಷು ಪ್ರೋತಾ ಜಗತ್ಸಾಕ್ಷಿಣೀ
> ಸೈವಾಹಂ ನ ಚ ದೃಶ್ಯವಸ್ತ್ವಿತಿ ದೃಢಪ್ರಜ್ಞಾಪಿ ಯಸ್ಯಾಸ್ತಿ ಚೇತ್
> ಚಂಡಾಲೋऽಸ್ತು ಸ ತು ದ್ವಿಜೋऽಸ್ತು ಗುರುರಿತ್ಯೇಷಾಮನೀಷಾ ಮಮ ॥

ಎಂದು ಹೇಳಿದ ಶ್ರೀ ಶಂಕರಾಚಾರ್ಯರೇ ಮೊದಲಾದ ಆಚಾರ್ಯರೂ ಹಿಂದೂಮತದ ಹೊರಗಾಗುವರು! ಆಗ ಭಗವದ್ಗೀತಾ ಬ್ರಹ್ಮಸೂತ್ರಾದಿಗಳು ಹಿಂದೂಧರ್ಮದ ಆಧಾರಗಳಾಗವು.

ಜಾತಿ ಜಾತಿಗಳಲ್ಲಿಯೂ ಸ್ತ್ರೀಪುರುಷರಲ್ಲಿಯೂ ತರತಮ ಭಾವವನ್ನು ವೇದಗಳ ಆದಿ ಕಾಲದಲ್ಲಿ ಆರ್ಯರು ತೋರಿಸಲಿಲ್ಲ. ಇದನ್ನು ಗೀತೋಪನಿಷತ್ತಿನಲ್ಲಿ ಮಾನಿಸಿಲ್ಲ. ಬ್ರಾಹ್ಮಣಗಳ ಕಾಲದಲ್ಲಿ ಹುಟ್ಟಿ ಸ್ಮೃತಿಗಳ ಕಾಲದಲ್ಲಿ ಬಲಿತ ಈ ರೋಗವನ್ನು ಪರಿಹರಿಸಲು ಹಿಂದಿನಿಂದಲೂ ಅನೇಕ ಪ್ರಯತ್ನಗಳು ನಡೆದವು. ಕಿತ್ತುಹಾಕಿದಂತೆಲ್ಲ ಮತ್ತೆ ಮತ್ತೆ ಹುಟ್ಟಿ ನೆಲವನ್ನೆಲ್ಲ ಆಕ್ರಮಿಸುವ ಮುಳ್ಳಿನ ಗಿಡಗಳಂತೆ ಈ ರೋಗವು ಪರಿಹಾರ ಪ್ರಯತ್ನಗಳಿಗೆ ಜಗ್ಗದೆ, ದೇಶವನ್ನು ಶೋಷಿಸುತ್ತಿರುವುದು. ಕ್ರಿಸ್ತಪೂರ್ವದಲ್ಲಿಯೇ ಭಗವಾನ್ ಬುದ್ಧನು ಇದರ ನಿರ್ಮೂಲಕ್ಕಾಗಿ ಪ್ರಯತ್ನಿಸಿದನು. ಆದರೆ ಇಂದೂ ಈ ರೋಗವಿದ್ದೇ ಇದೆ. ದೇಶದ ಶಾಸನಗಳಲ್ಲಿ ಇದರ ವಿರುದ್ಧ ಕಾಯಿದೆಗಳಾಗಿವೆ; ರಾಷ್ಟ್ರಾಧ್ಯಕ್ಷರುಗಳೂ ಪ್ರಧಾನ ಮಂತ್ರಿಗಳೂ ಇದನ್ನು ಖಂಡಿಸುತ್ತ ಬಂದಿರುವರು. ರಾಷ್ಟ್ರಪಿತರಾದ ಮಹಾತ್ಮ ಗಾಂಧಿಯವರು ಇದಕ್ಕಾಗಿ ಪ್ರಾಣವನ್ನು ತೆತ್ತರು. ಎಷ್ಟೋ ಶತಮಾನಗಳ ಹಿಂದೆಯೇ ಶ್ರೀ ಬಸವೇಶ್ವರರು ತನು ಮನ ಧನ ಪ್ರಾಣಗಳನ್ನು ಈ ಕಾರ್ಯಕ್ಕೆ ಮೀಸಲಾಗಿಟ್ಟು ಅವರ ಜೀವನವನ್ನೇ ಇದಕ್ಕೆ ಧಾರೆಯೆರೆದರು. ಮಹಾತ್ಮರಾದ ಬುದ್ಧ ಬಸವ ಗಾಂಧಿಯವರು ತಮ್ಮ ಜೀವಿತ ಕಾಲವನ್ನು ಇದಕ್ಕಾಗಿಯೇ ಸವೆಸಿದರು. ಕೊನೆಯಲ್ಲಿ ಅವರ ವಿಷಯದಲ್ಲಿ 'ಪ್ರೇತ್ಯಾಸ್ಮಲ್ಲೋಕಾದಮೃತಾ ಭವಂತಿ" ಎಂದು ಹೇಳಬೇಕು, ಅಷ್ಟೆ.

ಈ ರೀತಿ ಸಮತಾಭಾವವನ್ನು ಜಾತಿಜಾತಿಗಳಲ್ಲಿಯೂ ಸ್ತ್ರೀ ಪುರುಷರಲ್ಲಿಯೂ ತೋರಿಸಿದುದರಲ್ಲಿ ವೀರಶೈವರು ಮೊದಲು ವೇದಗಳ ಕಾಲದಲ್ಲಿದ್ದ ಸಮತಾಭಾವವನ್ನೇ

ಪುನರುಜ್ಜೀವನಗೊಳಿಸಿದುದಾಗಿದೆ. ಗೀತೋಪನಿಷತ್ತುಗಳು ಸಾರಿದುದನ್ನೇ ಆಚರಣೆಯಲ್ಲಿ ತಂದುದಾಗಿದೆ. ಇತಿಹಾಸಪುರಾಣಾದಿಗಳಲ್ಲಿ ಹೊಗಳಲ್ಪಟ್ಟ ಮಾರ್ಗದಲ್ಲಿಯೇ ನಡೆದುದಾಗಿದೆ. ಇದು ಹಿಂದೂಧರ್ಮದಲ್ಲಿನ ಶ್ರೇಷ್ಠಭಾವನೆಗಳಿಗನುಸಾರವಾದುದಾಗಿದೆ. ಪ್ರೊ॥ ಸಾಖರೆಯವರು ವೀರಶೈವವು ಹಿಂದೂಧರ್ಮವಲ್ಲವೆಂಬುದನ್ನು ರಾಷ್ಟ್ರಾಧ್ಯಕ್ಷರಾದ ಮಾನ್ಯ ರಾಧಾಕೃಷ್ಣನ್‌ರವರು ಒಪ್ಪದೆ ಹೇಳಿದುದು ಮತ್ತೊಮ್ಮೆ ಪಠನಾರ್ಹವಾಗಿದೆ:

"As the Lingayat religion accepts the authoritativeness of the Agamas and repudiates the distinctions of caste, it is said to be non-Hindu. I am afraid this is taking a somewhat narrow view of the spirit of Hinduism." ಟ್ಯಾಗೋರ್ ಲಾ ಪ್ರೊಫೆಸರ್ ಸುಬ್ರಹ್ಮಣ್ಯಂರವರು ಹೇಳಿದಂತೆ, "In the 12th century this ancient creed was revised and established on a sound cosmopolitan basis by Sri Basavesvara of Kalyan against the inroads of the parachial Smritic Brahmanism. Thurston's *Castes and Tribes of India*, Vol. IV, page 236 ರಲ್ಲಿ ಹೀಗೆ ಹೇಳಿದೆ: "The Lingayats....reverence the Vedas but disregard the later commentaries....Their faith purports to be primitive Hindu faith cleared of all priestly mysticism."—ಹೀಗೆ ವೀರಶೈವದಲ್ಲಿ ಸನಾತನ ಭಾರತೀಯ ಧರ್ಮವು ಉದ್ಧಾರವಾದುದು ಸ್ಪಷ್ಟ.

## ಉಪಸಂಹಾರ

ವೀರಶೈವಧರ್ಮದ ಉಗಮ ಮತ್ತು ಪ್ರಗತಿಯನ್ನು ಅನ್ವೇಷಣೆಮಾಡುವ ವ್ಯಾಜದಲ್ಲಿ ಭಾರತದ ಸನಾತನಧರ್ಮದ ಉಗಮ ಮತ್ತು ಪ್ರಗತಿಯ ಅನ್ವೇಷಣವನ್ನೂ ಮಾಡಿದಂತಾಗಿದೆ. ಪ್ರಪಂಚದಲ್ಲೆಲ್ಲ ಅತ್ಯಂತ ಪ್ರಾಚೀನಧರ್ಮವಾದ ಶೈವಧರ್ಮದ ಉಗಮವು ಆದುದು ಭಾರತದಲ್ಲಿಯೇ ಎಂಬುದು ಗಮನಾರ್ಹವಾದುದು. ಭಾರತದ ಪೂರ್ವನಿವಾಸಿಗಳಾದ ದ್ರಾವಿಡರನ್ನು ನಾಗರಿಕತೆಯಲ್ಲಿ ಮೀರಿಸಿದವರು ಅಂದು ಪ್ರಪಂಚದಲ್ಲಿ ಎಲ್ಲಿಯೂ ಇರಲಿಲ್ಲ. ಶೈವದ ಪರಿಪೂರ್ಣರೂಪವಾದ ವೀರಶೈವಧರ್ಮದ ಪಶುಪತಿಪರಶಿವನ ಕಲ್ಪನೆ, ಶಕ್ತಿವಿಶಿಷ್ಟಶಿವನ ಕಲ್ಪನೆ, ಲಿಂಗಧಾರಣೆ, ಲಿಂಗಾರ್ಚನೆ ಮೊದಲಾದ ಕಲ್ಪನೆಗಳ ಮೂಲರೂಪಗಳು ಆಗಲೇ ಅವರಲ್ಲಿದ್ದುದನ್ನು ಕಾಣಬಹುದು. ಆರ್ಯರ ಆಗಮನದಿಂದ ದ್ರಾವಿಡರ ಧರ್ಮಕ್ಕೆ ಮೊದಲು ಮೊದಲು ಆಘಾತವಾದರೂ ಆರ್ಯದ್ರಾವಿಡ ಸಂಸ್ಕೃತಿಗಳು ಸಮ್ಮಿಳನವಾದುದು ಉತ್ಕೃಷ್ಟಧರ್ಮದ ಉದಯಕ್ಕೆ ಕಾರಣವಾಯಿತು. ಅನೀತಿಯುತವೂ ಕ್ರೂರವೂ ಆದ ಯಜ್ಞಯಾಗಗಳನ್ನು ವಿರೋಧಿಸುವುದರಲ್ಲಿ ದ್ರಾವಿಡರಿಗೆ ಸಹಾಯಮಾಡಿದ ಆರ್ಯರೇ ಆದ ಅಸುರವ್ರಾತ್ಯರೂ ದ್ರಾವಿಡರೂ ಒಂದಾಗಿ, ವೃಷಭನು ಪುರಾತನ ಶೈವಮತವನ್ನು ಸ್ಥಾಪಿಸಲು ಕಾರಣರಾದರು. ಉಪನಿಷತ್ತಿನ ಜ್ಞಾನಮಾರ್ಗವೂ, ಆಗಮಗಳಲ್ಲಿನ ಭಕ್ತಿಮಾರ್ಗವೂ, ಯೋಗಿಗಳ ಯೋಗಮಾರ್ಗವೂ ಮುಪ್ಪುರಿಗೊಂಡು ವೀರಶೈವದ ಸಾಧನಮಾರ್ಗವಾಗಿರುವುದರ ಮೂಲವನ್ನೂ, ಭೋಕ್ತೃಭೋಗ್ಯಪ್ರೇರಕರೂ ಅದ್ವೈತವೇ ಆದ ಪರಶಿವಬ್ರಹ್ಮದ ತ್ರಿವಿಧವೆಂಬ ವೀರಶೈವ ಶಿವಾದ್ವೈತಸಿದ್ಧಾಂತದ ಮೂಲವನ್ನೂ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ, ಅವುಗಳ ವಿಸ್ತರಣೆಯನ್ನು ವಾಯವೀಯ ಸಂಹಿತೆಯನ್ನೊಳಗೊಂಡ ಶಿವಮಹಾಪುರಾಣದಲ್ಲಿಯೂ, ಇವುಗಳ ಅಂತಿಮ ರೂಪವನ್ನು ಸಿದ್ಧಾಂತ ಶಿಖಾಮಣಿಯಲ್ಲಿಯೂ ನೋಡಬಹುದು. ಹನ್ನೆರಡ

ನೆಯ ಶತಮಾನದ ಹಿಂದಿನ ವೀರಶೈವದ ಸ್ವರೂಪವನ್ನು ಕಾಣುವುದು ಶಿವಮಹಾಪುರಾಣ ದಲ್ಲಿಯೇ; ಸ್ತ್ರೀಯರಿಗೂ, ಶೂದ್ರರಿಗೂ ಸ್ವಕೀಯವಾದ ಲಿಂಗಗಳನ್ನು ಪೂಜಿಸುವ ಅಧಿಕಾರ ವನ್ನು ಕೊಟ್ಟಿರುವುದು ಶಿವಮಹಾಪುರಾಣದಲ್ಲಿ ಕಂಡುಬಂದರೂ ಜಾತಿ ತಾರತಮ್ಯವು ಸ್ತ್ರೀ ಪುರುಷ ತಾರತಮ್ಯವೂ ಇದ್ದುದು ಆ ಪುರಾಣದಲ್ಲಿಯೇ ಕಂಡುಬರುವುದು. ಮೋಕ್ಷದಲ್ಲಿ ಸಾಲೋಕ್ಯ, ಸಾಮಿಪ್ಯಗಳಿಗಿಂತ ಮುಂದೆ ಹೋಗಿ, ಸಾರೂಪ್ಯವು ಪ್ರತಿಪಾದಿಸಲ್ಪಟ್ಟಿರುವು ದನ್ನು ಈ ಪುರಾಣದಲ್ಲಿ ಕಾಣಬಹುದು. ಈ ಪುರಾಣವು ಶ್ರೀಕಂಠಭಾಷ್ಯಕ್ಕೂ ಶ್ರೀಕರಭಾಷ್ಯಕ್ಕೂ ಹಿನ್ನೆಲೆಯಾಗಿದ್ದು ಶಿವನು ಶಕ್ತಿವಿಶಿಷ್ಟನಾಗಿ ಜಗತ್ಕಾರಣವಾಗುವನು ಎಂಬ ಸಿದ್ಧಾಂತವನ್ನು ವಿಸ್ತರಿಸಿದೆ. ನೀರಿನಲ್ಲಿ ಆಲಿಕಲ್ಲು ಕರಗಿದಂತೆ, ನೀರಿನಲ್ಲಿ ನೀರು ಬೆರೆದು, ಭೇದವೇ ಕಾಣದಂತೆ ಜೀವನು ಶಿವನಲ್ಲಿ ಬೆರೆಯುತಕ್ಕ ಸಂಪೂರ್ಣಾದ್ವೈತವನ್ನು ಹೇಳುವ ಮುಂದಿನ ಮೆಟ್ಟಲನ್ನು ವಚನೋಪನಿಷತ್ತಿನಲ್ಲಿಯೂ ಸಿದ್ಧಾಂತ ಶಿಖಾಮಣಿಯಲ್ಲಿಯೂ ಕಾಣಬಹುದು. ಇವುಗಳು ನಿರ್ಮಿಸಿದ ಸ್ವಾತಂತ್ರ್ಯಯುಗದಲ್ಲಿಯೇ, ಜಾತಿ ಸ್ತ್ರೀ ಪುರುಷ ತಾರತಮ್ಯಗಳನ್ನು ಗಣಿಸದ ವ್ಯಕ್ತಿಸ್ವಾತಂತ್ರ್ಯ, ಸ್ತ್ರೀ ಸ್ವಾತಂತ್ರ್ಯ, ವಾಕ್‌ಸ್ವಾತಂತ್ರ್ಯ, ವೃತ್ತಿಸ್ವಾತಂತ್ರ್ಯ ಮೊದಲಾದ ಸ್ವಾತಂತ್ರ್ಯಗಳನ್ನು ಕಾಣುವೆವು.

ಶ್ರೀ ಬಸವೇಶ್ವರರು ಸಂಸ್ಕರಿಸಿದ ಸನಾತನ ವೀರಶೈವ ಧರ್ಮವು ವಿಶ್ವಧರ್ಮವಾಗಲು ತಕ್ಕ ಕಾರಣಗಳಿರುವುದನ್ನು ಪ್ರಾರಂಭದಲ್ಲಿ ಹೇಳಿದೆಯಷ್ಟೆ. ಅದನ್ನೇ ಮತ್ತೆ ಹೇಳಿ ಪರಿ ಸಮಾಪ್ತಿಗೊಳಿಸಬಹುದು :

"ದೇವನೊಬ್ಬ ನಾಮ ಹಲವು" ಎಂಬ **ಏಕದೇವೋಪಾಸನೆಯ** ನಿಲುವು, "ನಂಬಿ ಕರೆದೊಡೆ 'ಓ' ಎನ್ನನೆ ಶಿವನು" ಎಂಬಲ್ಲಿನ **ಭಕ್ತಿಪಾರವಶ್ಯತೆ,** "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರ ನೊಂದೇಯೆಂಬೆ" ಎಂಬಲ್ಲಿನ **ಸಮತಾಭಾವ,** "ಕಾಯಕವೇ ಕೈಲಾಸ"ವೆಂಬುದರಲ್ಲಿನ **"ಕರ್ಮಸು ಕೌಶಲಂ",** "ದಯವಿಲ್ಲದ ಧರ್ಮವಾವುದಯ್ಯಾ" ಎಂಬುದರಲ್ಲಿನ **"ಅಹಿಂಸಾ ಪರಮೋ ಧರ್ಮಃ",** "ಎಲವೋ ಪಾಪಕರ್ಮವ ಮಾಡಿದವನೆ ಒಮ್ಮೆ ಶರಣೆನ್ನೆಲವೊ! ಎಲವೋ, ಬ್ರಹ್ಮಹತ್ಯವ ಮಾಡಿದವನೆ ಒಮ್ಮೆ ಶರಣೆನ್ನೆಲವೋ, ಒಮ್ಮೆ ಶರಣೆಂದೊಡೆ ಓಡುವುವು ಪಾಪಂಗಳು" ಎಂಬ **ದೀನದಲಿತೋದ್ಧಾರದ ಆದೇಶ,** "ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ" ಎಂಬಲ್ಲಿನ **ದೈನ್ಯತೆ,** "ಪರನಾರಿ ಸಂಗವ ತೊರೆಯಿಂ ಭೋ" ಎಂಬಲ್ಲಿನ **ಏಕಪತ್ನೀವ್ರತ,** "ಪರಧನದಾಮಿಷವ ತೊರೆಯಿಂ ಭೋ" ಎಂಬಲ್ಲಿನ **ನಿಸ್ಪೃಹತೆ,** "ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ ಮುನಿಯಬೇಡ ಅನರಿಗೆ ಅಸಹ್ಯ ಪಡಬೇಡ ತನ್ನ ಬಣ್ಣಿಸಬೇಡ ಇದಿರು ಹಳಿಯಲುಬೇಡ" ಎಂಬೀ **ಸದ್ವರ್ತನೆ** ಇವೆಲ್ಲ ವೀರಶೈವ ಧರ್ಮದ **ದಶವಿಧಿಗಳು** ವಿಶ್ವಧರ್ಮ ನಿರ್ಮಾಣಕ್ಕೆ ತಳಹದಿಯಾದುವುಗಳಾಗಿವೆ.

**ಇತಿ ಶಿವಂ**

